# ಮೈಸೂರು ವಿಶ್ವವಿದ್ಯಾನಿಲಯ

# ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)

(ಪಿಎಚ್.ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

**ರಾಜೇಶ್ ಹೆಚ್.ಜಿ.**

ಇತಿಹಾಸ ಅಧ್ಯಯನ ವಿಭಾಗ,

ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,

ಮೈಸೂರು.

ಮಾರ್ಗದರ್ಶಕರು

**ಡಾ. ಅಶ್ವತ್ಥನಾರಾಯಣ**

ಪ್ರಾಧ್ಯಾಪಕರು,

ಇತಿಹಾಸ ಅಧ್ಯಯನ ವಿಭಾಗ,

ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,

ಮೈಸೂರು


## ಇತಿಹಾಸ ಅಧ್ಯಯನ ವಿಭಾಗ,

## ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,

## ಮೈಸೂರು

**ಮಾರ್ಚ್–2021**

# ಸಂಶೋಧಕರ ಪ್ರಮಾಣ ಪತ್ರ

**ರಾಜೇಶ್ ಹೆಚ್**.ಜಿ. ಆದ ನಾನು, ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು, ಇಲ್ಲಿ **ಡಾ. ಅಶ್ವತ್ಥನಾರಾಯಣ** ಅವರ ಮಾರ್ಗದರ್ಶನದಲ್ಲಿ **ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)** ಎಂಬ ವಿಷಯದ ಕುರಿತು ಮಹಾಪ್ರಬಂಧವನ್ನು ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವು ನನ್ನ ಸ್ವಂತ ಸಂಶೋಧನೆಯ ಮೇಲೆ ರೂಪುಗೊಂಡಿದೆ. ಇದನ್ನು ಭಾಗಶಃವಾಗಿಯಾಗಲಿ ಅಥವಾ ಪೂರ್ಣವಾಗಿಯಾಗಲಿ ಮೈಸೂರು ವಿಶ್ವವಿದ್ಯಾನಿಲಯ ಅಥವಾ ಇತರೆ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿಗಾಗಲಿ, ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಲಿ ಈ ಹಿಂದೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸಂಶೋಧಕರ ಸಹಿ

ಸ್ಥಳ: ಮೈಸೂರು

ದಿನಾಂಕ: **(ರಾಜೇಶ್ ಹೆಚ್.ಜಿ.)**

# ಮಾರ್ಗದರ್ಶಕರ ದೃಢೀಕರಣ ಪತ್ರ

**ರಾಜೇಶ್ ಹೆಚ್.ಜಿ.,** ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು, ಇವರು ನನ್ನ ಮಾರ್ಗದರ್ಶನದಲ್ಲಿ **ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)** ಎಂಬ ವಿಷಯದ ಕುರಿತು ಮಹಾಪ್ರಬಂಧವನ್ನು ಸಿದ್ಧಪಡಿಸಿ ಪಿಎಚ್.ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ಮಹಾಪ್ರಬಂಧವು ಸಂಶೋಧಕರ ಸ್ವಂತ ಸಂಶೋಧನೆಯ ಮೇಲೆ ರೂಪುಗೊಂಡಿದೆ. ಇದನ್ನು ಭಾಗಶಃವಾಗಿಯಾಗಲಿ ಅಥವಾ ಪೂರ್ಣವಾಗಿಯಾಗಲಿ ಮೈಸೂರು ವಿಶ್ವವಿದ್ಯಾನಿಲಯ ಅಥವಾ ಇತರೆ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿಗಾಗಲಿ, ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಲಿ ಈ ಹಿಂದೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು**

ಸ್ಥಳ : ಮೈಸೂರು

ದಿನಾಂಕ :

**(ಡಾ. ಅಶ್ವತ್ಥನಾರಾಯಣ)**
ಪ್ರಾಧ್ಯಾಪಕರು,
ಇತಿಹಾಸ ಅಧ್ಯಯನ ವಿಭಾಗ,
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು

# ಪ್ರಮಾಣ ಪತ್ರ

**ರಾಜೇಶ್ ಹೆಚ್.ಜಿ.** ಅವರು **ಡಾ. ಅಶ್ವತ್ಥನಾರಾಯಣ,** ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು, ಇವರ ಮಾರ್ಗದರ್ಶನದಲ್ಲಿ **ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)** ಎಂಬ ವಿಷಯದ ಕುರಿತು ಮಹಾಪ್ರಬಂಧವನ್ನು ಸಿದ್ಧಪಡಿಸಿ ಪಿಹೆಚ್.ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವು ಸಂಶೋಧಕರ ಸ್ವಂತ ಪರಿಶ್ರಮದಿಂದ ಕೂಡಿದ್ದಾಗಿದ್ದು, ಇದನ್ನು ಯಾವುದೇ ವಿಶ್ವವಿದ್ಯಾನಿಲಯದ ಎಂ.ಎ., ಎಂ.ಫಿಲ್, ಪಿಎಚ್.ಡಿ ಅಥವಾ ಯಾವುದೇ ಪದವಿಗಾಗಿ ಭಾಗಶಃವಾಗಿಯಾಗಲಿ, ಪೂರ್ಣವಾಗಿಯಾಗಲಿ ಸಲ್ಲಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**ಮಾರ್ಗದರ್ಶಕರ ಸಹಿ** | **ಸಂಶೋಧಕರ ಸಹಿ**

**(ಡಾ. ಅಶ್ವತ್ಥನಾರಾಯಣ)** | **(ರಾಜೇಶ್ ಹೆಚ್.ಜಿ.)**

**ವಿಭಾಗದ ಮುಖ್ಯಸ್ಥರ ಸಹಿ**

**(ಡಾ. ಆರ್.ರಾಜಣ್ಣ)**

ಸ್ಥಳ : ಮೈಸೂರು

ದಿನಾಂಕ:

# ಕೃತಜ್ಞತೆ

ನನ್ನ ಸಂಶೋಧನಾ ಮಾರ್ಗದರ್ಶಕರಾದ ಡಾ. ಅಶ್ವತ್ಥನಾರಾಯಣ, ಪ್ರಾಧ್ಯಾಪಕರು, ಇತಿಹಾಸ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು. ಇವರು ನಾನು ಸಂಶೋಧನೆ ಮಾಡಲು ಅವಕಾಶ ಮಾಡಿಕೊಟ್ಟು, ಸೂಕ್ತ ವಿಷಯ ನೀಡಿ ಸಂಶೋಧನೆಯ ಪ್ರತಿ ಹಂತಗಳಲ್ಲಿಯೂ ನನಗೆ ಉತ್ತಮ ಮಾರ್ಗದರ್ಶನ ನೀಡಿ ಸಂಶೋಧನಾ ಕಾರ್ಯ ಯಶಸ್ವಿಯಾಗಿ ಪೂರ್ಣಗೊಳ್ಳಲು ಕಾರಣೀಭೂತರಾಗಿರುತ್ತಾರೆ. ಪ್ರೀತಿಯ ಅಶ್ವತ್ಥನಾರಾಯಣ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ನನ್ನ ಸಂಶೋಧನಾ ಕೆಲಸಗಳಿಗೆ ಸಲಹೆ, ಸೂಚನೆಗಳನ್ನು ನೀಡುತ್ತಿದ್ದ ಇತಿಹಾಸ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಪ್ರೊ. ಆರ್. ರಾಜಣ್ಣ, ಪ್ರೊ. ಕೆ. ಸದಾಶಿವ, ಪ್ರೊ. ವೈ.ಎಚ್. ನಾಯಕವಾಡಿ, ಪ್ರೊ. ಜಿ.ಟಿ. ಸೋಮಶೇಖರ್, ಡಾ. ಗಂಗಮ್ಮ, ದಿ. ಪುಟ್ಟಯ್ಯ ಅವರುಗಳಿಗೆ ನನ್ನ ಕೃತಜ್ಞತೆಗಳು.

ಅದೇ ರೀತಿ ಸಂಶೋಧನೆಯ ವಿವಿಧ ಹಂತಗಳಲ್ಲಿ ಸೂಕ್ತ ಸಲಹೆ ಸೂಚನೆಗಳನ್ನು ನೀಡುವ ಮೂಲಕ ಉತ್ತೇಜಿಸಿದ ನಾಡಿನ ಪ್ರಸಿದ್ಧ ಇತಿಹಾಸಕಾರರಾದ ಪ್ರೊ. ಎಸ್. ಚಂದ್ರಶೇಖರ್, ಪ್ರೊ. ಅಶ್ವತ್ಥನಾರಾಯಣ, (ಮುಖ್ಯಸ್ಥರು, ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ), ಪ್ರೊ. ಎಂ. ಜಮುನಾ, ದಿ. ವಸು ಮಳಲಿ, ಪ್ರೊ. ವಿಜಯ್ ಪೂಣಚ್ಚ ತಂಬಂಡ, ಡಾ. ಪೃಥ್ವಿದತ್ತ ಚಂದ್ರಶೋಭಿ, ಪ್ರೊ. ಉಷಾದೇವಿ ಇವರುಗಳಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಸಂಶೋಧನೆಗೆ ಅನುಮತಿ ನೀಡಿದ ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರು ಮತ್ತು ಅಧಿಕಾರಿ ವರ್ಗದವರಿಗೆ ಹಾಗೂ ಸಹಕಾರ ನೀಡಿದ ಸರ್ಕಾರಿ ಪದವಿಪೂರ್ವ ಕಾಲೇಜು, ಕೆಂಗೇರಿಯ ಪ್ರಾಂಶುಪಾಲರಾದ ಶ್ರೀಮತಿ ಶ್ರೀದೇವಿಯವರಿಗೂ ಮತ್ತು ಎಲ್ಲಾ ಸಹೋದ್ಯೋಗಿಗಳಿಗೂ ನನ್ನ ನಮನಗಳು.

ಆತ್ಮೀಯ ಸ್ನೇಹಿತರಾದ ಡಾ. ಎಸ್.ಕೆ. ಅರುಣಿ, (ಉಪನಿರ್ದೇಶಕರು, ಐ.ಸಿ.ಎಚ್.ಆರ್. ದಕ್ಷಿಣ ಪ್ರಾದೇಶಿಕ ಕಛೇರಿ, ಬೆಂಗಳೂರು), ಡಾ. ಮನು ವಿ. ದೇವದೇವನ್, (ಐಐಟಿ ಮಂಡಿ),

ಡಾ. ಸುಂಕಂ ಗೋವರ್ಧನ, ಡಾ. ಗಂಗಾಂಬಿಕೆ ಗೋವರ್ಧನ, ಶ್ರೀ ಎಂ. ಪ್ರಕಾಶಮೂರ್ತಿ, ಡಾ. ಪ್ರದೀಪ್ ಕುಮಾರ್ ಶೆಟ್ಟಿ, ಶ್ರೀ ಎ.ಹೆಚ್.ನಿಂಗೇಗೌಡ, ಶ್ರೀ ರಾಜಗೋಪಾಲ್, ಡಾ. ಜಿ.ಎಸ್. ಪುರುಷೋತ್ತಮ, ಶ್ರೀ ಪ್ರವೀಣ್‌ಕುಮಾರ್, ಶ್ರೀ ತಾಯಪ್ಪ, ಶ್ರೀ ಸಂಪತ್ ಎಸ್ (ಪ್ರಜಾವಾಣಿ), ಶ್ರೀ ಪ್ರಶಾಂತ್ ಎಂ.ಕೆ., ಶ್ರೀ ಶಿವಕುಮಾರ ಪಾವಟೆ ಮೊದಲಾದ ಎಲ್ಲಾ ಗೆಳೆಯರಿಗೂ ನನ್ನ ವಂದನೆಗಳನ್ನು ಸಲ್ಲಿಸಲು ಬಯಸುತ್ತೇನೆ.

ಅದೇ ರೀತಿ ನನ್ನ ಕುಟುಂಬವರ್ಗದವರಾದ ತಾಯಿ ಶ್ರೀಮತಿ ವಸಂತ, ಸೋದರಿ ಜಯವಾಣಿ ಹೆಚ್.ಜಿ., ಡಾ. ರವಿಕುಮಾರ್ ಅವರಿಗೂ, ನನ್ನ ಶ್ರೀಮತಿ ಡಾ. ಶಿವಕುಮಾರಿ ಎಂ.ಎಸ್., ಚಿ॥ ಅಮೋಘವರ್ಷ ಹೆಚ್.ಆರ್., ಶ್ರೀಮತಿ ರೇವಮ್ಮ, ಶ್ರೀ ಮಂಜುನಾಥ ಹೆಗ್ಗಡೆ, ಶ್ರೀಮತಿ ಗೌರಿ ಅವರಿಗೂ ನನ್ನ ನೆನಕೆಗಳು.

ಮಾನಸಗಂಗೋತ್ರಿಯ ಇತಿಹಾಸ ಅಧ್ಯಯನ ವಿಭಾಗದ ಸಿಬ್ಬಂಧಿ ವರ್ಗದವರಾದ ಶ್ರೀಮತಿ ಗೌಸಿಯ ಭಾನು, ಶ್ರೀಮತಿ ರೇಣುಕಾ, ಶ್ರೀಮತಿ ಪದ್ಮ, ಶ್ರೀ ಪ್ರಕಾಶ್, ಶ್ರೀ ರವಿ, ಶ್ರೀ ಪ್ರವೀಣ್ ಅವರಿಗೂ, ಐ.ಸಿ.ಎಚ್.ಆರ್. ದಕ್ಷಿಣ ಪ್ರಾದೇಶಿಕ ಕಚೇರಿಯ ಸಿಬ್ಬಂದಿ ವರ್ಗದವರಾದ ಶ್ರೀ ಸಂಗಪ್ಪ, ಶ್ರೀ ಬಾಬು, ಶ್ರೀ ಸೊಣ್ಣಪ್ಪ, ಶ್ರೀಮತಿ ಮಂಗಳಮ್ಮ ಅವರಿಗೂ, ಮಿಥಿಕ್ ಸೊಸೈಟಿಯ ಗ್ರಂಥಾಲಯದ ಸಿಬ್ಬಂಧಿವರ್ಗದವರಿಗೂ ಮತ್ತು ಪ್ರತ್ಯೇಕ್ಷವಾಗಿ ಹಾಗೂ ಪರೋಕ್ಷವಾಗಿ ಸಂಶೋಧನಾ ಕಾರ್ಯದಲ್ಲಿ ನೆರವಾದ ಎಲ್ಲಾ ಗೆಳೆಯರಿಗೂ ಮತ್ತು ಬಂಧುಮಿತ್ರರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**(ರಾಜೇಶ್ ಹೆಚ್.ಜಿ)**

# ಪರಿವಿಡಿ

# ಅಧ್ಯಾಯ–1

# ಪ್ರಸ್ತಾವನೆ

ಇತಿಹಾಸದಲ್ಲಿನ ಸಾಮ್ರಾಜ್ಯಗಳು ಹೆಮ್ಮರಗಳಿದ್ದಂತೆ, ಆ ಸಾಮ್ರಾಜ್ಯಗಳ ಅಧೀನದಲ್ಲಿರುವ ಸ್ಥಳೀಯ ಪ್ರಭುತ್ವಗಳು ಹೆಮ್ಮರದ ಬೇರುಗಳಿದ್ದಂತೆ. ಸೊಗಸಾಗಿ ಬೆಳೆದು ನಳನಳಿಸುವ ಹೆಮ್ಮರಕ್ಕೆ ಅಗತ್ಯ ಪೋಷಕಾಂಶಗಳನ್ನು ಪೂರೈಸುವುದೇ ಬೇರುಗಳು. ಜೊತೆಗೆ, ಎಷ್ಟೇ ದೊಡ್ಡ ವೃಕ್ಷವಾದರೂ ತಲೆ ಎತ್ತಿ ನಿಲ್ಲಬೇಕಾದರೆ ಅದರ ಬೇರುಗಳು ಸುಭದ್ರವಾಗಿರಬೇಕು. ಬೇರುಗಳು ದುರ್ಬಲವಾದರೆ ಎಂತಹ ಹೆಮ್ಮರವಾದರೂ ಗಾಳಿಗೆ ಉರುಳಿಬೀಳುವುದು ನಿಶ್ಚಿತ. ಅದೇರೀತಿ ಎಂತಹ ಸಾಮ್ರಾಜ್ಯವೇ ಆದರೂ, ಆ ಸಾಮ್ರಾಜ್ಯಕ್ಕೆ ಸ್ಥಳೀಯ ಪ್ರಭುತ್ವಗಳು ಪೂರೈಸುವ ಪೋಷಕಾಂಶಗಳು (ಉದಾ: ಉತ್ಪಾದನ ಸರಕುಗಳು, ಕಂದಾಯ, ಸೇನೆ, ಇತ್ಯಾದಿ) ನಿಂತುಹೋದರೆ ಬೇರು ಸತ್ತ ಹೆಮ್ಮರದಂತೆ ಸಾಮ್ರಾಜ್ಯವೂ ಕಣ್ಮರೆಯಾಗುತ್ತದೆ. ಇತಿಹಾಸದಲ್ಲಿ ಸಾಮ್ರಾಜ್ಯಗಳು ವಿಜೃಂಭಿಸಿವೆಯೇ ವಿನಃ ಅವುಗಳಿಗೆ ಪೂರಕವಾಗಿ ದುಡಿದ ಸ್ಥಳೀಯ ಪ್ರಭುತ್ವಗಳಲ್ಲ. ನಿಜವಾಗಿಯೂ ಒಂದು ಸಾಮ್ರಾಜ್ಯದ ಶಕ್ತಿ ನಿಂತಿರುವುದು ಸ್ಥಳೀಯ ಪ್ರಭುತ್ವಗಳ ಮೇಲೆಯೇ ವಿನಃ ಬೇರೆಯಲ್ಲ. ಸಾಮ್ರಾಜ್ಯದ ವಿರುದ್ಧ ಸ್ಥಳೀಯ ಪ್ರಭುತ್ವಗಳು ತಿರುಗಿಬಿದ್ದಾಗ ಸಾಮ್ರಾಜ್ಯ ಕಣ್ಮರೆಯೂ ಆಗಿದೆ. ಹೀಗೆ ಇತಿಹಾಸದಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸುತ್ತಾ ಬಂದಿರುವ ಸ್ಥಳೀಯ ಪ್ರಭುತ್ವಗಳನ್ನು ಕುರಿತಾದ ಅಧ್ಯಯನಗಳ ಒಲವುಗಳು ಇತ್ತೀಚಿನ ದಶಕಗಳಲ್ಲಿ ಪ್ರಾಮುಖ್ಯತೆ ಪಡೆದುಕೊಳ್ಳುತ್ತಿವೆ. ಇದರಿಂದಾಗಿ ಸಾಮ್ರಾಜ್ಯಗಳ ಇತಿಹಾಸಕ್ಕಿಂತಲೂ ಸ್ಥಳೀಯ ಪ್ರಭುತ್ವಗಳ ಇತಿಹಾಸವು ಯಾವ ನಿಟ್ಟಿನಿಂದಲೂ ಕಡಿಮೆಯಲ್ಲ. ಆದರೆ, ಸಾಮ್ರಾಜ್ಯಗಳ ಇತಿಹಾಸ ರಚನಾಕಾರರು ಸಾಮ್ರಾಜ್ಯಗಳ ಅಧೀನದಲ್ಲಿರುವ ಸ್ಥಳೀಯ ಪ್ರಭುಗಳ ಕೊಡುಗೆಯ ಗರಿಗಳನ್ನೂ ಸಾಮ್ರಾಟರ ಮುಕುಟಕ್ಕೆ ಸಿಕ್ಕಿಸುವ ಮೂಲಕ ಸ್ಥಳೀಯ ಪ್ರಭುಗಳನ್ನು ಕಡೆಗಣಿಸುತ್ತಾ ಬಂದಿದ್ದಾರೆ. ಆದ್ದರಿಂದ ಚರಿತ್ರೆಯಲ್ಲಿನ ವಾಸ್ತವಿಕ ಸಂಗತಿಗಳನ್ನು ಬೆಳಕಿಗೆ ತರುವುದರ ಮೂಲಕ ಇತಿಹಾಸವನ್ನು ಪುನರ್ ವಿಮರ್ಶಿಸುವ ಮತ್ತು ಪುನರ್ರಚಿಸುವ ತುರ್ತು ಇದೆ. ಇದರಿಂದ ಭಾರತೀಯ ಇತಿಹಾಸ ಲೇಖನ ಪ್ರಕ್ರಿಯೆಯ ಶ್ರೇಣೀಕರಣವನ್ನು ಭಂಜಿಸಿ, ಅದಕ್ಕೆ ಪರ್ಯಾಯವಾಗಿ ಸಾಮಾಜಿಕ ಇತಿಹಾಸವನ್ನು ರೂಪಿಸುವ ಗುರುತರವಾದ ಕಾರ್ಯವೂ ಆಗಬಹುದಾದ ಸಾಧ್ಯತೆಯನ್ನು ಮುನ್ನೆಲೆಗೆ ತರುವ ಕಾರ್ಯವನ್ನೂ ಕೂಡ ಮಾಡಬಹುದಾಗಿದೆ. ಅಂತಹ ಒಂದು ಪ್ರಯತ್ನದ ಭಾಗವಾಗಿಯೇ **ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು:**

ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728) ಎಂಬ ವಿಷಯವನ್ನು ಸಂಶೋಧನೆಯ ಉದ್ದೇಶಕ್ಕಾಗಿ ಆಯ್ದುಕೊಳ್ಳಲಾಗಿದೆ.

## 1.1 ಅಧ್ಯಯನದ ಪ್ರಾಮುಖ್ಯತೆ

ಸಾಮಾನ್ಯವಾಗಿ ಇತಿಹಾಸವನ್ನು ರಚಿಸುವ ಸಂದರ್ಭದಲ್ಲಿ ಶಾಸನಾಧಾರಗಳು ಮತ್ತು ಸಾಹಿತ್ಯಾಧಾರಗಳು ವಿಫುಲವಾಗಿ ಲಭ್ಯವಾಗುವ ದೊಡ್ಡ ದೊಡ್ಡ ರಾಜಮನೆತನಗಳ ಚರಿತ್ರೆಗೆ ಹೆಚ್ಚಿನ ಒತ್ತನ್ನು ನೀಡಲಾಗುತ್ತಾ ಬರಲಾಗಿದೆ. ಇದರಿಂದಾಗಿ ಇತಿಹಾಸ ಎಂದರೆ ಕೇವಲ ರಾಜಮಹಾರಾಜರ ದಿಗ್ವಿಜಯ, ವೈಭವದ ದರ್ಬಾರು, ಭವ್ಯವಾದ ಗುಡಿಗೋಪುರಗಳೇ ನಮ್ಮ ಕಣ್ಮುಂದೆ ಬರುತ್ತವೆ. ಉದಾಹರಣೆಗೆ: ಗಂಗರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ವಿಜಯನಗರ ಸಾಮ್ರಾಟರು, ಬಹಮನಿ ಸುಲ್ತಾನರು, ಮೈಸೂರು ಒಡೆಯರು, ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನ್ ಹೀಗೆ ದೊಡ್ಡ ದೊಡ್ಡ ರಾಜಮನೆಗಳು ಮತ್ತು ರಾಜರ ಬಗೆಗೆ ಅಧ್ಯಯನಗಳು, ಮರುಅಧ್ಯಯನಗಳು ನಡೆಯುತ್ತಲೇ ಇರುತ್ತವೆ.[1] ಆದರೆ ಇಂತಹ ರಾಜಮನೆಗಳ ವೈಭವದ ಸಾಮ್ರಾಜ್ಯಗಳ ಹಿಂದೆ ಅಧೀನ ಸಾಮಂತರು, ಸ್ಥಳೀಯ ಆಡಳಿತಗಾರರು ಮತ್ತು ಅಧಿಕಾರಿಗಳಂತಹ ಸಾಮ್ರಾಜ್ಯ ಪೋಷಕವರ್ಗದ ಪಾತ್ರ ಹಿರಿದಾಗಿರುತ್ತದೆ. ಮರಕ್ಕೆ ಬೇರುಗಳಂತೆ ಸಾಮ್ರಾಜ್ಯವನ್ನು ಸ್ಥಿರಗೊಳಿಸಲು ಈ ಅಧೀನ ಸಾಮಂತ ಮತ್ತು ಅಧಿಕಾರಿಗಳು ತಮ್ಮ ಸೇವೆಯನ್ನು ನಿರಂತರವಾಗಿ ಧಾರೆಯೆರೆಯುತ್ತಿದ್ದರು. ನೆಲದ ಜನರ ಜೊತೆಗೆ ಹೆಚ್ಚು ಒಡನಾಟ ಮತ್ತು ಬಾಂಧವ್ಯವನ್ನು ಹೊಂದಿರುವ ಈ ವರ್ಗ ಸ್ಥಳೀಯ ಮಟ್ಟದಲ್ಲಿ ಅಧಿರಾಜರಿಗಿಂತಲೂ ಹೆಚ್ಚು ಜನಪ್ರಿಯತೆಯನ್ನು ಹೊಂದಿರುತ್ತಿದ್ದರು. ಅಂದರೆ ಅಧಿರಾಜನ ಶಕ್ತಿ ಸಾಮರ್ಥ್ಯವು ಸಾಮಂತ ಮತ್ತು ಅಧಿಕಾರಿಗಳ ನಿಷ್ಠೆಯನ್ನು ಅವಲಂಭಿಸಿರುತ್ತದೆ. ರಾಜ್ಯ–ಸಾಮ್ರಾಜ್ಯಗಳ ಏಳಿಗೆ ಮತ್ತು ಅವನತಿಯ ಹಿಂದೆ ಅಧೀನ ಅರಸರು ಮತ್ತು ಅಧಿಕಾರಿಗಳ ಕೊಡುಗೆ ಅಪಾರವಾಗಿರುತ್ತದೆ. ಅಲ್ಲದೆ, ಒಂದು ರಾಜ್ಯದ ಆಡಳಿತ ವ್ಯವಸ್ಥೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಅಧೀನ ಅಧಿಕಾರಿಗಳ ಕಾರ್ಯವೈಖರಿಯನ್ನು ಸೂಕ್ಷ್ಮವಾಗಿ ಅವಲೋಕಿಸಬೇಕಿರುತ್ತದೆ. ಇವರ ಕಾರ್ಯಚಟುವಟಿಕೆಗಳನ್ನು ಅರ್ಥಮಾಡಿಕೊಳ್ಳದೆ ಆಡಳಿತದ ಕ್ರಮವನ್ನು ಗ್ರಹಿಸಲು ಸಾಧ್ಯವಿಲ್ಲ. ಏಕೆಂದರೆ ಸಾಮ್ರಾಜ್ಯಾಧಿಕಾರಿಗಳಾದ ಚಕ್ರವರ್ತಿಗಳಿಗೂ ಸಾಮಾನ್ಯ ಪ್ರಜೆಗಳಿಗೂ ಕೊಂಡಿಯಂತೆ ಕೆಲಸ ಮಾಡಿ ಅಧಿಕಾರದ ಮಟ್ಟುಗಳನ್ನು ಸಾರ್ವಜನಿಕರ ಗುಟ್ಟುಗಳನ್ನು ಅರಿತು ಸದಾ ಕಾರ್ಯೋನ್ಮುಖರಾಗುವುದೇ ಇವರ

ಮಹಾನ್ ಸಾಧನೆಯಾಗಿದೆ. ಇತಿಹಾಸ ರಚನೆಯಲ್ಲಿ ಈ ನಿಟ್ಟಿನ ಅಧ್ಯಯನಕ್ಕೆ ಹೆಚ್ಚಿನ ಒತ್ತುಕೊಡುವ ಅಗತ್ಯವಿದೆ.

ಇತ್ತೀಚಿನ ದಶಕಗಳಲ್ಲಿ ಪ್ರಾದೇಶಿಕ ಚರಿತ್ರೆ ಮತ್ತು ಸ್ಥಳೀಯ ಚರಿತ್ರೆಗಳು ಹೆಚ್ಚು ಚರ್ಚೆಗೆ ಮತ್ತು ಅಧ್ಯಯನಕ್ಕೆ ಒಳಗಾಗುತ್ತಿವೆ. ಈ ಚರಿತ್ರೆಯ ಅಧ್ಯಯನದ ಸಾಧಕ ಬಾಧಕಗಳು ಸಹ ಚರ್ಚೆಗೆ ಒಳಗಾಗಿವೆ. ಪ್ರಾದೇಶಿಕ ಚರಿತ್ರೆ ಮತ್ತು ಸ್ಥಳೀಯ ಚರಿತ್ರೆಯ ಬಗೆಗೆ ಇರುವ ಮುಖ್ಯ ಆರೋಪ ಎಂದರೆ ರಾಷ್ಟ್ರೀಯ ಇತಿಹಾಸದ ಬೆಳವಣಿಗೆಗೆ ಅದು ಮಾರಕವಾಗಿದೆ ಎನ್ನುವುದಾಗಿದೆ[2] ಈ ಬಗೆಯ ಅಧ್ಯಯನದ ಕುರಿತು ಇರುವ ಮತ್ತೊಂದು ಆಕ್ಷೇಪ ಎಂದರೆ, ಬಹುಭಾಷಾ ದೇಶವಾದ ಭಾರತದ ಸದ್ಯದ ಪರಿಸ್ಥಿತಿಯಲ್ಲಿ ಪ್ರಾದೇಶಿಕ ಇತಿಹಾಸ ಎನ್ನುವ ಮಾತನ್ನು ಅನ್ವಯಿಸಲಾಗುವುದಿಲ್ಲ ಎನ್ನುವುದಾಗಿದೆ. ಆದ್ದರಿಂದ ಪ್ರಾದೇಶಿಕ ಇತಿಹಾಸ ರಚನೆಯಲ್ಲಿ ಉಂಟಾಗುವ ಅಪಾಯವನ್ನು ಹೋಗಲಾಡಿಸುವ ಸಲುವಾಗಿ ಸಾಂಸ್ಕೃತಿಕ ಇತಿಹಾಸವನ್ನು ಆರಿಸಿಕೊಳ್ಳುವುದು ಸೂಕ್ತ ಎಂಬ ಅಭಿಪ್ರಾಯವೂ ವ್ಯಕ್ತವಾಗಿದೆ. ಜೊತೆಗೆ ಪ್ರಾದೇಶಿಕ ಇತಿಹಾಸದ ರಚನೆಯಲ್ಲಿ ರಾಜಕೀಯ ಚಟುವಟಿಕೆಯ ಅನ್ವೇಷಣೆ ಅನೇಕ ತೊಡಕುಗಳಿಂದ ಕೂಡಿರುತ್ತದೆ. ಇತಿಹಾಸಕಾರನು ಪೂರ್ವಗ್ರಹ ಪೀಡಿತನಾಗುವ ಸಂಭವ ಹೆಚ್ಚಾಗಿರುತ್ತದೆ. ಇದಲ್ಲದೆ ತಮ್ಮದೇ ಆದ ರಾಜಕೀಯ ಇತಿಹಾಸ ರಚನೆಯಲ್ಲಿ ವ್ಯಕ್ತಿಯು ಘಟನೆಗಳಿಂದ ಹೊರಗೆ ನಿಂತು ಬರೆಯುವುದು ಕಷ್ಟವಾಗುತ್ತದೆ ಎಂದು 1977ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಆಶ್ರಯದಲ್ಲಿ ನಡೆದ ಪ್ರಾದೇಶಿಕ ಇತಿಹಾಸ ಸಮ್ಮೇಳನದಲ್ಲಿ ಕೆಲವು ಇತಿಹಾಸಕಾರರ ಅಭಿಪ್ರಾಯವಾಗಿತ್ತು.[3]

ಪ್ರಾದೇಶಿಕ ಇತಿಹಾಸ ರಚನೆಗೆ ಸಂಬಂಧಿಸಿದಂತೆ ಈ ಮೇಲಿನ ಅಭಿಪ್ರಾಯಗಳಿಗೆ ವ್ಯತಿರಿಕ್ತವಾದ ನೆಲೆಯಲ್ಲಿ ವಿಲ್ ಮತ್ತು ಏರಿಯಲ್ ಡ್ಯುರಾಂಟ್ ಅವರು ಪ್ರತಿಕ್ರಿಯಿಸಿದ್ದಾರೆ. ಅವರು ಹೇಳುವಂತೆ: ಅನಿಶ್ಚಿತ ದಾಖಲೆ ಮತ್ತು ಪೂರ್ವಾಗ್ರಹಪೀಡಿತ ಇತಿಹಾಸಕಾರರಿಂದ ಮಬ್ಬಾಗಿರುವುದರಿಂದಲೂ ಪ್ರಾಯಶಃ ನಮ್ಮದೇ ಆದ ದೇಶಭಕ್ತಿ ಅಥವಾ ಧಾರ್ಮಿಕ ಒಲವಿನಿಂದ ವಿರೂಪಗೊಂಡಿರುವುದರಿಂದಲೂ ಗತಕಾಲದ ಯಾವುದೇ ಘಟನೆಯ ಬಗೆಗೆ ನಮ್ಮ ತಿಳಿವು ಸದಾ ಅಪೂರ್ಣವೂ ಬಹುಶಃ ನಿಖರವಲ್ಲದ್ದೂ ಆಗಿದೆ. "ಬಹುಪಾಲು ಇತಿಹಾಸ ಊಹಾಪೋಹ; ಉಳಿದದ್ದು ಪೂರ್ವಾಗ್ರಹ"[4]. ಡ್ಯುರಾಂಟ್ ಅವರ ಮಾತುಗಳನ್ನು ಗಮನಿಸಿದಾಗ ಪ್ರಾದೇಶಿಕ ಇತಿಹಾಸ ಮಾತ್ರವಲ್ಲ ರಾಷ್ಟ್ರೀಯ ಇತಿಹಾಸ ಕೂಡ ಪೂರ್ವಾಗ್ರಹ ಪೀಡಿತವಾಗಿದೆ. ಒಟ್ಟಾರೆ, ಪೂರ್ವಾಗ್ರಹ ಎಂಬುದೇ ಇತಿಹಾಸ ಸಂಶೋಧನೆಯ ಬಹುದೊಡ್ಡ ತೊಡಕಾಗಿದ್ದು,

ಅದು ಕೇವಲ ಪ್ರಾದೇಶಿಕ ಇತಿಹಾಸಕ್ಕೆ ಸೀಮಿತವಾದುದಾಗಿಲ್ಲ. ಯಾವುದೇ ಕ್ಷೇತ್ರದ ವಿಷಯವನ್ನು ಕುರಿತು ಸಂಶೋಧನೆ ಕೈಗೊಳ್ಳಬೇಕಾದರೂ ಸಂಶೋಧಕ ಪೂರ್ವಗ್ರಹಗಳಿಂದ ಮುಕ್ತನಾಗಿರಬೇಕಾಗುತ್ತದೆ.

ಪ್ರಾದೇಶಿಕ ಸಂಶೋಧನೆಯನ್ನು ನಡೆಸುವಾಗ ವಹಿಸಬೇಕಾದ ಎಚ್ಚರಿಕೆಯನ್ನು ಕುರಿತು ಇತಿಹಾಸಕಾರ ಇರ್ಫಾನ್ ಹಬೀಬ್ ಅವರು ಹೇಳುವಂತೆ, ಪ್ರಾದೇಶಿಕ ಇತಿಹಾಸ ರಚನಾ ಕಾರ್ಯ ಬಹು ತೊಡಕಿನಿಂದ ಕೂಡಿದುದೆಂತಲೂ ಯಾವುದೇ ಪ್ರದೇಶವು ವಿಶಿಷ್ಟವಾದುದೆಂದು ಸಾಧಿಸಲು ಹೊರಟರೆ ಅದು ನಿರುಪಯುಕ್ತವಾಗುತ್ತದಲ್ಲದೆ, ಸ್ಥಳೀಯ ನಾಯಕರನ್ನು ಅಥವಾ ದೊರೆಗಳನ್ನು ಅಥವಾ ಘಟನೆಗಳನ್ನು ವೈಭವೀಕರಿಸಲು ಹೊರಟರೆ ಅಂತಹ ಇತಿಹಾಸ ಅಸಹ್ಯಕರವಾಗುತ್ತದೆಂತಲೂ ಭಾವಿಸುತ್ತಾರೆ. ತಮ್ಮ ಪ್ರದೇಶಕ್ಕೆ ಸೇರಿದ ನಾಯಕರನ್ನು, ರಾಜವಂಶವನ್ನು ವೈಭವೀಕರಿಸಲೋಸುಗ ಅನೇಕರು ಇತಿಹಾಸದ ವಾಸ್ತವಾಂಶಗಳನ್ನೇ ತಿರುಚಿಬಿಡುತ್ತಾರೆ; ಇಂತಹ ಲೇಖಕರು ಇತಿಹಾಸಕ್ಕೆ ಎಸಗುವ ಅನ್ಯಾಯ ಬಹುದೊಡ್ಡದು; ಆದರೂ ಪ್ರಾದೇಶಿಕ ಇತಿಹಾಸದ ಅಗತ್ಯವನ್ನು ಅಲ್ಲಗಳೆಯಲಾಗದು. ಯಾವುದಾದರೂ ಒಂದು ನಿರ್ದಿಷ್ಟ ಸ್ಥಳದಲ್ಲಿ ದೊರೆಯುವ ಮಾಹಿತಿಯಿಂದ ಇಡೀ ನಾಡಿನ ಇತಿಹಾಸದ ಬೆಳವಣಿಗೆಯನ್ನು ಗುರುತಿಸುವುದು ಸಾಧ್ಯವಾಗುತ್ತದೆ. ಒಂದು ಸಣ್ಣ ವಿಭಾಗದಲ್ಲಿ ದೊರೆಯುವ ಅಂಕಿ ಅಂಶಗಳು ಕೆಲವು ನಿಯಮಗಳು ವಿಸ್ತಾರವಾದ ಪ್ರದೇಶಕ್ಕೆ ಅನ್ವಯವಾಗುತ್ತವೆ. ಅನೇಕ ವೇಳೆ ಇತಿಹಾಸದಲ್ಲಿ ಕಾಣುವ ಸರಳೀಕರಣವನ್ನು ಪರೀಕ್ಷಿಸಲು ಪ್ರದೇಶದ ಇತಿಹಾಸ ದೊರಕಿಸಿಕೊಡುವ ಮಾಹಿತಿ ಬಹು ಉಪಯುಕ್ತವಾಗುತ್ತದೆ. ಆದುದರಿಂದ ಪ್ರಾದೇಶಿಕ ಇತಿಹಾಸವನ್ನು ರಚನಾತಂತ್ರದ ದೃಷ್ಟಿಯಿಂದ ಒಂದು ಪ್ರಯೋಗಶಾಲೆಯೆಂದು ಪರಿಗಣಿಸ ಬಹುದೆಂಬುದು ಇರ್ಫಾನ್ ಹಬೀಬ್ ಅವರ ನಿಲುವಾಗಿದೆ.[5]

ಸ್ಥಳೀಯ ಮತ್ತು ಪ್ರಾದೇಶಿಕ ಇತಿಹಾಸದಂತಹ ಸೂಕ್ಷ್ಮ ಅಧ್ಯಯನಗಳಿಂದಾಗಿ ಸಮಗ್ರ ಅಧ್ಯಯನಗಳಲ್ಲಿ ಕಂಡುಬರುವ ಅನೇಕ ಕಂದಕಗಳನ್ನು ತುಂಬಬಹುದಾಗಿದೆ. ಉದಾಹರಣೆಗೆ ಶಿಲಾಶಾಸನಗಳ ಪಾಠಗಳಲ್ಲಿರುವ ದೋಷಗಳನ್ನು ಕ್ಷೇತ್ರಕಾರ್ಯಗಳ ಮೂಲಕ ಮರುಓದಿ ಪರಿಷ್ಕರಿಸಬಹುದಾಗಿದೆ. ಚಂದ್ರವಳ್ಳಿಯ ಮಯೂರವರ್ಮನ ಶಾಸನದ ಮರು ಓದಿನಿಂದ ಬದಲಾದ ಇತಿಹಾಸವೇ ಒಂದು ತಾಜಾ ಉದಾಹರಣೆಯಾಗಿದೆ.[6]

ಪ್ರಸ್ತುತ ಮಹಾಪ್ರಬಂಧವಾದ **ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)** ಎಂಬ

ವಿಷಯದ ಅಧ್ಯಯನದಲ್ಲಿ ಈವರೆಗೆ ನಡೆದಿರುವ ಅಧ್ಯಯನಗಳಲ್ಲಿ ಕೆಲವು ಕೊರತೆಗಳು ಕಂಡುಬರುತ್ತವೆ. ಅನೇಕ ಅಧ್ಯಯನಗಳು ಮತ್ತು ಲೇಖನಗಳು ಅಧ್ಯಯನದ ಉದ್ದೇಶ ಮತ್ತು ಪ್ರಶ್ನೆಗಳನ್ನೆ ಹೊಂದಿರದೆ ಸಾಮಾನ್ಯ ಹೇಳಿಕೆಯಲ್ಲಿಯೇ ಕೈತೊಳೆದು ಕೊಂಡಿದ್ದು, ಗಂಭೀರ ಅಧ್ಯಯನಗಳನ್ನು ನಡೆಸಿರುವ ಬಗೆಗೆ ಅನುಮಾನಗಳಿವೆ. ವಿಜಯನಗರೋತ್ತರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ಸ್ಥಳೀಯ ಪ್ರಭುತ್ವಗಳೆಂದು ಹೇಳಲಾಗುವ ಬಹುತೇಕ ಪಾಳೆಯಗಾರರ, ನಾಡಪ್ರಭುಗಳ, ನಾಯಕರ ಮನೆತನಗಳ ಪೂರ್ವಿಕರು ಹೊರಗಿನಿಂದ ಬಂದವರೇ ಆಗಿದ್ದಾರೆ. ಏಕೆ ಸ್ಥಳೀಯ ನಿವಾಸಿಗಳಲ್ಲಿಯೇ ಸ್ಥಳೀಯ ಪ್ರಭುತ್ವಗಳು ಹುಟ್ಟುತಳೆಯಲಿಲ್ಲ? ಎಂಬ ಗಂಭೀರವಾದ ಪ್ರಶ್ನೆಗೆ ಉತ್ತರ ಹುಡುಕುವ ಪ್ರಯತ್ನಗಳು ನಡೆದಿರುವುದು ಕಡಿಮೆ. ಯಲಹಂಕ ನಾಡಪ್ರಭುಗಳ ಬಗೆಗೆ ಈವರೆಗೆ ನಡೆದಿರು ಅಧ್ಯಯನಗಳಿಲ್ಲಿ ಅಕಾಡೆಮಿಕ್ ನೆಲೆಯಲ್ಲಿ ನಡೆದಿರುವ ಅಧ್ಯಯನಗಳು ವಿರಳ. ಬದಲಿಗೆ ವೈಭವೀಕರಣ, ಗೊಂದಲ, ಉತ್ಪ್ರೇಕ್ಷೆ ಮತ್ತು ವಿರೋಧಭಾಸಗಳಿಂದ ಕೂಡಿದ ಅಧ್ಯಯನಗಳೇ ಹೆಚ್ಚು. ಸಾಮಾನ್ಯವಾಗಿ, ಈ ಬರವಣಿಗೆಗಳಲ್ಲಿ ಯಲಹಂಕ ನಾಡಪ್ರಭುಗಳ ಆಳ್ವಿಕೆಯ ಆರಂಭ ಕಾಲದ ಬಗೆಗೆ ಗೊಂದಲಗಳಿವೆ. ಯಲಹಂಕ ನಾಡಪ್ರಭುಗಳಲ್ಲಿ 'ಕೆಂಪ' ಎಂಬ ಮೂಲ ಹೆಸರಿನ ಎಂಟು ಮಂದಿ ಆಳ್ವಿಕೆ ನಡೆಸಿರುವುದರಿಂದ ಅವರ ಕಾಲ ಮತ್ತು ಅವರ ಸಾಧನೆಗಳನ್ನು ಆಧಾರಪೂರ್ವಕವಾಗಿ ಗುರುತಿಸುವ ಅಧ್ಯಯನಗಳ ಕೊರತೆ ಇವೆ. ಅಲ್ಲದೆ, ಆಳಿದ ಆರಂಭಿಕ ನಾಡಪ್ರಭುಗಳ ಬಗೆಗೂ ಕೂಡ ಖಚಿತ ನಿಲುವುಗಳಿಲ್ಲ. ಕಾರಣ, ಈ ಬಗೆಗೆ ಯಾವುದೇ ಸಮಕಾಲೀನ ಶಾಸನಗಳ ಮತ್ತು ಸಾಹಿತ್ಯ ಕೃತಿಗಳ ಆಧಾರಗಳಿಲ್ಲ. ಇರುವ ಆಧಾರಗಳು ಐತಿಹ್ಯಗಳು, ಬಖೈರುಗಳು ಮತ್ತು ಕೆಲವು ಜಾನಪದ ಸಾಹಿತ್ಯಗಳಾಗಿವೆ. ಈ ಆಕರಗಳನ್ನು ಪುಷ್ಟೀಕರಿಸುವ ಅಂದರೆ, ಘಟನೆ ಅಥವಾ ವ್ಯಕ್ತಿಯ ಸಮಕಾಲೀನ ಶಾಸನ ಅಥವಾ ಲಿಖಿತ ದಾಖಲೆ ಮೊದಲಾದ ವಿಶ್ವಾಸಾರ್ಹ ಆಕರಗಳ ಕೊರತೆಗಳಿವೆ. ಪ್ರಸ್ತುತ ಉಪಲಬ್ಧ ಆಕಾರಗಳ ಹಿನ್ನೆಲೆಯಲ್ಲಿ ಈಗಾಗಲೇ ಸ್ಥಿರೀಕೃತಗೊಂಡಿರುವ ತೊಂಡಿ ಅಭಿಪ್ರಾಯಗಳನ್ನು ಮುರಿದುಕಟ್ಟುವ ಮೂಲಕ ಯಲಹಂಕ ನಾಡಪ್ರಭುಗಳ ಚರಿತ್ರೆಯನ್ನು ವಸ್ತುನಿಷ್ಠವಾಗಿ ಮತ್ತು ಆಧಾರಪೂರ್ವಕವಾಗಿ ವಿಶ್ಲೇಷಿಸುವ ಹಾಗೂ ಪುನರ್‌ರಚಿಸುವ ಪ್ರಯತ್ನವನ್ನು ಮಾಡಲಾಗಿದೆ. ಪ್ರಸ್ತುತ ಅಧ್ಯಯನದ ಪ್ರಾಮುಖ್ಯತೆಗಳು ಹೀಗಿವೆ:

1) ಪ್ರಸ್ತುತ ಮಹಾಪ್ರಬಂಧದಲ್ಲಿ ಯಲಹಂಕ ನಾಡಪ್ರಭುಗಳನ್ನು ಕೇಂದ್ರವಾಗಿರಿಸಿಕೊಂಡು ವಿಜಯನಗರೋತ್ತರ ಕಾಲಘಟ್ಟದ ಚಾರಿತ್ರಿಕ ಸಂದರ್ಭದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಏಳಿಗೆಗೆ ಬಂದ ಬಹುತೇಕ ಸ್ಥಳೀಯ ಪ್ರಭುತ್ವಗಳ ಮನೆತನಗಳ ಪೂರ್ವಿಕರೇಕೆ ಸ್ಥಳಿಯರಾಗಿರಲಿಲ್ಲ? ಎಂಬ ಪ್ರಶ್ನೆಗೆ ಉತ್ತರ ಹುಡುಕಲು ಪ್ರಯತ್ನಿಸಲಾಗುವುದು.

2) ದಕ್ಷಿಣ ಕರ್ನಾಟಕದ ಸ್ಥಳೀಯ ಪ್ರಭುತ್ವಗಳ ರಾಜಕೀಯ ಸ್ಥಾನಮಾನಗಳೇನಾಗಿದ್ದವು? ಸಮಕಾಲೀನ ರಾಜಕೀಯ ಅನಿಶ್ಚಿತತೆಯ ಸಂದರ್ಭದಲ್ಲಿ ನಾಡಪ್ರಭುಗಳ ಪ್ರತಿಕ್ರಿಯೆಗಳು ಹೇಗಿದ್ದವು? ನಾಡಿನ ಸಾಂಸ್ಕೃತಿಕ ಕ್ಷೇತ್ರಕ್ಕೆ ಇವರ ಕೊಡುಗೆಗಳೇನು? ಮುಂತಾದ ಅಂಶಗಳನ್ನು ಕುರಿತು ಚರ್ಚಿಸಲಾಗುವುದು.

3) ಯೂರೋಪಿಯನ್ನರ ಆಗಮನವು ಸಮಕಾಲೀನ ದಕ್ಷಿಣ ಕರ್ನಾಟಕದ ಸ್ಥಳೀಯ ಪ್ರಭುತ್ವಗಳ ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರದ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರಿದೆ? ಇವೇ ಮೊದಲಾದ ವಿಷಯಗಳನ್ನು ಅಧ್ಯಯನದ ಸಂದರ್ಭದಲ್ಲಿ ಕೇಂದ್ರೀಕರಿಲಾಗುವುದು.

4) ಯಲಹಂಕ ನಾಡಪ್ರಭುಗಳ ಮನೆತನದ ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆಡಳಿತಾತ್ಮಕ ಚರಿತ್ರೆಗಳನ್ನು ಅಧ್ಯಯನಕ್ಕೆ ಒಳಪಡಿಸುವ ಸಂದರ್ಭದಲ್ಲಿ, ಆ ನಾಡಿನ ನೆರೆಹೊರೆಯ ನಾಡಪ್ರಭುಗಳು ಅಥವಾ ಪಾಳೆಯಗಾರ ಮನೆತನಗಳ ಚಾರಿತ್ರಿಕ ಸಂದರ್ಭವನ್ನು ಗ್ರಹಿಸುವ ಉದ್ದೇಶವನ್ನು ಹೊಂದಲಾಗಿದೆ. ಮುಖ್ಯವಾಗಿ ನಾಡಪ್ರಭುಗಳ ಮನೆತನದ ಮೂಲ ಮತ್ತು ನಾಡು ಕಟ್ಟುವ ವಿಧಾನದ ಬಗೆಗೆ ಜಾನಪದ ಕಥನಗಳಲ್ಲಿ ಏಕರೂಪತೆ ಅಥವಾ ಸಾಮ್ಯತೆಗಳ ಸ್ವರೂಪಗಳನ್ನು ಗುರುತಿಸಲು ಸಾಧ್ಯವಿದೆ. ಈ ಏಕರೂಪ ಕಥನಗಳ ಆಶಯಗಳನ್ನು ಗ್ರಹಿಸುವ ಮತ್ತು ಮೂಲ ಪುರುಷರ ಬಗೆಗೆ ಇರುವ ಐತಿಹ್ಯಗಳನ್ನು ಪರೀಕ್ಷೆಗೆ ಒಳಪಡಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಯನದಲ್ಲಿ ಹೊಂದಲಾಗುವುದು.

5) ಸಾಮಾನ್ಯವಾಗಿ ಶಿಷ್ಟ ಸಾಹಿತ್ಯಗಳಲ್ಲಿ ಪ್ರಶಂಸೆಗೆ ಪಾತ್ರರಾಗುವ ಸಾಮ್ರಾಟರು ಜಾನಪದೀಯರ ಸಾಹಿತ್ಯಗಳಲ್ಲಿ ಸುಳಿಯುವುದೇ ಅಪರೂಪ. ಆದರೆ ನಾಡಪ್ರಭುಗಳು, ನಾಯಕರು, ಪಾಳೇಗಾರರು ಮೊದಲಾದ ಸ್ಥಳೀಯ ಅರಸರು ಹೆಚ್ಚಿನ ಪಾಲು ಜನಪದೀಯ ಕಥನ ಕಾವ್ಯಗಳಿಗೆ ವಸ್ತುಗಳಾಗಿದ್ದಾರೆ. ಈ ವಿದ್ಯಮಾನದ ಹಿಂದಿರುವ ಕಾರ್ಯಕಾರಣ ಸಂಬಂಧವನ್ನು ಅರಿಯುವ ಪ್ರಯತ್ನ ನಡೆಸಲಾಗುವುದು. ಅಗತ್ಯವಾಗಿದೆ.

6) 16ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ವ್ಯಾಪ್ತಿಗೆ ಒಳಪಟ್ಟಿದ್ದ ಬೆಂಗಳೂರಿನ ಪರಿಸರವು ಯಲಹಂಕ ನಾಡಪ್ರಭುಗಳ ಆಳ್ವಿಕೆಗೆ ಒಳಪಟ್ಟಿತ್ತು. ಶಾಸನಗಳಲ್ಲಿ ಯಲಹಂಕ

ನಾಡು 12ನೆಯ ಶತಮಾನದಲ್ಲಿಯೇ ಪ್ರಸ್ತಾಪವಾಗಿದೆ. ಯಲಹಂಕ ನಾಡಪ್ರಭುಗಳ ಮನೆತನದ ಮೂಲಪುರುಷನೆಂದು ರಣಭೈರೇಗೌಡನನ್ನು ಸಾಮಾನ್ಯವಾಗಿ ವಿದ್ವಾಂಸರು ಗುರುತಿಸುತ್ತಾರೆ. ಆದರೆ, ಶಾಸನಗಳಲ್ಲಿ ಯಲಹಂಕ ನಾಡಿನ ನಾಡಗೌಡರ ಪ್ರಸ್ತಾಪಗಳಿವೆ. ಆ ಹೆಸರುಗಳು ಈ ಮನೆತನದಲ್ಲಿ ಬರುವ ಆರಂಭಿಕ ನಾಡಪ್ರಭುಗಳ ಹೆಸರಿನೊಂದಿಗೆ ತಾಳೆಯಾಗುವುದಿಲ್ಲ. ನಿಖರವಾಗಿ ಯಲಹಂಕ  ನಾಡಪ್ರಭುಗಳ ಬಗೆಗೆ ಉಲ್ಲೇಖಗಳು ದೊರಕುವುದು 16ನೆಯ ಶತಮಾನದ ನಾಲ್ಕನೆಯ ದಶಕದಿಂದ ಮಾತ್ರ. ಅಂದರೆ, ಆಧುನಿಕ ಬೆಂಗಳೂರಿನ ಸ್ಥಾಪಕನಾದ ಹಿರಿಯ ಕೆಂಪೇಗೌಡನ ಕಾಲದಿಂದ. ಆದ್ದರಿಂದ ಯಲಹಂಕ ನಾಡಪ್ರಭುಗಳ ಮೂಲದ ಬಗೆಗೆ ಇರುವ ವಿದ್ವಾಂಸರ ಅಭಿಪ್ರಾಯಗಳನ್ನು ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಮರುಪರಿಶೀಲಿಸಲಾಗುವುದು.

7) ಹಿರಿಯ ಕೆಂಪೇಗೌಡನ ನಂತರ ಯಲಹಂಕ ನಾಡಪ್ರಭುಗಳ ಮನೆತನದಲ್ಲಿ ಕೆಂಪೇಗೌಡ / ಕೆಂಪ ಹೆಸರಿನ ಏಳೆಂಟು ಮಂದಿ ನಾಡಪ್ರಭುಗಳು ಆಳ್ವಿಕೆ ನಡೆಸುತ್ತಾರೆ. ಆದರೆ ಪ್ರಸಿದ್ಧನಾದ ಹಿರಿಯ ಕೆಂಪೇಗೌಡನಿಗೆ ಉಳಿದವರ ಸಾಧನೆಗಳನ್ನು ಆರೋಪಿಸುವ ಮೂಲಕ ಚರಿತ್ರೆಗೆ ಅಪಚಾರವೆಸಗಲಾಗಿದೆ. ಆಳಿದ ನಾಡಪ್ರಭುಗಳ ಬಗೆಗೆ ಸರಿಯಾದ ಕಾಲಮಾನವನ್ನು ಗುರುತಿಸುವಲ್ಲಿ ಹಲವು ತೊಡಕುಗಳಿವೆ. ಮೇಲಿನ ಎಲ್ಲ ವಿಷಯಗಳ ಬಗೆಗೆ ಇತಿಹಾಸಕಾರರ ಅಭಿಪ್ರಾಯಗಳನ್ನು ವಿಮರ್ಶಿಸಿ, ಆಧಾರಗಳ ಮೂಲಕ ಮರುವಿಶ್ಲೇಷಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ನಡೆಸಲಾಗುವುದು.

8) ಯಲಹಂಕ ನಾಡಪ್ರಭುಗಳನ್ನು ಕುರಿತ ಬಹುತೇಕ ಬರಹಗಳು ವಸ್ತುನಿಷ್ಠತೆಯ ಬದಲು ವ್ಯಕ್ತಿ ನಿಷ್ಟತೆಯನ್ನು ಹೊಂದಿವೆ. ಈ ಹಿನ್ನೆಲೆಯಲ್ಲಿ ಯಲಹಂಕ ನಾಡಪ್ರಭುಗಳ ಚರಿತ್ರೆಯನ್ನು ವಸ್ತುನಿಷ್ಠವಾಗಿ ಪುನರ್ರಚಿಸುವ ಪ್ರಯತ್ನ ನಡೆಸಲಾಗುವುದು.

9) ಬೇಗೂರು ಶಾಸನದಲ್ಲಿ ಉಲ್ಲೇಖವಾಗಿರುವ ಪ್ರಾಚೀನ ಬೆಂಗಳೂರು ಯಾವುದು? ಆಧುನಿಕ ಬೆಂಗಳೂರು ಯಾವುದು ಎಂಬುದನ್ನು ಪರಿಶೀಲನೆ ನಡೆಸಲಾಗುವುದು.

10) ಬೆಂಗಳೂರನ್ನು ಯಲಹಂಕ ನಾಡಿನ ರಾಜಧಾನಿಯನ್ನಾಗಿ ನಿರ್ಮಿಸಿದರ ಹಿಂದಿರುವ ಬೆಂಗಳೂರಿನ ನೆಲೆ – ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳುವ ಅಗತ್ಯತೆ ಬಹುಮುಖ್ಯವಾದುದು. ಬೆಂಗಳೂರಿನ ಪಟ್ಟಣವನ್ನು ವಿವಿಧ ವ್ಯಾಪಾರಿ ಸಮುದಾಯಗಳು

ಬಂದು ನೆಲೆಸಲು ಮತ್ತು ವ್ಯಾಪಾರ ವಹಿವಾಟನ್ನು ನಡೆಸಲು ಹಿರಿಯ ಕೆಂಪೇಗೌಡ ಅನುವು ಮಾಡಿಕೊಟ್ಟನು. ಅಲ್ಲದೆ ಕೋಟೆಯನ್ನು ನಿರ್ಮಿಸಿದನೆಂದು ಹೇಳಲಾಗುತ್ತದೆ. ಈ ಸಂಗತಿಗಳನ್ನು ಸಮಕಾಲೀನ ದಕ್ಷಿಣ ಭಾರತದ ಚಾರಿತ್ರಿಕ ವಿದ್ಯಮಾನಗಳ ಪರಿಪ್ರೇಕ್ಷೆಯೊಳಗಿಟ್ಟು ವಿಮರ್ಶೆ ಮತ್ತು ವಿಶ್ಲೇಷಣೆ ನಡೆಸುವ ಉದ್ದೇಶವನ್ನು ಹೊಂದಲಾಗಿದೆ.

11) ಮಾಗಡಿಯಿಂದ ಎರಡನೇ ಕೆಂಪೇಗೌಡನು ಆಳ್ವಿಕೆಯನ್ನು ಮಾಡುವ ಮೂಲಕ ಮಾಗಡಿ ಕೆಂಪೇಗೌಡನೆಂದು ಕರೆಸಿಕೊಳ್ಳುತ್ತಾನೆ. ಅವನು ಮಾಗಡಿ ಸೀಮೆಯ ಜೊತೆಗೆ ಕುಣಿಗಲ್ ಸೀಮೆಯನ್ನೂ ಕೂಡ ತನ್ನ ಯಲಹಂಕನಾಡಿನ ವ್ಯಾಪ್ತಿಗೆ ಸೇರಿಸಿಕೊಂಡಿರುತ್ತಾನೆ. ಅವನ ಮಕ್ಕಳಾದ ಮುಮ್ಮಡಿ ಕೆಂಪೇಗೌಡ ಮತ್ತು ಇಮ್ಮಡಿ ಹಿರಿಯ ಕೆಂಪೇಗೌಡರ ನಡುವೆ ಯಲಹಂಕ ನಾಡು ಹಂಚಿಕೆಯಾಗಿರಬಹುದಾದ ಸಾಧ್ಯತೆಗಳ ಬಗೆಗೆ ಹೊಸಬೆಳಕು ಚೆಲ್ಲುವ ಉದ್ದೇಶವನ್ನು ಹೊಂದಲಾಗಿದೆ.

12) ಯಲಹಂಕ ನಾಡಪ್ರಭುಗಳ ಕಾಲದ ಸಾಮಾಜಿಕ ಜೀವನವನ್ನು ಅರಿಯುವುದು ಅವಶ್ಯವಿದೆ. ಈಗಾಗಲೇ ಬರೆದಿರುವ ತಜ್ಞರ ಪ್ರಕಾರ ಈ ಮನೆತನದ ಹೆಣ್ಣುಮಕ್ಕಳು ಕಿರುಬೆರಳನ್ನು ಆವುತಿ ನೀಡುವ ಆಚರಣೆ ಚಾಲ್ತಿಯಲ್ಲಿತ್ತೆಂದು ಹೇಳುತ್ತಾರೆ. ಇದನ್ನು ಹಿರಿಯ ಕೆಂಪೇಗೌಡ ತಡೆಯುವಲ್ಲಿ ಯಶಸ್ವಿಯಾದನೆಂದು ಹೇಳಲಾಗುತ್ತದೆ. ಅದೇ ರೀತಿ ಬೆಂಗಳೂರು ಕೋಟೆಯ ನಿರ್ಮಾಣದ ವೇಳೆ ದ್ವಾರವು ನಿಲ್ಲದೆ ಹೋದಾಗ ಕೆಂಪೇಗೌಡನ ಸೊಸೆ ಬಲಿ ಹೋದಳೆಂದು ತಿಳಿದು ಬರುವುದು.

ಕೆಂಪೇಗೌಡನಲ್ಲಿ ಗೋಚರಿಸುವ ಸುಧಾರಣಾ ಮನೋಭಾವದ ಮೇಲೆ ಬೀರಿರಬಹುದಾದ ಸಮಕಾಲೀನ ಸುಧಾರಣಾವಾದಿ ವಿಚಾರಧಾರೆ ಮತ್ತು ಚಿಕಿತ್ಸಕ ಧೋರಣೆಯ ಹಿನ್ನೆಲೆಗಳನ್ನು ಗುರುತಿಸುವ ಅಗತ್ಯತೆ ಇದೆ. ಅಲ್ಲದೆ, ಘಟನೆಯ ನೈಜತೆ ಬಗೆಗೆ ವಿಮರ್ಶಾತ್ಮಕ ಅಧ್ಯಯನ ನಡೆಸುವ ಉದ್ದೇಶವನ್ನು ಹೊಂದಲಾಗಿದೆ.

13) ಧಾರ್ಮಿಕವಾಗಿ ಯಲಹಂಕ ನಾಡಿನಲ್ಲಿ ಉಂಟಾದ ಪಲ್ಲಟಗಳು ಮತ್ತು ಅದರ ಪರಿಣಾಮಗಳನ್ನು ಕುರಿತು ಗಂಭೀರವಾದ ಅಧ್ಯಯನದ ಅಗತ್ಯತೆ ಇದೆ. ಮುಖ್ಯವಾಗಿ ವೈಷ್ಣವರಾಗಿದ್ದ ಯಲಹಂಕ ನಾಡಪ್ರಭುಗಳು ಶೈವರಾಗಿ ಪರಿವರ್ತಿತರಾದ ಬಗೆಗೆ, ಮಾಗಡಿಯ ತಿರುಮಲೆ ರಂಗನಾಥನ ಭಕ್ತರಾಗಿದ್ದವರು ನಂತರ ಸೋಮೇಶ್ವರನ

ಭಕ್ತರಾಗುವುದರ ಹಿಂದಿನ ಧಾರ್ಮಿಕ ಸ್ಥಿತ್ಯಂತರಗಳನ್ನು ಸಮಕಾಲೀನ ಧಾರ್ಮಿಕ ವಿದ್ಯಮಾನಗಳ ಜೊತೆಗಿಟ್ಟು ಅಧ್ಯಯನ ನಡೆಸಲಾಗುವುದು.

14) ಆರ್ಥಿಕವಾಗಿ ಯಲಹಂಕ ನಾಡಿನ ರಾಜಧಾನಿ ಬೆಂಗಳೂರು ನಗರ ದಕ್ಷಿಣ ಭಾರತದಲ್ಲಿಯೇ ಸದೃಢ ವಾಣಿಜ್ಯ ನಗರವಾಗಿ ಬೆಳೆದುದರ ಹಿಂದಿನ ಅಂತಃಶಕ್ತಿಯನ್ನು ಗುರುತಿಸಬೇಕಿದೆ. ಮುಖ್ಯವಾಗಿ ಪೂರ್ವ ಮತ್ತು ಪಶ್ಚಿಮ ಕರಾವಳಿಗಳನ್ನು ಸಂಪರ್ಕಿಸುವ ಒಳನಾಡಿನ ಭೂಮಧ್ಯ ಭಾಗದ ಆಯಕಟ್ಟಿನ ನೆಲೆಯಲ್ಲಿ ಬೆಂಗಳೂರು ಇರುವುದರಿಂದ ವ್ಯಾಪಾರದ ಮೇಲಿನ ನಿಯಂತ್ರಣ ಕೂಡ ಆರ್ಥಿಕ ಶಕ್ತಿಗೆ ದಾರಿ ಮಾಡಿಕೊಟ್ಟಿರುವ ಸಾಧ್ಯತೆಗಳನ್ನು ಪರಿಶೀಲಿಸಲಾಗುವುದು.

15) ಕೆರೆ, ಕಾಲುವೆಗಳ ಒತ್ತುವರಿಗಳು ಅವ್ಯಾಹತವಾಗಿ ನಡೆಯುತ್ತಿರುವ ಇವತ್ತಿನ ಸಂದರ್ಭದಲ್ಲಿ ನಗರಕ್ಕೆ ಜಲಕ್ಷಾಮ ಆವರಿಸುವ ಭೀತಿ ಉಂಟಾಗಿದೆ. ಸಮೀಕ್ಷೆಯೊಂದರ ಪ್ರಕಾರ, ಮುಂದಿನ 30 ವರ್ಷಗಳಲ್ಲಿ ಜಲಕ್ಷಾಮವನ್ನು ಎದುರಿಸುವ ಜಗತ್ತಿನ ಮಹಾನಗರ ಸಾಲಿನಲ್ಲಿ ಬೆಂಗಳೂರು ಕೂಡ ಒಂದಾಗಿದೆ. ಈ ಹಿನ್ನೆಲೆಯಲ್ಲಿ ಕೆರೆ ನಿರ್ಮಾಣ ಹಾಗೂ ಅವುಗಳ ನಿರ್ವಹಣೆಗೆ ಯಲಹಂಕ ನಾಡಪ್ರಭುಗಳು ನೀಡಿದ ಮಹತ್ವವನ್ನು ಅರಿಯಲಾಘುವುದು.

16) ಯಲಹಂಕ ನಾಡಪ್ರಭುಗಳ ಕಲೆ ಮತ್ತು ವಾಸ್ತುಶಿಲ್ಪಗಳು ತಮ್ಮದೇಯಾದ ಲಕ್ಷಣಗಳನ್ನು ಹೊಂದಿವೆಯೇ ಇಲ್ಲವೇ ಎಂಬುದನ್ನು ಶೋಧಿಸಲು ಪ್ರಯತ್ನಿಸಲಾಗುವುದು.

17) ಮಾಗಡಿ ತಾಲ್ಲೂಕಿನ ಕೆಂಪಾಪುರದಲ್ಲಿ ದೊರೆತಿರುವ ಶಾಸನಯುಕ್ತ ಮಂಟಪ ಸಮಾಧಿಯ ಕೆಂಪೇಗೌಡ ಯಾರು ಎಂಬುದರ ಬಗೆಗೆ ವಸ್ತುನಿಷ್ಠ ಅಧ್ಯಯನ ನಡೆಸಲಾಗುವುದು.

18) ಸಾಮಾಜಿಕ ಅಭಿಯಂತರೀಯ (ಸೋಷಿಯಲ್ ಎಂಜಿನಿಯರಿಂಗ್) ಕಾರ್ಯದಲ್ಲಿ ಯಲಹಂಕ ನಾಡಪ್ರಭುಗಳ ಮತ್ತು ಅವರ ಸಮಕಾಲೀನ ನಾಡಪ್ರಭುಗಳ ಪಾತ್ರವನ್ನು ಪರಿಶೀಲಿಸಲಾಗುವುದು. ಸಾಮಾಜಿಕ ಒಳಗೊಳ್ಳುವಿಕೆ ಕುರಿತು ನಾಡಪ್ರಭುಗಳ ಸಾಮಾಜಿಕ ಚಿಂತನೆಯನ್ನು ಪ್ರಸ್ತುತ ಜಾತಿ ರಾಜಕಾರಣದ ಹಿನ್ನೆಲೆಯಲ್ಲಿ ಪ್ರಸ್ತುತವಾಗಿರುವ ಇದರ ಹಿಂದಿನ ಆಶಯ / ಉದ್ದೇಶಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗುವುದು.

## 1.2 ಊಹಾತ್ಮಕ ಪರಿಕಲ್ಪನೆ

ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕೆಲವು ಊಹಾತ್ಮಕ ವಾದಗಳನ್ನು ಕಟ್ಟಿಕೊಳ್ಳಲಾಗಿದೆ.

1) ಈವರೆಗಿನ ವಿದ್ವಾಂಸರು ಕೆಂಪೇಗೌಡನ ಪೂರ್ವೀಕರ ಪರಂಪರೆಯನ್ನು ರಣಭೈರೇಗೌಡನಿಂದ ಆರಂಭಿಸುತ್ತಾರೆ. ಆದರೆ ಕೆಂಪೇಗೌಡನ ತಂದೆ ಕೆಂಪನಾಚೇಗೌಡನಿಗೂ ಹಿಂದಿನ ಯಲಹಂಕ ನಾಡಪ್ರಭುಗಳ ಬಗೆಗೆ ಯಾವುದೇ ಸಮಕಾಲೀನ ಆಕರಗಳು ಲಭ್ಯವಿಲ್ಲ. ಆದ್ದರಿಂದ ಯಲಹಂಕ ನಾಡಪ್ರಭುಗಳ ಆರಂಭಿಕ ಪ್ರಭುಗಳಾದ ಜಯಗೌಡ, ಗಿಡ್ಡೇಗೌಡ ಮೊದಲಾದವರು ಯಲಹಂಕ ನಾಡನ್ನು ಆಳಿದ ಬಗ್ಗೆ ಅನುಮಾನಗಳಿವೆ.

2) ಕೆಂಪೇಗೌಡ ಬೆಂಗಳೂರು ಪ್ರದೇಶವನ್ನು ಹುಡುಕುವ ಸಂದರ್ಭದಲ್ಲಿ ಕಾಡಿನಲ್ಲಿ ಮೊಲವೊಂದು ನಾಯಿಯ ಬೆನ್ನು ಹತ್ತಿತ್ತು ಎಂಬ ಕಥೆಗಳು ಕರ್ನಾಟಕದ ಉದ್ದಗಲಕ್ಕೂ ಸಾಮಾನ್ಯವಾಗಿ ಜನಜನಿತವಾಗಿರುವ ಕಥನವಾಗಿದೆ. ಆದರೆ ಆಧುನಿಕ ಬೆಂಗಳೂರು ನಗರವನ್ನು ನಿರ್ಮಿಸುವ ಸಂದರ್ಭದಲ್ಲಿ ಭೌಗೋಳಿಕ ಅಂಶಗಳ ಹಿನ್ನೆಲೆಯಲ್ಲಿ ನೆಲೆಯ ಆಯ್ಕೆಯಾಗಿರಬಹುದೇ ವಿನಃ ನಾಯಿ ಮೊಲದ ಕಥೆಯಿಂದಲ್ಲ. ಆದ್ದರಿಂದ ಈ ರೀತಿಯ ಐತಿಹ್ಯಗಳು ವಾಸ್ತವಕ್ಕೆ ದೂರವಾಗಿವೆ ಎಂದು ಊಹಿಸಲಾಗಿದೆ.

3) ಕೋಟೆಯ ಸಂದರ್ಭದಲ್ಲಿ ಕೆಂಪೇಗೌಡನ ಸೊಸೆ ಬಲಿ ಹೋದ ಕಥನ ವಾಸ್ತವತೆಗೆ ದೂರವಾಗಿರುವಂತೆ ತೋರುತ್ತದೆ. ಏಕೆಂದರೆ, ಕೆಂಪೇಗೌಡನು ಬೆಂಗಳೂರು ಕೋಟೆಗೆ ಅಸ್ತಿಭಾರ ಹಾಕುವ ಹೊತ್ತಿಗೆ ಅವನಿಗೆ ಮಗ, ಸೊಸೆ ಇದ್ದರೇ? ಎಂಬ ಬಲವಾದ ಸಂಶಯ ಮೂಡುತ್ತದೆ. ಏಕೆಂದರೆ, ಕೆಂಪೇಗೌಡನಿಗೆ ಆಗಿನ್ನು 30 ವರ್ಷ ದಾಟಿರಲಿಲ್ಲ. ಮಿಗಿಲಾಗಿ, ಕೆಂಪೇಗೌಡನಿಗೆ ಪುತ್ರ ಸಂತಾನ ತಡವಾಗಿರುವ ಬಗ್ಗೆ ಸುಳುಹುಗಳಿವೆ.

4) ಜಯಗೌಡ ಮತ್ತು ಕೆಂಪೇಗೌಡ ಸಂಬಂಧ ಇರುವ ಐತಿಹ್ಯಗಳಲ್ಲಿ ಸರ್ಪ ನೆರಳಾಗಿ ನಿಂತ ಕಥನವಿದೆ. ಇದು ನಾಡಪ್ರಭುಗಳು ದೈವಿಕ ಸಿದ್ಧಾಂತಗಳ ಪ್ರತಿಪಾದನೆಯ ಹಿಂದಿನ ಉದ್ದೇಶವಾಗಿರುವಂತಿದೆ. ಇಂತಹ ಕಥನಗಳು ಅನೇಕ ನಾಡಪ್ರಭು, ಪಾಳೆಯಗಾರರ ಬಗೆಗೂ ಕೇಳಿಬರುವುದರಿಂದ ಇದೊಂದು ದೈವತ್ವೀಕರಿಸಿಕೊಳ್ಳುವ ಪ್ರಯತ್ನದ ಭಾಗವಾಗಿರಬಹುದು.

5) ಯಲಹಂಕ ನಾಡಪ್ರಭುಗಳಿಗೆ ಅವರದೇ ಆದ ಒಂದು ಶಿಲ್ಪ ಮತ್ತು ವಾಸ್ತುಶೈಲಿ ಇದೆಯೇ ಎಂಬ ಅನುಮಾನಗಳಿವೆ. ಏಕೆಂದರೆ, ಗವಿಗಂಗಾಧರೇಶ್ವರ ದೇವಾಲಯದ ಆವರಣದಲ್ಲಿ ಏಕಶಿಲೆಯಲ್ಲಿ ಮಾಡಿರುವ ಸೂರ್ಯಪಾನ, ಚಂದ್ರಪಾನ, ಕಲ್ಲಿನ ಛತ್ರಿ ಮುಂತಾದವುಗಳ ಜೊತೆಗೆ, ಹಜಾರಗಳ ನಿರ್ಮಾಣದಲ್ಲಿನ ಶಿಷ್ಠತೆ, ಬಹಳ ಎತ್ತರವಾದ ನೆಲೆಗಳಲ್ಲಿ ನಿರ್ಮಿಸಲಾಗಿರುವ ಕಾವಲು ಗೋಪುರಗಳು, ಗ್ರಾನೈಟ್ ಕಲ್ಲಿನ ಹೇರಳವಾದ ಬಳಕೆ, ರಾಯಗೋಪುರಗಳ ನಿರ್ಮಾಣಕ್ಕೆ ನೀಡಿದ ಆದ್ಯತೆ, ಭಿತ್ತಿಯ ಮೇಲೆ ಪೌರಾಣಿಕ ಕಥಾನಕಗಳಲ್ಲಿ ಆಯ್ದ ಕೆಲವನ್ನು ಮತ್ತೆ ಮತ್ತೆ ಬಳಸಿರುವುದು, ದೇವಾಲಯಗಳಲ್ಲಿ ಉಗ್ರಾಣಗಳನ್ನು ಹಾಗೂ ಅಡಿಗೆ ಕೋಣೆಗಳನ್ನು ಸೇರಿಸಿದ್ದು ಮುಂತಾದವುಗಳು ಈ ರೀತಿಯ ವಾದವೊಂದಕ್ಕೆ ಪುಷ್ಠಿ ನೀಡುತ್ತವೆ.

6) ಮಾಗಡಿ ತಾಲ್ಲೂಕಿನ ಕೆಂಪಾಪುರದಲ್ಲಿ ದೊರೆತ ಮಂಟಪವು ಬೆಂಗಳೂರು ಕೆಂಪೇಗೌಡನ ಸಮಾಧಿ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುತ್ತಾರೆ. ಆದರೆ ಕುಣಿಗಲ್ಲಿಗೆ ಸಮೀಪವಿರುವ ಕೆಂಪಾಪುರಕ್ಕೂ ಬೆಂಗಳೂರು ಕೆಂಪೇಗೌಡನಿಗೂ ಸಂಬಂಧಗಳಿರವ ಸಾಧ್ಯತೆ ಕಡಿಮೆ. ಬಹುಶಃ ಕುಣಿಗಲ್‌ನಿಂದ ಆಳುತ್ತಿದ್ದ ಇಮ್ಮಡಿ ಹಿರಿಯ ಕೆಂಪೇಗೌಡನ ಸಮಾಧಿಯಾಗಿರವ ಸಾಧ್ಯತೆಗಳಿವೆ ಎಂದು ಊಹಿಸಲಾಗಿದೆ.

7) 9ನೆಯ ಶತಮಾನದಲ್ಲಿಯೇ ಬೆಂಗಳೂರು ಎಂಬ ಸ್ಥಳ ಅಸ್ತಿತ್ವದಲ್ಲಿದ್ದ ಬಗೆಗೆ ಶಾಸನಾಧಾರಗಳಿವೆ. ಆಧುನಿಕ ಬೆಂಗಳೂರೇ ಪ್ರಾಚೀನ ಬೆಂಗಳೂರಾ? ಅಥವಾ ಅದು ಬೇರೆ, ಇದು ಬೇರೆಯೇ ಎಂಬ ಬಗೆಗೆ ಜಿಜ್ಞಾಸೆಗಳಿವೆ. ಹಾಗಾದರೆ, ಪ್ರಾಚೀನ ಬೆಂಗಳೂರು ಎಲ್ಲಿತ್ತು ಎಂಬ ಬಗೆಗೂ ವಾದ–ಪ್ರತಿವಾದಗಳಿವೆ. ಶಾಸನಗಳ ಹಿನ್ನೆಲೆಯಲ್ಲಿ ಭೌಗೋಳಿಕ ಅಂಶಗಳನ್ನು ಆಧರಿಸಿ, ಬೆಳ್ಳಂದೂರು ಪ್ರಾಚೀನ ಬೆಂಗಳೂರು ಆಗಿರಬಾರದೇಕೆ ಎಂಬ ಬಗೆಗೆ ಅನುಮಾನಗಳಿವೆ.

ಈ ಮೇಲಿನ ಎಲ್ಲಾ ಊಹಾತ್ಮಕಗಳನ್ನು ಆಧಾರಪೂರ್ವಕವಾಗಿ ಚಾರಿತ್ರಿಕ ಅಧ್ಯಯನಕ್ಕೆ ಒಳಪಡಿಸಿ, ವಿಸ್ತೃತವಾದ ವಿಶ್ಲೇಷಣೆಗಳ ಮೂಲಕ ಹಾಗೂ ವಾಸ್ತವಿಕ ನೆಲೆಗಟ್ಟಿನ ಮೇಲೆ ಉತ್ತರಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ನಡೆಸಲಾಗಿದೆ. ವಿವಿಧ ಅಧ್ಯಾಯಗಳಲ್ಲಿ ನಡೆಸಲಾಗುವ ಚರ್ಚೆಗಳ ಸಂದರ್ಭದಲ್ಲಿ ವಿಷಯಗಳ ಪುನರುಕ್ತಿಯಾಗುವ ಸಂಭವಗಳಿವೆ. ಸಾಂದರ್ಭಿಕವಾಗಿ ಹೊದಗಿಬರುವ ಕೆಲವೊಂದು ವಿಷಯಗಳ ಪುನರುಕ್ತಿಯು ಆಯಾಯ ಸಂದರ್ಭದ ಸಂಕಥನಗಳ ಸ್ಪಷ್ಟತೆಗೆ ಅನಿವಾರ್ಯವಾಗಿರುತ್ತದೆ.

## 1.3 ಅಧ್ಯಯನದ ಸ್ವರೂಪ ಮತ್ತು ವಿಧಾನ

ಇತಿಹಾಸ ಸಂಶೋಧನೆಯ ಸಂದರ್ಭದಲ್ಲಿ ತಾತ್ವಿಕ ಮತ್ತು ಸೈದ್ಧಾಂತಿಕ ನೆಲೆಗಟ್ಟಿನಲ್ಲಿ ಸಂಶೋಧನೆಯನ್ನು ನಿರೂಪಿಸಲು ಅಧ್ಯಯನ ವಿಧಾನ ಎಂಬುದು ಮುಖ್ಯವಾಗುತ್ತದೆ. ಭಾರತದ ಚರಿತ್ರೆಯ ರಚನಾ ಸಂದರ್ಭದಲ್ಲಿ ಆಧುನಿಕೋತ್ತರವಾದದ ಪ್ರಭಾವಗಳು ಸಬಾಲ್ಟರ್ನ್ ಅಧ್ಯಯನಗಳ ಭಾಗವಾಗಿಯೇ ಗೋಚರಿಸುತ್ತವೆ. ಸಾರ್ವತ್ರಿಕತೆಗೆ ಬದಲಾಗಿ ಸ್ಥಳೀಯತೆ, ಬೃಹತ್ ಕಥನಗಳ ವಿಮರ್ಶೆ, ಪಠ್ಯದ ಓದು, ಪಠ್ಯದಲ್ಲಿ ಅಂತರ್ಗತವಾಗಿರುವ ಸಂಕೀರ್ಣ ಅಧಿಕಾರದ ಸಂಬಂಧಗಳ ಬಗೆಗೆ ಜಾಗೃತಿ, ವಾಸ್ತವದ ಗ್ರಹಿಕೆ ಮತ್ತು ಪ್ರತಿನಿಧೀಕರಣಗಳ ನಡುವಣ ಭಿನ್ನತೆಯ ವಿವರಣೆ ಇವೇ ಮುಂತಾದ ಹೊಸ ನೋಟಗಳನ್ನು ಆಧುನಿಕೋತ್ತರವಾದವು ಮುಂದಿಟ್ಟಿತು. ಈ ಸಿದ್ಧಾಂತಗಳು ಚರಿತ್ರೆಯ ಶಿಸ್ತಿಗೆ ಹೆಚ್ಚುವರಿ ಸಂದೇಹಗಳನ್ನು ನೀಡುವ ಮೂಲಕ ಚಾರಿತ್ರಿಕ ವಿಶ್ಲೇಷಣೆಯ ಮರುಪರಿಶೀಲನೆಯಲ್ಲಿ ಅತ್ಯಂತ ಮಹತ್ವದ ಪಾತ್ರವಹಿಸಿವೆ. ವಸ್ತುನಿಷ್ಠತೆಯನ್ನು ಸಾಧಿಸಲು ಇತಿಹಾಸದ ಸಾಂಪ್ರದಾಯಿಕ ಮತ್ತು ಆಧುನಿಕ ಸಿದ್ಧಾಂತಗಳ ಬಗೆಗೆ ಹೆಚ್ಚಿನ ಸಂದೇಹಗಳನ್ನು ಹೊಂದುವುದು ಅತ್ಯಗತ್ಯ.[7]

ಈ ಹಿನ್ನೆಲೆಯಲ್ಲಿ ದಕ್ಷಿಣ ಕರ್ನಾಟಕದ ನಾಡಪ್ರಭುಗಳಲ್ಲಿ ವಿಶೇಷವಾಗಿ ಯಲಹಂಕ ನಾಡಪ್ರಭುಗಳ ಚರಿತ್ರೆಯ ರಚನೆಯ ಸಂದರ್ಭದಲ್ಲಿ ದೊರೆಯುವ ವಿವಿಧ ಬಗೆಯ ಆಕರಗಳನ್ನು ತೀವ್ರ ವಿಮರ್ಶೆಗೆ ಮತ್ತು ವಿಶ್ಲೇಷಣೆಗೆ ಒಳಪಡಿಸಿ ವಸ್ತುನಿಷ್ಠ ಚರಿತ್ರೆಯನ್ನು ನಿರೂಪಿಸುವ ಸವಾಲು ಮುಂದಿವೆ. ಮೇಲೆ ಹೇಳಿದಂತೆ ಸ್ಥಳೀಯ ಅಥವಾ ಪ್ರಾದೇಶಿಕ ಇತಿಹಾಸವನ್ನು ರಚಿಸುವ ಸಂದರ್ಭದಲ್ಲಿ ಇತಿಹಾಸಕಾರ ಪೂರ್ವಾಗ್ರಹಗಳಿಗೆ ಒಳಗಾಗುವ ಸಂಭವಗಳು ಇರುತ್ತವೆ ಎಂಬ ಸಂದೇಹ ಯಲಹಂಕ ನಾಡಪ್ರಭುಗಳ ಇತಿಹಾಸ ರಚನೆಯ ಸಂದರ್ಭದಲ್ಲಿಯೂ ನಿಜವಾಗಿದೆ. 'ಹಿತಾಸಕ್ತವರ್ಗ'ವು ಹುಟ್ಟುಹಾಕುವ 'ಚಾರಿತ್ರಿಕ ಅಪಪ್ರಜ್ಞೆ' ಮತ್ತು ಆ ಮೂಲಕ ಸಾಧಿಸಲೊರಟ 'ಚಾರಿತ್ರಿಕ ರಾಜಕಾರಣ' ಕುರಿತು ವಿಶ್ಲೇಷಿಸುತ್ತಾ ಸಂಶೋಧಕರೊಬ್ಬರು ಹೀಗೆ ಹೇಳಿದ್ದಾರೆ: "'ಚಾರಿತ್ರಿಕ ರಾಜಕಾರಣ'ಗಳಿಂದ ಸಂಶೋಧನಾ ವಲಯವನ್ನು ಪಾರುಮಾಡಿ, ಪೂರ್ವಾಗ್ರಹಮುಕ್ತ ವಸ್ತುನಿಷ್ಠ ಚರಿತ್ರೆಯನ್ನು ಕಟ್ಟುವ ಜರೂರು ತೀವ್ರವಾಗಿದೆ. ಸಂಶೋಧನೆ ಎಂಬುದು ನಿರಂತರ ಪ್ರಕ್ರಿಯೆಯಾಗಿದ್ದು, ಸತ್ಯದ ಸಾಮೀಪ್ಯಕ್ಕೆ ಸಾಗುವ ಮಾರ್ಗವಾಗಿದೆ. ಪ್ರಾಮಾಣಿಕವಾಗಿ ಕಂಡುಕೊಂಡ ಚಾರಿತ್ರಿಕ ಸಂಗತಿಗಳನ್ನು ಮುಕ್ತವಾಗಿ ದಾಖಲಿಸುವ 'ಇತಿಹಾಸ ನಿಷ್ಠೆ' ಸಂಶೋಧಕನಿಗೆ ಇರಬೇಕು. ಇಲ್ಲವಾದರೆ ಅದು ಇತಿಹಾಸಕ್ಕೆ ಮಾಡಿದ ಅಪಚಾರವಾಗುತ್ತದೆ. 'ಹಿತಾಸಕ್ತ ವರ್ಗ' ಎಂಬುದು ಬೇರೆಲ್ಲೋ ಇರುವುದಿಲ್ಲ. ಬದಲಿಗೆ

ನಮ್ಮ ನಡುವೆಯೇ ಇರುತ್ತದೆ. ಆದ್ದರಿಂದ ಸಂಶೋಧಕ ಸದಾ ಎಚ್ಚರದಿಂದ ಚರಿತ್ರೆಯನ್ನು ದಾಖಲಿಸಬೇಕಾಗುತ್ತದೆ".[8] ಈ ಎಚ್ಚರದಿಂದಲೇ ಯಲಹಂಕ ನಾಡಪ್ರಭುಗಳ ಚರಿತ್ರೆಯನ್ನು ಅಧ್ಯಯನಕ್ಕೆ ಒಳಪಡಿಸುವ ಅಗತ್ಯವಿದೆ.

ಸ್ಥಳೀಯ ಚರಿತ್ರೆಯು ಬಹುಶಿಸ್ತೀಯ ಅಧ್ಯಯನವಾಗಿದ್ದು, ಇತರ ಸಮಾನಾಂತರ ಅಧ್ಯಯನ ವಿಧಾನಗಳಾದ ಸಬಾಲ್ಟರ್ನ್, ಜನಪದ ಹಾಗೂ ಮೌಖಿಕ ಚರಿತ್ರೆಗಳಿಗಿಂತ ವಿಭಿನ್ನ ಶೈಲಿಯನ್ನು ಹೊಂದಿದೆ. ವಿರೂಪಾಕ್ಷಿ ಪೂಜಾರಹಳ್ಳಿ ಅವರು ಸ್ಥಳೀಯ ಚರಿತ್ರೆಯ ಅಧ್ಯಯನ ವಿಧಾನಗಳನ್ನು ಕುರಿತು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ: "ಸ್ಥಳೀಯ ಚರಿತ್ರೆಯನ್ನು ಸಮಾಜವಿಜ್ಞಾನ ಶಿಸ್ತಿನ ಚರಿತ್ರೆ ಅಧ್ಯಯನ ನೆಲೆಯಲ್ಲಿಯೇ ಕಟ್ಟಿಕೊಡಲಾಗುವುದು. ಈವರೆಗೆ ಅಲಕ್ಷಿಸಲ್ಪಟ್ಟ ಆಕರಗಳೊಂದಿಗೆ ಇತರ ಆನುಷಂಗಿಕ ಆಕರಗಳನ್ನು ಬಳಸಿಕೊಳ್ಳುವುದು ಸೂಕ್ತ. ಇದಕ್ಕೆ ಆನುಷಂಗಿಕ ಆಕರಗಳೇ ವ್ಯಾಪಕವಾಗಿರುವುದರಿಂದ ಪರಿಶೀಲನೆ ಮಾಡಿ ನಿರೂಪಿಸುವುದು ಒಳಿತು. ಜನರು ನಿರೂಪಿಸುವ ಕ್ರಮ, ಚರಿತ್ರಕಾರನ ವಿಶ್ಲೇಷಣೆ ವಾಸ್ತವದ ಅರಿವಿನಲ್ಲಿ ಕಾರ್ಯಕಾರಣ ಸಂಬಂಧವನ್ನು ಗುರುತಿಸಬೇಕಾಗಿದೆ" ಎಂದಿದ್ದಾರೆ.[9]

ಈ ಮೇಲಿನ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಸ್ಥಳೀಯ ಚರಿತ್ರೆಯ ಅಧ್ಯಯನದ ತಾತ್ವಿಕತೆ ಮತ್ತು ವಿಧಾನಗಳನ್ನು ಗಮನದಲ್ಲಿಟ್ಟುಕೊಂಡು, ಅಂತರ್ ಶಿಸ್ತೀಯ ನೆಲೆಯಲ್ಲಿ ಶಿಷ್ಟ ಸಾಹಿತ್ಯ, ಜಾನಪದ ಸಾಹಿತ್ಯ, ಮೌಖಿಕ ಆಕರ, ಶಾಸನಗಳು, ಬಖೈರುಗಳು, ಕೈಫಿಯತ್ತುಗಳು ಮುಂತಾದ ಪ್ರಾಥಮಿಕ ಆಕರಗಳ ಜೊತೆಗೆ ಆನುಷಂಗಿಕ ಆಕರವಾಗಿ ಈವರೆಗೆ ವಿವಿಧ ಕ್ಷೇತ್ರಗಳ ವಿದ್ವಾಂಸರು ಅಂದರೆ ಜಾನಪದ ವಿದ್ವಾಂಸರು, ಇತಿಹಾಸಕಾರರು, ಸಾಹಿತಿಗಳು, ವಿಜ್ಞಾನಿಗಳು, ಪುರಾತತ್ವಶಾಸ್ತ್ರಜ್ಞರು, ಶಾಸನತಜ್ಞರು, ಪತ್ರಕರ್ತರು, ಹವ್ಯಾಸಿ ಸಂಶೋಧಕರು ಮುಂತಾದವರು ನಡೆಸಿರುವ ಅಧ್ಯಯನಗಳನ್ನು ಸಂಶೋಧನೆ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ.

ಸ್ಥಳೀಯ ಚರಿತ್ರೆಯನ್ನು ಕುರಿತು ಅಧ್ಯಯನ ನಡೆಸುವ ಸಂದರ್ಭದಲ್ಲಿ ಕ್ಷೇತ್ರಕಾರ್ಯ ಬಹುಮುಖ್ಯವಾದ ಭಾಗವಾಗಿದೆ. ಗುಡಿ–ಗೋಪುರಗಳು, ಕರೆ–ಕಟ್ಟೆಗಳು, ಕೋಟೆ–ಕೊತ್ತಲಗಳು, ವೀರಗಲ್ಲು– ಮಹಾಸತಿಗಲ್ಲುಗಳು, ಪಾಳು ಮಂಟಪಗಳು, ಗವಿಗಳು, ಮಠಗಳು, ಅವಶೇಷಗಳು ಹೀಗೆ ಅಧ್ಯಯನಕ್ಕೆ ಕ್ಷೇತ್ರಕ್ಕೆ ಸಂಬಂಧಪಟ್ಟ ಸ್ಥಳಗಳಿಗೆ ಭೇಟಿನೀಡಿ ಅಧ್ಯಯನ ನಡೆಸಲಾಗಿದೆ. ಸ್ಥಳೀಯರನ್ನು ಸಂದರ್ಶಿಸಿ ಅವರಿಂದ ಲಭ್ಯ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅವರುಗಳ ಅಭಿಪ್ರಾಯಗಳನ್ನು ಸಂಶೋಧನಾ ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಿ, ವಸ್ತುನಿಷ್ಠ ಸಂಗತಿಯನ್ನು ಶೋಧಿಸಲು ಪ್ರಯತ್ನಿಸಲಾಗಿದೆ.

ಯಲಹಂಕ ನಾಡಪ್ರಭುಗಳ ಮನೆತನದ ಬಗೆಗೆ ನಡೆದಿರುವ ಈವರೆಗಿನ ಅಧ್ಯಯನಗಳಲ್ಲಿನ ಮಿತಿ, ಕೊರತೆ ಮತ್ತು ಸಮಸ್ಯೆಗಳನ್ನು ಗುರುತಿಸದೆ ಸಂಶೋಧನೆಯನ್ನು ನಡೆಸಲಾಗದು. ಆದ್ದರಿಂದ ಮೊದಲಿಗೆ ನಡೆದಿರುವ ಅಧ್ಯಯನಗಳನ್ನು ವಿಮರ್ಶೆ ಮತ್ತು ವಿಶ್ಲೇಷಣೆಗೆ ಒಳಪಡಿಸಿ, ನಂತರ ಉದ್ಭವಿಸುವ ಪ್ರಶ್ನೆಗಳಿಗೆ ಉತ್ತರ ಶೋಧಿಸುವ ಪ್ರಯತ್ನಗಳನ್ನು ನಡೆಸಲಾಗಿದೆ. ಬಹುಬಗೆಯ ಆಕರಗಳನ್ನು ಸಂಗ್ರಹಿಸಿ, ವಿಂಗಡಿಸಿ, ವಿಮರ್ಶಿಸಿ, ವಿಶ್ಲೇಷಿಸಿ ಅಧ್ಯಯನದ ನಂತರ ತೀರ್ಮಾನಕ್ಕೆ ಬರುವುದು ಅಷ್ಟು ಸುಲಭದ ಕೆಲಸವಲ್ಲ. ಅಧ್ಯಯನದ ಸಂದರ್ಭಗಳಲ್ಲಿ ವಿರೋಧಾಭಾಸದ ಹೇಳಿಕೆಗಳು, ಆಧಾರಗಳಲ್ಲಿನ ಗೊಂದಲಗಳು, ಆಕರಗಳಲ್ಲಿನ ಕೊರತೆಗಳು, ಆಕರಗಳ ನಡುವೆ ತಾಳೆಯಾಗದಿರುವುದು ಹೀಗೆ ಅನೇಕ ನ್ಯೂನತೆಗಳು ಉದ್ಭವಿಸುತ್ತವೆ. ಅಂತಹ ಸಂದರ್ಭಗಳಲ್ಲಿ ಸಾಧ್ಯವಾದರೆ ಊಹಾತ್ಮಕವಾದಗಳನ್ನು ಮುಂದಿಟ್ಟು, ಮುಂದಿನ ಅಧ್ಯಯನಗಳ ಸಾಧ್ಯತೆಗೆ ತೆರೆದಿಡಲಾಗಿದೆ.

ಪ್ರಸ್ತುತ ಅಧ್ಯಯನ ವಿಷಯವಾದ **ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)** ಕುರಿತು ಸಂಶೋಧನೆ ನಡೆಸುವ ಸಂದರ್ಭದಲ್ಲಿ ಇನ್ನೊಂದು ಮುಖ್ಯ ವಿಧಾನವೊಂದನ್ನು ಬಳಸಿಕೊಳ್ಳಲಾಗಿದೆ. ಸಾಮಾನ್ಯವಾಗಿ ಮೂಲದ ಬಗೆಗೆ, ನಗರ ನಿರ್ಮಾಣ ಬಗೆಗೆ, ಆತ್ಮಬಲಿದಾನಗಳ ಬಗೆಗೆ ಹಲವು ಐತಿಹ್ಯಗಳು ಮತ್ತು ಜಾನಪದ ಕಥನಗಳು ಸಮಾಜದಲ್ಲಿ ರೂಢಿಯಲ್ಲಿರುತ್ತವೆ. ಈ ಕಥನಗಳು ವಿವಿಧ ನಾಡಪ್ರಭುಗಳ ಮನೆತನಗಳಲ್ಲಿ ಅನೇಕ ಬಾರಿ ಏಕಪ್ರಕಾರದಲ್ಲಿಯೂ, ಇನ್ನೂ ಕೆಲವೊಮ್ಮೆ ಸಾಮ್ಯತೆಗಳ ರೂಪದಲ್ಲಿಯೂ ಇರುತ್ತವೆ. ಇವುಗಳನ್ನು ಯಲಹಂಕ ನಾಡಪ್ರಭುಗಳ ಸಮಕಾಲೀನ ದಕ್ಷಿಣ ಕರ್ನಾಟಕದ ಇತರ ಪ್ರಮುಖ ಮನೆತನಗಳಾದ ಸುಗುಟೂರು, ಆವತಿ, ಹುಲುಕುಡಿ, ಮಧುಗಿರಿ, ಕಾಣಿಕಾರನಹಳ್ಳಿ, ಚನ್ನಪಟ್ಟಣ ಮುಂತಾದ ನಾಡಪ್ರಭುಗಳ ಬಗೆಗೆ ಇರುವ ಜಾನಪದ ಐತಿಹ್ಯಗಳು, ಮೌಖಿಕ ಆಕರಗಳು, ಜನಪ್ರಿಯ ನಂಬಿಕೆಗಳು ಮುಂತಾದವುಗಳನ್ನು ಜೊತೆಗಿಟ್ಟು ತುಲನಾತ್ಮಕ ಅಧ್ಯಯನ ನಡೆಸಲು ಪ್ರಯತ್ನಿಸಲಾಗಿದೆ. ಜೊತೆಗೆ ಈ ಮನೆತನಗಳ ನಡುವಿನ ಜಾನಪದ ಕಥನಗಳು ಮತ್ತು ಐತಿಹ್ಯಗಳಲ್ಲಿ ಕಂಡುಬರುವ ನಾಯಿ ಮೊಲದ ಕಥೆ, ಹಸು ಹುತ್ತಕ್ಕೆ ಕ್ಷೀರಧಾರೆಯನ್ನೆರೆಯುವುದು, ಕೋಟೆ ಅಥವಾ ಕೊತ್ತಲ ಸ್ಥಿರವಾಗಿ ನಿಲ್ಲಲು ಆತ್ಮಬಲಿದಾನವಾದ ಕಥೆಗಳು, ಕೆರೆಯ ನಿರ್ಮಾಣ ಸಂದರ್ಭದಲ್ಲಿ ಹಾರವಾದ ಕಥೆಗಳು ಮುಂತಾದವುಗಳ ನಡುವಿನ ಸಾಮ್ಯತೆ ಮತ್ತು ಅದರ ಹಿಂದಿರುವ ಸಾಂಕೇತಿಕ ಅರ್ಥಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ನಡೆಸಲಾಗಿದೆ.

ಕರ್ನಾಟಕದ ರಾಜಧಾನಿ ಬೆಂಗಳೂರು ನಗರ ನಿರ್ಮಾಣ ಮತ್ತು ಬೆಳವಣಿಗೆಗೆ ಮೂಲ ಕಾರಣರಾದ ಯಲಹಂಕ ನಾಡಪ್ರಭುಗಳ ಮನೆತನದ ಚರಿತ್ರೆಯನ್ನು ರಚಿಸುವುದು ಬಹು ಸವಾಲಿನ ಕೆಲಸವಾಗಿದೆ. ಇಲ್ಲಿ ಸಾಕಷ್ಟು ಸ್ಥಾಪಿತ ಅಭಿಪ್ರಾಯಗಳು ಸಮಾಜದಲ್ಲಿ ಮತ್ತು ಜನ ಸಾಮಾನ್ಯರ ನಡುವೆ ಮನೆ ಮಾಡಿದೆ. ಭಾವನಾತ್ಮಕ ನೆಲೆಯಲ್ಲಿ ಸ್ಥಾಪಿತವಾಗಿರುವ ಅಭಿಪ್ರಾಯಗಳನ್ನು ಮರುಪರಿಶೀಲಿಸಿ, ತೀರ್ಮಾನಕ್ಕೆ ಬರುವುದು ಹೆಜ್ಜೇನಿನ ಗೂಡಿಗೆ ಕೈಹಾಕಿದಷ್ಟೆ ಸೂಕ್ಷ್ಮ ಮತ್ತು ಅಪಾಯದ ಕೆಲಸವಾಗಿದೆ. ಆದರೂ, ಇಂತಹ ಸಂದರ್ಭದಲ್ಲಿ ಯಾವುದೇ ಪೂರ್ವಾಗ್ರಹಗಳಿಗೆ ಒಳಗಾಗದೆ ಲಭ್ಯ ಆಕರಗಳನ್ನು ವೈಜ್ಞಾನಿಕ ನೆಲೆಗಟ್ಟಿನಲ್ಲಿ ವಿಮರ್ಶಿಸಿ ಮತ್ತು ವಿಶ್ಲೇಷಿಸಿ ವಸ್ತುನಿಷ್ಠ ಚರಿತ್ರೆಯನ್ನು ಕಟ್ಟಿಕೊಡಬೇಕಾದ ಗುರುತರ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ.

## 1.4 ಅಧ್ಯಯನದ ವ್ಯಾಪ್ತಿ

ಭೌಗೋಳಿಕವಾಗಿ ದಕ್ಷಿಣ ಕರ್ನಾಟಕ ಎಂದು ಸಾಮಾನ್ಯವಾಗಿ ಕರೆಯಲ್ಪಡುವ ಇವತ್ತಿನ ರಾಜಕೀಯ ಪ್ರದೇಶವನ್ನು ಪ್ರಸ್ತುತ ಅಧ್ಯಯನವು ಬಹುತೇಕವಾಗಿ ಒಳಗೊಳ್ಳುತ್ತದೆ. ಸಮಕಾಲೀನ ಚಾರಿತ್ರಿಕ ರಾಜಕೀಯ ಗಡಿರೇಖೆಗಳನ್ನು ಭಾಷಾವಾರು ಪ್ರಾಂತ ರಚನೆಯ ನಂತರದ ಕರ್ನಾಟಕದ ರಾಜಕೀಯ ಗಡಿರೇಖೆಯೊಳಗೇ ಗುರುತಿಸಲು ಸಾಧ್ಯವಿಲ್ಲ. ಆದ್ದರಿಂದ ರಾಜಕೀಯ ಗಡಿಗಳ ಬದಲು ಸಾಂಸ್ಕೃತಿಕ ಗಡಿಯನ್ನು ಗುರುತಿಸಿಕೊಳ್ಳಬೇಕಾಗುತ್ತದೆ. ಇಲ್ಲಿ ಔಪಚಾರಿಕವಾಗಿ ದಕ್ಷಿಣ ಕರ್ನಾಟಕ ಎಂದು ಕರೆಯುವ ಪ್ರದೇಶದಲ್ಲಿ ಅವಿಭಜಿತ ಬೆಂಗಳೂರು ಜಿಲ್ಲೆ, (ಇಂದಿನ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ರಾಮನಗರ ಜಿಲ್ಲೆ) ಅವಿಭಜಿತ ಕೋಲಾರ ಜಿಲ್ಲೆ, (ಇಂದಿನ ಕೋಲಾರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳು), ಅವಿಭಜಿತ ಮೈಸೂರು (ಇಂದಿನ ಚಾಮರಾಜನಗರ ಜಿಲ್ಲೆಯನ್ನು ಒಳಗೊಂಡಂತೆ), ಮಂಡ್ಯ, ತುಮಕೂರು, ಹಾಸನ, ಚಿತ್ರದುರ್ಗ, ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳನ್ನು ಹಾಗೂ ಸ್ವಲ್ಪಮಟ್ಟಿಗೆ ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಯನ್ನು ಒಳಗೊಂಡಿದೆ.

ಪ್ರಸ್ತುತ ಅಧ್ಯಯನವು ದಕ್ಷಿಣ ಕರ್ನಾಟಕದ ನಾಡಪ್ರಭುಗಳನ್ನು ಕುರಿತಾಗಿದ್ದರೂ, ನಾಡಪ್ರಭುಗಳ ಒಟ್ಟು ಭೂಮಿಕೆಯಲ್ಲಿ ಯಲಹಂಕ ನಾಡಪ್ರಭುಗಳೇ ಕೇಂದ್ರ ವಿಷಯವಾಗಿರುವುದರಿಂದ ಆ ಮನೆತನದ ಹಿನ್ನೆಲೆಯಲ್ಲಿಯೇ ಚಾರಿತ್ರಿಕ ಕಾಲಾವಧಿಯ ಮಿತಿಯನ್ನು ಹಾಕಿಕೊಳ್ಳಲಾಗಿದೆ. ಕ್ರಿ.ಶ. 1510 ಹಲವು ಕಾರಣಗಳಿಂದ ಮುಖ್ಯವಾಗಿದೆ. ಒಂದು, ವಿಜಯನಗರ ಸಾಮ್ರಾಜ್ಯದಲ್ಲಿ ಕೃಷ್ಣದೇವರಾಯನ ಆಳ್ವಿಕೆ ಆರಂಭವಾಗುತ್ತದೆ. ಇದೇ

ಸಂದರ್ಭದಲ್ಲಿ ಯೂರೋಪಿನಿಂದ ಬಂದ ಪೋರ್ಚುಗೀಸರು ಗೋವವನ್ನು ಗೆದ್ದು ತಮ್ಮ ವಸಾಹತುವನ್ನಾಗಿ ಮಾಡಿಕೊಳ್ಳುತ್ತಾರೆ. ಆಧುನಿಕ ಪೂರ್ವ ಕಾಲಘಟ್ಟದಲ್ಲಿ ಇದೊಂದು ಮಹತ್ವದ ವಿದ್ಯಮಾನವಾಗಿದೆ. ಏಕೆಂದರೆ, ಪ್ರಾಚೀನ ಕಾಲದಿಂದ ಅಸ್ತಿತ್ವದಲ್ಲಿದ್ದ ಅರಬ್ಬರ ವ್ಯಾಪಾರ ಜಾಲವನ್ನು ಮುರಿದು ಹೊಸಬಗೆಯ ವ್ಯಾಪಾರ ಜಾಲವನ್ನು ಒಳನಾಡಿಗೂ ವಿಸ್ತರಿಸುತ್ತಿದ್ದಾರೆ. ಇದರಿಂದಾಗಿ ದಕ್ಷಿಣ ಭಾರತದಲ್ಲಿಯೇ ಕೃಷಿ ವಿಸ್ತರಣೆ ಮತ್ತು ನಗರೀಕರಣ ಪ್ರಕ್ರಿಯೆಗಳು ಬರದಿಂದ ಸಾಗುತ್ತಿದೆ.[10] ಇವೆಲ್ಲದರ ಜೊತೆಗೆ ಪ್ರಸ್ತುತ ಅಧ್ಯಯನಕ್ಕೆ ನೇರವಾಗಿ ಸಂಬಂಧಿಸಿದಂತೆ ಹೇಳುವುದಾದರೆ, ಯಲಹಂಕ ನಾಡಪ್ರಭುಗಳಲ್ಲಿ ಪ್ರಸಿದ್ಧನಾದ ಹಿರಿಯ ಕೆಂಪೇಗೌಡನು 1510ರಲ್ಲಿ ಜನಿಸಿದನೆಂದು ಹೇಳಲಾಗುತ್ತದೆ. ಆ ಸಂದರ್ಭದಲ್ಲಿ ಅವನ ತಂದೆ ಕೆಂಪನಾಚೇಗೌಡನು ಆಳುತ್ತಿದ್ದನೆಂದು ಹೇಳಲಾಗುತ್ತದೆಯಾದರೂ, ಯಾವುದೇ ಸಮಕಾಲೀನ ಆಧಾರಗಳಿಲ್ಲ. ಆದರೆ, ಆತನನ್ನು ಐತಿಹಾಸಿಕ ವ್ಯಕ್ತಿಯಾಗಿ ಗುರುತಿಸಲು ಆಧಾರಗಳಿವೆ. ಚಾರಿತ್ರಿಕ ಮಹತ್ವದ ವ್ಯಕ್ತಿಯಾಗಿ ಗೋಚರಿಸುವ ಹಿರಿಯ ಕೆಂಪೇಗೌಡನಿಂದ ಆರಂಭವಾದ ಯಲಹಂಕ ನಾಡಪ್ರಭುಗಳ ಚರಿತ್ರೆಯು ಕೊನೆಯ ಪ್ರಭುವಾದ ಮುಮ್ಮಡಿ ಕೆಂಪವೀರಪ್ಪಗೌಡನ ಅಂತ್ಯದೊಂದಿಗೆ ಕೊನೆಗೊಳ್ಳುತ್ತದೆ. ಕೆಂಪವೀರಪ್ಪಗೌಡನನ್ನು ಮೈಸೂರಿನ ದಳವಾಯಿ ಕಳಲೆ ದೇವರಾಜಯ್ಯನು ಬಂಧಿಸಿ, ತೆಗೆದುಕೊಂಡು ಹೋಗಿ ಶ್ರೀರಂಗಪಟ್ಟಣದಲ್ಲಿ ಬಂಧನದಲ್ಲಿಡುತ್ತಾನೆ. ಆತನು 1728ರಲ್ಲಿ ಅಲ್ಲಿಯೇ ಮರಣ ಹೊಂದುತ್ತಾನೆ. ಅಲ್ಲಿಗೆ ಯಲಹಂಕ ನಾಡಪ್ರಭುಗಳ ಮನೆತನ ಕೊನೆಗೊಳ್ಳುವುದರಿಂದ 1728ನ್ನು ಕೊನೆಯ ಕಾಲವಾಗಿ ನಿಗದಿಪಡಿಸಿಕೊಳ್ಳಲಾಗಿದೆ.

ವಿಜಯನಗರೋತ್ತರ ಕಾಲದಲ್ಲಿ ಅನೇಕ ಅಧೀನ ನಾಡಪ್ರಭುಗಳು, ನಾಯಕರು ಮತ್ತು ಪಾಳೆಯಗಾರರು ಸ್ವತಂತ್ರವಾಗಿ ಆಳ್ವಿಕೆಯನ್ನು ನಡೆಸಲಾರಂಭಿಸಿದರು. ಹೀಗೆ ಪ್ರವರ್ಧಮಾನಕ್ಕೆ ಬಂದ ದಕ್ಷಿಣ ಕರ್ನಾಟಕದ ಹಲವು ನಾಡಪ್ರಭುಗಳಲ್ಲಿ ಯಲಹಂಕ ನಾಡಪ್ರಭುಗಳು, ಮಧುಗಿರಿ ಮಹಾನಾಡ ಪ್ರಭುಗಳು, ಸುಗುಟೂರು ಪ್ರಭುಗಳು, ಆವುತಿ ನಾಡಪ್ರಭುಗಳು, ಹುಲುಕುಡಿ ನಾಡಪ್ರಭುಗಳು, ಚಿಕ್ಕಬಳ್ಳಾಪುರದ ನಾಡಪ್ರಭುಗಳು, ನಾಗಮಂಗಲದ ಪ್ರಭುಗಳು ಮುಂತಾದವರು ಪ್ರಮುಖರಾಗಿದ್ದಾರೆ. ಇವರಲ್ಲಿ ಯಲಹಂಕ ನಾಡಪ್ರಭುಗಳಿಗೆ ಕರ್ನಾಟಕದ ಚರಿತ್ರೆಯಲ್ಲಿ ವಿಶೇಷವಾದ ಸ್ಥಾನಮಾನವಿದೆ. ಪ್ರಸ್ತುತ ಮಹಾಪ್ರಬಂಧದಲ್ಲಿ ಯಲಹಂಕ ನಾಡಪ್ರಭುಗಳನ್ನು ಕೇಂದ್ರವಾಗಿರಿಸಿಕೊಂಡು ವಿಜಯನಗರೋತ್ತರ ಕಾಲಘಟ್ಟದ ಚಾರಿತ್ರಿಕ ಸಂದರ್ಭದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಏಳಿಗೆಗೆ ಬಂದ ಪ್ರಮುಖ ಪಾಳೆಯಗಾರರು, ನಾಯಕರು, ಅರಸರು ಮತ್ತು ನಾಡಪ್ರಭುಗಳ ನಡುವಿನ ರಾಜಕೀಯ ಸ್ಥಾನಮಾನ ಮತ್ತು ಸಂಬಂಧವನ್ನು ಅಧ್ಯಯನದ ಚೌಕಟ್ಟಿನಲ್ಲಿ ತರಲಾಗಿದೆ. ಮುಖ್ಯವಾಗಿ ಮೈಸೂರು ಒಡೆಯರು, ಕೆಳದಿಯ ಅರಸರು,

ಮಧುಗಿರಿಯ ಮಹಾನಾಡಪ್ರಭುಗಳು, ಚಿತ್ರದುರ್ಗದ ನಾಯಕರು, ಆವತಿ ನಾಡಪ್ರಭುಗಳು, ಸುಗಟೂರು ಅರಸರು, ಚನ್ನಪಟ್ಟಣದ ಪಾಳೆಯಗಾರರು ಹೀಗೆ ಪ್ರಮುಖ ಮನೆತನಗಳ ಸಂಕ್ಷಿಪ್ತ ರಾಜಕೀಯ ಇತಿಹಾಸದ ಜೊತೆಗೆ ಇವರ ನಡುವಿನ ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಬಂಧಗಳನ್ನು ಅಲ್ಲಲ್ಲಿ ಸಾಂದರ್ಭಿಕವಾಗಿ ಚರ್ಚೆಯ ಮುನ್ನೆಲೆಗೆ ತರಲಾಗಿದೆ.

## 1.5 ಅಧ್ಯಯನಗಳ ಸಮೀಕ್ಷೆ

ಆಧಾರಗಳ ಮೇಲೆಯೇ ನಿಂತಿರುವ ಇತಿಹಾಸ ಸಂಶೋಧನೆಯು ಒಂದು ನಿರಂತರ ಪ್ರಕ್ರಿಯೆಯಾಗಿದೆ. ಹೊಸ ಹೊಸ ಆಧಾರಗಳು ಲಭ್ಯವಾದಂತೆಲ್ಲ ಇತಿಹಾಸಕಾರರ ಅಭಿಪ್ರಾಯಗಳು ಪರಿಷ್ಕೃತಗೊಳ್ಳುವ ಸಾಧ್ಯತೆಗಳಿರುತ್ತವೆ. ಆದ್ದರಿಂದ ಸಂಶೋಧನೆ ಎಂಬುದು ಹರಿಯುವ ನೀರೇ ಹೊರತು ನಿಂತ ನೀರಲ್ಲ. ಸಂಶೋಧಕನು ಅಧ್ಯಯನಕ್ಕೆ ತೊಡಗುವ ಮುನ್ನ ತನ್ನ ಅಧ್ಯಯನ ಕ್ಷೇತ್ರದಲ್ಲಿ ನಡೆದಿರುವ ಕೆಲಸಗಳೇನು? ಆ ಕೆಲಸಗಳಲ್ಲಿನ ಮಿತಿಗಳೇನು? ಇನ್ನೂ ಆಗಬೇಕಾಗಿರುವ ಕೆಲಸಗಳೇನು? ಎಂಬ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಿದೆ. ಅದಕ್ಕಾಗಿ ತಾನು ನಡೆಸುತ್ತಿರುವ ಸಂಶೋಧನೆಯ ವಿಷಯಕ್ಕೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಸಂಬಂಧಿಸಿರುವ ಆವರೆಗಿನ ಎಲ್ಲಾ ಮೌಲಿಕ ಬರವಣಿಗೆಗಳನ್ನು ಸಂಶೋಧಕ ಮೌಲ್ಯಮಾಪನಕ್ಕೆ ಒಳಪಡಿಸಬೇಕಾಗುತ್ತದೆ. ಈ ಕಾರ್ಯವನ್ನು ಅಧ್ಯಯನ ಸಮೀಕ್ಷೆ ಅಥವಾ ಅಧ್ಯಯನ ಅವಲೋಕನ ಎಂದು ಕರೆಯಲಾಗುವುದು.

ದಕ್ಷಿಣ ಕರ್ನಾಟಕದ ನಾಡಪ್ರಭುಗಳಿಗೆ ಸಂಬಂಧಿಸಿರುವ ಪ್ರಸ್ತುತ ಅಧ್ಯಯನಕ್ಕೆ ಈವರೆಗೆ ಪ್ರಕಟವಾಗಿರುವ ಗ್ರಂಥಗಳನ್ನು ಪ್ರಾಥಮಿಕ ಆಕರಗಳು ಮತ್ತು ಆನುಷಂಗಿಕ ಆಕರಗಳೆಂದು ವಿಂಗಡಣೆ ಮಾಡಿಕೊಳ್ಳಬಹುದು. ಪ್ರಾಥಮಿಕ ಆಕರಗಳಲ್ಲಿ ನಾಡಪ್ರಭುಗಳ ಸಮಕಾಲೀನ ಮತ್ತು ಹಳೆಯ ದಾಖಲೆಗಳಾದ ಶಿಲಾಶಾಸನಗಳು, ತಾಮ್ರ ಪಟಗಳು, ಶಿಷ್ಠ ಸಾಹಿತ್ಯ ಕೃತಿಗಳು, ಸನ್ನದ್ದುಗಳು, ಬಖೈರುಗಳು, ಕೈಫಿಯತ್ತುಗಳು, ಮೈಸೂರು ಪುರಾತತ್ವ ವರದಿಗಳು (ಎಂ.ಎ.ಆರ್) ಮುಂತಾದವುಗಳನ್ನು ಪರಿಗಣಿಸಬಹುದು. ಆನುಷಂಗಿಕ ಆಕರಗಳಾಗಿ ನಾಡಪ್ರಭುಗಳ ಚರಿತ್ರೆಯನ್ನು ಅಧ್ಯಯನ ನಡೆಸಿ ಬರೆದ ಕೃತಿಗಳನ್ನು, ಲೇಖನಗಳನ್ನು, ವರದಿಗಳನ್ನು ಹಾಗೂ ಸಂಶೋಧನಾ ಮಹಾಪ್ರಬಂಧಗಳನ್ನು ಪರಿಗಣಿಸಬಹುದು.

ಆಧುನಿಕ ಪೂರ್ವ ಚರಿತ್ರೆಯ ಅಧ್ಯಯನದ ಸಂದರ್ಭಗಳಲ್ಲಿ ನಮಗೆ ಬಹುಮುಖ್ಯ ಪ್ರಾಥಮಿಕ ಆಕರಗಳಾಗಿ ದೊರಕುವುದು ಶಿಲಾ ಶಾಸನಗಳು ಮತ್ತು ತಾಮ್ರ ಶಾಸನಗಳು. ಈ ಶಾಸನಗಳು ಘಟನೆಗೆ ಸಮಕಾಲೀನವಾಗಿರುವುದರಿಂದ ಮತ್ತು ಘಟನೆಗೆ ನೇರ ಸಂಬಂಧಪಟ್ಟ

ವ್ಯಕ್ತಿಯೇ ಶಾಸನಗಳನ್ನು ಹೊರಡಿಸುವುದರಿಂದ ಹೆಚ್ಚು ವಿಶ್ವಾಸಾರ್ಹವಾಗಿರುತ್ತವೆ. ಬಿ.ಎಲ್.ರೈಸ್ ಅವರು 1886ರಿಂದ 1905ರವರೆಗೆ ಸುಮಾರು 20ವರ್ಷಗಳ ಅವಧಿಯಲ್ಲಿ ದಕ್ಷಿಣ ಕರ್ನಾಟಕದ ಎಲ್ಲಾ ಜಿಲ್ಲೆಗಳ ಶಾಸನಗಳನ್ನು 14 ಸಂಪುಟಗಳಲ್ಲಿ **ಎಪಿಗ್ರಾಫಿಯ ಕರ್ನಾಟಿಕ** ಹೆಸರಿನಲ್ಲಿ ಸಂಪಾದಿಸಿ ಪ್ರಕಟಿಸಿದರು. ದಕ್ಷಿಣ ಕರ್ನಾಟಕಕ್ಕೆ ಸಂಬಂಧಿಸಿದ ಎಲ್ಲಾ ರಾಜಮನೆತನಗಳ, ಸಾಮಂತ ಮನೆತನಗಳ, ನಾಡಪ್ರಭುಗಳ ಮತ್ತು ಪಾಳೆಯಗಾರರ ಒಟ್ಟು 8869 ಶಾಸನಗಳನ್ನು 12 ಸಂಪುಟಗಳ 14 ಬೃಹತ್ ಗ್ರಂಥಗಳು ಒಳಗೊಂಡಿವೆ.[11] ಇವುಗಳಲ್ಲಿ **ಎಪಿಗ್ರಾಫಿಯ ಕರ್ನಾಟಿಕ ಸಂಪುಟ–9** (ಬೆಂಗಳೂರು ಜಿಲ್ಲೆ), **ಸಂಪುಟ–10** (ಕೋಲಾರ ಜಿಲ್ಲೆ), **ಸಂಪುಟ–12** (ತುಮಕೂರು ಜಿಲ್ಲೆ) ಪ್ರಸ್ತುತ ಅಧ್ಯಯನಕ್ಕೆ ಹೆಚ್ಚು ಉಪಯುಕ್ತವಾಗಿವೆ. ಇವಲ್ಲದೆ, ಹಾಸನ ಜಿಲ್ಲೆಗೆ ಸಂಬಂಧಿಸಿದ **ಎಪಿಗ್ರಾಫಿಯ ಕರ್ನಾಟಿಕ ಸಂಪುಟ– 5 ಮತ್ತು 6** ಹಾಗೂ ಅವಿಭಜಿತ ಮೈಸೂರು ಜಿಲ್ಲೆಗೆ ಸಂಬಂಧಿಸಿದ **ಎಪಿಗ್ರಾಫಿಯ ಕರ್ನಾಟಿಕ ಸಂಪುಟ– 3 ಮತ್ತು 4** ಕೂಡ ಉಪಯುಕ್ತವಾಗಿವೆ. ತಾಲ್ಲೂಕುವಾರು ವಿಂಗಡಿಸಲ್ಪಟ್ಟಿರುವ ಇಲ್ಲಿನ ಶಾಸನಗಳನ್ನು ಆರಂಭದಲ್ಲಿಯೇ ಮನೆತನವಾರು ಶಾಸನಗಳ ಕಾಲಾನುಕ್ರಮಣಿಕೆಯಲ್ಲಿ ಪಟ್ಟಿಯನ್ನು ನೀಡಿರುವುದು ಅಧ್ಯಯನಕ್ಕೆ ನೆರವಾಗುತ್ತವೆ. ಸಂಪುಟದ ಒಳಗೆ ಮೂರು ಭಾಗಗಳಿದ್ದು, ಮೊದಲ ಭಾಗದಲ್ಲಿ ಶಾಸನ ಪಾಠಗಳ ಇಂಗ್ಲೀಷ್ ಲಿಪ್ಯಂತರ, ಎರಡನೇ ಭಾಗದಲ್ಲಿ ಶಾಸನದ ಸಾರಾಂಶವನ್ನು ಇಂಗ್ಲೀಷ್‌ನಲ್ಲಿಯೂ ಮೂರನೆ ಭಾಗದಲ್ಲಿ ಶಾಸನದ ಪಾಠವನ್ನು ಮೂಲ ಭಾಷೆಯಲ್ಲಿ ನೀಡಿದ್ದಾರೆ. **ಎಪಿಗ್ರಾಫಿಯ ಕರ್ನಾಟಿಕ ಸಂಪುಟ–9**ರ ಪ್ರಸ್ತಾವನೆಯ ಭಾಗದಲ್ಲಿ ರೈಸ್ ಅವರು ಯಲಹಂಕ, ಸುಗುಟೂರು, ಆವತಿ ಮತ್ತು ಚನ್ನಪಟ್ಟಣ ನಾಡಪ್ರಭುಗಳ ಬಗೆಗೆ ಸಂಕ್ಷಿಪ್ತವಾಗಿ ದಾಖಲಿಸಿದ್ದಾರೆ[12] ಈ ಸಂಪುಟದಲ್ಲಿ ಯಲಹಂಕ ನಾಡಪ್ರಭುಗಳಿಗೆ ಸಂಬಂಧಿಸಿದ 16 ಶಾಸನಗಳನ್ನು, ಸುಗುಟೂರು ನಾಡಪ್ರಭುಗಳಿಗೆ ಸಂಬಂಧಿಸಿದ 15 ಶಾಸನಗಳನ್ನು, ಆವತಿ ನಾಡಪ್ರಭುಗಳಿಗೆ ಸಂಬಂಧಿಸಿದ 12 ಶಾಸನಗಳನ್ನು ಮತ್ತು ಚನ್ನಪಟ್ಟಣ ಪಾಳೆಗಾರರಿಗೆ ಸಂಬಂಧಿಸಿದ 3 ಶಾಸನಗಳನ್ನು ಪಟ್ಟಿ ಮಾಡಿದ್ದಾರೆ. ಅದೇ ರೀತಿ, **ಎಪಿಗ್ರಾಫಿಯ ಕರ್ನಾಟಿಕ ಸಂಪುಟ–10**ರಲ್ಲಿ ಸುಗುಟೂರು ನಾಡಪ್ರಭುಗಳಿಗೆ ಸಂಬಂಧಿಸಿದ 29 ಶಾಸನಗಳನ್ನು, ಆವತಿ ನಾಡಪ್ರಭುಗಳಿಗೆ ಸಂಬಂಧಿಸಿದ 11 ಶಾಸನಗಳನ್ನು ಪಟ್ಟಿ ಮಾಡಿದ್ದಾರೆ. ಈ ಸಂಪುಟಗಳು ಪ್ರಸ್ತುತ ಅಧ್ಯಯನಕ್ಕೆ ಮಹತ್ವದ ಆಕರಗಳನ್ನು ಒದಗಿಸುತ್ತವೆ.

ರೈಸ್ ಅವರ ನಂತರ ಎಂ.ಎಚ್. ಕೃಷ್ಣ ಅವರು ಸಂಪಾದಿಸಿದ ಬೆಂಗಳೂರು ಜಿಲ್ಲೆಯ **ಎಪಿಗ್ರಾಫಿಯ ಕರ್ನಾಟಿಕ** ಅನುಬಂಧ ಸಂಪುಟ ಅಪ್ರಕಟಿತವಾಗಿದ್ದು, ಅದರಲ್ಲಿ ಯಲಹಂಕ ನಾಡಪ್ರಭುಗಳಿಗೆ ಸಂಬಂಧಿಸಿದ ಶಿವಗಂಗೆಯ ಕೆಲವು ಶಾಸನಗಳು ಸೇರಿದಂತೆ ಯಲಹಂಕ

ನಾಡಪ್ರಭುಗಳಿಗೆ ಸಂಬಂಧಿಸಿದ ಸುಮಾರು 10 ಶಾಸನಗಳು ಪ್ರಕಟವಾಗಿವೆ. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯು ಬಿ.ಎಲ್. ರೈಸ್ ಅವರು ಸಂಪಾದಿಸಿದ್ದ **ಎಪಿಗ್ರಾಫಿಯ ಕರ್ನಾಟಿಕ** ಸಂಪುಟಗಳನ್ನು ಪರಿಷ್ಕರಿಸುವ ಕಾರ್ಯವನ್ನು 1970ರ ದಶಕದಲ್ಲಿ ಆರಂಭಿಸಿತು. ಈ ಸಂಪುಟಗಳಲ್ಲಿ ರೈಸ್ ಅವರು ಸಂಪಾದಿಸಿದ ಶಾಸನಗಳ ಜೊತೆಗೆ ಅನುಬಂಧ ಸಂಪುಟಗಳಲ್ಲಿ ಪ್ರಕಟವಾಗಿರುವ ಶಾಸನಗಳನ್ನು ಮತ್ತು ನಂತರದ ಕಾಲದಲ್ಲಿ ಬೆಳಕು ಕಂಡಿರುವ ಅಪ್ರಕಟಿತ ಶಾಸನಗಳನ್ನು ಸಮಗ್ರವಾಗಿ ಸಂಪಾದಿಸಿ ಹೊರತರಲಾಯಿತು. ಈವರೆಗೆ 15 ಬೃಹತ್ ಸಂಪುಟಗಳು ಹೊರಬಂದಿವೆ. ಈ ಪರಿಷ್ಕೃತ ಸಂಪುಟಗಳು ಕೂಡ ಅಧ್ಯಯನದ ಸಂದರ್ಭದಲ್ಲಿ ನೆರವಾಗುತ್ತವೆ.

ಯಲಹಂಕ ನಾಡಪ್ರಭುಗಳ ಆಕರ ಸಂಪುಟಗಳನ್ನು ಪ್ರಕಟಿಸುವ ಯೋಜನೆಯೊಂದನ್ನು ಬೆಂಗಳೂರು ವಿಶ್ವವಿದ್ಯಾಲಯದ ಶ್ರೀ ಕೆಂಪೇಗೌಡ ಅಧ್ಯಯ ಪೀಠವು ರೂಪಿಸಿತು. ಅದರ ಭಾಗವಾಗಿ ಬಂದ ಕೃತಿಗಳಲ್ಲಿ ಒಂದು **ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ.**[13] ಈ ಸಂಪುಟವನ್ನು ಎಂ.ಜಿ. ಮಂಜುನಾಥ ಅವರು ಸಂಪಾದಿಸಿದ್ದಾರೆ. ಆವರೆಗೂ ಪ್ರಕಟವಾಗಿದ್ದ ಯಲಹಂಕ ನಾಡಪ್ರಭುಗಳ ಎಲ್ಲಾ ಶಾಸನಗಳನ್ನು ಒಂದುಕಡೆ ತರುವ ಪ್ರಯತ್ನ ನಡೆಸಿದ್ದಾರೆ. ಈ ಸಂಪುಟದಲ್ಲಿ 14ನೆಯ ಶತಮಾನದಿಂದ 20ನೆಯ ಶತಮಾನದವರೆಗೆ ಯಲಹಂಕ ನಾಡಪ್ರಭುಗಳಿಗೆ ಸಂಬಂಧಿಸಿದವು ಎಂದು ಹೇಳಲಾಗುವ 95 ಶಾಸನಗಳನ್ನು ಸಂಪಾದಿಸಿದ್ದಾರೆ. ಇವುಗಳಲ್ಲಿ ಶಿಲಾಶಾಸನಗಳು ಮಾತ್ರವಲ್ಲದೆ ತಾಮ್ರಶಾಸನ, ಓಲೆಗರಿ ಮತ್ತು ಕೋರಾ ಕಾಗದದ ಮೇಲೆ ಬರೆಯಲ್ಪಟ್ಟ ಶಾಸನಗಳನ್ನು ಕೂಡ ಸೇರಿಸಿದ್ದಾರೆ. ಯಲಹಂಕ ನಾಡಪ್ರಭುಗಳ ಶಾಸನಗಳು ವಿವಿಧ ಜಿಲ್ಲೆಗಳಲ್ಲಿ ಮುಖ್ಯವಾಗಿ ಕೋಲಾರ, ಬೆಂಗಳೂರು, ತುಮಕೂರು, ಬೆಂಗಳೂರು ನಗರ, ಅವಿಭಜಿತ ಬೆಂಗಳೂರು ಗ್ರಾಮಾಂತರ, ಮಂಡ್ಯ, ಮೈಸೂರು, ದಕ್ಷಿಣ ಕನ್ನಡ, ತಮಿಳುನಾಡಿನ ಕೃಷ್ಣಗಿರಿ ಮೊದಲಾದ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ ನಡೆಸಿ ಸಂಗ್ರಹಿಸಿರುವುದಾಗಿ ಸಂಪಾದಕರು ಹೇಳಿಕೊಂಡಿದ್ದಾರೆ.[14] ಕೃತಿಯ ಕೊನೆಯಲ್ಲಿ ಸುಮಾರು 40 ಶಾಸನಗಳ ಪಡಿಯಚ್ಚುಗಳನ್ನು ಮತ್ತು ಛಾಯಾಚಿತ್ರಗಳನ್ನು ಅನುಬಂಧದಲ್ಲಿ ನೀಡಿರುತ್ತಾರೆ.

ಈ ಕೃತಿಯಲ್ಲಿ ಸಂಗ್ರಹಿಸಿರುವ ಆರಂಭಿಕ 7 ಶಾಸನಗಳು 3ನೇ ವೀರಬಲ್ಲಾಳನ ಕಾಲಕ್ಕೆ ಸೇರಿವೆ. ನಂತರ ವಿಜಯನಗರ ಕಾಲಕ್ಕೆ ಸೇರಿದ ಕೆಲವು ಶಾಸನಗಳನ್ನು ನೀಡಿದ್ದಾರೆ. ಅವುಗಳಲ್ಲಿ ಮೊದಲ ಮೂರು ಶಾಸನಗಳು ಯಲಹಂಕ ನಾಡಪ್ರಭುಗಳ ಆರಂಭಿಕ ದೊರೆಗಳಿಗೆ ಸಂಬಂಧಿಸಿವೆ ಎಂದು ಸಂಪಾದಕರು ಇಲ್ಲಿ ತಂದಿದ್ದಾರೆ. ಆದರೆ ಇವುಗಳನ್ನು ಯಲಹಂಕ

ನಾಡಪ್ರಭುಗಳ ಆರಂಭಿಕ ಅರಸರದೆಂದು ಒಪ್ಪುವುದು ಕಷ್ಟ. 11 ಮತ್ತು 12ನೆಯ ಶಾಸನಗಳಾದ ಕಲ್ಯ ಹಾಗೂ ಕೆಂಪೋಹಳ್ಳಿಯ ಶಾಸನಗಳಲ್ಲಿ ಬೆಂಗಳೂರು ಕೆಂಪೇಗೌಡ ಅಥವಾ ಹಿರಿಯ ಕೆಂಪೇಗೌಡನ ತಂದೆಯಾದ ಕೆಂಪನಂಜೇಗೌಡನಿಗೆ ಸಂಬಂಧಿಸಿದ ಶಾಸನಗಳಾಗಿವೆ. ಆದರೆ ಸಂಪಾದಕರು ಇವುಗಳನ್ನು ಪರಿಷ್ಕರಿಸಿದ್ದು, ರೈಸ್ ಅವರು ಎಪಿಗ್ರಾಫಿಯಾ ಕರ್ನಾಟಕ ಸಂಪುಟ–9ರಲ್ಲಿ ಪ್ರಕಟಿಸಿರುವ ಪಾಠಕ್ಕೂ, ಈ ಸಂಪುಟದಲ್ಲಿನ ಶಾಸನ ಪಾಠಕ್ಕೂ ಸಾಕಷ್ಟು ವ್ಯತ್ಯಾಸಗಳಿವೆ.[15] ಸಂಪುಟದ ಯೋಜನೆಯ ಆಶಯ, ಅದರ ಹಿಂದಿರುವ ಸಂಪಾದಕರ ಶ್ರಮ ಯಾವುದನ್ನೂ ಅಲ್ಲಗಳೆಯಲಾಗದಿದ್ದರೂ, ಸಂಪುಟ ಸಂಪಾದನ ವಿಧಾನದ ಬಗೆಗೆ ಆಕ್ಷೇಪಗಳಿಲ್ಲದಿಲ್ಲ. ಆದ್ದರಿಂದ ಈ ಸಂಪುಟವನ್ನು ಅಧ್ಯಯನಕ್ಕೆ ದುಡಿಸಿಕೊಳ್ಳುವ ಸಂದರ್ಭದಲ್ಲಿ ಸಂಶೋಧಕನು ಶಾಸನ ಪಾಠಗಳನ್ನು ತೀವ್ರವಾಗಿ ವಿಮರ್ಶಿಸಿಯೇ ಬಳಸಿಕೊಳ್ಳಬೇಕಿರುತ್ತದೆ.

ಕರ್ನಾಟಕ ಇತಿಹಾಸ ಅಕಾದೆಮಿಯ **ಇತಿಹಾಸ ದರ್ಶನ** ಸಂಪುಟಗಳಲ್ಲಿಯೂ ಯಲಹಂಕ ನಾಡಪ್ರಭುಗಳ ಕಾಲಕ್ಕೆ ಸೇರಿದ ಕೆಲವು ಅಪ್ರಕಟಿತ ಶಾಸನಗಳು ಬೆಳಕು ಕಂಡಿವೆ. ಇಲ್ಲಿನ ಮುಖ್ಯವಾದ ಶಾಸನಗಳೆಂದರೆ ದೇವರಕೊಂಡಾರೆಡ್ಡಿ ಅವರು ಬೆಳಕಿಗೆ ತಂದ ಇಮ್ಮಡಿ ಕೆಂಪೇಗೌಡನ "ಗುಮ್ಮಳಾಪುರದ ಗೌರಮ್ಮನಗುಡಿಯ ಶಿಲಾಶಾಸನ"[16] ವೇಮಗಲ್ ಸೋಮಶೇಖರ್ ಅವರು ಶೋಧಿಸಿದ ಹಿರಿಯ ಕೆಂಪೇಗೌಡನ ಕಾಲದ್ದು ಎನ್ನಲಾದ "ಬೆಂಗಳೂರಿನ ದೊಡ್ಡಬಸವಣ್ಣ ದೇವಾಲಯ ಮುಂದಿನ ಎರಡು ಅಪ್ರಕಟಿತ ಶಾಸನಗಳು"[17] ಮುನಿನಗರದ ಮಹಾದೇವಯ್ಯ ನವರು ಬೆಳಕಿಗೆ ತಂದ ಇಮ್ಮಡಿ ಕೆಂಪೇಗೌಡನ "ಮುನಿನಗರದ ಅಪ್ರಕಟಿತ ಶಾಸನ"[18] ಬಿ.ಎಸ್. ಪುಟ್ಟಸ್ವಾಮಿ ಅವರು ಪ್ರಕಟಿಸಿರುವ ಕೆಂಪವೀರಪ್ಪಗೌಡರ ಕಾಲದ ಅಪ್ರಕಟಿತನ ತಾಮ್ರಶಾಸನ[19] ಮುಖ್ಯವಾದವುಗಳಾಗಿವೆ. ಅದೇರೀತಿ ಮತ್ತೊಂದು ಮುಮ್ಮಡಿ ಕೆಂಪೇಗೌಡನ ಕಾಲದಲ್ಲಿ ದಾನವಾಗಿ ಪಡೆದ ಭೂಮಿಯನ್ನು ಇಮ್ಮಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ಮಾರಾಟ ಮಾಡಿದ ಓಲೆಗರಿ ಪತ್ರವನ್ನು ಎಚ್.ಎಸ್. ಗೋಪಾಲರಾವ್ ಅವರು ಬೆಳಕಿಗೆ ತಂದಿದ್ದಾರೆ.[20] ಈವರೆಗೂ ದೊರೆತಿರುವ ಯಲಹಂಕ ನಾಡಪ್ರಭುಗಳ ಕಾಲದ ಶಾಸನಗಳಲ್ಲಿ ಬಹುತೇಕ ಶಾಸನಗಳು ಭೂದಾನ ಶಾಸನಗಳೇ ಆಗಿವೆ. ಇವುಗಳು ಅಂದಿನ ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳನ್ನು ಅಧ್ಯಯನ ನಡೆಸುವ ದೃಷ್ಟಿಯಿಂದ ಮುಖ್ಯವಾಗಿವೆ.

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಅಧ್ಯಯನ ಸಂಸ್ಥೆಯು **ಪಾಳೆಯಗಾರರ ಶಾಸನಗಳು ಸಂಪುಟ: 1 ಮತ್ತು 2** ಪ್ರಕಟಿಸಿದೆ. ಒಂದನೆಯ ಸಂಪುಟವನ್ನು[21] ಬಿ.ಎಂ. ಶೈಲಜ

ಅವರು ಸಂಪಾದಿಸಿದ್ದು, ಇದರಲ್ಲಿ "ಚಿತ್ರದುರ್ಗ ನಾಯಕರು", "ಸಂತೆಬೆನ್ನೂರು ನಾಯಕರ ಶಾಸನಗಳು", "ಮಧುಗಿರಿ ಮಹಾನಾಡ ಪ್ರಭುಗಳ ಶಾಸನಗಳು" ಮತ್ತು "ಹಾಗಲವಾಡಿ ನಾಯಕರ ಶಾಸನಗಳು" ಇವೆ. ಎರಡನೆಯ ಸಂಪುಟವನ್ನು[22] ಪುಟ್ಟಸ್ವಾಮಿ ಅವರು ಸಂಪಾದಿಸಿರುತ್ತಾರೆ. ಇದರಲ್ಲಿ "ಕೊಂಗಾಳ್ವರು", "ಚಂಗಾಳ್ವರು", "ಬೇಲೂರು ನಾಯಕರು", "ಉಮ್ಮತ್ತೂರು ಪಾಳೆಯಗಾರರು", "ನಂದ್ಯಾಲದ ಪಾಳೆಯಗಾರರು", "ನುಗ್ಗೇಹಳ್ಳಿ ಪಾಳೆಯಗಾರರು", "ಹೊಳೇನರಸಿಪುರದ ಪಾಳೆಯಗಾರರು", "ಹದಿನಾಡ ರಾಜರು", "ಕಳಲೆ ಪಾಳೆಯಗಾರರು", "ಕೊಡಗಿನ ಹಾಲೇರಿ ಪಾಳೆಯಗಾರರು" ಹೀಗೆ 10 ಪಾಳೆಯಗಾರ ಮನೆತನಗಳಿಗೆ ಸಂಬಂಧಿಸಿದ ಶಾಸನಗಳನ್ನು ಸಂಪಾದಿಸಿದ್ದಾರೆ. ಇಲ್ಲಿನ ಮನೆತನಗಳು ದಕ್ಷಿಣ ಕರ್ನಾಟಕಕ್ಕೆ ಸಂಬಂಧಿಸಿರುವುದರಿಂದ ಪೂರಕ ಅಧ್ಯಯನಕ್ಕೆ ಬೇಕಾದ ಶಾಸನ ಆಕರಗಳನ್ನು ಈ ಸಂಪುಟಗಳು ಒದಗಿಸುತ್ತವೆ.

ಯಲಹಂಕ ನಾಡಪ್ರಭುಗಳನ್ನು ಕುರಿತು ಅಧ್ಯಯನ ನಡೆಸುವ ಸಂದರ್ಭದಲ್ಲಿ ಮೈಸೂರು **Mysore Archaeological Report (ಎಂ.ಎ.ಆರ್)** ಎಂದೇ ಜನಪ್ರಿಯವಾಗಿರುವ **Annual Report of the Mysore Archaeological Department** ಒಂದು ಅತ್ಯುತ್ತಮ ಆಕರವಾಗಿದೆ. ಆರ್. ನರಸಿಂಹಾಚಾರ್, ಎಂ.ಎಚ್.ಕೃಷ್ಣ ಮೊದಲಾದವರು ಎಂ.ಎ.ಆರ್. ವಾರ್ಷಿಕ ಸಂಪುಟಗಳ ಮೂಲಕ ಕರ್ನಾಟಕದ ಚಾರಿತ್ರಿಕ ಅಧ್ಯಯನಕ್ಕೆ ಮಹೋನ್ನತ ಕೊಡುಗೆ ನೀಡಿದರು. ವಾರ್ಷಿಕ ವರದಿಗಳಾಗಿ ಪ್ರಕಟವಾಗಿರುವ ಈ ಕೃತಿಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಶಾಸನ, ನಾಣ್ಯ, ಸ್ಮಾರಕ, ವೀರಗಲ್ಲು ಮುಂತಾದ ಪುರಾತತ್ವ ಅವಶೇಷಗಳು, ಹಸ್ತಪ್ರತಿಗಳು, ಸನ್ನದುಗಳು ಮೊದಲಾದ ಸಾಹಿತ್ಯಗಳನ್ನು ಪ್ರಕಟಿಸಿದ್ದಾರೆ. ನೂರಾರು ವರ್ಷಗಳ ಹಿಂದೆ ಈ ವರದಿಗಳಲ್ಲಿ ದಾಖಲಾಗಿರುವ ಎಷ್ಟೋ ಸ್ಮಾರಕಗಳು, ಅವಶೇಷಗಳು, ಶಾಸನಗಳು ಇಂದು ನಮಗೆ ಲಭ್ಯವಿಲ್ಲದಾಗಿವೆ. ಕೆಲವು ಅಪರೂಪದ ಹಸ್ತಪ್ರತಿಗಳನ್ನು ಶೋಧಿಸಿ ಪ್ರಕಟಿಸಿರುವುದರಿಂದ ಅವುಗಳು ಚಾರಿತ್ರಿಕ ಅಧ್ಯಯನಕ್ಕೆ ನೆರವಾಗುತ್ತವೆ. ಉದಾ.: 1943ರ **ಎಂ.ಎ.ಆರ್**.ನಲ್ಲಿ "ಬೆಂಗಳೂರು ಕೆಂಪರಾಯರ ಯುದ್ಧ-ದೇಶಗಳ ಜಯಪ್ರದ ಪದಗಳು" ಹೆಸರಿನಲ್ಲಿ **ಕೆಂಪೇಗೌಡ ಜಯಪ್ರಶಸ್ತಿ**ಯು ಮೊದಲಬಾರಿಗೆ ಪ್ರಕಟವಾಗಿದೆ. ಅದೇರೀತಿ ಮಿಡಿಗೇಶಿ ನಾಡಪ್ರಭುಗಳ ಇತಿಹಾಸಕ್ಕೆ ಸಂಬಂಧಪಟ್ಟಿರುವ "ರಾಯರೇಖಾ" ಹಸ್ತಪ್ರತಿಯು 1946ರ **ಎಂ.ಎ.ಆರ್**.ನಲ್ಲಿ ಪ್ರಕಟವಾಗಿದೆ. ಈ ಕೃತಿಯು ಯಲಹಂಕ ನಾಡಪ್ರಭುಗಳ ಐತಿಹ್ಯದ ಜೊತೆಗೆ ತುಲನೆ ಮಾಡಲು ಮುಖ್ಯ ಆಕರಗಳನ್ನು ಒದಗಿಸುತ್ತದೆ.[23] ಅದೇ ರೀತಿ ಎಂ.ಎ.ಆರ್. 1943ರಲ್ಲಿ ಯಲಹಂಕ

ನಾಡಪ್ರಭುಗಳಿಗೆ ಸಂಬಂಧಿಸಿದ ಕುಕ್ಕೆಯ ಸುಬ್ರಹ್ಮಣ್ಯ ದೇವಾಲಯದಲ್ಲಿರುವ ತಾಮ್ರ ಶಾಸನ ಪ್ರಕಟವಾಯಿತು. ಇದೊಂದು ಮಹತ್ವದ ಶಾಸನವಾಗಿದ್ದು, ಯಲಹಂಕ ನಾಡಪ್ರಭುಗಳ ಮನೆತನದ ವಂಶವೃಕ್ಷವನ್ನು ನೀಡುತ್ತದೆ. ಅದೇ ರೀತಿ 1922ರ **ಎಂ.ಎ.ಆರ್**.ನಲ್ಲಿ ಯಲಹಂಕ ನಾಡಪ್ರಭು ದೊಡ್ಡ ವೀರಪ್ಪಗೌಡನು ಮೇಲುಕೋಟೆ ಮತ್ತು ಮಾಗಡಿಯ ದೇವಾಲಯಗಳ ಉತ್ಸವದ ವೆಚ್ಚಕ್ಕಾಗಿ 2 ಗ್ರಾಮಗಳನ್ನು ದಾನವಾಗಿ ಬಿಟ್ಟ ವಿವರವನ್ನು ಒದಗಿಸುತ್ತದೆ. ಎಂ.ಎ.ಆರ್. 1915ರಲ್ಲಿ ಶಿವಗಂಗೆ ಕ್ಷೇತ್ರದ ಚಿತ್ರವನ್ನು ನೀಡಲಾಗಿದೆ. ನೂರು ವರ್ಷಗಳ ಹಿಂದಿನ ಶಿವಗಂಗೆ ಕ್ಷೇತ್ರದ ಸ್ಮಾರಕಗಳ ಚಿತ್ರಣ ತಿಳಿಯುವುದರಿಂದ ನಂತರದ ಹೊಸ ಸೇರ್ಪಡೆಗಳನ್ನು ಗುರುತಿಸಲು ಸಾಧ್ಯವಾಗುತ್ತದೆ. ಹೀಗೆ ಎಂ.ಎ.ಆರ್. ಅಧ್ಯಯನದ ಸಂದರ್ಭದಲ್ಲಿ ಮುಖ್ಯ ಆಕರವಾಗಿ ಒದಗಿಬರುತ್ತದೆ.

ಅನೇಕ ಶಿಷ್ಟ ಸಾಹಿತ್ಯಗಳು ಕೂಡ ಪ್ರಸ್ತುತ ಅಧ್ಯಯನಕ್ಕೆ ನೆರವಾಗುತ್ತವೆ. ಅವುಗಳಲ್ಲಿ **ಕೆಂಪೇಗೌಡ ಜಯಪ್ರಶಸ್ತಿ** ಅಥವಾ **ಇಮ್ಮಡಿ ತಮ್ಮರಾಯ, ಕೆಂಪರಾಯ ಪದಗಳು** ಒಂದು. ಮೇಲೆ ಹೇಳಿದಂತೆ ಈ ಕೃತಿಯ ಸಾರಾಂಶವನ್ನು ಮೊದಲು 1943ರ **ಎಂ.ಎ.ಆರ್**.ನಲ್ಲಿ ಪ್ರಕಟಿಸಲಾಯಿತು. ನಂತರ ಈ ಕೃತಿಯನ್ನು ಕರ್ಲಮಂಗಲ ಶ್ರೀಕಂಠಯ್ಯನವರು ಸಂಗ್ರಹಿಸಿ **ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ**[24] ಎಂಬ ಕೃತಿಯನ್ನು ಸಂಪಾದಿಸಿದ್ದಾರೆ. ಇದರ ಕೃರ್ತೃ ಗುರುನಂಜೇಶ ಎಂದಿದ್ದಾರೆ. ಆದರೆ ಇದು ಮೊದಲು **ಇಮ್ಮಡಿ ತಮ್ಮರಾಯ, ಕೆಂಪರಾಯ ಪದಗಳು** ಎಂಬ ಹೆಸರಿನಲ್ಲಿ ದೊರೆತಿದ್ದು, 'ಕವಿಗಳು ಗೊತ್ತಿಲ್ಲದ ಕೆಲವು ಗ್ರಂಥಗಳು' ಎಂಬ ಪಟ್ಟಿಯಲ್ಲಿ ಆರ್. ನರಸಿಂಹಾಚಾರ್ ತಮ್ಮ **ಕರ್ಣಾಟಕ ಕವಿಚರಿತೆ** ದ್ವಿತೀಯ ಸಂಪುಟದಲ್ಲಿ ಸೇರಿಸಿದ್ದಾರೆ[25] ಆದರೆ, ಬಿ. ನಂಜುಂಡಸ್ವಾಮಿ ಅವರು ಜಯಪ್ರಶಸ್ತಿಯ ಕರ್ತೃವಿನ ಬಗೆಗೆ ಅಧ್ಯಯನ ನಡೆಸಿ, ಅದರ ರಚನಕಾರ ಗುರು ನಂಜೇಶ್ವರ ಅಲ್ಲ, ಬದಲಿಗೆ ಶಿವಗಂಗೆಯ ಪರಿಸರದಲ್ಲಿದ್ದ **'ಹೊನ್ನ'** ಎಂಬ ಕವಿ ಎಂಬುದಾಗಿ ಗುರುತಿಸಿದ್ದಾರೆ.[26] ಇತ್ತೀಚೆಗೆ ಎಂ.ಜಿ. ಮಂಜುನಾಥ ಅವರು **ಹೊನ್ನಕವಿಯ ಸಮಗ್ರಸಾಹಿತ್ಯ**[27] ಹೆಸರಿನಲ್ಲಿ ಸಂಪಾದಿಸಿರುವ ಕೃತಿಯಲ್ಲಿ **'ಕೆಂಪರಾಯ ತಮ್ಮರಾಯನ ಪದಗಳು'** ಹೆಸರಿನಲ್ಲಿ ಕಾವ್ಯದ ಎರಡೂ ಭಾಗಗಳನ್ನು ಸೇರಿಸಿದ್ದಾರೆ.[28] ಈ ಕೃತಿಯು ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ಅಂದರೆ 1638ಕ್ಕೆ ಮೊದಲು ರಚನೆಗೊಂಡಿರಬಹುದೆಂದು **ಎಂ.ಎ.ಆರ್**.ನಲ್ಲಿ ಹೇಳಿದೆ. ಅದನ್ನು ಪುಷ್ಟೀಕರಿಸುವಂತೆ ಕರ್ಲಮಂಗಲ ಶ್ರೀಕಂಠಯ್ಯನವರು ಇನ್ನೂ ನಿಖರವಾಗಿ ಕೃತಿಯ ಕಾಲವನ್ನು ಗುರುತಿಸಿದ್ದು, 1638ಕ್ಕೂ ಪೂರ್ವದೆಂದು ತೋರಿಸಿಕೊಟ್ಟಿದ್ದಾರೆ. ಅವರ ಪ್ರಕಾರ ಈ ಕೃತಿಯ ಮೊದಲ ಭಾಗವು ಕ್ರಿ.ಶ. 1612 ಅಥವಾ 1613ರಲ್ಲಿ ರಚನೆಗೊಂಡಿದೆ. ಎರಡನೆಯ ಭಾಗವು 1634ರಲ್ಲಿ

ಬರೆಯಲ್ಪಟ್ಟಿದೆ.[29] ಈ ಕೃತಿಯ ಮೊದಲ ಭಾಗವು ಇಮ್ಮಡಿ ಕೆಂಪೇಗೌಡನು ಅಯಿಮಗೌಡನ ಮೇಲೆ ಸಾಧಿಸಿದ ವಿಜಯವನ್ನು ವರ್ಣಿಸುತ್ತದೆ. ಎರಡನೆಯ ಭಾಗದಲ್ಲಿ ವಿಜಯನಗರದ ದುರ್ಬಲ ಸಾಮ್ರಾಟನಾದ ಇಮ್ಮಡಿ ವೆಂಕಟಪತಿಯ ಪೆನುಗೊಂಡೆಯನ್ನು ಮುತ್ತಲು ಸಾಮಂತರಾಜರು ಮತ್ತು ಪಾಳೆಯಗಾರರು ಸಂಚು ರೂಪಿಸಿದಾಗ, ವೆಂಕಟಪತಿಯು ಇಮ್ಮಡಿ ಕೆಂಪೇಗೌಡನಿಗೆ ರಾಯಸ ಕಳುಹಿಸಿ ರಾಜ್ಯವನ್ನು ಕಾಪಾಡಲು ಮನವಿ ಮಾಡಿದನು. ಆಗ ಇಮ್ಮಡಿ ಕೆಂಪೇಗೌಡನು ವೆಂಕಟಪತಿಗೆ ನಿಷ್ಠರಾಗಿದ್ದ ಪಾಳೆಯಗಾರರನ್ನು ಸಂಘಟಿಸಿ, ಪೆನುಗೊಂಡೆಯ ಮೇಲೆ ದಾಳಿ ಮಾಡಿ ಜಯಗಳಿಸಿ, ವೆಂಕಟಪತಿಯನ್ನು ಮತ್ತೆ ಪಟ್ಟಕ್ಕೇರಿಸಿದ ವಿವರಗಳಿವೆ. ಒಟ್ಟಾರೆ, ಇಮ್ಮಡಿ ಕೆಂಪೇಗೌಡನ ಸೈನಿಕ ಸಾಧನೆಯನ್ನು ವರ್ಣಿಸುವ ಮಹತ್ವದ ಕೃತಿ ಇದಾಗಿದೆ.

ಕರ್ಲಮಂಗಲ ಶ್ರೀಕಂಠಯ್ಯನವರು **ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ** ಕೃತಿಗೆ ಬರೆದಿರುವ ಸುದೀರ್ಘ ಮುನ್ನುಡಿಯು ಮಹತ್ವಪೂರ್ಣವಾದುದಾಗಿದೆ. ಬಹುಶಃ ಯಲಹಂಕ ನಾಡಪ್ರಭುಗಳನ್ನು ಕುರಿತು ಬಂದಿರುವ ಸಂಶೋಧನಾ ಬರವಣಿಗೆಯಲ್ಲಿ ಶ್ರೀಕಂಠಯ್ಯನವರ ಈ ಬರವಣಿಗೆ ಅತ್ಯಂತ ಗಂಭೀರವೂ, ಶಿಸ್ತುಬದ್ಧವೂ ಆಗಿದೆ. ಪೂರಕವಾದ ಹಲವು ಸಾಹಿತ್ಯ ಕೃತಿಗಳನ್ನು ಅಧ್ಯಯನ ನಡೆಸಿ, ಅವುಗಳಲ್ಲಿನ ವಿವರಗಳನ್ನು ಹೆಕ್ಕಿತೆಗೆದಿರುವುದು ಮಾತ್ರವಲ್ಲ, ಹಲವು ಸೂಕ್ಷ್ಮ ಒಳನೋಟಗಳನ್ನುಳ್ಳ ತೀರ್ಮಾನಗಳನ್ನು ನೀಡಿದ್ದಾರೆ. ಕಳೆದ 60 ವರ್ಷಗಳಲ್ಲಿ ಇಷ್ಟು ಸೂಕ್ಷ್ಮ ಮತ್ತು ಗಂಭೀರವಾದ ಮತ್ತೊಂದು ಬರವಣಿಗೆ ಬಾರದಿರುವುದು ವಿಷಾಧನೀಯ. ಕೃತಿಯಲ್ಲಿ ಆವರೆಗೂ ಪ್ರಕಟವಾಗಿರುವ ಮತ್ತು ತಾವು ಸಂಗ್ರಹಿಸಿರುವ ಶಾಸನಗಳ ಸಾರಾಂಶವನ್ನು ಕೊಟ್ಟು ಹೆಚ್ಚಿನ ಅಧ್ಯಯನಕ್ಕೆ ದಾರಿ ಮಾಡಿಕೊಟ್ಟಿದ್ದಾರೆ.

ಮದ್ರಾಸ್ ಓರಿಯಂಟಲ್ ಹಸ್ತಪ್ರತಿ ಗ್ರಂಥಾಲಯದ ಕನ್ನಡ ಹಸ್ತಪ್ರತಿ ಸೂಚಿಯಲ್ಲಿ ಅಪೂರ್ಣವಾದ ಇಮ್ಮಡಿ ಕೆಂಪೇಗೌಡನ ಕೀರ್ತನೆಯೊಂದು ಪ್ರಕಟವಾಗಿದೆ.[30] ಈ ಕೀರ್ತನೆಯಲ್ಲಿ ಇಮ್ಮಡಿ ಕೆಂಪೇಗೌಡನ ಕೀರ್ತಿಯು ತಂಜಾವೂರು, ತಿರುವಣ್ಣಾಮಲೇ, ಕಂಚಿ, ಕಾಳಹಸ್ತಿ ಸೇರಿದಂತೆ ದಕ್ಷಿಣ ಭಾರತದ ಅನೇಕ ನಗರಗಳಿಗಲ್ಲದೆ, ಉತ್ತರ ಭಾರತದ ಕಾಶಿ, ಕೇದಾರ, ದಿಲ್ಲಿ, ಆಗ್ರಾ ಮುಂತಾದ ಹಲವು ನಗರಗಳಿಗೂ ಹಬ್ಬಿತ್ತೆಂದು ವರ್ಣಿಸುತ್ತದೆ. ಪಿ.ವಿ. ಕೃಷ್ಣಮೂರ್ತಿಯವರು "ಎಲಹಂಕ ಪ್ರಭುಗಳ ಇತಿಹಾಸ ರಚನೆಗೆ ಇರುವ ಆಕರ ಸಾಮಗ್ರಿ" ಎಂಬ ಲೇಖನದಲ್ಲಿಯೂ ಇದನ್ನು ಉಲ್ಲೇಖಿಸಿದ್ದಾರೆ.[31]

ಯಲಹಂಕ ನಾಡಪ್ರಭುಗಳ ಬಗೆಗೆ ಬೆಳಕು ಚೆಲ್ಲುವ ಮತ್ತೊಂದು ಪ್ರಮುಖ ಸಮಕಾಲೀನ ಕೃತಿ ಎಂದರೆ ಮುಮ್ಮಡಿ ಕೆಂಪವೀರಪ್ಪಗೌಡನ ಆಸ್ಥಾನದಲ್ಲಿದ್ದ ಏಕಾಮ್ರ ದೀಕ್ಷಿತನು ಸಂಸ್ಕೃತದಲ್ಲಿ ಬರೆದಿರುವ ಚಂಪೂ ಕಾವ್ಯ **ವೀರಭದ್ರ ವಿಜಯ**. ಅಪ್ರಕಟಿತವಾಗಿರುವ ಈ ಕೃತಿಯು ಶಿಥಿಲವಾಗುತ್ತಿದ್ದುದನ್ನು ಕಂಡು ಮಾಗಡಿಯ ಕೃಷ್ಣಶಾಸ್ತ್ರಿ ಎಂಬುವವರು ಅದಕ್ಕೆ **'ಮನೋರಂಜನೀಯ'** ಎಂಬ ಕನ್ನಡದ ಟೀಕನ್ನು ಬರೆದು ಪ್ರಕಟಿಸುವುದಕ್ಕೆ ಸಿದ್ಧಪಡಿಸಿರುವುದಾಗಿ ಎಸ್.ಕೆ. ನರಸಿಂಹಯ್ಯನವರು ದಾಖಲಿಸಿದ್ದಾರೆ.[32] ದುರಾದೃಷ್ಟವಶಾತ್ ಈ ಕೃತಿ ಕೂಡ ಬೆಳಕು ಕಂಡಿರುವುದಿಲ್ಲ. ಈ ಕೃತಿಯಲ್ಲಿ ಸಾವನದುರ್ಗದ ವೀರಭದ್ರನ ರಥೋತ್ಸವವನ್ನು ವೀಕ್ಷಿಸಲು ಯಲಹಂಕನಾಡಪ್ರಭು ಮುಮ್ಮಡಿ ಕೆಂಪವೀರಪ್ಪಗೌಡ (ವೀರಭೂಪಾಲ)ನು ಬಂದಿರುತ್ತಾನೆ. ಆ ಸಂದರ್ಭದಲ್ಲಿ ಅಲ್ಲಿದ್ದ ಜನರು ಇವನ ಪೂರ್ವಜರ ಬಗೆಗೆ ಮಾತನಾಡಿಕೊಳ್ಳುವಂತೆ ಕಾವ್ಯವು ಸಾಗುತ್ತದೆ. ಇದರಲ್ಲಿ ಹಿರಿಯ ಕೆಂಪೇಗೌಡನಿಂದ ಆರಂಭಿಸಿ ಮುಮ್ಮಡಿ ಕೆಂಪವೀರಪ್ಪಗೌಡನ ವರೆಗಿನ ದೊರೆಗಳ ಸಾಧನೆಯನ್ನು ಚಿತ್ರಿಸುತ್ತದೆ. ಹಿರಿಯ ಕೆಂಪೇಗೌಡನಿಂದ ಆರಂಭಿಸಿದ ಅವನ ಪೀಳಿಗೆಯ ವಂಶವೃಕ್ಷವನ್ನು ವಿವರವಾಗಿ ಕಟ್ಟಿಕೊಡುತ್ತದೆ. ಆದರೆ, ಈ ಮೇಲಿನ ಮೂರೂ ಕೃತಿಗಳನ್ನು ಬರೆದವರು ಯಲಹಂಕ ನಾಡಪ್ರಭುಗಳ ಆಶ್ರಯ ಪಡೆದಿರುವವರೇ ಆಗಿದ್ದಾರೆ. ಏಕಾಮ್ರ ದೀಕ್ಷಿತನ ವೀರಭದ್ರವಿಜಯವನ್ನು ಮೆಚ್ಚಿ ದೊರೆಯು 5 ಗ್ರಾಮಗಳನ್ನು ಉಡುಗೊರೆಯಾಗಿ ನೀಡಿದನೆಂದು ಎಸ್.ಕೆ. ನರಸಿಂಹಯ್ಯನವರು ದಾಖಲಿಸುತ್ತಾರೆ. ಆದ್ದರಿಂದ ತನ್ನ ಪೋಷಕರ ಬಗೆಗೆ ಸಹಜವಾದ ಉತ್ಪ್ರೇಕ್ಷೆ ಮತ್ತು ಅತಿಶಯೋಕ್ತಿಗಳು ಕೃತಿಯಲ್ಲಿ ತುಂಬಿರುತ್ತವೆ. ಇವನ್ನು ಅಧ್ಯಯನದ ಸಂದರ್ಭದಲ್ಲಿ ತೀವ್ರ ವಿಮರ್ಶೆಗೆ ಒಳಪಡಿಸಿ, ಸಮಕಾಲೀನ ಇತರ ಆಕರಗಳ ಜೊತೆಗೆ ತುಲನೆ ಮಾಡಿ ಬಳಸಿಕೊಳ್ಳಬೇಕಾಗಿರುತ್ತದೆ.

ಇವುಗಳಷ್ಟೇ ಅಲ್ಲದೆ ಅನೇಕ ಸಮಕಾಲೀನ ಕೃತಿಗಳು ಯಲಹಂಕ ನಾಡಪ್ರಭುಗಳ ಬಗೆಗೆ ವಿವರಗಳನ್ನೂ, ಕೆಲವೊಮ್ಮೆ ಪ್ರಾಸಂಗಿಕ ಉಲ್ಲೇಖಗಳನ್ನು ಕೊಡುತ್ತವೆ. ಅಂತಹ ಕೃತಿಗಳಲ್ಲಿ ಮಲ್ಲಿಕಾರ್ಜುನ ಕವಿಯ **ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ;** ವಿರೂಪಾಕ್ಷ ಪಂಡಿತನ **ಚನ್ನಬಸವ ಪುರಾಣ;** ಗೋವಿಂದ ವೈದ್ಯನ **ಕಂಠೀರವ ನರಸರಾಜ ವಿಜಯ;** ತಿರುಮಾಲಾರ್ಯನ **ಚಿಕ್ಕದೇವರಾಯವಿಜಯ, ಅಪ್ರತಿಮ ವೀರ ಚರಿತ್ರಂ** ಮತ್ತು **ಚಿಕ್ಕದೇವರಾಯ ವಂಶಾವಳಿ;** ಚಿಕ್ಕದೇವರಾಯನ **ಚಿಕ್ಕದೇವರಾಯ ಬಿನ್ನಪಂ;** ಕಳಲೆ ನಂಜರಾಜನ **ಕಕುದ್ಗಿರಿ ಮಹಾತ್ಮೆ; ಮೈಸೂರು ದೊರೆಗಳ ಪೂರ್ವಾಭ್ಯುದಯ;** ತೆಲುಗಿನ **ವರಾಹ ಪುರಾಣಮು;** ಮರಾಠಿಯಲ್ಲಿ ಪರಮಾನಂದ ಬರೆದ **ಶಿವಭಾರತ** ಮುಂತಾದವು ಪ್ರಮುಖ ಸಮಕಾಲೀನ ಗ್ರಂಥಗಳೂ, ಪ್ರಾಥಮಿಕ ಆಕರಗಳೂ ಆಗಿವೆ.

ಎಂ.ಜಿ. ಮಂಜುನಾಥ ಅವರು ಸಂಪಾದಿಸಿರುವ **ಬೆಂಗಳೂರಿನ ಬಖೈರುಗಳು**[33] ಕಿರು ಕೃತಿಯಾದರೂ ಪ್ರಸ್ತುತ ಅಧ್ಯಯನಕ್ಕೆ ಹೆಚ್ಚು ಸಹಕಾರಿಯಾಗಬಲ್ಲ ಕೃತಿಯಾಗಿದೆ. ಈ ಕೃತಿಯಲ್ಲಿ 1810ರ ದಶಕದಲ್ಲಿ ಬರೆಸಿ ಸಂಗ್ರಹಿಸಿಟ್ಟಿದ್ದ 9 ಬಖೈರುಗಳಿವೆ. ಅವುಗಳಲ್ಲಿ ಬಹುತೇಕ ದಾಖಲೆಗಳು ಬೆಂಗಳೂರಿಗೆ ಸಂಬಂಧಿಸಿದ ವಿವರಗಳನ್ನು ನೀಡುತ್ತವೆ. 8 ಮತ್ತು 9ನೆಯ ದಾಖಲೆಗಳು ಮಾಗಡಿಗೆ ಸಂಬಂಧಿಸಿದ್ದಾಗಿವೆ. ಇವುಗಳಲ್ಲಿ ಕೆಲವನ್ನು ಬ್ರಾಹ್ಮಣ ಸುಬ್ಬರಾವ್ ಮರಾಠಿಯಿಂದ ಇಂಗ್ಲಿಷಿಗೆ[34] ಮತ್ತು ಕೆಲವನ್ನು ಬ್ರಾಹ್ಮಣ ಸಿ.ವಿ.ಲಚ್ಮಯ್ಯ ಇಂಗ್ಲಿಷಿನಲ್ಲಿ ಬರೆದಿದ್ದಾರೆ. ಸಿ.ವಿ. ಲಚ್ಮಯ್ಯ ಕರ್ನಲ್ ಮೆಕೆಂಜಿಗೆ ಸಹಾಯಕನಾಗಿದ್ದ ಕಾವಲಿ ಬೋರಯ್ಯನ ತಮ್ಮ. ಹಸ್ತಪ್ರತಿ, ಶಾಸನ ಮೊದಲಾದವುಗಳನ್ನು ಓದಿಕೊಡಲು ಮೆಕೆಂಜಿಗೆ ಕಾವಲಿ ಸೋದರರು ನೆರವಾಗಿದ್ದರು.[35] ಅವರಲ್ಲಿ ಒಬ್ಬ ಕಾವಲಿ ವೆಂಕಟ ಲಚ್ಮಯ್ಯ (ವೆಂಕಟ ಲಕ್ಷ್ಮಯ್ಯ) ಒಬ್ಬ. ಈತ ಕನ್ನಡ ಮತ್ತು ತೆಲುಗು ಹಸ್ತಪ್ರತಿ ಮತ್ತು ಶಾಸನಗಳನ್ನು ಮೆಕೆಂಜಿಗೆ ಅನುವಾದಿಸಿಕೊಡುತ್ತಿದ್ದನು.[36]

ಎಂ.ಜಿ. ಮಂಜುನಾಥ ಅವರು ಸಂಪಾದಿಸಿರುವ ಈ ಬಖೈರುಗಳಲ್ಲಿ ಕೆಲವನ್ನು ಬಿ. ಪುಟ್ಟಯ್ಯನವರು 1923ರಲ್ಲಿ ಬರೆದ ಲೇಖನದಲ್ಲಿ ಬಳಸಿಕೊಂಡಿದ್ದಾರೆ.[37] (723-741). ಈ ಮೆಮ್ವಾಯರ್ಸ್‌ಗಳನ್ನು ಪುಟ್ಟಯ್ಯನವರು **Memoirs of Mysore, Vol.II** ಕೃತಿಯಿಂದ ಬಳಸಿಕೊಂಡಿರುವುದಾಗಿ ಉಲ್ಲೇಖಿಸಿದ್ದಾರೆ. **ಬೆಂಗಳೂರಿನ ಬಖೈರುಗಳು** ಕೃತಿಯಲ್ಲಿನ ವಿವರಗಳು ಸಮಕಾಲೀನವಾಗಿಲ್ಲವಾದರೂ ಅನೇಕ ಸೂಕ್ಷ್ಮವಾದ ಮಾಹಿತಿಗಳನ್ನು ಕಟ್ಟಿಕೊಡುತ್ತವೆ. ಮುಖ್ಯವಾಗಿ ಯಲಹಂಕ ನಾಡಪ್ರಭುಗಳ ವಂಶಸ್ಥರ ವಿವರ, ಕೆಂಪೇಗೌಡನಿಂದ ಬೆಂಗಳೂರು ನಿರ್ಮಾಣ ಮತ್ತು ಅಲ್ಲಿನ ದೇವಾಲಯ ಮಾಡಿಸಿದ ವಿವರ ಹೀಗೆ ಹಲವು ವಿವರಗಳನ್ನು ಕಟ್ಟಿಕೊಡುತ್ತವೆ.

* * *

ಕರ್ನಾಟಕದ ಇತಿಹಾಸದಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸಿರುವ ನಾಡಪ್ರಭುಗಳು, ಪಾಳೆಯಗಾರರು, ನಾಯಕರು ಮುಂತಾದವರನ್ನು ಕುರಿತ ಅಧ್ಯಯನಗಳು ಬಿ.ಎಲ್. ರೈಸ್ ಅವರಿಂದ ಪ್ರಾರಂಭವಾದರೂ, ಆರ್. ನರಸಿಂಹಾಚಾರ್, ಸಿ. ಹಯವದನರಾವ್, ಎಂ.ಎಸ್. ಪುಟ್ಟಣ್ಣ ಮೊದಲಾದವರು ಅಧ್ಯಯನವನ್ನು ಮತ್ತಷ್ಟು ವಿಸ್ತರಿಸಿದರು. ವಿಜಯನಗರೋತ್ತರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ಈ ಅರಸು ಮನೆತನಗಳಲ್ಲಿ ಮೈಸೂರು ಒಡೆಯರು, ಕೆಳದಿ ನಾಯಕರು, ಚಿತ್ರದುರ್ಗದ ಪಾಳೆಯಗಾರರು, ಸುರಪುರದ ನಾಯಕರು ಕುರಿತು ಚಾರಿತ್ರಿಕ ಸಂಶೋಧನೆಗಳು ತಕ್ಕಮಟ್ಟಿಗೆ ನಡೆದಿವೆ ಮತ್ತು ನಡೆಯುತ್ತಿವೆ. ಆದರೆ ಇತರ ಅರಸು

ಮನೆತನಗಳು ಗಂಭೀರ ಸಂಶೋಧನೆಯ ವ್ಯಾಪ್ತಿಗೆ ಒಳಪಡದೆ ನಿರ್ಲಕ್ಷ್ಯಕ್ಕೆ ಒಳಗಾಗಿವೆ. ಇಂತಹ ನೂರಾರು ಮನೆತನಗಳ ಚರಿತ್ರೆಯನ್ನು ದಾಖಲಿಸುವ ಉದ್ದೇಶದಿಂದ ಎಂ.ಎಂ. ಕಲಬುರ್ಗಿ ಅವರು ಕನ್ನಡ ವಿಶ್ವವಿದ್ಯಾಲಯದಿಂದ **"ಕರ್ನಾಟಕ ರಾಜ ಸಂಸ್ಥಾನಗಳು"** ಎಂಬ ಯೋಜನೆಯನ್ನು ರೂಪಿಸಿದರು. ಈ ಯೋಜನೆಯ ಫಲವಾಗಿ **ತುಳು ಕರ್ನಾಟಕದ ಅರಸು ಮನೆತನಗಳು**[38] **ದಕ್ಷಿಣ ಕರ್ನಾಟಕದ ಅರಸು ಮನೆತನಗಳು**[39], **ಕಲ್ಯಾಣ ಕರ್ನಾಟಕದ ಅರಸು ಮನೆತನಗಳು**[40] ಮುಂತಾದ ಕೃತಿಗಳಲ್ಲಿ ಅಗೋಚರವಾಗಿ ಉಳಿದಿದ್ದ ಹತ್ತಾರು ಮನೆತನಗಳು ಮೊದಲ ಬಾರಿಗೆ ಬೆಳಕಿಗೆ ಬಂದವು. ಸಿ.ಆರ್. ಶ್ಯಾಮಲ ಅವರು ತಮ್ಮ ಸಂಶೋಧನಾ ಪ್ರಬಂಧವನ್ನು **ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ**[41] ಹೆಸರಿನಲ್ಲಿ ಪ್ರಕಟಿಸಿದರು. ವ್ಯಾಪಕ ಕ್ಷೇತ್ರಕಾರ್ಯ ಮತ್ತು ಅಧ್ಯಯನದಿಂದ ಕೂಡಿರುವ ಬೃಹತ್ ಗ್ರಂಥವಾಗಿದೆ. ಇದರಲ್ಲಿಯೂ ಅನೇಕ ನಿರ್ಲಕ್ಷಿತ ಪಾಳೆಯಗಾರರನ್ನು ದಾಖಲಿಸುವ ಪ್ರಯತ್ನ ನಡೆಸಿದ್ದಾರೆ. ಅಮರೇಶ ಯತಗಲ್ ಅವರು **ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು**[42] ಕೃತಿಯಲ್ಲಿ 12 ನಾಯಕ ಅರಸು ಮನೆತನಗಳ ಸಾಂಸ್ಕೃತಿಕ ಚರಿತ್ರೆಯನ್ನು ದಾಖಲಿಸುವ ವಿನೂತನ ಪ್ರಯತ್ನ ನಡೆಸಿದ್ದಾರೆ. ಇತ್ತೀಚೆಗೆ ಡಿ.ಎನ್. ಯೋಗೀಶ್ವರಪ್ಪ ಅವರು ಸಂಪಾದಿಸಿರುವ **ಪ್ರಾದೇಶಿಕತೆ: ಕರ್ನಾಟಕದ ಪಾಳೆಯಗಾರರು**[43] ವಿವಿಧ ಅರಸು ಮನೆತನಗಳ ಚರಿತ್ರೆಯನ್ನು ಕುರಿತ ಇತ್ತೀಚಿನ ಅಧ್ಯಯನಗಳನ್ನು ಒಳಗೊಂಡಿರುವ ಕೃತಿಯಾಗಿದೆ. ಹೀಗೆ ವಿವಿಧ ಪಾಳೆಯಗಾರ ಮನೆತನಗಳನ್ನು ಕುರಿತು ನಡೆದಿರುವ ಈ ರೀತಿಯ ಅಧ್ಯಯನಗಳ ಗೊಂಚಲುಗಳು ನಿರ್ಲಕ್ಷಿತ ಮನೆತನಗಳ ಬಗೆಗಿನ ಅಧ್ಯಯನದ ಸಾಧ್ಯತೆಗಳನ್ನು ತೆರೆದಿಟ್ಟಿವೆ. ಇಂತಹ ಅಧ್ಯಯನಗಳು ಉನ್ನತ ಅಧ್ಯಯನಕ್ಕೆ ದಾರಿ ಮಾಡಿಕೊಟ್ಟಿವೆ. ಹೀಗೆ ನಿರ್ಲಕ್ಷ್ಯಕ್ಕೆ ಒಳಗಾಗಿರುವ ಅರಸು ಮನೆತನಗಳಲ್ಲಿ ಅಕಾಡಮಿಕ್ ಶಿಸ್ತಿನ ಅಧ್ಯಯನಕ್ಕೆ ಒಳಗಾಗಬೇಕಿರುವ ಮನೆತನಗಳಲ್ಲಿ ಯಲಹಂಕ ನಾಡಪ್ರಭುಗಳ ಮನೆತನ ಕೂಡ ಒಂದಾಗಿದೆ.

* * *

ಯಲಹಂಕ ನಾಡಪ್ರಭುಗಳು ಮತ್ತು ಅವರ ಸಮಕಾಲೀನ ನಾಡಪ್ರಭುಗಳನ್ನು ಕುರಿತು ಈವರೆಗೆ ನೂರಾರು ಸಂಶೋಧನಾ ಲೇಖನಗಳು, ಕೃತಿಗಳು ಮತ್ತು ಸಂಶೋಧನಾ ಮಹಾಪ್ರಬಂಧಗಳನ್ನು ವಿದ್ವಾಂಸರು ರಚಿಸಿದ್ದಾರೆ. ಆದರೆ ಇಲ್ಲಿ ಆ ಎಲ್ಲಾ ಬರವಣಿಗೆಗಳನ್ನು ಚರ್ಚೆಗೆ ತೆಗೆದುಕೊಳ್ಳದೆ ಸಂಶೋಧನಾತ್ಮಕ ದೃಷ್ಟಿಯಿಂದ ಮೌಲಿಕವಾದ ಮತ್ತು

ವಿಶ್ಲೇಷಣಾತ್ಮವಾದ ಹಾಗೂ ಜ್ಞಾನವನ್ನು ವಿಸ್ತರಿಸಬಲ್ಲ ಸಂಶೋಧನಾ ಕೃತಿ ಮತ್ತು ಲೇಖನಗಳಷ್ಟನ್ನೇ ಇಲ್ಲಿ ಆಯ್ದುಕೊಂಡು ಚರ್ಚಿಸಲಾಗಿದೆ.

ಯಲಹಂಕ ನಾಡಪ್ರಭುಗಳನ್ನು ಕುರಿತು 19ನೆಯ ಶತಮಾನದ ಕೊನೆಯ ದಶಕಗಳಿಂದ ಇಲ್ಲಿಯವರೆಗೂ ಅಧ್ಯಯನಗಳು ನಡೆಯುತ್ತಾ ಬಂದಿವೆ. 1884ರಲ್ಲಿ ಸಾಂಬಶಿವ ಮೊದಲಿಯಾರ್ ಎಂಬವರು **ಕೆಂಪೇಗೌಡನ ಚರಿತ್ರೆ** ಎಂಬ ಕಿರುಕೃತಿಯನ್ನು ಬರೆದಿರುವ ಬಗ್ಗೆ ಉಲ್ಲೇಖಗಳಿವೆ. ಆದರೆ ಕೃತಿಯು ಲಭ್ಯವಿಲ್ಲ. ಬಹುಶಃ ಇದು ಕೆಂಪೇಗೌಡನನ್ನು ಕುರಿತು ಹೊರಬಂದಿರುವ ಮೊದಲ ಕೃತಿಯಾಗಿದೆ. ಇದಕ್ಕೆ ಮೊದಲು ಬಿ.ಎಲ್. ರೈಸ್ ಅವರು **ಮೈಸೂರು ಗೆಜೆಟಿಯರ್** ಗ್ರಂಥದಲ್ಲಿ ಯಲಹಂಕ ನಾಡಪ್ರಭುಗಳು ಮತ್ತು ಆವುತಿ ನಾಡಪ್ರಭುಗಳ ಬಗೆಗೆ ಸಂಕ್ಷಿಪ್ತವಾಗಿ ಬರೆದಿದ್ದಾರೆ. ನಂತರ **The Qarterly Journal of the Mythic Society** ಯಲ್ಲಿ ಬಿ.ಪುಟ್ಟಯ್ಯ, ಆರ್. ನರಸಿಂಹಚಾರ್ ಮೊದಲಾದವರು ಕೆಂಪೇಗೌಡ ಮತ್ತು ಯಲಹಂಕ ನಾಡು ಕುರಿತು ಲೇಖನಗಳನ್ನು ಬರೆದಿದ್ದಾರೆ. 1922ರಲ್ಲಿ ಎಸ್.ಕೆ. ನರಸಿಂಹಯ್ಯ ಎಂಬುವವರು **ಮಾಗಡಿ ಕೆಂಪೇಗೌಡ: ಬೆಂಗಳೂರು ಸ್ಥಾಪಕ ಮತ್ತು ಆತನ ಪೂರ್ವಿಕರು** ಎಂಬ ಕೃತಿಯನ್ನು ಬರೆದಿದ್ದಾರೆ.[44] ಈ ಕೃತಿಯು ಅವರ **Magadi Kempe Gowda**[45] ಕೃತಿಯ ಕನ್ನಡ ಅವತರಣಿಕೆಯಂತಿದೆ. ಕೆಂಪೇಗೌಡನ ವಂಶಸ್ಥರು ಮತ್ತು ಅವರ ಸಂಬಂಧಿ ಮನೆತನಗಳನ್ನು ಮತ್ತು ಸಮಕಾಲೀನ ಮನೆತನಗಳನ್ನು ಕುರಿತು ಸಂಕ್ಷಿಪ್ತ ವಿವರಗಳೊಡನೆ ಬಂದ ಮೊಟ್ಟಮೊದಲ ಕೃತಿ ಇದಾಗಿದೆ. ಆ ಸಂದರ್ಭದಲ್ಲಿ ತಮಗೆ ದೊರೆತ ಎಲ್ಲಾ ಆಕರಗಳನ್ನು (ಶಾಸನ, ಹಸ್ತಪ್ರತಿ, ಐತಿಹ್ಯ ಇತ್ಯಾದಿ) ಸಂಗ್ರಹಿಸಿ, ಸಾಕಷ್ಟು ಪರಿಶ್ರಮಪಟ್ಟು ಈ ಕೃತಿಯನ್ನು ರಚಿಸಿದ್ದಾರೆ. ಅನೇಕ ಐತಿಹ್ಯ ಮತ್ತು ಮೌಖಿಕ ಕಥನಗಳನ್ನು ಉಲ್ಲೇಖಿಸುವ ಈ ಕೃತಿಯು ಸೂಕ್ಷ್ಮ ವಿವರಗಳನ್ನು ಕಟ್ಟಿಕೊಡುತ್ತದೆ. ಕೃತಿಯ ಕೊನೆಯಲ್ಲಿ ಯಲಹಂಕ, ಆವತಿ, ಸುಗುಟೂರು, ಹೊಳವನಹಳ್ಳಿ ಮುಂತಾದ ನಾಡಪ್ರಭುಗಳಿಗೆ ಸಂಬಂಧಿಸಿದ ಕೆಲವು ಶಾಸನಗಳ ಸಾರಾಂಶವನ್ನು ಕೊಟ್ಟಿದ್ದಾರೆ. ಇವುಗಳು **ಎಪಿಗ್ರಾಫಿಯ ಕರ್ನಾಟಿಕ**ದಲ್ಲಿ ಪ್ರಕಟಿತವಾದ ಶಾಸನಗಳೇ ಆಗಿವೆ. ಅವರು ನೀಡಿರುವ ಶಾಸನ ಸಾರಾಂಶಗಳಲ್ಲಿ ಕೊನೆಯದು 1837ರಲ್ಲಿ ಭೂ ವ್ಯವಹಾರಕ್ಕಾಗಿ ನ್ಯಾಯಾಲಯದ ದಾವೆಗೆ ಸಂಬಂಧಿಸಿದ್ದಾಗಿದ್ದು, ಸದರಿ ಭೂಮಿಯನ್ನು ದಾನ ನೀಡಿದ್ದು ಯಲಹಂಕ ನಾಡಪ್ರಭು ಮುಮ್ಮಡಿ ಕೆಂಪವೀರಪ್ಪನಾಗಿರುತ್ತಾನೆ.

ನಂತರ ಬಂದ ಕೃತಿಗಳು ಅಕಾಡೆಮಿಕ್ಕಾಗಿ ಗಂಭೀರತೆಯನ್ನು ಹೊಂದಿರುವುದಿಲ್ಲ. ನಾಡಿನ ಪ್ರಮುಖ ಇತಿಹಾಸಕಾರರಲ್ಲಿ ಒಬ್ಬರಾದ ಎಂ.ವಿ. ಕೃಷ್ಣರಾವ್ ಅವರು **'ಬೆಂಗಳೂರು ಕೆಂಪೇಗೌಡ'**

(1964) ಕೃತಿಯನ್ನು ರಚಿಸಿದ್ದಾರೆ.[46] ಈ ಕೃತಿಯು ಇತಿಹಾಸವನ್ನು ಪರಿಶೀಲಿಸುವ ಹಂತಕ್ಕೆ ಇಳಿಯದೇ ಹೋಗುವುದರಿಂದ 'ಸಾಹಿತ್ಯದ ಸಾಮಿಪ್ಯ'ಕ್ಕೆ ಸರಿಯುತ್ತದೆ. ಆಧಾರಗಳಿಗಿಂತ ಊಹೆಯ ಬೆನ್ನೇರಿರುವ ಲೇಖಕರು ವಸ್ತುನಿಷ್ಠ ಚರಿತ್ರೆಯನ್ನು ದಾಖಲಿಸುವಲ್ಲಿ ವಿಫಲರಾಗಿದ್ದಾರೆ ಎಂದಷ್ಟೆ ಹೇಳಬಹುದು.

ನಂತರ ಬಂದ ಕೃತಿಗಳಲ್ಲಿ ಟಿ. ದಯಾನಂದ ಪಟೇಲ್ ಮತ್ತು ಜಿ.ಟಿ. ವೀರಪ್ಪ ಅವರು ಸಂಪಾದಿಸಿರುವ **ಯಲಹಂಕ ಪ್ರಭುಗಳು ಒಂದು ಅಧ್ಯಯನ** ಮುಖ್ಯ ಕೃತಿಯಾಗಿದೆ.[47] ಇದು 1993ರಲ್ಲಿ ಮಂಡ್ಯ ಸಾಹಿತ್ಯ ಪರಿಷತ್ತಿನ ವತಿಯಿಂದ ನಡೆಸಿದ 'ಯಲಹಂಕ ಪ್ರಭುಗಳು' ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಲಾದ ಪ್ರಬಂಧಗಳ ಸಂಕಲನವಾಗಿದೆ. ಇದರಲ್ಲಿ ಕೆಲವು ಸಂಶೋಧನಾತ್ಮಕ ಲೇಖನಗಳನ್ನು ಗುರುತಿಸಬಹುದು. ಈ ಕೃತಿಯ ಕೊನೆಯಲ್ಲಿ 37 ಶಾಸನಗಳು ಮತ್ತು ಸನ್ನದುಗಳ ಪಾಠವನ್ನು ಕೊಟ್ಟಿದ್ದಾರೆ. ಆದರೆ ಇವುಗಳಲ್ಲಿನ ಆರಂಭದ ಕೆಲವು ಶಾಸನಗಳು ಯಲಹಂಕ ನಾಡಪ್ರಭುಗಳ ಮನೆತನದವರಿಗೆ ಸಂಬಂಧಿಸಿರುವುದಿಲ್ಲ.

ಇದೇ ರೀತಿಯ ವಿಚಾರ ಸಂಕಿರಣದ ನಡಾವಳಿಯಾಗಿ ಮೂಡಿಬಂದ ಮತ್ತೊಂದು ಕೃತಿ ಎಂದರೆ ಕೃಷ್ಣಯ್ಯ ಎಂ.ಎಚ್. ಮತ್ತು ದೇವರಕೊಂಡಾ ರೆಡ್ಡಿ ಅವರು ಸಂಪಾದಿಸಿರುವ **ಬೆಂಗಳೂರು ಕೆಂಪೇಗೌಡರ ವಂಶಸ್ಥರು**[48] (1996). 1995ರ ಫೆಬ್ರವರಿಯಲ್ಲಿ ಬೆಂಗಳೂರಿನ ಜನತಾ ಶಿಕ್ಷಣ ಸಂಸ್ಥೆಯಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧಗಳಲ್ಲಿ 14 ಪ್ರಬಂಧಗಳನ್ನು ಸಂಪಾದಿಸಿ ಕೃತಿರೂಪದಲ್ಲಿ ತಂದಿದ್ದಾರೆ. ಇಲ್ಲಿನ ಪ್ರಬಂಧಗಳ ಬಹುತೇಕ ಲೇಖಕರು ಇತಿಹಾಸ ಸಂಶೋಧನೆಯಲ್ಲಿ ತೊಡಗಿಸಿಕೊಂಡವರಾಗಿದ್ದರೂ, ಕೆಲವೊಂದು ಲೇಖನಗಳು ಮಾತ್ರ ಅಕಾಡೆಮಿಕ್ಕಾದ ಗಂಭೀರತೆಯನ್ನು ಪಡೆದಿವೆ.

ಆನಂತರ ಬಂದ ವ್ಯಕ್ತಿಗತವಾದ ಕೃತಿಗಳಲ್ಲಿ ಹ.ಕ. ರಾಜೇಗೌಡ **ಬೆಂಗಳೂರು ಕೆಂಪೇಗೌಡ ಮತ್ತು ಅವನ ವಂಶಸ್ಥರು**[49] ಕೃತಿಯಲ್ಲಿ ಯಲಹಂಕ ನಾಡಪ್ರಭುಗಳ ಮೂಲವನ್ನು ಕುರಿತು ಭಿನ್ನವಾದ ಅಭಿಪ್ರಾಯವನ್ನು ತಳೆದಿದ್ದಾರೆ. ಅವರ ಪ್ರಕಾರ 12ನೆಯ ಶತಮಾನದ ಆರಂಭಕಾಲದಲ್ಲಿ ಹೊಯ್ಸಳರ ರಾಜಪ್ರತಿನಿಧಿಯಾಗಿ ಶಿವಗಂಗೆ ಪ್ರಾಂತ್ಯವನ್ನು ದೇವರಸಗೌಡ ಆಳುತ್ತಿದ್ದ. ಈತನನ್ನು ಅವನ ಅತ್ತಿಗೆ ಹರಿಯಲದೇವಿ ಪೋಷಿಸಿ ರಾಜನನ್ನಾಗಿ ಮಾಡಿದಳು. ದೇವರಸಗೌಡನ ಮಗನೇ ಜಯಗೌಡ ಎಂದು ಹೇಳುತ್ತಾರೆ. ರಾಜೇಗೌಡರು ತಮ್ಮ ಕೃತಿಯ ಉದ್ದಕ್ಕೂ ಜಾನಪದವನ್ನು ಹೆಚ್ಚಾಗಿ ಬಳಸಿಕೊಂಡಿರುವುದರಿಂದ ಅವುಗಳನ್ನು ಇತರ ಆಕರಗಳ ಮೂಲಕ ಚಾರಿತ್ರಿಕವಾಗಿ ನಿರೂಪಿಸುವಲ್ಲಿ ಎಡವಿದ್ದಾರೆ. ಒಟ್ಟಾರೆ, ಚಾರಿತ್ರಿಕ ಆಧಾರಗಳ

ಕೊರತೆಯಿಂದಾಗಿ ಇದೊಂದು ಸಾಹಿತ್ಯಿಕ ಕಥನದಂತೆ ಕಾಣುತ್ತದೆ. ಇತಿಹಾಸ ಪ್ರಾಧ್ಯಾಪಕರಾದ ಬಿ.ಎಸ್. ಪುಟ್ಟಸ್ವಾಮಿ ಅವರ **ಯಲಹಂಕ ನಾಡಪ್ರಭು ಕೆಂಪೇಗೌಡ ಮತ್ತು ಆತನ ವಂಶಸ್ಥರು** ಕೃತಿಯು[50] ಒಬ್ಬ ಇತಿಹಾಸಕಾರ ಬರೆದ ಕೃತಿಯೇ ಎಂಬ ಅನುಮಾನವನ್ನು ಉಂಟುಮಾಡುತ್ತದೆ. ಯಾವುದೇ ಐತಿಹಾಸಿಕ ಸಂಗತಿಗಳನ್ನು ಅನ್ವೇಷಿಸುವ ಸಂಶೋಧನಾ ಶಿಸ್ತನ್ನು ಕೃತಿಯು ಹೊಂದಿಲ್ಲದೆ, ಹಿಂದಿನ ಕೃತಿಗಳ ವಿವರಗಳೇ ಬಹುತೇಕ ಪುನರುಕ್ತಿಸುವ ಮೂಲಕ ನಿರಾಶೆ ಮೂಡಿಸುತ್ತದೆ. ಇತ್ತೀಚೆಗೆ ಪ್ರಕಟವಾದ ಎಚ್.ಎಂ. ಬೋರಯ್ಯ ಅವರ **ಯಲಹಂಕ ಮಹಾನಾಡ ಪ್ರಭುಗಳು (2020)** ಒಂದು ಗಮನಾರ್ಹವಾದ ಕೃತಿಯಾಗಿದೆ.[51] ಮೂಲತಃ ವಿಜ್ಞಾನದ ವಿದ್ಯಾರ್ಥಿಗಳಾದ ಬೋರಯ್ಯನವರು ಇತಿಹಾಸದ ಹವ್ಯಾಸಿ ಸಂಶೋಧಕರು. ಈ ಕೃತಿಯು ಇತರ ಇತಿಹಾಸ ಕೃತಿಗಳಿಗಿಂತ ಭಿನ್ನವಾಗಿ ನಿಲ್ಲುತ್ತದೆ. ವ್ಯಾಪಕವಾದ ಕ್ಷೇತ್ರಕಾರ್ಯ ಮತ್ತು ಅಧ್ಯಯನಗಳಿಂದ ಕೂಡಿರುವ ಈ ಕೃತಿಯಲ್ಲಿ ಕೆಲವು ಹೊಸ ಅಭಿಪ್ರಾಯಗಳನ್ನು ಮಂಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ಕೆಲವು ಇತಿಮಿತಿಗಳ ನಡುವೆಯೂ ಯಲಹಂಕ ನಾಡಪ್ರಭುಗಳನ್ನು ಕುರಿತು ಬಂದಿರುವ ಉತ್ತಮ ಸಂಶೋಧನಾ ಕೃತಿಗಳಲ್ಲೊಂದಾಗಿದೆ.

ಪಿ.ವಿ. ಕೃಷ್ಣಮೂರ್ತಿ ಅವರು ಯಲಹಂಕ ನಾಡಪ್ರಭುಗಳನ್ನು ಕುರಿತು ಹಲವು ಸಂಶೋಧನ ಲೇಖನಗಳನ್ನು ವಿವಿಧ ಕಡೆಗಳಲ್ಲಿ ಪ್ರಕಟಿಸಿದ್ದಾರೆ. ಅವುಗಳಲ್ಲಿ ಕೆಲವನ್ನು **ಶಾಸನ, ಇತಿಹಾಸ ಮಂಥನ**[52] ಕೃತಿಯಲ್ಲಿ ಸೇರಿಸಿದ್ದಾರೆ. ಈ ಕೃತಿಯಲ್ಲಿ ಯಲಹಂಕ ನಾಡಪ್ರಭುಗಳನ್ನು ಮತ್ತು ಅವರ ಸಮಕಾಲೀನರಾದ ಸುಗುಟೂರು ಪಾಳೆಗಾರರನ್ನು ಕುರಿತಾದ ಲೇಖನಗಳಿವೆ. ಅಲ್ಲದೆ, ಪ್ರಸ್ತುತ ಅಧ್ಯಯನಕ್ಕೆ ಪೂರಕವಾದ ಕೆಲವು ಮುಖ್ಯವಾದ ಲೇಖನಗಳಿವೆ. ಅವುಗಳಲ್ಲಿ "ಯಲಹಂಕ ನಾಡು", "ಕೆಂಪೇಗೌಡನ ಜಯ ಪ್ರಶಸ್ತಿ– ಒಂದು ಚಾರಿತ್ರಿಕ ಪರಿಶೀಲನೆ", "ಕೆಂಪೇಗೌಡ ಜಯಪ್ರಶಸ್ತಿ ಉಲ್ಲೇಖಿತ ಮುಮ್ಮಡಿ ವೆಂಕಟಪತಿ ದೇವರಾಯನ ಕಾಲದ ಸ್ಥಳೀಯ ಪ್ರಭುಗಳ ಪ್ರಭಾವ – ಒಂದು ವಿವೇಚನೆ", "ಕೆಂಪೇಗೌಡರು 'ಧರ್ಮಪ್ರಭು' ಎಂಬ ಹೆಗ್ಗಳಿಕೆಗೆ ಪಾತ್ರರಾದ ಹಿನ್ನೆಲೆ", "ಸುಗುಟೂರು ಅರಸು ಮನೆತನ" ಮುಂತಾದ ಲೇಖನಗಳನ್ನು ಹೆಸರಿಸಬಹುದಾಗಿದೆ. ಪಿ.ವಿ. ಕೃಷ್ಣಮೂರ್ತಿಯವರು ತಮ್ಮ ತಲಸ್ಪರ್ಶಿ ಅಧ್ಯಯನದ ಮೂಲಕ ಯಲಹಂಕ ನಾಡಪ್ರಭುಗಳ ಬಗೆಗೆ ಮೌಲಿಕವಾಗಿ ಬರೆಯಬಲ್ಲ ವಿದ್ವಾಂಸರಾಗಿ ತೋರುತ್ತಾರೆ. ಇವರ ಮತ್ತೊಂದು ಪ್ರಮುಖ ಕೃತಿ ಎಂದರೆ **ಸುಗುಟೂರು ವೀರಶೈವ ಅರಸುಮನೆತನ**[53] ಯಲಹಂಕ ನಾಡಪ್ರಭುಗಳ ಸಮಕಾಲೀನರಾದ ಸುಗುಟೂರು ಅರಸರನ್ನು ಕುರಿತು ಬರೆದಿದ್ದು,

ಯಲಹಂಕ ನಾಡಪ್ರಭುಗಳು ಮತ್ತು ಸುಗುಟೂರು ಅರಸರ ನಡುವಿನ ಸಂಬಂಧವನ್ನು ಅರಿಯಲು ಉಪಯುಕ್ತವಾಗಿದೆ.

ಯಲಹಂಕ ನಾಡಪ್ರಭುಗಳನ್ನು ಕುರಿತು ವಿಶೇಷವಾಗಿ ಅಧ್ಯಯನ ನಡೆಸಿದ ಮತ್ತೊಬ್ಬ ಸಂಶೋಧಕರೆಂದರೆ ಎಸ್.ಕೆ. ಅರುಣಿ. ಮೊಟ್ಟಮೊದಲ ಬಾರಿಗೆ ಯಲಹಂಕ ನಾಡಪ್ರಭುಗಳ ಕಾಲದ ಕಲೆ ಮತ್ತು ವಾಸ್ತುಶಿಲ್ಪವನ್ನು ಕುರಿತು **ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ** ಬೃಹತ್ ಗ್ರಂಥವನ್ನೆ ರಚಿಸಿದರು.[54] ವ್ಯಾಪಕವಾದ ಕ್ಷೇತ್ರಕಾರ್ಯ ಮತ್ತು ಅಧ್ಯಯನದ ಮೂಲಕ ಮೂಡಿಬಂದ ಕೃತಿ ಇದು. ಬೆಂಗಳೂರು ವಿಶ್ವವಿದ್ಯಾಲಯದ ಶ್ರೀ ಕೆಂಪೇಗೌಡ ಅಧ್ಯಯನ ಪೀಠದ ಆಕರ ಸಂಪುಟಗಳ ರಚನೆ ಯೋಜನೆಯ ಭಾಗವಾಗಿ ಬಂದ ಕೃತಿ. ಈ ಕೃತಿಯಲ್ಲಿ ಅರುಣಿ ಅವರು ಆವತಿ, ನಂದಿ, ದೇವನಹಳ್ಳಿ, ಯಲಹಂಕ, ಬೆಂಗಳೂರು, ಸುಂಕೇನಹಳ್ಳಿ (ಬಸವನಗುಡಿ), ಗವಿಪುರ, ಅಲಸೂರು, ಬೈರವನದುರ್ಗ, ಮಾಗಡಿ, ಸಾವನದುರ್ಗ, ಶಿವಗಂಗೆ, ಹುತ್ರಿದುರ್ಗ, ಹುಲಿಯೂರುದುರ್ಗ ಮತ್ತು ರಾಮಗಿರಿ–ಶಿವಗಿರಿ ಹಾಗೂ ಹುಲಿಕಲ್ಲುಗಳಲ್ಲಿ ಕಂಡುಬರುವ ಯಲಹಂಕ ನಾಡಪ್ರಭುಗಳ ಕಾಲದ ದೇವಾಲಯ, ಕೋಟೆ, ಅರಮನೆ ಅವಶೇಷಗಳು, ಹಜಾರಗಳು, ನಗರ ರಚನೆ ಮುಂತಾದ ವಾಸ್ತು ಶಿಲ್ಪಗಳು ಮತ್ತು ದೇವಾಲಯಗಳ ಭಿತ್ತಿ, ಕಂಭ, ಕೋಷ್ಠಕಗಳಲ್ಲಿರುವ ಶಿಲ್ಪಗಳು ಹಾಗೂ ವಿಶಿಷ್ಠ ಏಕಶಿಲಾ ಶಿಲ್ಪಗಳಾದ ಸೂರ್ಯಪಾನ, ಚಂದ್ರಪಾನ, ತ್ರಿಶೂಲ, ಡಮರುಗ, ಕಲ್ಲಿನ ಛತ್ರಿ ಮುಂತಾದವುಗಳನ್ನು ಕುರಿತು ಸೊಗಸಾಗಿ ವಿಶ್ಲೇಷಿಸಿದ್ದಾರೆ. ಕೋಟೆಗಳ ಬಗೆಗೂ ಕೂಡ ಉಪಯುಕ್ತ ಮಾಹಿತಿಗಳನ್ನು ನೀಡಿದ್ದಾರೆ. ಅರುಣಿ ಅವರ ಮತ್ತೊಂದು ಪ್ರಮುಖ ಕೃತಿ[55] **ಬೆಂಗಳೂರು ಪರಂಪರೆ** ಮೂಲತಃ **ಸಂಯುಕ್ತ ಕರ್ನಾಟಕ** ದಿನಪತ್ರಿಕೆಯಲ್ಲಿ **"**ಬೆಂಗಳೂರು ಪರಂಪರೆ**"** ಹೆಸರಿನಿಂದಲೇ ಹಲವು ಕಂತುಗಳಲ್ಲಿ ಪ್ರಕಟವಾದ ಲೇಖನಗಳನ್ನು ಸಂಗ್ರಹಿಸಿ ಮತ್ತು ಪರಿಷ್ಕರಿಸಿ ಅಪರೂಪದ ಚಿತ್ರಗಳೊಂದಿಗೆ ಕಟ್ಟಿಕೊಟ್ಟಿದ್ದಾರೆ. ಇಲ್ಲಿನ 27 ಲೇಖನಗಳಲ್ಲಿ ಸಿಂಹಪಾಲು ಯಲಹಂಕ ನಾಡಪ್ರಭುಗಳ ಕಾಲದ ಇತಿಹಾಸ ಮತ್ತು ದೇವಾಲಯಗಳ ವಾಸ್ತುಶಿಲ್ಪದ ವಿಶ್ಲೇಷಣೆಗೆ ಮೀಸಲಾಗಿದೆ. ಬೆಂಗಳೂರಿನಲ್ಲಿ ದಸರಾ ಉತ್ಸವವನ್ನು ನಾಡಪ್ರಭುಗಳು ವಿಜಯನಗರ ಸಾಮ್ರಾಟರ ಅನುಕರಿಸಿ ಆಚರಿಸುತ್ತಿದ್ದ ಬಗೆಗೆ ಅಪರೂಪದ ವಿವರಗಳನ್ನು ದಾಖಲಿಸಿದ್ದಾರೆ. ನಾಡಪ್ರಭುಗಳ ಕಾಲದ ಬೆಂಗಳೂರಿನ ಕಲೆ ಮತ್ತು ವಾಸ್ತುಶಿಲ್ಪವನ್ನು ಕುರಿತು ಅಧ್ಯಯನ ನಡೆಸುವವರಿಗೆ ಮೇಲಿನ ಎರಡೂ ಕೃತಿಗಳು ಅತ್ಯುತ್ತಮ ಮಾರ್ಗದರ್ಶಿಯಾಗಬಲ್ಲ ಆಕರ ಗ್ರಂಥಗಳಾಗಿವೆ.

ಅದೇರೀತಿ ಶ್ರೀ ಕೆಂಪೇಗೌಡ ಅಧ್ಯಯನ ಪೀಠದ ಆಕರ ಗ್ರಂಥಗಳ ಯೋಜನೆ ಅಡಿಯಲ್ಲಿ ಬಂದ ಮತ್ತೊಂದು ಕೃತಿ ಎಂದರೆ ಡಿ. ಲಿಂಗಯ್ಯ ಅವರು ಸಂಪಾದಿಸಿರುವ **ಯಲಹಂಕ ನಾಡಪ್ರಭುಗಳು ಜಾನಪದ ಸಂಪುಟ (ಜನಪದ ಕಾವ್ಯಗಳು ಮತ್ತು ಲೇಖನಗಳ ಸಂಕಲನ)**[56] (2005) ಮತ್ತೊಂದು ಉತ್ತಮ ಆಕರ ಗ್ರಂಥವಾಗಿದೆ. ಈ ಗ್ರಂಥದಲ್ಲಿ ಕೆಂಪೇಗೌಡ ಮತ್ತು ಯಲಹಂಕ ನಾಡಪ್ರಭುಗಳಿಗೆ ಸಂಬಂಧಿಸಿದ 19 ಜಾನಪದ ಕಾವ್ಯಗಳನ್ನು ಸಂಗ್ರಹಿಸಿದ್ದಾರೆ. ಜೊತೆಗೆ ವಿವಿಧ ಲೇಖಕರ 34 ಲೇಖನಗಳನ್ನು ಪ್ರಕಟಿಸಿದ್ದಾರೆ. ಈ ಲೇಖನಗಳು ಜಾನಪದ ಐತಿಹ್ಯಗಳಿಗೆ ಸಂಬಂಧಪಟ್ಟಿರುವುದರಿಂದ ಅವುಗಳನ್ನು ಆಯ್ದು ಕೃತಿಯಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ. ಈ ಕೃತಿಗೆ ಸುಮಾರು 40 ಪುಟಗಳ ಮೌಲಿಕವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಇಲ್ಲಿನ ಜಾನಪದ ಕಾವ್ಯಗಳು ಮತ್ತು ಐತಿಹ್ಯಗಳನ್ನು ದುಡಿಸಿಕೊಂಡು ಚಾರಿತ್ರಿಕ ವಿದ್ಯಮಾನವನ್ನು ವಿಶ್ಲೇಷಿಸಲು ಸಂಶೋಧಕನಿಗೆ ಅಂತರ್‌ಶಿಸ್ತೀಯ ಅಧ್ಯಯನದ ಅಗತ್ಯತೆ ಇದೆ.

ಆರ್. ಗೋಪಾಲ್ ಅವರು ಸಂಪಾದಿಸಿರುವ **ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು**[57] ಹಾಗೂ **ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ**[58] ಕೃತಿಗಳಲ್ಲಿ ಕ್ರಮವಾಗಿ 43 ಮತ್ತು 72 ಪ್ರಬಂಧಗಳಿವೆ. ಇವುಗಳಲ್ಲಿ ಕೆಲವು ಲೇಖನಗಳು ವಿದ್ವತ್ಪೂರ್ಣವಾಗಿದ್ದು, ಅಧ್ಯಯನದ ಸಂದರ್ಭದಲ್ಲಿ ಹೆಚ್ಚು ನೆರವಾಗುತ್ತವೆ.

ಇವಲ್ಲದೆ ಇನ್ನೂ ಕೆಲವು ಕೃತಿಗಳಲ್ಲಿ ಯಲಹಂಕ ನಾಡಪ್ರಭುಗಳನ್ನು ಕುರಿತ ಕಿರು ಅಧ್ಯಾಯಗಳಿವೆ.  ಅವುಗಳಲ್ಲಿ ಎಂ.ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ ಅವರು ರಚಿಸಿರುವ **ಕರ್ಣಾಟಕದ ಇತಿಹಾಸ ದರ್ಶನ**[59] ಎನ್. ರಾಜಗೋಪಾಲ್ ರಾವ್ ಅವರು **ಕರ್ನಾಟಕ ಪರಂಪರೆ**[60] ಬ.ನ. ಸುಂದರರಾವ್ ಅವರ **ಬೆಂಗಳೂರಿನ ಇತಿಹಾಸ**[61]**,** ವಸು ಎಂ.ವಿ. ಅವರು ಸಂಪಾದಿಸಿರುವ **ದಕ್ಷಿಣ ಕರ್ನಾಟಕದ ಅರಸು ಮನೆತನಗಳು**[62] ಮುಖ್ಯವಾದ ಕೃತಿಗಳಾಗಿವೆ. ಆದರೆ ಇಲ್ಲಿನ ಬರವಣಿಗೆಗಳು ಬಹುತೇಕ ಒಂದೇ ತೆರನಾದ ನಿರೂಪಣೆಯಿಂದ ಕೂಡಿವೆ. ಆಳಿದ ಪ್ರಭುಗಳ ಕಾಲದ ಕುರಿತಾಗಿಯೂ ಇವರಲ್ಲಿ ಅಂತಹ ವ್ಯತ್ಯಾಸಗಳೂ ಕಂಡುಬರುವುದಿಲ್ಲ.

ಯಲಹಂಕ ನಾಡಪ್ರಭುಗಳನ್ನು ಕುರಿತು ಇಂಗ್ಲೀಷ್‌ನಲ್ಲಿ ನಡೆದಿರುವ ಅಧ್ಯಯನಗಳಲ್ಲಿ **Bangalore District Gazetteer** [63]; Fazlul Hasan - **Bangalore Through the Centuries** [64] Maya Jayapal - **Bangalore The Story of a City**[65]; T.V. Annaswamy – **Bengaluru to Bangalore Urban History of Bangalore from the Pre-Historic Period to the end of 18$^{th}$ century** [66]; Yashswini Sharma - **Bangalore: The Early City**[67] ಈ ಎಲ್ಲಾ

ಕೃತಿಗಳಲ್ಲಿಯೂ ಯಲಹಂಕ ನಾಡಪ್ರಭುಗಳ ಬಗೆಗೆ ಸಾಮಾನ್ಯವಾದ ವಿವರಗಳೇ ಕಂಡುಬರುತ್ತವೆ ಮತ್ತು ಬಹುತೇಕ ವಿವರಗಳು ಪುನರುಕ್ತಿಯಾಗುತ್ತವೆ. ಯಶಸ್ವಿನಿ ಶರ್ಮ ಅವರು ತಮ್ಮ ಕೃತಿಯಲ್ಲಿ ಬೆಂಗಳೂರಿನ ಕೋಟೆ ಮತ್ತು ಪೇಟೆಯನ್ನು ಕುರಿತು ವಿಶೇಷ ವಿವರಗಳನ್ನು ಸಂಗ್ರಹಿಸಿ ಮತ್ತು ವಿಶ್ಲೇಷಿಸಿದ್ದಾರೆ.

ಇತ್ತೀಚೆಗೆ ಹೊಸ ತಲೆಮಾರಿನ ಯುವ ಸಂಶೋಧಕರು ಯಲಹಂಕ ನಾಡಪ್ರಭುಗಳ ಇತಿಹಾಸ ಕುರಿತು ಗಂಭೀರವಾಗಿ ಅಧ್ಯಯನ ನಡೆಸುತ್ತಿರುವುದು ಆಶಾದಾಯಕ ಬೆಳವಣಿಗೆಯಾಗಿದೆ. ಈವರೆಗಿನ ಸ್ಥಾಪಿತ ಯಲಹಂಕ ನಾಡಪ್ರಭುಗಳ ಚರಿತ್ರೆಯ ಸಂಗತಿಗಳನ್ನು ಮುರಿದು ಕಟ್ಟುವ ಹೊಸ ಪ್ರಯತ್ನವನ್ನು ಸಂಶೋಧನಾ ವೈಧಾನಿಕ ವಿಧಾನಗಳ ಮೂಲಕವೇ ನಡೆಸುತ್ತಿದ್ದಾರೆ. ಅವರಲ್ಲಿ ಸುಂಕಂ ಗೋವರ್ಧನ, ಎಸ್. ಗಂಗಾಂಬಿಕೆ, ಹಂ.ಗು. ರಾಜೇಶ್ ಪ್ರಮುಖರಾಗಿದ್ದಾರೆ.

ಗಂಗಾಂಬಿಕೆ ಅವರು **"**ಹೊಸ ಪರಿವೀಕ್ಷಣೆಯ ಹಿನ್ನೆಲೆಯಲ್ಲಿ ನಾಡಪ್ರಭು ಕೆಂಪೇಗೌಡನ ಇತಿಹಾಸದ ಗೊಂದಲಗಳೊಂದಿಗೆ ಒಂದು ಸಂವಾದ**",**[68] **"**ಕೆಂಪೇಗೌಡರ ಆಗಮನದಿಂದ ಹೈದರ್ ಅಲಿ ಆಗಮನದವರೆಗೆ ಬೆಂಗಳೂರು ಪರಿಸರದ ಇತಿಹಾಸ ಮತ್ತು ಸಂಸ್ಕೃತಿ (ಕ್ರಿ.ಪೂ. 1500–1760ರವರೆಗಿನ ಕಾಲವನ್ನು ಅನುಲಕ್ಷಿಸಿ)**"**[69] ಮುಂತಾದ ಗಂಭೀರ ಸಂಶೋಧನಾತ್ಮಕ ಲೇಖನಗಳನ್ನು ಬರೆದು ಗಮನಸೆಳೆದಿದ್ದಾರೆ. ಯಲಹಂಕ ನಾಡಪ್ರಭುಗಳಿಗೆ ಸಂಬಂಧಿಸಿದ ಇವರ ಎಲ್ಲಾ ಲೇಖನಗಳನ್ನು ಸೇರಿಸಿ, **ಕೆಂಪೇಗೌಡರು ಮತ್ತು ಅವರ ವಂಶೀಯರು ಹೊಸ ಪರಿವೀಕ್ಷಣೆಗಳು**[70] ಎಂಬ ಕೃತಿ ಕೂಡ ಹೊರಬಂದಿದೆ. ಇವರು ತಮ್ಮ ಲೇಖನಗಳಲ್ಲಿ ಜಾನಪದ ಸಾಹಿತ್ಯ ಮತ್ತು ಶಾಸನಗಳನ್ನು ಸಮರ್ಥವಾಗಿ ಮಥಿಸಿ ಹೊಸ ಸಂಗತಿಗಳನ್ನು ಭಿನ್ನ ನೋಟಕ್ರಮದ ಮೂಲಕ ದಾಖಲಿಸಿದ್ದಾರೆ. ಈ ಕೃತಿಯ ಮೂಲಕ ಹಲವು ಸ್ಥಾಪಿತ ಅಭಿಪ್ರಾಯಗಳನ್ನು ಮುರಿದು ಕಟ್ಟುವಲ್ಲಿ ಯಶಸ್ವಿಯಾಗಿದ್ದಾರೆ. ಸುಂಕಂ ಗೋವರ್ಧನ ಅವರ **"**ಬೆಂಗಳೂರು ಪರಿಸರದ ರಾಜಕೀಯ ಅವಲೋಕನ (ಹೊಯ್ಸಳೋತ್ತರ ಯುಗದಿಂದ ನಾಡಪ್ರಭುಗಳ ಆಗಮನದವರೆಗೆ)**"**[71] ಒಂದು ಗಮನಾರ್ಹವಾದ ಲೇಖನವಾಗಿದೆ. ಈ ಲೇಖನದಲ್ಲಿ ಗೋವರ್ಧನ ಅವರು ಪ್ರತಿಪಾದಿಸುವ ಪ್ರಕಾರ ಆರಂಭಿಕ ಯಲಹಂಕ ನಾಡಪ್ರಭುಗಳ ಮನೆತನದ ಅರಸರುಗಳು ಆಳಿದ ಬಗೆಗೆ ಜಾನಪದ ಐತಿಹ್ಯಗಳ ಹೊರತು ಬೇರೆ ಯಾವ ಸಮಕಾಲೀನ ಆಕರಗಳೂ ಇಲ್ಲದಿರುವ ಅಂಶವನ್ನು ಗುರುತಿಸುತ್ತಾರೆ. ಗೋವರ್ಧನ ಅವರ ಇತ್ತೀಚಿನ ಕೃತಿಗಳಲ್ಲಿ **ಮಾಗಡಿ ತಾಲ್ಲೂಕಿನ ಶಾಸನಗಳು ಹೊಸ ಹೊಳಹುಗಳು**[72]

ಒಂದಾಗಿದೆ. ಈ ಕೃತಿಯಲ್ಲಿ ಕೃಷಿಚಟುವಟಿಕೆಗಳ ಆರಂಭದ ಮೂಲಕ ಮಾಗಡಿ ಪರಿಸರವು ಹೊರಪ್ರಪಂಚದೊಂದಿಗೆ ಮುಖಾಮುಖಿಯಾಯಿತೆಂಬ ವಿಚಾರಪೂರ್ಣ ವಾದವನ್ನು ಆಧಾರ ಸಹಿತವಾಗಿ ಮಂಡಿಸುತ್ತಾರೆ.

ಹಂ.ಗು. ರಾಜೇಶ್ ಅವರ **"ಕೆಂಪಾಪುರ ಸಮಾಧಿಯ ಕೆಂಪೇಗೌಡ ಯಾರು",**[73] **"ಬೆಂಗಳೂರಿನ ನೆಲೆ–ಹಿನ್ನೆಲೆ",**[74] **"ಕೆಂಪೇಗೌಡನ ಸೊಸೆ ಲಕ್ಷ್ಮೀದೇವಿಯ ಆತ್ಮಬಲಿದಾನ: ಒಂದು ಚಾರಿತ್ರಿಕ ಪರಿಶೀಲನೆ"**[75] ಮುಂತಾದ ಲೇಖನಗಳನ್ನು ಪ್ರಕಟಿಸಿದ್ದಾರೆ. ಈ ಲೇಖನಗಳ ಮೂಲಕ ಸ್ಥಾಪಿತವಾದ ಕೆಲವು ಅಭಿಪ್ರಾಯಗಳನ್ನು ಮುರಿದು ಕಟ್ಟುವಲ್ಲಿ ರಾಜೇಶ್ ಯಶಸ್ವಿಯಾಗಿದ್ದಾರೆ.

ಇವೇ ಅಲ್ಲದೆ ಇನ್ನೂ ಅನೇಕ ಕೃತಿಗಳು ಅಧ್ಯಯನಕ್ಕೆ ಪೂರಕವಾಗಿವೆ. ಅವುಗಳಲ್ಲಿ ಕೆ. ನಾರಾಯಣಾಚಾರ್ಯ – **ಮಧುಗಿರಿ ಚರಿತ್ರೆ**[76]; ಹು.ಪು. ಸದಾಶಿವಪ್ಪ – **ಹುಲಿಯೂರು ದುರ್ಗ**[77]; ಎಸ್.ಎ. ಮಂಜುಳ – ಹುತ್ತರೀದುರ್ಗ[78]; ಲಕ್ಷ್ಮಣ್ ತೆಲಗಾವಿ (ಸಂ.) – ಹರತಿಸಿರಿ[79]; ಐ. ಅಂತಪ್ಪ – **ಬ್ರಿಟಿಷರು ಬರುವುದಕ್ಕೆ ಮುಂಚೆ ಬೆಂಗಳೂರು ಮತ್ತು ಸುತ್ತಮುತ್ತಲಲ್ಲಿ ಕ್ರೈಸ್ತ ಧರ್ಮದ ಉಗಮ 1648–1800;**[80] ಎಂ. ಸುಮಿತ್ರ – **ಕರಗ ಸಂಪ್ರದಾಯ**[81]; ಕೆ. ಚಂದ್ರಮೌಳಿ – **ಬೆಂಗಳೂರಿನ ನೋಟಗಳು**[82]; ಡಿ.ಎನ್. ಯೋಗೀಶ್ವರಪ್ಪ ಅವರ **ಹಾಗಲವಾಡಿ ನಾಯಕರು**[83]; **ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು**[84]; **ನಾಯಕತನ ಪದ್ಧತಿ**[85]; ಆರ್. ಕಾವಲಮ್ಮ – **ಮಧುಗಿರಿ ಮಹಾನಾಡು ಪ್ರಭುಗಳು**[86]; ಟಿ.ವಿ. ನಾಗರಾಜ್ – **ಮೊರಸು ಒಕ್ಕಲಿಗರ ದ್ಯಾವರ ಸಂಪ್ರದಾಯಗಳು**[87]; ಮುನಿರಾಜಪ್ಪ – **ಮಾಗಡಿ ಸೀಮೆಯ ಇತಿಹಾಸ ಸಂಸ್ಕೃತಿ**[88]; ಟಿ.ವಿ. ವೆಂಕಟಾಚಲ ಶಾಸ್ತ್ರೀ – **ಕನಕಪುರ ಎಂಬ ಕಾನಕಾನ ಹಳ್ಳಿಯ ಚರಿತ್ರೆ**[89]; ಸಂತೇಬೆನ್ನೂರು ಸುಮತೀಂದ್ರ ನಾಡಿಗ್ – **ಸಂತೇಬೆನ್ನೂರು ನಾಯಕರು**[90]; ಲಕ್ಷ್ಮಣ್ ತೆಲಗಾವಿ – **ಎಪ್ಪತ್ತೇಳು ಪಾಳೆಯಗಾರರು**[91]; ಎಚ್. ಗುಡ್ಡದೇಶ್ವರಪ್ಪ – **ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ**[92]; ಎಂ.ಎಚ್. ನಾಗರಾಜು – **ಮೊರಸು ಒಕ್ಕಲಿಗರು ಒಂದು ಸಾಂಸ್ಕೃತಿಕ ಅಧ್ಯಯನ**[93]; ಗೋಪಾಲಗೌಡ ಕಲ್ವಮಂಜಲಿ – **ಕೋಲಾರ ಚಿಕ್ಕಬಳ್ಳಾಪುರ ಪ್ರಾಂತ ಆವತಿ ನಾಡಪ್ರಭುಗಳು ಇತಿಹಾಸ**[94]; ಕೆಂಕೆರೆ ಹನುಮಂತೇಗೌಡ – **ದೇವಗುಂದ ಮಹಾನಾಡ ಪ್ರಭುಗಳು**[95]; ಎಸ್. ವೆಂಕಟೇಸ್ – **ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ**[96]; ಸಿ.ಆರ್. ಶ್ಯಾಮಲ – **ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ**[97]; ಬಿ. ಸಿದ್ಧಗಂಗಯ್ಯ ಕಂಬಾಳು ಅವರ **ಹುಲಿಕಲ್ಲು**[98] ಮತ್ತು **ಶಿವಗಂಗೆ**[99]; ಎಂ.ಎಚ್. ಬೋರಯ್ಯ – **ಆವತಿ ನಾಡಪ್ರಭುಗಳು**[100];

**ಎಂ.ಎಚ್. ನಾಗರಾಜು** – ಗುಬ್ಬಿ ಹೊಸಹಳ್ಳಿ ಪ್ರಭುಗಳು[101] ಮುಂತಾದ ಆನುಷಂಗಿಕ ಆಕರಗಳನ್ನು ಅಧ್ಯಯನದ ಸಂದರ್ಭದಲ್ಲಿ ಬಳಸಿಕೊಳ್ಳಲಾಗುವುದು.

ಈವರೆಗಿನ ಅಧ್ಯಯನಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಯಲಹಂಕ ನಾಡಪ್ರಭುಗಳನ್ನು ಕುರಿತು 1970ರ ದಶಕದವರೆಗೆ ಬಂದಿರುವ ಆರಂಭದ ಕೆಲವು ಸಂಶೋಧನಾ ಬರವಣಿಗೆಗಳನ್ನು ಹೊರತು ಪಡಿಸಿದರೆ, ನಂತರ ಬಂದ ಬರವಣಿಗೆಗಳು ಅವುಗಳ ಅನುಕರಣೆಗಳಂತೆಯೇ ಭಾಸವಾಗುತ್ತವೆಯೇ ವಿನಃ ಹೊಸದೇನನ್ನೂ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನಕ್ಕೆ ಹೋದಂತೆ ತೋರುವುದಿಲ್ಲ. ಕೇವಲ ದತ್ತಾಂಶಗಳನ್ನು ಪೋಣಿಸುವ ಕೆಲಸಗಳಾಗಿವೆಯೇ ವಿನಃ ವಿಶ್ಲೇಷಣೆಯ ಹಂತಕ್ಕೆ ಹೋಗಿರುವ ಅಧ್ಯಯನಗಳು ತೀರಾ ವಿರಳ. ಅಂತಹ ಪ್ರಯತ್ನವನ್ನು ಇತ್ತೀಚಿನ ವರ್ಷಗಳಲ್ಲಿ ಬಂದ ಬರವಣಿಗೆಗಳಲ್ಲಿ ಗಮನಿಸಬಹುದು. ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಉತ್ತರ ಶೋಧಿಸುವ ಮತ್ತು ಆಧಾರ ಪೂರ್ವಕವಾಗಿ ವಿಶ್ಲೇಷಿಸುವಂತಹ ಬರವಣಿಗೆಗಳು ಸ್ವಲ್ಪ ಮಟ್ಟಿಗೆ ಮೂಡಿಬರುತ್ತಿರುವುದು ಈ ಅಧ್ಯಯನ ಕ್ಷೇತ್ರದಲ್ಲಿನ ಆಶಾದಾಯಕ ಬೆಳವಣಿಗೆಯಾಗಿದೆ.

## 1.6 ನಾಡು – ನಾಡಪ್ರಭು ಅರ್ಥ ಮತ್ತು ಪ್ರಯೋಗ

ದಕ್ಷಿಣ ಭಾರತದ ಮಧ್ಯಕಾಲೀನ ಇತಿಹಾಸದ ಸಂದರ್ಭದಲ್ಲಿ 'ನಾಡು' ಎಂಬ ಘಟಕವು ಬಹುಚರ್ಚೆಯ ವಿಷಯವಾಗಿದೆ. ನಾಡನ್ನು ಕುರಿತು ಈವರೆಗೆ ಹಲವು ವಿದ್ವಾಂಸರು ಚರ್ಚಿಸಿದ್ದಾರೆ.[102] 'ನಾಡು' ಎಂಬ ಪದವು ಕಿರು ಪ್ರದೇಶವನ್ನು ಗೊತ್ತುಪಡಿಸುವುದಾಗಿ ಬರ್ಟನ್ ಸ್ಟೈನ್ ಅವರು ಅಭಿಪ್ರಾಯ ಪಡುತ್ತಾರೆ. ಮುಂದುವರೆದು ಚೋಳರ ಅವಧಿಯಲ್ಲಿ ನಾಡಿನ ಪದ ಬಳಕೆಯಾಗಿರುವ ಪ್ರಕಾರ ಸಣ್ಣ ಪ್ರದೇಶದ ಸಭೆಯನ್ನೂ ಸೂಚಿಸುತ್ತದೆ. ಪದ ನಿಷ್ಪತ್ತಿಯ ಪ್ರಕಾರ 'ನಾಡು' ಎಂಬುದು ಕೃಷಿ ಭೂಮಿಯನ್ನು ಉಲ್ಲೇಖಿಸುತ್ತಿದ್ದು, 'ಕಾಡು' ಎಂಬುದಕ್ಕೆ ಪ್ರತಿಯಾಗಿ ಬಳಕೆಯಾಗಿದೆ.[103] ನಾಡು, ನಾಟ್ಟು ಪದಗಳ ಪ್ರಾಚೀನತೆಯನ್ನು ಶೋಧಿಸಲು ತಮಿಳು ಶಂಗಂ ಸಾಹಿತ್ಯದ ಮೊರೆ ಹೋಗಬೇಕಾಗುತ್ತದೆ. ಮೊದಲಬಾರಿಗೆ 'ನಾಡು' ಎಂಬ ಪದವನ್ನು ಪ್ರಯೋಗಿಸಿದವರು 'ಎರುಮಿನಾಟವರು'. ಈ ಎರುಮಿನಾಟರು ತಮಿಳಗಂನ ಉತ್ತರಕ್ಕಿದ್ದ ಕನ್ನಡಿಗರಾಗಿದ್ದಾರೆ. ಕ್ರಿ.ಶ. 2ನೆಯ ಶತಮಾನದಿಂದ 'ನಾಡು' ಪದವು ಆಡಳಿತ ಘಟಕವಾಗಿ ಅವಿಚ್ಛಿನ್ನವಾಗಿ ಮುಂದುವರೆದಿದೆ.[104] ಕನ್ನಡದ ಮೊದಲ ಶಾಸನವಾದ ಹಲ್ಮಿಡಿ (ಕ್ರಿ.ಶ. 450) ಶಾಸನದಲ್ಲಿಯೂ 'ನರಿದಾವಿಳೆನಾಡು' ಎಂಬ ಉಲ್ಲೇಖವಿದೆ. ಕನ್ನಡ ನಾಡು ಪದ ಮತ್ತು ಅದು ಸೂಚಿಸುವ ಆಡಳಿತ ಘಟಕಗಳು ತಮಿಳರಿಗಿಂತ ಇಲ್ಲಿಯೇ ಹೆಚ್ಚು ಆಳವಾಗಿ ಬೇರು

ಬಿಟ್ಟಿರುವುದಕ್ಕೆ ಸಾಕ್ಷಿಯಾಗಿವೆ. ಇಲ್ಲಿಂದ ತಮಿಳುನಾಡಿಗೆ ವಲಸೆ ಹೋದ ಜೈನರು ತವರಿನಲ್ಲಿದ್ದ 'ನಾಡು' ಘಟಕವನ್ನು ತಮಿಳರಿಗೆ ಪರಿಚಯಿಸಿರಬೇಕೆಂದು ಷ. ಶೆಟ್ಟರ್ ಅಭಿಪ್ರಾಯ ಪಡುತ್ತಾರೆ.[105] ಮಾಲಿನಿ ಅಡಿಗ ಅವರ ಪ್ರಕಾರ – "ಮೂಲ ಮತ್ತು ಸ್ವರೂಪದಲ್ಲಿ ನಾಡುಗಳು ಪ್ರಾಥಮಿಕವಾಗಿ ಕೃಷಿಯ ಘಟಕಗಳಾಗಿ ಕಾಣಿಸಿಕೊಳ್ಳುತ್ತವೆ. ಈ ವಿಭಾಗಗಳನ್ನೆ ಆಡಳಿತಾತ್ಮಕ ಉದ್ದೇಶಕ್ಕಾಗಿ ಆಳುವವರ್ಗ ಅಳವಡಿಸಿಕೊಂಡಿತು. ಪ್ರಾಚೀನ 'ವಿಷಯ'ಗಳ ಮುಂದುವರಿಕೆಯು 'ನಾಡು' ಹೆಸರಿನ ಜೊತೆಗೆ ಗುರುತಿಸಿಕೊಂಡಿದ್ದು, ಹೊಸದಾಗಿ ಪ್ರವರ್ಧಮಾನಕ್ಕೆ ಬಂದ ರಾಜ್ಯಗಳು ಆಡಳಿತಾತ್ಮಕ ಉದ್ದೇಶಕ್ಕಾಗಿ ಪ್ರಾಥಮಿಕ ಕೃಷಿಯ ಘಟಕಗಳನ್ನೇ ಅಳವಡಿಸಿಕೊಂಡವು"[106] ವೈ. ಸುಬ್ಬರಾಯಲು ಅವರು ದಾಖಲಿಸುವಂತೆ, ನಾಡು "ಚೋಳ ದೇಶದ ರಾಜಕೀಯ ಭೂಗೋಳದ ಕೀಲಿಕೈ ಆಗಿದೆ. ಈ ಕಾಲದ ಆಡಳಿತ ವ್ಯವಸ್ಥೆಯ ಬಹುಮುಖ್ಯ ಅಂಗವಾಗಿದೆ... ನಂತರ ಕೃಷಿಕ ಸಮಾಜದ ಮೂಲ ಘಟಕವಾಗಿದೆ"[107]

ನಾಡು ಮತ್ತು ನಾಡಗಾವುಂಡ ಎಂಬ ಕ್ಷೇತ್ರ ಮತ್ತು ಅಧಿಕಾರ ಸ್ಥಾನವೊಂದು ಉಗಮಗೊಂಡ ಬಗೆಯನ್ನು ಮನು ವಿ. ದೇವದೇವನ್ ಅವರು ಇನ್ನೂ ಸ್ಪಷ್ಟವಾಗಿ ವಿವರಿಸಿದ್ದಾರೆ:[108]

> "...ನಾಡುಗಳನ್ನು ನಿರ್ವಹಿಸಲು ಸಾಮಂತಿಕೆ ಅಥವಾ ಪರಂಪರಾಗತವಾದ ದೊರೆತನದ ಅಧಿಕಾರ ಪಡೆದಿದ್ದ ಮನೆತನಗಳಲ್ಲದೆ ನಾಳ್ಗಾವುಂಡ (ನಾಡಿನ ಗಾವುಂಡ) ಎಂಬ ಹೊಸ ವರ್ಗವೊಂದು ಶ್ರೀಪುರುಷನ ಕಾಲದಿಂದ ಬೆಳೆದು ಬಂತು. ಒಂಬತ್ತನೇ ಶತಮಾನದ ಕೊನೆಯ ಹೊತ್ತಿಗೆ ಈ ಎಲ್ಲ ವಿದ್ಯಮಾನಗಳೂ ಅತ್ಯಂತ ಸಂಕೀರ್ಣವಾದ ರಾಜಕೀಯ ವ್ಯವಸ್ಥೆಯೊಂದು ಜನ್ಮ ಪಡೆಯಲು ಕಾರಣವಾದವು. ಈ ವ್ಯವಸ್ಥೆಯಲ್ಲಿ ಗಾವುಂಡರು ನಿಯಂತ್ರಿಸುತ್ತಿದ್ದ ಗ್ರಾಮಗಳಿದ್ದವು. ಅವುಗಳ ಮೇಲೆ ಸಾಮಂತರು, ದೊರೆತನಗಳು ಮತ್ತು ನಾಳ್ಗಾವುಂಡರು ನಿಯಂತ್ರಿಸುತ್ತಿದ್ದ ನಾಡುಗಳಿದ್ದವು. ಕೆಲವು ಸಾಮಂತರು ತಮ್ಮ ಪರದೇಶವನ್ನಲ್ಲದೆ ಅಕ್ಕಪಕ್ಕದ ಇತರ ಪ್ರದೇಶಗಳನ್ನೂ ಅಧೀನದಲ್ಲಿಟ್ಟುಕೊಂಡಿದ್ದರು. ನಾಡುಗಳ ನಡುವೆ ಶ್ರೇಣೀಕರಣ ಪ್ರಾರಂಭವಾಗಿ ಹಲವು ಸಣ್ಣ ನಾಡುಗಳನ್ನೊಳಗೊಂಡ ದೊಡ್ಡ ನಾಡುಗಳು ಹುಟ್ಟಿಕೊಂಡವು. ಈ ಸಾಮಂತರುಗಳ ಮತ್ತು ನಾಡ ದೊರೆಗಳ ಮೇಲೆ ಮಂಡಲಗಳಿದ್ದವು. ಮಾಂಡಲಿಕ ಅಥವಾ ಮಂಡಲೇಶ್ವರರ ನಿಯಂತ್ರಣದಲ್ಲಿದ್ದ ಈ ಘಟಕದ ಮೇಲೆ ರಾಜ್ಯ ನೆಲೆಗೊಂಡಿತ್ತು. ಈ ಎಲ್ಲ ವಿದ್ಯಮಾನಗಳೂ ಅನಾವೃತವಾದದ್ದು ಕ್ರಿ.ಶ. 700–900 ಕಾಲದಲ್ಲಿ..."

ಹೀಗೆ ಉಗಮಗೊಂಡ ನಾಡು ಮತ್ತು ನಾಡಗಾವುಂಡ ಎಂಬ ವಿಭಾಗ ಹಾಗೂ ಪದವಿಯು ಉಗಮಗೊಂಡ ನಂತರ ನಾಡಿನ ಸ್ವರೂಪ ಹೇಗಿತ್ತು ಎಂಬುದನ್ನು ಗಮನಿಸುವುದು ಅವಶ್ಯಕ.

ದಕ್ಷಿಣ ಕರ್ನಾಟಕದಲ್ಲಿ ಪ್ರಭಾವಶಾಲಿಗಳಾಗಿದ್ದ ತಲಕಾಡಿನ ಗಂಗರನ್ನು ಚೋಳರು 11ನೇ ಶತಮಾನದ ಆರಂಭದಲ್ಲಿಯೇ ಸೋಲಿಸಿದರು. ಆ ಮೂಲಕ ದಕ್ಷಿಣ ಕರ್ನಾಟಕದಲ್ಲಿ ಹೊಸ ರಾಜ್ಯಾಡಳಿತ ಪದ್ಧತಿಯು ಜಾರಿಗೆ ಬಂದಿತು. ಚೋಳರ ರಾಜ್ಯದಲ್ಲಿ 'ನಾಡು' ಎಂಬುದು ಕೃಷಿ ಪ್ರಧಾನ ಸಂಸ್ಕೃತಿ ಮತ್ತು ಸಂಘಟಿತ ಕೃಷಿ ಉತ್ಪಾದನಾ ಘಟಕವಾಗಿತ್ತು. ಜೊತೆಗೆ ರಾಜ್ಯಾಡಳಿತದ ಸಣ್ಣ ಘಟಕವೂ ಆಗಿತ್ತು. ಪ್ರತಿಯೊಂದು ನಾಡು ಸರಾಸರಿ ಹತ್ತು ಅಥವಾ ಅದಕ್ಕಿಂತಲೂ ಹೆಚ್ಚಿನ ಹಳ್ಳಿಗಳನ್ನು ಒಳಗೊಂಡಿರುತ್ತಿತ್ತು. ಕೆಲವು ನಾಡುಗಳು 'ನಗರಂ' ಎನ್ನುವ ಒಂದು ಅಥವಾ ಎರಡು ಪಟ್ಟಣಗಳನ್ನು ಕೂಡ ಹೊಂದಿರುತ್ತಿದ್ದವು ಎಂಬುದಾಗಿ ನೊಬೊರು ಕರಾಶಿಮಾ ಅವರು ಅಭಿಪ್ರಾಯ ಪಟ್ಟಿದ್ದಾರೆ.[109]

ಸಾಮಾನ್ಯವಾಗಿ ನಾಡು ಎಂಬುದು ಒಂದು ಪ್ರಾದೇಶಿಕ ವಿಭಾಗವಾಯಿತು. ಪ್ರಾದೇಶಿಕ ಸಭೆಯು ನಾಡನ್ನು ಪ್ರತಿನಿಧಿಸುತ್ತದೆ. ಇದು ಚೋಳರ ಕಾಲದ 'ಊರ್'ಗಳ ಮಾದರಿಯ ಹಳ್ಳಿಗಳ ಪ್ರತಿನಿಧಿಗಳಿಂದ ರಚಿಸಲ್ಪಟ್ಟಿತ್ತು ಮತ್ತು ಸಂಘಟಿತ ಕೃಷಿ ಉತ್ಪಾದನೆಯನ್ನೂ ಒಳಗೊಂಡಿತ್ತು. ಶಾಸನವು ತಿಳಿಸುವಂತೆ "ನಾಡ ನಿವಾಸಿಗಳಿಂದ ನಾಡು ರೂಪುಗೊಂಡಿದೆ". ಚೋಳರ ಕಾಲದಲ್ಲಿ ನಾಡುಗಳನ್ನು 'ನಾಟ್ಟಾರ್' ಎಂದೂ ಕರೆಯುತ್ತಿದ್ದರು. ದಕ್ಷಿಣ ಕರ್ನಾಟಕವನ್ನು ಚೋಳರಿಂದ ಮುಕ್ತಗೊಳಿಸಿದ ಹೊಯ್ಸಳರು ತಮ್ಮ ಪ್ರಾಂತ್ಯಗಳನ್ನು ನಾಡುಗಳಾಗಿ ವಿಭಾಗಿಸಿದ್ದರು. ನಾಡುಗಳ ಮುಖ್ಯಾಧಿಕಾರಿಗಳನ್ನು ಹೆಗ್ಗಡೆ, ಕರಣ, ರಾಜ್ಯಾಧ್ಯಕ್ಷ ಕರಣ, ರಾಜ್ಯ ಹೆಗ್ಗಡೆ ಮುಂತಾಗಿ ಕರೆಯುತ್ತಿದ್ದರು. ಪ್ರಾಂತಾಧಿಕಾರಿಗೆ ಜವಾಬ್ದಾರರಾಗಿದ್ದ ಇವರು ಕಂದಾಯವನ್ನು ವಸೂಲು ಮಾಡುವುದು, ಹಣ ಬಟವಾಡೆ ಮಾಡುವುದು, ಸ್ಥಳೀಯ ವ್ಯಾಜ್ಯಗಳನ್ನು ತೀರ್ಮಾನಿಸುವುದು, ರಕ್ಷಣೆ ಮತ್ತು ಆಕ್ರಮಣ ಮುಂತಾದ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದರು.

ಎಂ. ಚಿದಾನಂದಮೂರ್ತಿ ಅವರು ಹೊಯ್ಸಳರ ಕಾಲದ ನಾಡು ಮತ್ತು ನಾಡಪ್ರಭುಗಳನ್ನು ಕುರಿತು ಹೀಗೆ ಹೇಳುತ್ತಾರೆ: "ಭೌಗೋಳಿವಾಗಿ ವಿಸ್ತಾರವಾಗಿದ್ದ ರಾಜ್ಯವನ್ನು ಆಳಿಕೆಯ ಸೌಕರ್ಯದ ದೃಷ್ಟಿಯಿಂದ ಮೂರು ಭಾಗಗಳಾಗಿ ವಿಂಗಡಿಸಿದ್ದರು– ಮಂಡಲ, ನಾಡು, ಊರು. ರಾಜಧಾನಿಯ ಸುತ್ತಮುತ್ತಣ ಭಾಗವನ್ನು ರಾಜನೇ ನೇರವಾಗಿ ಆಳುತ್ತಿದ್ದು, ಉಳಿದ ರಾಜ್ಯವನ್ನು ಮಂಡಲಗಳಾಗಿ ವಿಂಗಡಿಸಿ ಒಂದೊಂದು ಮಂಡಲಕ್ಕೂ ಮಂಡಲೇಶ್ವರರನ್ನು ನೇಮಿಸುತ್ತಿದ್ದನು. ಒಂದೊಂದು ಮಂಡಲವನ್ನೂ ಮತ್ತೆ ಬೇರೆ ಬೇರೆ ನಾಡುಗಳಾಗಿ ವಿಂಗಡಿಸಿ ಆಯಾ ನಾಡಿಗೆ 'ನಾಟ್ಪ್ರಭು' ಅಥವಾ 'ನಾಡಗಾವುಂಡು'ಗಳನ್ನು ನೇಮಿಸುತ್ತಿದ್ದರು... ಶಾಸನಗಳನ್ನು

ನೋಡಿದರೆ ರಾಜ, ಅವನ ಕೆಳಗೆ ಮಂಡಳೇಶ್ವರ, ಅವನ ಕೆಳಗೆ ನಾಡಪ್ರಭು, ಅವನ ಕೆಳಗೆ ಊರಗಾವುಂಡು – ಈ ಕ್ರಮದಲ್ಲಿ ಅಧಿಕಾರಿಗಳಿರುತ್ತಿದ್ದರು..."[110]

ವಿಜಯನಗರ ಕಾಲದ ನಾಡಪ್ರಭುಗಳನ್ನು ಕುರಿತು ಎಚ್.ಎಂ. ನಾಗರಾಜು ಅವರು ಹೀಗೆ ದಾಖಲಿಸುತ್ತಾರೆ: "ನಾಡು ಆಡಳಿತ ಘಟಕದ ಅಧಿಕಾರಿಯಾದ ನಾಡ–ಗೌಡ ಅಥವಾ ನಾಡ–ಪ್ರಭುವನ್ನು ಸಾಮಾನ್ಯವಾಗಿ ರಾಜ ಅಥವಾ ಅವನ ಅಧಿಕಾರಿಗಳು ನೇಮಿಸುತ್ತಿದ್ದರು. ಅದು ಆನುವಂಶಿಕವಾಗಿತ್ತು"[111]

ವಿಜಯನಗರ ಕಾಲದ ನಾಡಪ್ರಭುಗಳಿಗೆ ಸಂಬಂಧಿಸಿದಂತೆ ಎ.ವಿ. ವೆಂಕಟರತ್ನಂ ಅವರು ಶಾಸನಗಳ ಹಿನ್ನೆಲೆಯಲ್ಲಿ ಹೀಗೆ ವಿವರಿಸಿದ್ದಾರೆ: "ಗ್ರಾಮ ಸಮುದಾಯಗಳು ಅಥವಾ ನಾಡುಗಳು ಅಥವಾ ಕಂಪಣಗಳಲ್ಲಿ ನಾಡಗೌಡರು ಅಥವಾ ನಾಡಪ್ರಭುಗಳೆಂಬ ಅಧಿಕಾರಿಗಳು ಇದ್ದರು. ಕ್ರಿ.ಶ. 1419ರಲ್ಲಿ ಹಲವು ಗ್ರಾಮಗಳ "ನಾಡ ಗೌಡಿಕೆ"ಯನ್ನು ರಾಮಗೌಡನು ಹೊಂದಿದ್ದನು. ಕೃಷ್ಣದೇವರಾಯನ ಆಳ್ವಿಕೆಯ ಒಂದು ಶಾಸನ "...ನಾಡಗೌಡರಿಗೆ ಸಂಬಂಧಿಸಿದುದಾಗಿದೆ. ಮತ್ತೊಂದು ಶಾಸನ ವಿಜಯನಗರದ ನಾಡಗೌಡರೆಲ್ಲರ ಸಭೆ ಭೂದಾನ ಮಾಡಲು ಸೇರಿತ್ತೆಂದು ತಿಳಿಸುತ್ತದೆ.

ಕ್ರಿ.ಶ. 1351ರಲ್ಲಿ ತಾಳವಾಡಿ ಬಮ್ಮಣ್ಣ, ಗಂಗವಾಡಿ ಮಾದಣ್ಣ ಮತ್ತು ಅನೇಕ ಇತರರು ಕುಲರ್ವಲಿ ನಾಡು ಪ್ರಭುಗಳಾಗಿದ್ದರು. ಕ್ರಿ.ಶ. 1377ರಲ್ಲಿ ನಸವಂದುನಾಡಿನ ಸಮಸ್ತ ನಾಡಪ್ರಭುಗಳು ದಾನಕ್ಕೋಸ್ಕರ ಸೇರಿದ್ದರು... ಕ್ರಿ.ಶ. 1537ರಲ್ಲಿ ಸದಿಪನೆಂಬುವನು ತಲಕಾಡು ನಾಡಿನ "ಪ್ರಭು"ವಾಗಿದ್ದನು. ಕ್ರಿ.ಶ. 1543ರಲ್ಲಿ ಸಿತಾಕಲ್ ಗಂಗಪ್ಪ ನಾಯಕ ಕೊಳಲ ಸೀಮೆಯ ನಾಡಗೌಡಿಕೆಯನ್ನು ಹೊಂದಿದ್ದನು"[112]

## 1.7 ನಾಡು–ನಾಡಪ್ರಭುಗಳ ಕರ್ತವ್ಯ ಮತ್ತು ಸವಲತ್ತುಗಳು

ವಿಜಯನಗರದ ಆಡಳಿತಾವಧಿಯಲ್ಲಿ ನಾಡಿನ ಸಭೆಯನ್ನು 'ನಾಡು' ಎಂದು ಕರೆಯಲಾಗುತ್ತಿತ್ತು. ಈ ಸಭೆಯಲ್ಲಿ ನಾಡಿನ ಗ್ರಾಮಗಳ ಮುಖ್ಯಸ್ಥರು ಮತ್ತು ನಾಡಿನ ಅಧಿಕಾರಿಗಳು, ನಾಡಿನ ನಿವಾಸಿಗಳ ಪ್ರತಿನಿಧಿಗಳು ಹಾಗೂ ವರ್ತಕ ಶ್ರೇಣಿಗಳ ಮತ್ತು ನಾಡಿನ ಅಗ್ರಹಾರಗಳ ಪ್ರತಿನಿಧಿಗಳು ಭಾಗವಹಿಸುತ್ತಿದ್ದರು. ಸಭೆಯ ಸದಸ್ಯರನ್ನು 'ನಾಟ್ಟವರ್' ಎಂದು ಕರೆಯುತ್ತಿದ್ದರು. ನಾಡಗಾವುಂಡ, ನಾಡಪ್ರಭು ಅಥವಾ ನಾಡಪೆರ್ಗಡೆಯು ನಾಡಿನ ಮುಖ್ಯಸ್ಥನಾಗಿರುತ್ತಿದ್ದ. ನಾಡಪ್ರಭುವಿನ ನೇತೃತ್ವದಲ್ಲಿ ನಾಡು ಯಾವಾಗಲೂ ಸಭೆ ಸೇರುತ್ತಿತ್ತು.

ನಾಡಿನ ಸಭೆಯು ಸಾಮಾನ್ಯವಾಗಿ ಚಾವಡಿ, ಮಂಟಪದಲ್ಲಿ ನಡೆಯುತ್ತಿತ್ತು. ನಾಡಸಭೆಯನ್ನು ಸಾಮಾನ್ಯವಾಗಿ ಸರ್ಕಾರಿ ಅಧಿಕಾರಿಗಳು ಕರೆಯುತ್ತಿದ್ದರು. ಕೆಲವೊಮ್ಮೆ ಸ್ವಪ್ರೇರಣೆಯಿಂದಲೂ ಸೇರುತ್ತಿದ್ದವು. ತೆರಿಗೆ ರದ್ಧತಿಗೆ ಸಂಬಂಧಪಟ್ಟಂತೆ ಕೇಂದ್ರದ ಅಧಿಕಾರಿಗಳು ಸ್ಥಳೀಯ ಸಂಸ್ಥೆಗಳ ಮತ್ತು ಪೌರಸಂಸ್ಥೆಗಳ ಅನುಮತಿಯಿಂದ ತೆರಿಗೆಗಳನ್ನು ಮನ್ನಾಮಾಡುತ್ತಿದ್ದರು ಮತ್ತು ತೆರಿಗೆಗಳನ್ನು ದಾನಮಾಡುತ್ತಿದ್ದರು.[113]

ನಾಡಪ್ರಭುವು ರಾಜನಿಂದ ನೇಮಕಗೊಳ್ಳುತ್ತಿದ್ದನು. ನಾಡಪ್ರಭುವಿನ ಸ್ಥಾನ ವಂಶಪಾರಂಪರ್ಯ ವಾಗಿರುತ್ತಿತ್ತು. ನಾಡಪ್ರಭು ಕೆಲವೊಮ್ಮೆ ಗ್ರಾಮದ ಮುಖಂಡನೂ ಆಗಿರುತ್ತಿದ್ದ. ನಾಡು ಎಂಬುದು ಜನರ ಸಂಸ್ಥೆಯಾಗಿತ್ತು. ಅದು ಜನರ ಅಗತ್ಯಗಳನ್ನು ಪೂರೈಸುತ್ತಿತ್ತು.[114]

ನಾಡಪ್ರಭುವಿನ ಸಂಭಾವನೆಯು ಮಾನ್ಯಭೂಮಿ, ಆಯ (ಶುಲ್ಕ), ಸರಕುಗಳ ಮೇಲಿನ ಸುಂಕ, ಮನೆತೆರಿಗೆ ಇತ್ಯಾದಿಗಳಿಂದ ಬರುತ್ತಿತ್ತು. ನಾಡಪ್ರಭುವಿನ ಪ್ರಮುಖ ಕರ್ತವ್ಯಗಳೆಂದರೆ– ತೆರಿಗೆಗಳ ಸಂಗ್ರಹ, ನ್ಯಾಯವಿತರಣೆ ಮತ್ತು ಅವನ ಹತೋಟಿಯಲ್ಲಿದ್ದ ದೇವಸ್ಥಾನಗಳ ಜೀರ್ಣೋದ್ಧಾರ ಮತ್ತು ಮೇಲ್ವಿಚಾರಣೆ, ಮುಂತಾದವುಗಳಾಗಿದ್ದವು. ಗ್ರಾಮಗಳಲ್ಲಿ ಸೇನಬೋವನಿದ್ದಂತೆ, ನಾಡಿನಲ್ಲಿಯೂ ನಾಡಸೇನಬೋವ ಇರುತ್ತಿದ್ದನು. ಇವರು ತುಂಬಾ ಪ್ರಭಾವಿಗಳಾಗಿದ್ದರು. ಈತ ನಾಡಿಗೆ ಸಂಬಂಧಿಸಿದ ಎಲ್ಲಾ ಕಂದಾಯ ಲೆಕ್ಕದ ದಾಖಲೆಗಳನ್ನು ನೋಡಿಕೊಳ್ಳುತ್ತಿದ್ದನು.[115]

ಒಟ್ಟಾರೆ, 'ನಾಡು', 'ನಾಡಪ್ರಭು' ಎಂಬುದು ಚಾರಿತ್ರಿಕ ಕಾಲಘಟ್ಟದಲ್ಲಿ ತನ್ನ ಸ್ವರೂಪವನ್ನು ಬದಲಿಸಿಕೊಳ್ಳುತ್ತಾ ಬಂದಿದೆ. ವಿಜಯನಗರ ಕಾಲಘಟ್ಟದಲ್ಲಿ ರಾಜಕೀಯ ಘಟಕವಾಗಿ ಮತ್ತು ಅದರ ಮುಖ್ಯಸ್ಥ ವಿಜಯನಗರ ಮತ್ತು ವಿಜಯನಗರೋತ್ತರ ಕಾಲಘಟ್ಟದಲ್ಲಿ ಸ್ಥಳೀಯವಾಗಿ ಮಹತ್ವದ ಪಾತ್ರ ವಹಿಸಿರುವುದನ್ನು ಕಾಣಬಹುದು.

ಸ್ಥಳೀಯವಾಗಿ ಕಂದಾಯ ಸಂಗ್ರಹಿಸುವ ಮತ್ತು ಜನತೆಗೆ ಶಾಂತಿ ಹಾಗೂ ಭದ್ರತೆಯನ್ನು ಕಲ್ಪಿಸುತ್ತಾ, ಮಹಾರಾಜನ ಕೋರಿಕೆಯ ಮೇರೆಗೆ ಸೈನಿಕ ಸಹಾಯವನ್ನು ನೀಡುವ ಕಾರ್ಯದಲ್ಲಿ ತೊಡಗುತ್ತಿದ್ದರು. ಒಟ್ಟಾರೆ, ಜನತೆಗೆ ಹತ್ತಿರವಾಗಿದ್ದ ನಾಡಪ್ರಭುಗಳು ಜನರ ನೋವು–ನಲಿವುಗಳನ್ನು; ಸುಖ–ದುಃಖಗಳನ್ನು ಅತ್ಯಂತ ನಿಕಟವಾಗಿ ಬಲ್ಲವರಾಗಿದ್ದರು. ಆದ್ದರಿಂದ ಜನತೆ ತಮ್ಮ ಮೆಚ್ಚಿನ ಪ್ರಭುಗಳನ್ನು ಕುರಿತು ಲಾವಣಿಗಳನ್ನು ಕಟ್ಟಿ ಹಾಡಿದ್ದಾರೆ. ತಮ್ಮ ನಡುವೆಯೇ

ಇದ್ದವರನ್ನು ವಿಶಿಷ್ಟ ವ್ಯಕ್ತಿಗಳು, ದೈವಾಂಶ ಸಂಭೂತರು ಎಂಬಂತೆ ಕಥೆಗಳನ್ನು ಹೇಳುತ್ತಾರೆ. ಒಟ್ಟಾರೆ, 'ಸಾಮಾನ್ಯರ ನಡುವಿನ ಅಸಾಮಾನ್ಯರು' ಎಂಬಂತೆ ಚಿತ್ರಿಸಿದ್ದಾರೆ.

## 1.8 ನಾಡಪ್ರಭುವಿನಿಂದ ನಾಯಕತನದ ಕಡೆಗೆ

ಸ್ಥಳೀಯ ಮಟ್ಟದ ಆಡಳಿತ ಮುಖ್ಯಸ್ಥನಾಗಿರುತ್ತಿದ್ದ ನಾಡಪ್ರಭು ಒಂದು ವಂಶಪಾರಂಪರ್ಯವಾದ ಸ್ಥಾನವಾಗಿತ್ತು ಎಂಬುದನ್ನು ಮೇಲೆ ನೋಡಿದ್ದೇವೆ. ಈ ನಾಡಪ್ರಭುಗಳು ಸ್ಥಳೀಯವಾಗಿ ಮಾಡುತ್ತಿರುವ ಕಾರ್ಯಗಳು ಮತ್ತು ನಾಡಿನ ರಕ್ಷಣೆಯ ವಿಚಾರದಲ್ಲಿ ತೋರ್ಪಡಿಸಿದ ಕ್ಷಮತೆ ಮತ್ತು ಪರಾಕ್ರಮಗಳಿಂದಾಗಿ ತನ್ನ ರಾಜನ ಗಮನ ಸೆಳೆದು ಉನ್ನತ ಅಧಿಕಾರಸ್ಥ ಸ್ಥಾನಗಳಿಗೆ ಪದೋನ್ನತಿ ನೀಡುವ ಪರಿಪಾಠ ಹೊಯ್ಸಳ ರಾಜ್ಯದಲ್ಲಿ ಇತ್ತು. ಉದಾಹರಣೆಗೆ, ಮಧುಗಿರಿ ಮಹಾನಾಡಪ್ರಭುಗಳ ಮನೆತನದ ವೀರಪ್ಪಗೌಡ ಮತ್ತು ಅವನ ಸೋದರರ ಪೂರ್ವಜರು ಹೊಯ್ಸಳರ ಸಾಮ್ರಾಜ್ಯದ ಪೂರ್ವಭಾಗದ ಸಾಮಂತ ದೊರೆಗಳಲ್ಲಿ ನಾಡಗೌಡರಾಗಿದ್ದು ತಮ್ಮ ಸಾಹಸ, ಧೈರ್ಯ, ಪ್ರಾಮಾಣಿಕತೆ, ಕರ್ತವ್ಯನಿಷ್ಠೆಯಿಂದ ರಾಜನ ಪ್ರೀತಿಗೆ ಪಾತ್ರರಾಗಿ ಅನೇಕ ಪ್ರದೇಶಗಳನ್ನು ಕೊಡುಗೆ ಮಾನ್ಯವಾಗಿ ಪಡೆದು ಉನ್ನತ ಪದವಿಗೇರುತ್ತಾರೆ ಎಂದು ಆರ್.ಕಾವಲಮ್ಮ ಅವರು ತೋರಿಸಿಕೊಟ್ಟಿದ್ದಾರೆ.[116] ಇದೇ ರೀತಿ ಬೆಂಗಳೂರಿನ 1327ರ ದೊಮ್ಮಲೂರು ಶಾಸನ[117], ಚಿಕ್ಕಜಾಲದ 1328ರ ಶಾಸನ[118], 1341ರ ನಾಗಶೆಟ್ಟಿಹಳ್ಳಿಯ ಶಾಸನ[119] ಮುಂತಾದ ಶಾಸನಗಳಲ್ಲಿ ಯಲಹಂಕನಾಡಿನ ಮಯಿಲೇಗೌಡ, ಮಾರೇಗೌಡ, ಮಲ್ಲಯ್ಯಗೌಡ, ತಾಮಿಯಪ್ಪ ಮುಂತಾದವರನ್ನು ಹೆಸರಿಸುತ್ತದೆ. ಈ ವ್ಯಕ್ತಿಗಳು ಯಲಹಂಕ ನಾಡಿನ ಮೂಲಪುರುಷ ರಣಭೈರೇಗೌಡ ಮತ್ತು ಅವನ ಸೋದರರೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[120] ಈ ಬಗ್ಗೆ ನಿರ್ದಿಷ್ಟ ಆಧಾರಗಳ ಕೊರತೆ ಇದೆಯಾದರೂ, ಇವರು ಯಲಹಂಕ ನಾಡಪ್ರಭುಗಳ ಮನೆತನದವರೇ ಆಗಿದ್ದರೆ, ಮಧುಗಿರಿಯ ನಾಡಪ್ರಭುಗಳ ಮನೆತನದವರಂತೆಯೇ ಯಲಹಂಕ ನಾಡಪ್ರಭುಗಳೂ ಕೂಡ ತಮ್ಮ ಸಾಹಸ, ಧೈರ್ಯ, ನಿಷ್ಠೆ ಮತ್ತು ಪ್ರಾಮಾಣಿಕತೆಯಿಂದಾಗಿ ವಿಜಯನಗರದ ಅರಸರಿಂದ ನಾಯಕತನ ಪಡೆದರೆಂದು ಊಹಿಸಲು ಅವಕಾಶವಿದೆ. ಏಕೆಂದರೆ, 1532ರ ದಾಸರಹಳ್ಳಿ ಶಾಸನದಲ್ಲಿ ಅಚ್ಯುತರಾಯರು ಕೆಂಪದೇವರಸರಿಗೆ ಯಲಹಂಕ ನಾಡಿನ ನಾಯಕತನ ಕೊಟ್ಟಬಗ್ಗೆ ಉಲ್ಲೇಖವಿದೆ. ಹೀಗೆ ನಾಡಪ್ರಭುಗಳು ಪಾಳೆಯಗಾರರು ಎಂಬ ಹೆಸರಿನಿಂದಲೂ ಪ್ರವರ್ಧಮಾನಕ್ಕೆ ಬಂದಿರುವುದು ಉಂಟು.

ದಕ್ಷಿಣ ಕರ್ನಾಟಕದ ಪ್ರಮುಖ ನಾಡಪ್ರಭುಗಳು ಮತ್ತು ಪಾಳೆಯಗಾರ ಮನೆತನಗಳಲ್ಲಿ ಮುಖ್ಯವಾದವುಗಳೆಂದರೆ– ಯಲಹಂಕದ ನಾಡಪ್ರಭುಗಳು, ಮಧುಗಿರಿಯ ಮಹಾನಾಡಪ್ರಭುಗಳು, ಚನ್ನಪಟ್ಟಣದ ಪಾಳೆಯಗಾರರು, ಸುಗುಟೂರಿನ ಅರಸರು, ಆವತಿ ನಾಡಪ್ರಭುಗಳು, ಮೈಸೂರಿನ ಒಡೆಯರು, ಚಿತ್ರದುರ್ಗದ ಪಾಳೆಯಗಾರರು, ತರಿಕೆರೆಯ ನಾಯಕರು ಮುಂತಾದವರು.

## 1.9 ನಾಯಕರು ಮತ್ತು ಪಾಳೆಯಗಾರರು ಯಾರು?

ವಿಜಯನಗರೋತ್ತರ ಕಾಲದಲ್ಲಿ ನಾಯಕರು ಮತ್ತು ಪಾಳೆಯಗಾರರು ಯಾರು ಎನ್ನುವ ಬಗೆಗೆ ಗೊಂದಲ ಇವೆ. ವಿಜಯನಗರ ಸಾಮ್ರಾಜ್ಯದಲ್ಲಿ ಭಾಗಶಃ ಸ್ವಾತಂತ್ರ್ಯವನ್ನು ಹೊಂದಿದ ಸಾಮಂತರಿದ್ದರು. ಅವರಿಗೆ ಸಾಮಂತ, ನಾಯಕ, ದಂಡನಾಯಕ, ಮಂಡಲೇಶ್ವರ, ರಾಜ, ಮಹಾರಾಜ, ಒಡೆಯರ್ ಮುಂತಾದ ವಿವಿಧ ಹೆಸರುಗಳಿದ್ದವು. ಅವರಿಗೆ ಸಮದರ್ಜೆ ಮತ್ತು ಅಧಿಕಾರವಿದ್ದಿತು. ರಾಜನು ಒಬ್ಬ ನಾಯಕನಿಗೆ ಅಥವಾ ಪಾಳೆಯಗಾರನಿಗೆ ಸೈನಿಕ ಸೇವೆಯ ಷರತ್ತಿನ ಮೇಲೆ ಭೂಮಿಯನ್ನು ಕೊಡುತ್ತಿದ್ದುದೇ "ನಾಯಂಕರ ಪದ್ಧತಿ"[121]

ವಿಜಯನಗರದ ರಾಜರು ತಮ್ಮ ದಿಗ್ವಿಜಯದ ಕಾಲದಲ್ಲಿ ತಮಗೆ ಎದುರಾದ ರಾಜರನ್ನು ಸೋಲಿಸಿ, ಕೆಲವು ನಿಬಂಧನೆಗಳ ಮೇಲೆ ಪುನಃ ರಾಜ್ಯವನ್ನು ಅವರಿಗೆ ಹಿಂತಿರುಗಿಸುತ್ತಿದ್ದರು. ಮುಖ್ಯ ನಿಬಂಧನೆಗಳೆಂದರೆ– ಸೋತ ರಾಜನು ವಿಜಯನಗರದ ಸಾಮ್ರಾಟನಿಗೆ ನಿಷ್ಠನಾಗಿರಬೇಕಿತ್ತು. ದಾನವಾಗಿ ನೀಡಿದ ಪ್ರದೇಶದ ರಕ್ಷಣೆ ಮಾಡಬೇಕಾಗಿತ್ತು. ಅದಕ್ಕಾಗಿ ನಿರ್ದಿಷ್ಟ ಸಂಖ್ಯೆಯ ಸೇನೆಯನ್ನು ನಿರ್ವಹಿಸಬೇಕಿತ್ತು. ಅಗತ್ಯಬಿದ್ದಾಗ ಸಾಮ್ರಾಟನ ನೆರವಿಗೆ ತನ್ನ ಸೇನೆಯ ಜೊತೆಗೆ ತೆರಳಬೇಕಿತ್ತು. ಅಲ್ಲದೆ, ತನಗೆ ವಹಿಸಿರುವ ಪ್ರದೇಶದ ಕಂದಾಯ, ತೆರಿಗೆಗಳನ್ನು ವಸೂಲಿ ಮಾಡಿ ಅದರಲ್ಲಿ 1/3 ಭಾಗವನ್ನು ತನ್ನ ಸಾರ್ವಭೌಮರಿಗೆ ಪ್ರತಿವರ್ಷ ಸೆಪ್ಟಂಬರ್ ತಿಂಗಳಿನಲ್ಲಿ ಸಲ್ಲಸಬೇಕಾಗಿತ್ತು.[122] ಈ ಬಗೆಗೆ ಸಿ.ಆರ್. ಶ್ಯಾಮಲ ಅವರ ಅಭಿಪ್ರಾಯ ಮತ್ತಷ್ಟು ಸ್ಪಷ್ಟನೆಯನ್ನು ಒದಗಿಸುತ್ತದೆ: "ಅಮರನಾಯಕರು ಯುದ್ಧದ ಸಮಯದಲ್ಲಿ ತಮ್ಮ ಸೈನ್ಯವನ್ನು ರಾಜನ ಸೇನಾಬಿಡಾರಕ್ಕೆ ಕಳುಹಿಸಿ, ಪ್ರಭುಗಳ ದರ್ಶನಕ್ಕೆ ಹೋದಾಗಲೆಲ್ಲಾ ರಾಜಧಾನಿಯ ಹೊರಗಿನ 'ಪಾಳೆಯ' ಎಂಬ ಸೇನಾಬಿಡಾರದಲ್ಲಿ ನಿಲ್ಲುತ್ತಿದ್ದರು. 'ಪಾಳೆಯ' ಎಂದರೆ ದಂಡು, ಸೈನ್ಯ, ಸೇನಾವಿಭಾಗ, ಶಿಬಿರ, ಠಾಣ್ಯ. ಇದರ ಮುಖ್ಯಸ್ಥನೇ 'ಪಾಳೆಯಗಾರ'. ವಿಜಯನಗರ ಸಾಮ್ರಾಜ್ಯದಲ್ಲಿ ಇಂತಹ ಇನ್ನೂರು ಜನ ಅಮರನಾಯಕರು ಅಥವಾ ಪಾಳೆಯಗಾರರು ಇದ್ದರೆಂಬುದು ತಿಳಿದುಬರುತ್ತದೆ. ಆದರೆ ಕೆಲವು ಪಾಳೆಯಗಾರರು ವಿಜಯನಗರದ ಕಾಲಕ್ಕೂ ಮುಂಚಿನಿಂದಲೇ ಸಣ್ಣ ಸಣ್ಣ ರಾಜ್ಯಗಳಲ್ಲಿ ಆಳುತ್ತಿದ್ದರೆಂಬುದು ಶಾಸನಗಳಿಂದ ತಿಳಿದು

ಬರುತ್ತದೆ"[123] ಅಂದರೆ, ಮೊದಲಿದ್ದ ಸ್ಥಳೀಯ ಮುಖ್ಯಸ್ಥರಾದ ನಾಡಪ್ರಭುಗಳು, ನಾಯಕರು ಮುಂತಾದವರು ಮುಂದೆ ವಿಜಯನಗರ ಕಾಲದಲ್ಲಿ ಅಮರನಾಯಕರು ಅಥವಾ ಪಾಳೆಯಗಾರರಾಗಿ ಪ್ರವರ್ಧಮಾನಕ್ಕೆ ಬಂದರು.

ಇದನ್ನು ಅರ್ಥಮಾಡಿಕೊಳ್ಳಲು ವಿಜಯನಗರ ಕಾಲದ ರಾಜ್ಯ ವ್ಯವಸ್ಥೆಯನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ವಿಜಯನಗರದ ರಾಜ್ಯ ವ್ಯವಸ್ಥೆಯನ್ನು ಕುರಿತು ಪ್ರಧಾನವಾಗಿ ಮೂರು ವಾದಗಳನ್ನು ವಿದ್ವಾಂಸರು ಮುಂದಿಟ್ಟಿದ್ದಾರೆ. ಮೊದಲು ಕೆ.ಎ. ನೀಲಕಂಠಶಾಸ್ತ್ರಿ ಅವರು ಕೇಂದ್ರೀಕೃತ ಸರ್ಕಾರ ಮಾದರಿಯನ್ನು ಮಂಡಿಸಿದರು. ಇವರ ವಾದವನ್ನು ತಿರಸ್ಕರಿಸಿದ ಅಮೇರಿಕಾದ ಇತಿಹಾಸಕಾರ ಬರ್ಟನ್ ಸ್ಟೈನ್ ಅವರು 'ವಿಘಟಿತ ರಾಜ್ಯ' (ಸೆಗ್‌ಮೆಂಟರಿ ಸ್ಟೇಟ್) ಸಿದ್ಧಾಂತವನ್ನು ಮಂಡಿಸಿದರು.[124] ಅವರ ಪ್ರಕಾರ ಪ್ರತಿಯೊಂದು ನಾಡು ಸ್ವತಂತ್ರ ಘಟಕವಾಗಿದ್ದು, ತಮ್ಮದೇಯಾದ ಆಡಳಿತ, ಆಡಳಿತಗಾರರು ಮತ್ತು ಕೇಂದ್ರ ಸ್ಥಾನಗಳನ್ನು ಹೊಂದಿದ್ದು, ಸ್ವತಂತ್ರ ಆಡಳಿತ ನಡೆಸುವ ಸಾಮರ್ಥ್ಯವನ್ನು ಹೊಂದಿದ್ದವು ಎಂದು ವಾದಿಸಿದರು. ಅವರ ವಾದವನ್ನು ವಿಮರ್ಶೆಗೆ ಒಳಪಡಿಸಿದ ಜಪಾನಿನ ಇತಿಹಾಸಕಾರ ನೊಬುರು ಕರಾಶಿಮ ಅವರು 'ಊಳಿಗಮಾನ್ಯ ರಾಜ್ಯ ವ್ಯವಸ್ಥೆ' (ಫ್ಯೂಡಲ್ ಸ್ಟೇಟ್) ವಾದವನ್ನು ಮಂಡಿಸಿದರು.[125] ಅವರ ಪ್ರಕಾರ ಅರಸ, ಸಾಮಂತ, ಮಧ್ಯವರ್ತಿಗಳು ಮತ್ತು ರೈತರು ಈ ಮಾದರಿಯಲ್ಲಿ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯೊಂದು ವಿಜಯನಗರ ರಾಜ್ಯದಲ್ಲಿ ರೂಪುಗೊಂಡಿತ್ತು ಎನ್ನುತ್ತಾರೆ. ಮೇಲ್ನೋಟಕ್ಕೆ ಈ ಎರಡೂ ವಾದಗಳು ಅಧಿಕಾರ ವಿಕೇಂದ್ರಿಕರಣವನ್ನು ಪ್ರತಿಪಾದಿಸುತ್ತವೆಯಾದರೂ ಭಿನ್ನಭಿನ್ನ ಸ್ವರೂಪವನ್ನು ಹೊಂದಿವೆ. ವಿದೇಶಿ ವಿದ್ವಾಂಸರಲ್ಲದೆ ದೇಶೀಯ ವಿದ್ವಾಂಸರಾದ ಟಿ.ವಿ. ಮಹಾಲಿಂಗಂ, ಎ.ವಿ. ವೆಂಕಟರತ್ನಂ, ಪಿ.ಬಿ. ದೇಸಾಯಿ, ಜಿ.ಎಸ್. ದೀಕ್ಷಿತ್ ಮೊದಲಾದ ವಿದ್ವಾಂಸರೂ ಕೂಡ ಸಾಮಂತ–ಒಕ್ಕೂಟ–ವಿಕೇಂದ್ರೀಕೃತ ರಾಜ್ಯಾಡಳಿತ ವ್ಯವಸ್ಥೆಯನ್ನು ವಿಜಯನಗರ ಹೊಂದಿತ್ತೆಂದು ಗುರುತಿಸುತ್ತಾರೆ. ಹೀಗಾಗಿ ವಿಜಯನಗರ ಸಾಮ್ರಾಜ್ಯ ಪತನ ಹೊಂದಿದ ನಂತರ ಸಾಮಂತರುಗಳು ಸ್ವತಂತ್ರವಾಗಿಯೇ ಉಳಿದು ತಮ್ಮದೇ ಆಳ್ವಿಕೆಯನ್ನು ನಡೆಸಲಾರಂಭಿಸಿದರು. ವಿದೇಶಿ ವಿದ್ವಾಂಸರ ವಾದಗಳಿಗೆ ಭಿನ್ನವಾದ ವಾದವೊಂದನ್ನು ಡಿ.ಎನ್. ಯೋಗೀಶ್ವರಪ್ಪ ಅವರು ಪ್ರತಿಪಾದಿಸುತ್ತಾರೆ. ಅವರ ಪ್ರಕಾರ: "ವಿಜಯನಗರ ಸಾಮ್ರಾಜ್ಯದ ರಾಜಕೀಯ ವ್ಯವಸ್ಥೆಗೆ ಮೂರು ಪ್ರಧಾನ ಲಕ್ಷಣಗಳಿದ್ದವು. 1) ಊಳಿಗಮಾನ್ಯ ಪದ್ಧತಿ 2) ಸಂಯುಕ್ತತೆಯ ಪದ್ಧತಿ 3) ವೀಕೇಂದ್ರೀಕರಣ ಪದ್ಧತಿ. ಮೊದಲ ಪದ್ಧತಿ ಮುಂದೆ ಪಾಳೆಯಗಾರ ಅಥವಾ ನಾಯಕ ಎಂಬ ರಾಜಕೀಯ ಅಧಿಕಾರ ವರ್ಗವನ್ನು

ಹುಟ್ಟುಹಾಕಿತು. 16ನೇ ಶತಮಾನದ ಆರಂಭ ಕಾಲ ಅಂದರೆ ಕೃಷ್ಣದೇವರಾಯನ ಆಳ್ವಿಕೆಯ ಕಾಲ (ಕ್ರಿ.ಶ. 1509–1529) ಈ ದೃಷ್ಟಿಯಿಂದ ಮಹತ್ವಪೂರ್ಣವಾದುದು".[126] ಎಂದಿದ್ದಾರೆ.

ಅಮರಂ ಮತ್ತು ನಾಯಕ ಈ ಎರಡರ ಅರ್ಥವನ್ನು ಕುರಿತು ವಿದ್ವಾಂಸರಾದ ಲಕ್ಷ್ಮಣ್ ತೆಲಗಾವಿ ಅವರು ಹೀಗೆ ದಾಖಲಿಸಿದ್ದಾರೆ: "ಅರಸನಿಗೆ ನಿರ್ದಿಷ್ಟ ಸಂಖ್ಯೆಯಲ್ಲಿ ಕಾಲಾಳು, ಆನೆ, ಕುದುರೆಗಳನ್ನು ಪೂರೈಸುವ ಕರಾರಿನ ಮೇಲೆ ಒಂದು ಅಥವಾ ಹಲವು ಗ್ರಾಮಗಳನ್ನು ಉಂಬಳಿ ಹಾಕಿಕೊಡುವ ಪದ್ಧತಿಗೆ 'ಅಮರ'ವೆಂಬ ಹೆಸರು ಬಂದಿತು" ಎಂದಿದ್ದಾರೆ. ಮುಂದುವರೆದು "ನಾಯಕನು ಮೂಲತಃ ಸೈನಿಕ ಸೇವೆಯನ್ನು ಸಲ್ಲಿಸುವ ಮುಖಂಡನಾಗಿರುತ್ತಿದ್ದ. ಇದಕ್ಕಾಗಿ ಅವನಿಗೆ ಅಮರಂ ಅಥವಾ ಶಾಶ್ವತ ಉಂಬಳಿಯನ್ನು ಹಾಕಿಕೊಡಲಾಗಿದ್ದಿತು. ಅಂದರೆ ಸಾಮ್ರಾಜ್ಯಕ್ಕೆ ಅಥವಾ ಸರಕಾರಕ್ಕೆ ನಿಯಮಿತವಾಗಿ ಸೈನ್ಯವನ್ನು ನಿರ್ದಿಷ್ಟ ಸಂಖ್ಯೆಯ ಕಾಲಾಳು ಹಾಗೂ ಆನೆ, ಕುದುರೆ ಇತ್ಯಾದಿ ಸೈನ್ಯ ಸಾಮಗ್ರಿಗಳನ್ನು ಪೂರೈಸುವ ಕರಾರಿನ ಮೇಲೆ ರಾಜನಿಂದ ಒಂದು ಅಥವಾ ಹಲವು ಗ್ರಾಮಗಳನ್ನು ಉಂಬಳಿ/ ಇನಾಮಾಗಿ ಪಡೆದುಕೊಳ್ಳುತ್ತಿದ್ದ ಸ್ಥಳೀಯ ಅಧಿಕಾರಿಯೇ ಈ ನಾಯಕ. ನಾಯಕತನ ಅಥವಾ ನಾಯಂಕರಮ್ ವ್ಯವಸ್ಥೆಯೆಂದರೆ ಇದೆ" ಎಂದು ಎರಡೂ ಪದಗಳ ಅರ್ಥವಿವರಣೆಯನ್ನು ನೀಡಿದ್ದಾರೆ.[127]

"ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಪಾಳೆಯಗಾರರನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಮೈಸೂರಿನಲ್ಲಿ 'ಒಡೆಯರು', ಕೆಳದಿಯಲ್ಲಿ 'ಅರಸರು', 'ನಾಯಕರು', ಕಿತ್ತೂರಿನಲ್ಲಿ 'ದೇಸಾಯಿ', ಮಾಗಡಿ ಮತ್ತು ತುಮಕೂರುಗಳಲ್ಲಿ 'ಗೌಡ', ಯಲಹಂಕದಲ್ಲಿ 'ನಾಡಪ್ರಭುಗಳು', ದಕ್ಷಿಣ ಕನ್ನಡನಾಡಿನಲ್ಲಿ 'ಹೆಗ್ಗಡೆ', 'ಬಲ್ಲಾಳ', ಉಳಿದಕಡೆ 'ನಾಯಕ'ರೆಂದು ಗುರುತಿಸಲ್ಪಡುತ್ತಾರೆ. ಕೆಲವಡೆಗಳಲ್ಲಿ 'ಬೇಹುಳ' ಎಂದೂ ಪ್ರಸಿದ್ಧರಾಗಿದ್ದಾರೆ. ತುಮಕೂರಿನ ಮಧುಗಿರಿಯಲ್ಲಿ 'ಮಹಾನಾಡಪ್ರಭುಗಳು' ಎಂದೂ ಪ್ರಸಿದ್ಧರಾಗಿದ್ದಾರೆ. ಪಾಳೆಯಗಾರರು ತಮ್ಮನ್ನು 'ರಾಜಾ' ಎಂದೂ ಕರೆದುಕೊಂಡಿದ್ದಾರೆ" ಎಂಬುದಾಗಿ ಸಿ.ಆರ್. ಶ್ಯಾಮಲ ಅವರು ಅಭಿಪ್ರಾಯ ಪಡುತ್ತಾರೆ.[128] ಈ ಪದನಾಮಗಳು ಮೇಲ್ನೋಟಕ್ಕೆ ಒಂದೇ ರೂಪವಾಗಿ ಕಾಣುತ್ತವೆಯಾದರೂ, ಈ ಪದನಾಮಗಳ ಸ್ಥಾನಗಳಲ್ಲಿ ಏಣಿಶ್ರೇಣಿಗಳು ಇರುವುದನ್ನು ಮಾತ್ರ ನಿರಾಕರಿಸಲಾಗದು. ಏಕೆಂದರೆ, ಪ್ರಾಚೀನ ಕಾಲದಿಂದ ಸ್ಥಳೀಯ ಮುಖ್ಯಸ್ಥರಾದ ನಾಡಪ್ರಭುಗಳು, ನಾಯಕರು ಮುಂತಾದವರು ಮುಂದೆ ವಿಜಯನಗರ ಕಾಲದಲ್ಲಿ ಅಮರನಾಯಕರು ಅಥವಾ ಪಾಳೆಯಗಾರರಾಗಿ ಪ್ರವರ್ಧಮಾನಕ್ಕೆ ಬಂದರು. ಅಮರನಾಯಕರು ರೂಢಿಯಲ್ಲಿ ಪಾಳೆಯಗಾರರೆಂದೇ ಪ್ರಸಿದ್ಧರಾಗಿದ್ದಾರೆ. ಅದರೆ ಅವರಲ್ಲಿ ಸ್ಥಾನಮಾನದ

ವ್ಯತ್ಯಾಸಗಳಿದ್ದವೆಂದು ತೋರುತ್ತದೆ. ಕೈಫಿಯತ್ತುಗಳಲ್ಲಿ, ಬಖೈರುಗಳಲ್ಲಿ ಪಾಳೆಯಗಾರ ಪದ ಬಳಕೆ ಮಾಡಲಾಗಿದ್ದರೂ, ಇವುಗಳಲ್ಲಿ ಒಬ್ಬ ನಾಯಕ ಅಥವಾ ದೊರೆ ತನ್ನನ್ನು ತಾನೆ 'ಪಾಳೆಯಗಾರ' ಎಂದು ಕರೆದುಕೊಂಡಿರುವುದು ಕಾಣುವುದಿಲ್ಲ. ಅವರು ಹಾಕಿಸಿರುವ ಶಾಸನಗಳಲ್ಲಿಯೂ ಕಂಡುಬರುವುದಿಲ್ಲ. ಇದಕ್ಕೆ ಬದಲಾಗಿ ಅವರು ಬೇರೆಯವರನ್ನು ಮಾತ್ರ ಪಾಳೆಯಗಾರರೆಂದು ಕರೆದಿರುವುದು ಕಂಡುಬರುತ್ತದೆ. ಉದಾ.: ಕೆಳದಿಯವರು ತಮ್ಮನ್ನು ನಾಯಕರೆಂದೂ, ಚಿತ್ರದುರ್ಗದವರನ್ನು ಪಾಳೆಯಗಾರರೆಂದೂ ಕರೆದುಕೊಂಡರೆ, ಚಿತ್ರದುರ್ಗದವರು ತಮ್ಮನ್ನು ನಾಯಕರೆಂದೂ ಕೆಳದಿಯವರನ್ನು ಪಾಳೆಯಗಾರರೆಂದು ಕರೆದಿರುವುದು ಕಂಡುಬರುತ್ತದೆ. ಇದನ್ನು ಗಮನಿಸಿದರೆ, ಪಾಳೆಯಗಾರ ಎಂಬ ಪ್ರಯೋಗವು ತಮಗಿಂತ ಕೆಳಮಟ್ಟದವರೆಂದು ಪರಿಗಣಿಸಲಿಕ್ಕಾಗಿಯೇ ಬಳಕೆ ಮಾಡಿಕೊಂಡಿರಬಹುದೆಂದು ಗ್ರಹಿಸಬೇಕಾಗುತ್ತದೆ.[129]

ಈ ಮೇಲಿನ ಒಟ್ಟು ಚರ್ಚೆಯಿಂದ ಗ್ರಹಿಸಬಹುದಾದುದೇನೆಂದರೆ, ಸ್ಥಳೀಯ ಮುಖ್ಯಸ್ಥರಾಗಿದ್ದ ನಾಡಪ್ರಭುಗಳು ವಿಜಯನಗರ ಕಾಲಘಟ್ಟದಲ್ಲಿ ವಿಶೇಷವಾಗಿ ಕೃಷ್ಣದೇವರಾಯ ಮತ್ತು ನಂತರದ ಕಾಲದಲ್ಲಿ ಉನ್ನತ ಸ್ಥಾನಮಾನ ಹೊಂದಲು ಅವಕಾಶ ದೊರೆಯಿತು. ಈ ನಾಡಪ್ರಭುಗಳು ತಮ್ಮ ಸೇವೆ, ಶೌರ್ಯ ಮತ್ತು ರಾಜನಿಷ್ಠೆಯ ಮೂಲಕ ಸಾಮ್ರಾಟನ ಗಮನ ಸೆಳೆದು ನಾಯಕತನವನ್ನು ಪಡೆದರು. ಇವರು ಅಮರಂ ಎಂಬ ನಿರ್ದಿಷ್ಟ ಭೂಮಿಯನ್ನು ಪಡೆದು ಕೊಂಡು ವಿಜಯನಗರ ಸಾಮ್ರಾಟನಿಗೆ ನಿಷ್ಠನಾಗಿ, ಸೈನಿಕ ಸೇವೆ ಮತ್ತು ಕಂದಾಯ ಸಂಗ್ರಹದ ಜವಾಬ್ದಾರಿಯನ್ನು ಮಿತ ಸ್ವಾಯತ್ತ ಅಧಿಕಾರಗಳೊಂದಿಗೆ ನಾಡು, ಮಾಗಣಿ, ರಾಜ್ಯ ಮುಂತಾದ ಆಡಳಿತ ವಿಭಾಗಗಳಲ್ಲಿ ಮೇಲ್ವಿಚಾರಣೆ ನಡೆಸುತ್ತಿದ್ದರು. ಆದ್ದರಿಂದ ಈ ಅಮರನಾಯಕರನ್ನು ವಿವಿಧ ಪ್ರದೇಶಗಳಲ್ಲಿ ನಾಡಪ್ರಭು, ಪಾಳೆಯಗಾರರು, ನಾಯಕರು, ಒಡೆಯರು ಮುಂತಾದ ಹೆಸರುಗಳಿಂದ ಗುರುತಿಸಲಾಗುತ್ತದೆ. ಆದರೆ ಇವರ ಸೈನಿಕ ಸಂಖ್ಯೆ, ಅಮರಂ ಹೊಂದಿರುವ ಪ್ರಮಾಣ, ರಾಜ್ಯಕ್ಕೆ ಸಲ್ಲಿಸುವ ಪೊಗದಿಯ ಪ್ರಮಾಣಗಳ ಮೇಲೆ ಇವರಲ್ಲಿಯೂ ಏಣಿಶ್ರೇಣಿಗಳಿದ್ದು, ಆ ಏಣಿಶ್ರೇಣಿಗಳನ್ನು ಈ ಪದನಾಮಗಳು ಪ್ರತಿನಿಧಿಸುವಂತೆ ತೋರುತ್ತದೆ. ಈ ಪದನಾಮಗಳ ನಡುವಿನ ಸೂಕ್ಷ್ಮ ವ್ಯತ್ಯಾಸಗಳ ಬಗೆಗೆ ಹೆಚ್ಚಿನ ಅಧ್ಯಯನಗಳು ಆಗಬೇಕಿದೆ.

## 1.10 ದಕ್ಷಿಣ ಕರ್ನಾಟಕದ ಭೌಗೋಳಿಕ ಪರಿಸರ

ಕರ್ನಾಟಕವು ದಖ್ಖನ್ ಪ್ರಸ್ಥಭೂಮಿಯ ಸಂಕೀರ್ಣದಲ್ಲಿ ನೆಲೆಗೊಂಡಿರುವ ಭೌಗೋಳಿಕ ಪ್ರದೇಶವಾಗಿದೆ. ಕರ್ನಾಟಕದ ಪ್ರಾಕೃತಿಕ ಭೂಗೋಳವನ್ನು ಸ್ಥೂಲವಾಗಿ ಕರಾವಳಿ ಪ್ರದೇಶ ಮತ್ತು

ಕರ್ನಾಟಕದ ಪ್ರಸ್ಥಭೂಮಿ ಎಂಬ ಎರಡು ನೈಸರ್ಗಿಕ ಪ್ರದೇಶವಾಗಿ ಕಾಣಬಹುದು. ಕರಾವಳಿ ಪ್ರದೇಶವನ್ನು ಬಯಲು ಮತ್ತು ಪಶ್ಚಿಮಘಟ್ಟ ಎಂದು ಉಪವಿಭಾಗಗಳನ್ನಾಗಿ ವಿಂಗಡಿಸಿದರೆ, ಪ್ರಸ್ತಭೂಮಿಯನ್ನು ಮಲೆನಾಡು ಮತ್ತು ಬಯಲುನಾಡು ಎಂಬ ಉಪವಿಬಾಗಗಳಾಗಿ ವಿಂಗಡಿಸಬಹುದು. ಬಯಲುನಾಡು ಪ್ರದೇಶವನ್ನು ಪುನಃ ಉತ್ತರ ಮತ್ತು ದಕ್ಷಿಣ ಮೈದಾನ ಪ್ರದೇಶಗಳೆಂದು ಮರು ವಿಭಾಗಿಸಲಾಗಿದೆ. ದಕ್ಷಿಣದ ಮೈದಾನವು ಉತ್ತರ ಮೈದಾನಕ್ಕಿಂತಲೂ ಹೆಚ್ಚು ಎತ್ತರವಾಗಿದೆ.[130]

ಪ್ರಸ್ತುತ ಅಧ್ಯಯನದ ವಿಷಯವು ದಕ್ಷಿಣ ಕರ್ನಾಟಕ ಬಯಲು ಪ್ರದೇಶಕ್ಕೆ ಸೀಮಿತಗೊಂಡಿದೆ. ಈ ಭೌತಿಕ ವಲಯವು ಅವಿಭಜಿತ ಬೆಂಗಳೂರು ಜಿಲ್ಲೆ, ಮೈಸೂರು ಜಿಲ್ಲೆ, ಕೋಲಾರ ಜಿಲ್ಲೆ, ಚಿತ್ರದುರ್ಗ ಜಿಲ್ಲೆಗಳ ಜೊತೆಗೆ ತುಮಕೂರು, ಮಂಡ್ಯ, ಹಾಸನ ಜಿಲ್ಲೆಗಳನ್ನು ಒಳಗೊಂಡಿದೆ. ಆದರೂ ಸಾಮಾನ್ಯವಾಗಿ ದಕ್ಷಿಣ ಕರ್ನಾಟಕ ಎಂದರೆ ಬೆಂಗಳೂರು ಪರಿಸರ ಕಣ್ಮುಂದೆ ಬರುತ್ತದೆ. ಪ್ರಸ್ತುತ ಅಧ್ಯಯನದ ಕೇಂದ್ರ ವಿಷಯವೂ ಕೂಡ ಬೆಂಗಳೂರು ಪರಿಸರವನ್ನೇ ಕೇಂದ್ರೀಕರಿಸಿರುತ್ತದೆ.

ದಕ್ಷಿಣದ ಮೈದಾನವು ಹೆಚ್ಚಿನ ಪ್ರಮಾಣದ ಇಳುಕಲಾಗಿದ್ದು, ಸಮುದ್ರಮಟ್ಟದಿಂದ ಸರಾಸರಿ 650 ಮೀ. ಎತ್ತರದಲ್ಲಿದೆ. ತುಮಕೂರು ಮತ್ತು ಕೋಲಾರ ಜಿಲ್ಲೆಗಳ ಮಧ್ಯದಲ್ಲಿರುವ ಒಳನಾಡು ಅಲೆಯಾಕಾರದ ಗ್ರಾನೈಟ್ ಗುಡ್ಡಗಳಿಂದ ಕೂಡಿದೆ. ಪಶ್ಚಿಮದ ಸರಣಿಯಂತೆ ಕರ್ನಾಟಕದ ದಕ್ಷಿಣ ಗಡಿಯ ನೀಲಗಿರಿ ಶ್ರೇಣಿಯಿಂದ ಒಂದು ಬೆಟ್ಟಗಳ ಸಾಲು ಮಲೆನಾಡಿನಲ್ಲಿರುವಂತೆ ಉತ್ತರಕ್ಕೆ ಹಬ್ಬಿದೆ. ಈ ಪೂರ್ವದ ಸರಣಿ ಬಿಳಿಗಿರಿರಂಗನ ಬೆಟ್ಟದಲ್ಲಿ ಎದ್ದು ಕಾಣುವಂತಿದ್ದು, 16–30 ಕಿ.ಮೀ.ಗಳಷ್ಟು ಅಗಲವಾಗಿದ್ದು, ಪಾವಗಡದವರೆಗೂ ಹಬ್ಬಿದೆ. ಇದು ನಿರಂತರ ಪರ್ವತ ಸರಣಿಯಂತೆ ಕಾಣುವ ಬದಲು ಚದುರಿದ ಗುಂಪುಗಳಾಗಿದ ರೂಪಿತವಾಗಿದೆ. ಹೇಮಾವತಿ ಮತ್ತು ಶಿಂಷಾ ನದಿಗಳ ಮಧ್ಯದ ನಾರಾಯಣದುರ್ಗ, ಶಿಂಷಾ ಮತ್ತು ಅರ್ಕಾವತಿ ನದಿಗಳ ಮಧ್ಯದ ದೇವರಾಯನದುರ್ಗ, ಅರ್ಕಾವತಿ ಮತ್ತು ಪೆನ್ನಾರ್ ಮಧ್ಯದ ನಂದಿದುರ್ಗ ಮತ್ತು ಮಾರ್ಕಂಡೇಯ ನದಿಯವರೆಗಿನ ಪೂರ್ವದ ಇಟಕಲ್‌ದುರ್ಗ ಇತ್ಯಾದಿ ಗುಡ್ಡಗಳು ಎರಡು ತೊರೆಗಳ ನಡುವಿನ ಶಿಖರಗಳಾಗಿವೆ.[131]

ಈ ಪರ್ವತ ಸರಣಿ ಅಥವಾ ಬೆಟ್ಟಸಾಲುಗಳಲ್ಲಿ ಅನೇಕ ಗಿರಿಧಾಮಗಳು, ಧಾರ್ಮಿಕ ಕ್ಷೇತ್ರಗಳು, ಐತಿಹಾಸಿಕ ಮತ್ತು ಪ್ರಾಕ್ಚಾರಿತ್ರಿಕ ನೆಲೆಗಳು ಕಂಡುಬರುತ್ತವೆ. ಉದಾ.: ಬಿಳಿಗಿರಿ ರಂಗನಬೆಟ್ಟ, ಮಲೆಮಹಾದೇಶ್ವರಬೆಟ್ಟ, ಹಿಮವದ್ ಗೋಪಾಲಸ್ವಾಮಿಬೆಟ್ಟ, ಚಾಮುಂಡಿಬೆಟ್ಟ,

ಕುಂತಿಬೆಟ್ಟ, ರೇವಣ್ಣ ಸಿದ್ಧೇಶ್ವರಬೆಟ್ಟ, ಕಬ್ಬಾಳು ದುರ್ಗ, ಕೂನಗಲ್‌ಬೆಟ್ಟ, ಕೂಡಗಲ್‌ಬೆಟ್ಟ, ರಾಮಗಿರಿಬೆಟ್ಟ, ಶಿವಗಿರಿಬೆಟ್ಟ, ನಂದಿಬೆಟ್ಟ, ಸೀತಿಬೆಟ್ಟ, ಸ್ಕಂದಗಿರಿ, ದೇವರಾಯನದುರ್ಗ, ಶಿವಗಂಗೆ, ಸಿದ್ಧಗಂಗೆ, ಸಾವನದುರ್ಗ, ಹುಲಿಯೂರುದುರ್ಗ, ಹುತ್ರಿದುರ್ಗ, ಮಧುಗಿರಿಬೆಟ್ಟ ಮುಂತಾದವುಗಳನ್ನು ಹೆಸರಿಸಬಹುದು. ಈ ಬೆಟ್ಟಸಾಲುಗಳು ಹಲವಾರು ನದಿಗಳು, ಉಪನದಿಗಳು ಮತ್ತು ಹೊಳೆ–ತೊರೆಗಳ ಹುಟ್ಟಿಗೂ ಕಾರಣವಾಗಿವೆ. ಮುಖ್ಯವಾಗಿ, ಪಿನಾಕಿನಿ ನದಿ, ಆರ್ಕಾವತಿ, ವೃಷಭಾವತಿ, ಶಿಂಷಾ, ಕಣ್ವಾ, ಜಯಮಂಗಲಿ, ನಾಗಿನಿ ಹಳ್ಳ ಮುಂತಾದ ನದಿ, ಉಪನದಿಗಳಲ್ಲದೆ, ಅನೇಕ ಸಣ್ಣಪುಟ್ಟ ತೊರೆಗಳ ಹುಟ್ಟಿಗೂ ಕಾರಣವಾಗಿವೆ.

ಪ್ರಾರಂಭ ಜೀವಕಲ್ಪ (2600–2000 ಮಿಲಿಯನ್ ವರ್ಷಗಳು) ಕಾಲಕ್ಕೆ ಸೇರಿದ ಕ್ಲೋಸ್‌ಪೇಟ್ ಗ್ರಾನೈಟ್ ಶಿಲೆಯು ದಕ್ಷಿಣದಲ್ಲಿ ಶಹಿವನಸಮುದ್ರದಿಂದ ಹಿಡಿದು ಉತ್ತರದಲ್ಲಿ ಬಳ್ಳಾರಿಯಿಂದ ದಕ್ಷಿಣಕ್ಕೆ ಸುಮಾರು 400 ಕಿ.ಮೀ. ದೀರ್ಘವಾಗಿ ರಾಜ್ಯದ ಮಧ್ಯದಲ್ಲಿ ಉದ್ದಕ್ಕೂ ಉತ್ತರ–ದಕ್ಷಿಣವಾಗಿ ಹರಡಿರುವ ಗುಂಡಾದ ಉಬ್ಬುಗಳ ಮತ್ತು ಅರ್ಧಗೋಳಗಳ ಕಿರಿವಯಸ್ಸಿನ ಒರಟು ಹರಳಿನ ಪೊಟ್ಯಾಸಿಕ್ ಗ್ರಾನೈಟುಗಳ ಸರಣಿಗೆ ಕ್ಲೋಸ್‌ಪೇಟ್ ಗ್ರಾನೈಟ್ ಎಂದು ಕರೆಯುವರು. ಈ ಒರಟು ಹರಳಿನ ಪೊಟ್ಯಾಸಿಕ್ ಗ್ರಾನೈಟ್‌ಗಳು 10 ಕಿ.ಮೀ. ಅಗಲದ ಪಟ್ಟಿಕೆಗೆ ಸೀಮಿತವಾಗಿದೆ. ಸಾವನದುರ್ಗ, ಮಾಗಡಿ, ರಾಮನಗರ, ಶಿವಗಂಗೆ, ದೇವರಾಯನದುರ್ಗ, ಮಧುಗಿರಿ, ಪಾವಗಡಗಳಲ್ಲಿರುವ ಭವ್ಯವಾದ ಸಮುಚ್ಚಯವು ಈ ಗ್ರಾನೈಟುಗಳಿಂದ ನಿರ್ಮಾಣವಾಗಿದೆ.[131] ಈ ಶಿಲಾಶ್ರೇಣಿಯ ಮಧುಗಿರಿ, ಸಾವನದುರ್ಗದಂತಹ ಭಾರಿ ಏಕಶಿಲಾ ಬೆಟ್ಟಗಳು ಕಂಡುಬರುತ್ತವೆ. ಮಧುಗಿರಿ ಬೆಟ್ಟವು ಭೂಮಟ್ಟದಿಂದ ಅತಿ ಎತ್ತರವಿರುವ ಏಷ್ಯಾಖಂಡದ ಮೊದಲ ಏಕಶಿಲಾ ಬೆಟ್ಟವೆಂಬ ಕೀರ್ತಿಗೆ ಪಾತ್ರವಾಗಿದ್ದರೆ, ಸಾವನದುರ್ಗವು ಸಮುದ್ರಮಟ್ಟದಿಂದ ಅತಿ ಎತ್ತರವಿರುವ ಏಕಶಿಲಾ ಬೆಟ್ಟವೆಂಬ ಕೀರ್ತಿಗೆ ಪಾತ್ರವಾಗಿದೆ. ಈ ಎರಡೂ ಬೆಟ್ಟಗಳಲ್ಲಿ ಮಧುಗಿರಿ ಮಹಾನಾಡಪ್ರಭುಗಳು ಮತ್ತು ಯಲಹಂಕ ನಾಡಪ್ರಭುಗಳು ಕೋಟೆ ಕಟ್ಟಿ ತಮ್ಮ ನೆಲೆಗಳನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿರುವುದನ್ನು ಗಮನಿಸಬಹುದು. ಇವುಗಳು ಮಾತ್ರವಲ್ಲ, ಕ್ಲೋಸ್‌ಪೇಟ್ ಗ್ರಾನೈಟ್‌ನ ಶಿಲಾಶ್ರೇಣಿಗಳಲ್ಲಿ ಬರುವ ಬಹುತೇಕ ಬೆಟ್ಟಗುಡ್ಡಗಳೂ ವಿಜಯನಗರೋತ್ತರ ಕಾಲದ ಪಾಳೆಯಗಾರರು ಮತ್ತು ನಾಡಪ್ರಭುಗಳ ನೆಲೆಗಳಾಗಿದ್ದವು. ಉದಾಹರಣೆಗೆ ಹೆಸರಿಸುವುದಾದರೆ, ಕಬ್ಬಾಳು, ರಾಮಗಿರಿ, ಶಿವಗಿರಿ, ಹುಲಿಯೂರುದುರ್ಗ, ಹುತ್ರಿದುರ್ಗ, ನಿಜಗಲ್ಲು, ಭೈರವನದುರ್ಗ, ದೇವರಾಯನದುರ್ಗ, ಚನ್ನರಾಯನದುರ್ಗ, ಮಿಡಿಗೇಶಿ, ಪಾವಗಡ ಮುಂತಾದವು.

ಈ ಗ್ರಾನೈಟ್ ಸಮುಚ್ಚಯವನ್ನು ಬಿ.ಎಲ್.ರೈಸ್ ಅವರು "ಭಾರತದ ಭೂತಲದಲ್ಲಿರುವಂಥ ಅತ್ಯಂತ ರಮ್ಯವಾದ ದೃಶ್ಯಗಳನ್ನು ರೂಪಿಸುವ ಶಿಲಾ ಪುಂಜಗಳಿವು. ಇದು ತಳೆದಿರುವ ವಿಲಕ್ಷಣ ಸ್ವರೂಪಗಳಿಂದ ಡಾರ್ಟ್‌ಮೂರ್‌ನ ದೃಶ್ಯಗಳನ್ನು ಇವು ಮೀರಿಸುತ್ತವೆ" ಎಂದು ಬಣ್ಣಿಸಿದ್ದಾರೆ. (This decay of lofty granitic masses produces some of the most picturesque features of an Indian landscape; its strange columnar piles,trees, and logging stones, which far excel those of Dartmoor in grandeur and in the fantastic forms they assume).[132]

ಪರ್ಯಾಯ ದ್ವೀಪದ ಶೀಣಿಕಲ್ಲು (ಪೆನಿನ್ಸುಲರ್ ನೈಸ್) 340–260 ಕೋಟಿ ವರ್ಷಗಳಷ್ಟು ಪ್ರಾಚೀನವಾದುದಾಗಿದೆ. ಕರ್ನಾಟಕ ರಾಜ್ಯದ ಹೆಚ್ಚಿನ ಭಾಗವು ಅನೇಕ ವಿಧದ ಮತ್ತು ವಯಸ್ಸಿನ ಗ್ರಾನೈಟ್ ಮತ್ತು ನೈಸುಗಳ ಬೃಹತ್ ಸಂಕೀರ್ಣದಿಂದ ಕೂಡಿದೆ. ಇವುಗಳನ್ನು ಒಟ್ಟಾಗಿ 'ಪೆನಿನ್ಸುಲರ್ ನೈಸಿಕ್ ಕಾಂಪ್ಲೆಕ್ಸ್' ಎಂದು ಕರೆಯಲಾಗಿದೆ.[133] ಮುಖ್ಯವಾಗಿ, ಬೆಂಗಳೂರಿನ ಲಾಲ್‌ಭಾಗ್‌ನ ಬಂಡೆ ಈ ಕಾಲಘಟ್ಟದ್ದಕ್ಕೆ ಸೇರಿದ್ದೆಂದು ಗುರುತಿಸಲಾಗಿದೆ. ಈ ಬಂಡೆಯ ಮೇಲ್ಭಾಗದಲ್ಲಿ ಯಲಹಂಕ ನಾಡಪ್ರಭುಗಳ ಕಾಲದ ಕಾವಲು ಗೋಪುರ ಇರುವುದನ್ನು ಗಮನಿಸಬಹುದು.

ಬಲ್ಲಾಳರಾಯನ ದುರ್ಗದಿಂದ ಪೂರ್ವದಲ್ಲಿ ನಂದಿದುರ್ಗದವರೆಗೆ ಒಂದು ರೇಖೆಯನ್ನು, ನಂದಿದುರ್ಗದಿಂದ ದಕ್ಷಿಣಾಭಿಮುಖವಾಗಿ ಆನೇಕಲ್ಲಿನವರೆಗೆ ಇನ್ನೊಂದು ರೇಖೆಯನ್ನೂ, ದೇವರಾಯನ ದುರ್ಗದಿಂದ ಉತ್ತರಕ್ಕೆ ಪಾವಗಡದವರೆಗೆ ಮತ್ತೊಂದು ರೇಖೆಯನ್ನೂ ಎಳೆದರೆ, ಹೆಚ್ಚುಕಡಿಮೆ ದಕ್ಷಿಣ ಪಿನಾಕಿನಿ (ದಕ್ಷಿಣ ಪೆನ್ನಾರ್), ಉತ್ತರ ಪಿನಾಕಿನಿ (ಉತ್ತರ ಪೆನ್ನಾರ್), ಕಾವೇರಿ ಮತ್ತು ಕೃಷ್ಣಾನದಿಗಳ ಜಲಾನಯನ ಕ್ಷೇತ್ರದ ಬೇರ್ಪಡೆಯನ್ನು ಸೂಚಿಸುವ ಜಲವಿಭಾಜಕ ರೇಖೆಯ ಚಿತ್ರಣ ಸ್ಪಷ್ಟವಾಗುತ್ತದೆ.[134] ಬಹುತೇಕ ದಕ್ಷಿಣ ಕರ್ನಾಟಕದಲ್ಲಿ ಗುರುತಿಸಬಹುದಾದ ಪ್ರಮುಖ ಜಲವಿಭಾಜಕ ರೇಖೆಗಳೂ ಆಗಿವೆ. ಇವುಗಳಲ್ಲಿ ನಂದಿಯಿಂದ ಆನೇಕಲ್ಲಿನ ವರೆಗಿನ ಜಲವಿಭಾಜಕ ರೇಖೆಯ ಮೇಲೆಯೇ ಬೆಂಗಳೂರು ನಗರ ನೆಲೆಗೊಂಡಿದೆ. ಇದನ್ನು ಬೆಂಗಳೂರು ದಿಣ್ಣೆ ಎಂದು ಕರೆಯಬಹುದು.

### 1.10.1 ವಿಶಿಷ್ಟ ಬೆಂಗಳೂರು ದಿಣ್ಣೆ

ಚಿಕ್ಕಬಳ್ಳಾಪುರದ ಉತ್ತರದಿಕ್ಕಿನಿಂದ ಆರಂಭವಾಗಿ ಮೇಕೆದಾಟು ಸಮೀಪದವರೆಗೆ ಸಾಗುವ 'ಉಪ ಜಲವಿಭಜಕ' ದಿಣ್ಣೆಯೊಂದರ ಮೇಲೆ ಬೆಂಗಳೂರನ್ನು ನಿರ್ಮಿಸಲಾಗಿದೆ. ಈ

‘ಬೆಂಗಳೂರು ದಿಣ್ಣೆ’ಯು ಸಮುದ್ರಮಟ್ಟದಿಂದ 900 ಮೀ.ಗಳಿಗೂ ಹೆಚ್ಚು ಎತ್ತರವನ್ನು ಹೊಂದಿದೆ. ಇದು ಬೆಂಗಳೂರಿನಲ್ಲಿ ಹೈಗ್ರೌಂಡ್, ಸೆಂಟ್ರಲ್ ಕಾಲೇಜ್ ಮಾರ್ಗವಾಗಿ ಅವಿನ್ಯೂ ರಸ್ತೆಯ ಪಕ್ಕದಲ್ಲಿ ಸಾಗಿ ಕೋಟೆ, ಟಿಪ್ಪು ಅರಮನೆ, ಹೆಚ್ಚು ಕಡಿಮೆ ಕೆ.ಆರ್. ರಸ್ತೆಯ ಒಂದು ಬದಿಯಲ್ಲಿಯೇ ಮುಂದುವರೆದು ಬಸವನಗುಡಿ, ಜಯನಗರ, ಬನಶಂಕರಿ ಬಡಾವಣೆಗಳತ್ತ ಸಾಗುತ್ತದೆ.[135]

ವಿಶೇಷವೆಂದರೆ, ಬೆಂಗಳೂರು ದಿಣ್ಣೆಯ ಮೇಲೆ ಸುರಿದ ಮಳೆಯ ನೀರು ಪೂರ್ವ ಮತ್ತು ಪಶ್ಚಿಮಾಭಿಮುಖವಾಗಿ ಹರಿದುಹೋಗಿ ಬಂಗಾಳ ಕೊಲ್ಲಿಯಲ್ಲಿ ಮತ್ತೆ ಒಂದಾಗುತ್ತದೆ!. ಸರಳವಾಗಿ ಹೇಳುವುದಾದರೆ, ಸೆಂಟ್ರಲ್ ಕಾಲೇಜಿನ ಕಟ್ಟಡದ ಚಾವಣಿಯೊಂದರ ಮೇಲೆ ಬೀಳುವ ಮಳೆಯ ನೀರು ಪಶ್ಚಿಮಕ್ಕೆ ಹರಿದು ವೃಷಭಾವತಿಯ ಮೂಲಕ ಅರ್ಕಾವತಿ ಸೇರಿ, ಕಾವೇರಿಯಲ್ಲಿ ಸಂಗಮವಾದರೆ; ಪೂರ್ವಕ್ಕೆ ಹರಿಯುವ ನೀರು ಹಲವು ಕೆರೆಗಳನ್ನು ಹಾದು ದಕ್ಷಿಣ ಪಿನಾಕಿನಿ ನದಿ ಸೇರುತ್ತದೆ. ಪಿನಾಕಿನಿಯು ಮುಂದೆ ತಮಿಳುನಾಡಿನಲ್ಲಿ ಪಾಲಾರ್ ನದಿಯಾಗಿ ಹರಿಯುತ್ತದೆ. ಹೀಗೆ ಒಂದೇ ಚಾವಣಿಯ ಮಳೆಯ ನೀರು ವಿವಿಧ ದಿಕ್ಕಿನಲ್ಲಿ ನೂರಾರು ಕಿಲೋಮೀಟರ್ ದೂರಸಾಗಿ ಕಾವೇರಿ ಮತ್ತು ಪಾಲಾರ್ ನದಿಗಳ ಮೂಲಕ ಬಂಗಾಳಕೊಲ್ಲಿಯನ್ನು ಸೇರುತ್ತದೆ. ಹೀಗೆ ಒಂದೇ ಸೂರಿನಿಂದ ಬೇರ್ಪಟ್ಟ ನೀರನ್ನು ಬಂಗಾಳ ಕೊಲ್ಲಿಯು ಮತ್ತೆ ಒಂದು ಮಾಡುತ್ತದೆ![136]

### 1.10.2 ಬೆಂಗಳೂರಿನ ಭೌಗೋಳಿಕ ವಿಶೇಷತೆ

ಬೆಂಗಳೂರು ದಕ್ಷಿಣ ಭಾರತದ ಭೂಮಧ್ಯ ಭಾಗದಲ್ಲಿರುವ ನಗರ. ಪೂರ್ವ ಮತ್ತು ಪಶ್ಚಿಮ ಕರಾವಳಿಯ ಪ್ರಮುಖ ನಗರಗಳಾದ ಚೆನ್ನೈ ಮತ್ತು ಮಂಗಳೂರುಗಳ ನಡುವೆ ಒಂದು ಸರಳ ರೇಖೆಯನ್ನು ಎಳೆದರೆ, ಎರಡು ನಗರಗಳ ನಡುವಿನ ಮಧ್ಯದ ಬಿಂದುವಿನಲ್ಲಿ ಬೆಂಗಳೂರಿದೆ. ಅಂದರೆ ದಕ್ಷಿಣ ಭಾರತದಲ್ಲಿಯೇ ಅತ್ಯಂತ ಆಯಕಟ್ಟಿನಲ್ಲಿರುವ ನಗರ ಬೆಂಗಳೂರು. ಭೌಗೋಳಿಕವಾಗಿಯೂ ಕೂಡ (ಸಮುದ್ರಮಟ್ಟದಿಂದ ಸರಾಸರಿ 920ಮೀ.) ಎತ್ತರದ ಪ್ರಸ್ತಭೂಮಿಯಲ್ಲಿದೆ. ಭಾರತದ ಹಿಮಾಲಯ ಪರ್ವತಶ್ರೇಣಿಯಲ್ಲಿ ಬರುವ ಕೆಲವು ರಾಜಧಾನಿಗಳನ್ನು ಹೊರತು, ಉಳಿದೆಲ್ಲ ರಾಜ್ಯಗಳ ರಾಜಧಾನಿಗಳಿಗಿಂತಲೂ ಬೆಂಗಳೂರು ಎತ್ತರದಲ್ಲಿದೆ. ಭಾರತದ ಯಾವುದೇ ಮಹಾನಗರ ಕೂಡ ಬೆಂಗಳೂರಿನಷ್ಟು ಎತ್ತರದ ಪ್ರದೇಶದಲ್ಲಿಲ್ಲ.[137]

ಇವು ದಕ್ಷಿಣ ಕರ್ನಾಟಕದ ಭೌಗೋಳಿಕ ವಿಶೇಷವಾಗಿದ್ದು, ಬೆಂಗಳೂರು, ಮೈಸೂರು ಜಿಲ್ಲೆಗಳ ಸಾಮಾನ್ಯ ಮಳೆಯ ಪ್ರಮಾಣ 750–800 ಮಿ.ಮೀ. ನಡುವೆ ಇದ್ದರೆ, ಮಂಡ್ಯ, ತುಮಕೂರು, ಕೋಲಾರ ಜಿಲ್ಲೆಗಳ ಸಾಮಾನ್ಯ ಮಳೆಯ ಪ್ರಮಾಣ 685–735 ಮಿ.ಮೀ. ನಡುವೆ ಇದೆ. ಈ ಮಳೆಯ ಪ್ರಮಾಣದಲ್ಲಿ ಶೇ.8ರಷ್ಟು ಮಳೆಯ ನೀರು ಇಂಗುತ್ತದೆಂದು ಅಂದಾಜಿಸಲಾಗಿದೆ.[138] ಈ ಎಲ್ಲಾ ಅಂಶಗಳಿಂದ ಭೂಮಿಯಲ್ಲಿನ ತೇವಾಂಶ ಮತ್ತು ಅಂತರ್ಜಲ ಮಟ್ಟವನ್ನು ಅರ್ಥ ಮಾಡಿಕೊಳ್ಳಬಹುದು. ತಗ್ಗು ದಿಣ್ಣೆಗಳಿಂದ ಕೂಡಿರುವ ದಕ್ಷಿಣ ಕರ್ನಾಟಕದಲ್ಲಿ ಅನೇಕ ಹಳ್ಳಕೊಳ್ಳಗಳು ಹರಿಯುತ್ತವೆ. ಬೆಂಗಳೂರು ಪರಿಸರದಲ್ಲಿ ಪ್ರತೀ ಎರಡು ಕಿ.ಮೀ.ಗಳಿಗೆ ತಗ್ಗು–ದಿಣ್ಣೆಗಳು ಕಂಡುಬರುವುದು ಸಾಮಾನ್ಯವಾಗಿದೆ. ಇಂತಹ ದಿಣ್ಣೆಗಳಲ್ಲಿ ಹಳ್ಳಿ, ಗ್ರಾಮಗಳು ಸಾಮಾನ್ಯವಾಗಿ ನೆಲೆಗೊಂಡಿರುತ್ತವೆ. ಶತಮಾನಗಳಷ್ಟು ಹಳೆಯದಾದ ಊರುಗಳಿಗೆ ಹೊಂದಿಕೊಂಡ ತಗ್ಗಿನಲ್ಲಿ ಸಾಮಾನ್ಯವಾಗಿ ಕೆರೆ ಇಲ್ಲವೆ ಕಟ್ಟೆಗಳು ಇದ್ದೇ ಇರುತ್ತವೆ. ಇದಕ್ಕೆ ಕಾರಣ, ಕೃಷಿ ಮತ್ತು ಪಶುಪಾಲನೆಯನ್ನೆ ಪ್ರಧಾನವಾಗಿ ಆಶ್ರಯಿಸಿರುವ ದಕ್ಷಿಣ ಕರ್ನಾಟಕದಲ್ಲಿ ಬೇಸಿಗೆಯಲ್ಲಿ ನೀರನ ಅಭಾವ ಸೃಷ್ಠಿಯಾಗುವುದರಿಂದ ನೀರಿನ ಸಂಗ್ರಹಕ್ಕಾಗಿ ಪ್ರಾಚೀನ ಕಾಲದಿಂದಲೂ ಕೆರೆ, ಕಟ್ಟೆಗಳನ್ನು ಗ್ರಾಮೀಣ ಜನರು ಆಶ್ರಯಿಸುತ್ತಾ ಬಂದಿದ್ದಾರೆ. ಈ ರೀತಿಯ ಕೆರೆ ಕಟ್ಟೆಗಳ ಸಂಖ್ಯೆ ವಿಜಯನಗರೋತ್ತರ ಕಾಲಘಟ್ಟದಲ್ಲಿ ವಿಶೇಷವಾಗಿ ನಾಡಪ್ರಭುಗಳ ಕಾಲದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣಗೊಂಡಿವೆ. ಒಂದುಕಾಲದಲ್ಲಿ ದಕ್ಷಿಣ ಕರ್ನಾಟಕ, ಮುಖ್ಯವಾಗಿ ಬೆಂಗಳೂರು ಪರಿಸರವು ದಟ್ಟ ಅರಣ್ಯದಿಂದ ಕೂಡಿದ ಪ್ರದೇಶವಾಗಿತ್ತು. ಈ ಅರಣ್ಯ ಪ್ರದೇಶಗಳನ್ನು ಕಡಿದು, ಸಮತಟ್ಟುಮಾಡಿ, ಗ್ರಾಮ ನಿರ್ಮಾಣ, ಕೆರೆ ನಿರ್ಮಾಣ ಮತ್ತು ಕೃಷಿಗೆ ಭೂಮಿಯ ವಿಸ್ತರಣೆಗಳು ಮಧ್ಯಯುಗದಲ್ಲಿಯೇ ಆರಂಭವಾದ ಬಗ್ಗೆ ಕ್ರಿ.ಶ. 1307ರ ವಿಭೂತಿಪುರದ ಶಾಸನದಿಂದ ತಿಳಿಯುತ್ತದೆ.[139] ಆನಂತರ ಈ ಪರಿಸರದಲ್ಲಿ ಗ್ರಾಮಗಳು ಮತ್ತು ಕೆರೆಗಳ ನಿರ್ಮಾಣ ತೀವ್ರಗೊಂಡಂತೆ ತೋರುತ್ತದೆ. ನಾಡಪ್ರಭುಗಳ ಕಾಲದ ಶಾಸನಗಳಲ್ಲಿ ಅಗ್ರಹಾರ ಮತ್ತು ಕೆರೆಗಳ ನಿರ್ಮಾಣದ ವಿವರಗಳು ಸಾಕಷ್ಟು ಸಂಖ್ಯೆಯಲ್ಲಿ ಇವೆ. ಸುಗುಟೂರು ಪಾಳೆಯಗಾರರು ಹೊಸಕೋಟೆ, ಆನೇಕಲ್ಲುಗಳನ್ನು ನಿರ್ಮಿಸಿ, ಕೆರೆ–ಕಟ್ಟೆ ನಿರ್ಮಿಸಿದ ವಿವರಗಳನ್ನು ಮುಂದಿನ ಅಧ್ಯಾಯದಲ್ಲಿ ನೋಡಬಹುದು. ಇವೆಲ್ಲಕ್ಕೂ ಇಲ್ಲಿನ ಭೌಗೋಳಿಕ ಲಕ್ಷಣಗಳು ಪೂರಕವಾಗಿದ್ದವು.

ಅರಣ್ಯದಿಂದ ಕೂಡಿರುವ ಬೆಂಗಳೂರು ಪರಿಸರದಲ್ಲಿ ಆನೆಗಳು, ಹುಲಿಗಳು ಮೊದಲಾದ ಕಾಡುಮೃಗಗಳ ಸಂಖ್ಯೆ ಸಹಜವಾಗಿ ಹೆಚ್ಚಾಗಿತ್ತು. ಬೆಂಗಳೂರು ಪರಿಸರದಲ್ಲಿ ಕಂಡುಬರುವ ಹುಲಿಬೇಟೆ ವೀರಗಲ್ಲುಗಳೇ ಇದಕ್ಕೆ ನಿದರ್ಶನವಾಗಿದೆ. ಬೆಂಗಳೂರು ಕೋಟೆಯ ಪಶ್ಚಿಮ

ಒಳಭಾಗದಲ್ಲಿ ಹುಲಿಬೇಟೆಯ ವೀರಗಲ್ಲು ಇರುವುದನ್ನು ನೋಡಬಹುದು. ವಿಜಯನಗರದ ಅರಸನು ಸುಗುಟೂರು ಅರಸ ಮುಮ್ಮಡಿ ತಮ್ಮೇಗೌಡನಿಗೆ ಆನೆಗಳನ್ನು ಸೆರೆ ಹಿಡಿದು ಕಳುಹಿಸಿಕೊಡುವಂತೆ ನಿರೂಪ ಕಳುಹಿಸಲಾಗಿ, ತಮ್ಮೇಗೌಡನು ಆನೇಕಲ್ಲು ಪರಿಸರದಲ್ಲಿ 20 ಆನೆಗಳನ್ನು ಸೆರೆ ಹಿಡಿದು ಕಳುಹಿಸಿಕೊಡುತ್ತಾನೆ. ಈಗಲೂ ಕೂಡ ಬನ್ನೇರುಘಟ್ಟ, ಸಾವನದುರ್ಗ ಕಾಡುಗಳಲ್ಲಿ ಆನೆಗಳಿವೆ. ಈ ಆನೆಗಳನ್ನು ಸೈನ್ಯದಲ್ಲಿ ಹೆಚ್ಚಾಗಿ ಬಳಸಿಕೊಳ್ಳುತ್ತಿದ್ದರೆಂದು ಗ್ರಹಿಸಬಹುದು.

ಒಟ್ಟಾರೆ, ಈ ಮೇಲಿನ ಎಲ್ಲಾ ಭೌಗೋಳಿಕ ಅಂಶಗಳು ನಾಡಿನ ಚರಿತ್ರೆಯ ಮೇಲೆ ವಿಶೇಷವಾದ ಪ್ರಭಾವ ಬೀರಿದೆ ಎಂಬುದನ್ನು ಅರ್ಥಮಾಡಿಕೊಳ್ಳಬಹುದು.

## 1.11 ಅಧ್ಯಾಯಗಳ ವಿಂಗಡಣೆ

**ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)** ಎಂಬ ಈ ಸಂಶೋಧನಾ ಮಹಾಪ್ರಬಂಧದವನ್ನು ಈ ಕೆಳಕಂಡಂತೆ ಏಳು ಅಧ್ಯಾಯಗಳಲ್ಲಿ ವಿವರಿಸಲಾಗಿದೆ.

1. ಪ್ರಸ್ತಾವಣೆ
2. ದಕ್ಷಿಣ ಕರ್ನಾಟಕದ ಚಾರಿತ್ರಿಕ ಅವಲೋಕನ
3. ಯಲಹಂಕ ನಾಡಪ್ರಭುಗಳು– ರಾಜಕೀಯ ಚರಿತ್ರೆ
4. ಆಡಳಿತ ಮತ್ತು ಆರ್ಥಿಕ ವ್ಯವಸ್ಥೆ
5. ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆ
6. ಕಲೆ, ವಾಸ್ತುಶಿಲ್ಪ ಮತ್ತು ಸಾಹಿತ್ಯ
7. ಉಪಸಂಹಾರ

* * * * *

**ಅಡಿ ಟಿಪ್ಪಣಿಗಳು**

1. ಕರ್ನಾಟಕದ ಚರಿತ್ರೆಯಲ್ಲಿ ಪ್ರಮುಖವಾಗಿರುವ ಈ ರಾಜ ಮನೆತನಗಳ ಚರಿತ್ರೆಗೆ ಸಂಬಂಧಿಸಿದಂತೆ ಬೇರೆ ಬೇರೆ ಆಯಾಮಗಳ ಮೇಲೆ ಬೆಳಕು ಚೆಲ್ಲುವ ಅಧ್ಯಯನಗಳು, ಸಂಶೋಧನೆಗಳು ನಿರಂತರವಾಗಿ ನಡೆಯುತ್ತಲೇ ಇವೆ. ಮತ್ತೊಂದು ಕಡೆ ಒಂದೇ ವಿಷಯದ ಮೇಲೆ ಮತ್ತೆ ಮತ್ತೆ ಮರುಶೋಧಿಸುವಂತಹ ಕೃತಿಗಳು ಹೊರಬರುತ್ತಿವೆ. ಸಣ್ಣ ಉದಾಹರಣೆಯಾಗಿ ಹೇಳುವುದಾದರೆ, ಹಂಪ ನಾಗರಾಜಯ್ಯನವರು **ಎ ಹಿಸ್ಟ್ರಿ ಆಫ್ ದಿ ರಾಷ್ಟ್ರಕೂಟಾಸ್ ಆಫ್ ಮಳ್ಖೇಡ್ ಅಂಡ್ ಜೈನಿಸಂ** (2000) ಎಂಬ ಕೃತಿಯನ್ನು ಮೊದಲು ಪ್ರಕಟಿಸಿದರು. ನಂತರ **ರಾಷ್ಟ್ರಕೂಟಾಸ್: ರೀವಿಸಿಟ್** ಎಂಬ ಕೃತಿಯನ್ನು 2010ರಲ್ಲಿ ಹೊರತಂದರು. ಇತ್ತೀಚೆಗೆ ಇದೇ ಲೇಖಕರ **ರಾಷ್ಟ್ರಕೂಟಾಸ್: ರೀ–ರೀವಿಸಿಟೆಡ್** ಎಂಬ ಕೃತಿಯು ಹೊರಬಂದಿದೆ.
2. ಶ್ರೀನಿವಾಸ್ ಎಂ.ವಿ., 1987: 582
3. **ಅದೇ.**: 583–85
4. ವಿಲ್ ಮತ್ತು ಏರಿಯಲ್ ಡ್ಯುರಾಂಟ್, 2011: 10.
5. ಶ್ರೀನಿವಾಸ್ ಎಂ.ವಿ., **ಪೂರ್ವೋಕ್ತ:** 586–87.
6. ಮಯೂರವರ್ಮನ ಚಂದ್ರವಳ್ಳಿ ಶಾಸನವನ್ನು 1929ರಲ್ಲಿ ಎಂ.ಎಚ್. ಕೃಷ್ಣ ಅವರು ಪ್ರಾಕೃತ ಶಾಸನವೆಂಬುದಾಗಿ ಓದಿದ ಪ್ರಕಾರ ತ್ರೈಕೂಟ, ಅಭೀರ, ಪಲ್ಲವ, ಪಾರಿಯಾತ್ರಿಕ, ಶಕಸ್ಥಾನ, ಸೇಂದ್ರಕ, ಪುನ್ನಾಟ, ಮೌಖರಿಗಳನ್ನು ಸೋಲಿಸಿದ ಕದಂಬರ ಮಯೂರಶರ್ಮನಿಂದ ಕೆರೆಯು ನಿರ್ಮಾಣವಾಯಿತು. ಇದೇ ಶಾಸನವನ್ನು ಮರು ಓದಿದ ಬಿ. ರಾಜಶೇಖರಪ್ಪ ಅವರು ಇದೊಂದು ಸಂಸ್ಕೃತ ಶಾಸನವಾಗಿದ್ದು, "ಕದಂಬರ ಮಯೂರವರ್ಮನಿಂದ (ಈ) ಕೆರೆಯು ಬಲಪಡಿಸಲ್ಪಟ್ಟಿತು. (ಇದಕ್ಕೆ) ಸುಂದರ ರೂಪವನ್ನು ರಚಿಸಿ, ಕಾಡಿನ ವಾಸದ ನೆಲೆಯನ್ನು ಸ್ಥಾಪಿಸಿದ" ಎಂದು ಓದಿ ಅರ್ಥೈಸಿದರು.
7. ಮಾಧವಿ ಎಂ.ಕೆ., 2017: 163–64
8. ರಾಜೇಶ್ ಹಂ.ಗು., 2018: 190
9. ವಿರೂಪಾಕ್ಷಿ ಪೂಜಾರಹಳ್ಳಿ 2003: 33.
10. Sanjay, 2004: 21-24
11. ರಾಜೇಶ್ ಹಂ.ಗು., 2009: 10–11.
12. 1904: 25–26.
13. ಮಂಜುನಾಥ ಎಂ.ಜಿ., **ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ,** 2006.
14. **ಅದೇ:** ಅರಿಕೆ: 21

15. ಉದಾಹರಣೆಗೆ: ಕ್ರಿ.ಶ. 1512ರ ಕಲ್ಯ ಶಾಸನವನ್ನು ಮೊದಲು ಸಂಪಾದಿಸಿರುವ ಬಿ.ಎಲ್.ರೈಸ್ ಅವರು **ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ–9** ರ ಪ್ರಕಾರ

1) ...ಶ್ರೀಮನ್ಮಹಾಕೃಷ್ಣರಾಯರಕಾಲದಲಿ ಮಯಿದೇವ....ಕನ
2) ಕೊಳಗಗ ...ನಾಯಕ ....ಪ್ಪಗಉಡು ಕಲಿನಾಥದೇವರ...

ಎಂದಿದೆ.

ಆದರೆ **ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ**ದ ಸಂಪಾದಕರು ಅವರು ಮರುಪರಿಶೀಲಿಸಿ ಪರಿಷ್ಕರಿಸಿರುವ ಪ್ರಕಾರ

1) ...ಶ್ರೀಮನ್ಮಹಾಕೃಷ್ಣರಾಯರ ಕಾಲದಲಿ ಯಲವಂಕನಾಡ
2) ಪ್ರಭು ಅಮರನಾಯಕ ಕೆಂಪ್ಪನಂಜೇಗಉಡರು ಕಲಿನಾಥ ದೇವರ ಅಂಗಭೋಗರಂಗ...

ಎಂದಾಗಿದೆ.

ಅದೇ ರೀತಿ 1515ರ ಕೆಂಪೋಹಳ್ಳಿ ಶಾಸನವನ್ನು ಮೊದಲು ಸಂಪಾದಿಸಿರುವ ಬಿ.ಎಲ್.ರೈಸ್ ಅವರು ಈ ಶಾಸನದ ಮೇಲ್ಭಾಗದ 6 ಪಂಕ್ತಿಗಳು ಹೋಗಿವೆ ಎಂದು ದಾಖಲಿಸಿ ಉಳಿದ ಸಾಲುಗಳನ್ನು ಸಂಪಾದಿಸಿದ್ದಾರೆ. ಆದರೆ, ರೈಸ್ ಅವರು ಬಿಟ್ಟಿರುವ ಆರಂಭಿಕ ಆರು ಸಾಲುಗಳ ಸ್ಥಾನದಲ್ಲಿ ಪ್ರಸ್ತುತ ಸಂಪುಟದ ಸಂಪಾದಕರು ಅವರು ಪರಿಷ್ಕರಣೆಯ ಸಂದರ್ಭದಲ್ಲಿ ನಾಲ್ಕು ಸಾಲುಗಳನ್ನು ಸೇರಿಸಿದ್ದಾರೆ.

1) ಸ್ವಸ್ತಿ ಶ್ರೀವಿಜೆಯಾಭ್ಯುದಯ ಶಾಲಿವಹನಶಕವರುಷ
2) 1437ನೆಯ ಯುವ ಸಂವತ್ಸರದ
3) ಶ್ರೀಕೃಷ್ಣರಾಯರ ಕಾಲದಲ್ಲಿ ಯಲಹಂಕನಾಡಪ್ರಭು
4) ಕೆಂಪನಂಜೇ ಗೌಡರು ತಮಗೆ ಸಲುವ ಮಾಗಡಿ ಸೀಮೆಯ

ನಾಲ್ಕನೇ ಸಾಲಿನಲ್ಲಿ ಕೆಂಪನಂಜೇಗೌಡನ ಹೆಸರನ್ನು ಸೇರಿಸಿರುವುದು ಕುತೂಹಲ ಮತ್ತು ಅನುಮಾನಗಳನ್ನು ಹುಟ್ಟಿಸಿತು. ಈ ಅನುಮಾನಕ್ಕೆ ಕಾರಣಗಳೂ ಇದ್ದವು. ಬಿ.ಎಲ್. ರೈಸ್ ಅವರು ಸಂಪಾದಿಸಿರುವ **ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ–9**ರ ಪ್ರಕಾರ ಮಾಗಡಿ ತಾಲ್ಲೂಕಿನಲ್ಲಿ ಕ್ರಿ.ಶ. 1512 ರಿಂದ 1562ರ ವರೆಗಿನ ಸುಮಾರು 50 ವರ್ಷಗಳ ಕಾಲಾವಧಿಯಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ 17 ಶಾಸನಗಳು ದೊರೆತಿವೆ. ಆ ಯಾವ ಶಾಸನಗಳಲ್ಲಿಯೂ ಕೆಂಪನಂಜೇಗೌಡನ ಹೆಸರಾಗಲಿ, ಕೆಂಪೇಗೌಡನ ಹೆಸರಾಗಲಿ ಕಂಡುಬರುವುದಿಲ್ಲ. ಈ ಅನುಮಾನವನ್ನು ಪರಿಹರಿಸಿಕೊಳ್ಳುವ ಸಲುವಾಗಿ ಮೇಲಿನ ಎರಡೂ ಶಾಸನಗಳ ಮರುಪರಿಶೀಲನೆಗಾಗಿ ಕೆಂಪೋಹಳ್ಳಿ (ಇಂದಿನ ಹೆಸರು ಕೋಡಿಪಾಳ್ಯ) ಮತ್ತು ಕಲ್ಯಗೆ ಎರಡು ಬಾರಿ ಭೇಟಿ ನೀಡಲಾಯಿತು. ಈ ಪರಿಶೀಲನೆಯಿಂದ ಸ್ಪಷ್ಟವಾಗಿದ್ದೇನೆಂದರೆ, ಕಲ್ಯ ಮತ್ತು ಕೆಂಪೋಹಳ್ಳಿಯ ಶಾಸನಗಳು ಬಿ.ಎಲ್.ರೈಸ್ ಓದಿರುವ ಪಾಠಕ್ಕೆ ಸರಿಯಾಗಿ ಹೊಂದುತ್ತವೆಯೇ ಹೊರತು ಯಲಹಂಕ ನಾಡಪ್ರಭುಗಳ ಶಾಸನ ಸಂಪುಟದಲ್ಲಿನ ಪರಿಷ್ಕೃತ ಪಾಠಕ್ಕೆ ಅಲ್ಲ! ಕೆಂಪೋಹಳ್ಳಿ ಶಾಸನದ ಆರಂಭಿಕ ಸಾಲುಗಳೇ ಸಂಪೂರ್ಣ ಕಾಣದಾಗಿವೆ. ಹೀಗಿರುವಾಗ ಅದರ ನಾಲ್ಕು ಸಾಲುಗಳ ಪಾಠವನ್ನು ಸಂಪಾದಕರು ಹೇಗೆ ಓದಿದರು ಎಂಬುದು ಯಕ್ಷಪ್ರಶ್ನೆಯಾಗಿದೆ.

ಈ ಸಂಪುಟದ ವಿಶ್ವಾಸಾರ್ಹತೆಯನ್ನು ಪ್ರಶ್ನಿಸಬಹುದಾದ ಮತ್ತೊಂದು ಅಂಶವನ್ನು ಇದೇ ಸಂಪುಟದ ಶಾಸನ ಸಂಖ್ಯೆ–72ರಲ್ಲಿ ಕಾಣಬಹುದು. ಈ ಶಾಸನ ಪಾಠವನ್ನು ಸಂಪಾದಕರು ಆರ್. ನರಸಿಂಹಾಚಾರ್ ಅವರು **ಎಂ.ಎ.ಆರ್**. 1922ರಲ್ಲಿ ಕೊಟ್ಟಿರುವ ಶಾಸನದ ಸಾರಾಂಶವನ್ನು ಆಧರಿಸಿ ಪುನರ್‌ರಚಿಸಿದ್ದಾರೆ. ಇದನ್ನು ಸ್ವತಃ ಸಂಪಾದಕರೇ ಅಡಿ ಟಿಪ್ಪಣಿಯಲ್ಲಿ ಹೇಳಿದ್ದಾರೆ ಕೂಡ. ಈ ರೀತಿ ಸಾರಾಂಶವನ್ನು ಆಧರಿಸಿ ಶಾಸನ ಪಾಠವನ್ನು ಕಲ್ಪಿಸಿ ದಾಖಲಿಸುವುದು ಸಂಪಾದನಾ ತತ್ವ ಮತ್ತು ಸಂಶೋಧನಾ ವಿಧಾನದ ದೃಷ್ಟಿಯಿಂದ ವಿಶ್ವಾಸಾರ್ಹ ನಡೆಯಾಗಿರುವುದಿಲ್ಲ. ಒಂದು ವೇಳೆ ಈ ಸಂಪುಟವನ್ನು ಆಧರಿಸಿ ಸಂಶೋಧನೆ ನಡೆಸಿದರೆ ಯಲಹಂಕ ನಾಡಪ್ರಭುಗಳು ಮೂಲತಃ ಮಾಗಡಿ ಸೀಮೆಯವರು ಎಂಬ ತೀರ್ಮಾನಕ್ಕೆ ಬರಬೇಕಾಗುತ್ತದೆ. ಆದ್ದರಿಂದ ಈ ಶಾಸನ ಸಂಪುಟವನ್ನು ಬಳಸಿಕೊಳ್ಳುವ ಸಂಶೋಧಕರು ಎಚ್ಚರ ವಹಿಸಬೇಕು ಮತ್ತು ಕೃತಿಯನ್ನು ಗಂಭೀರ ವಿಮರ್ಶೆಗೆ ಒಳಪಡಿಸಬೇಕು.

16. ದೇವರಕೊಂಡಾರೆಡ್ಡಿ, **"**ಗುಮ್ಮಳಾಪುರದ ಗೌರಮ್ಮನಗುಡಿಯ ಶಿಲಾಶಾಸನ**", ಇತಿಹಾಸ ದರ್ಶನ:** 1990: 31–33.

17. ವೇಮಗಲ್ ಸೋಮಶೇಖರ್, **"**ಬೆಂಗಳೂರಿನ ದೊಡ್ಡಬಸವಣ್ಣ ದೇವಾಲಯ ಮುಂದಿನ ಎರಡು ಅಪ್ರಕಟಿತ ಶಾಸನಗಳು**" ಇತಿಹಾಸ ದರ್ಶನ** 1996: 129–131.

18. ಮುನಿನಗರದ ಮಹಾದೇವಯ್ಯ, **"**ಮುನಿನಗರದ ಅಪ್ರಕಟಿತ ಶಾಸನ**": ಇತಿಹಾಸ ದರ್ಶನ 2002:** 78–79.

19. ಪುಟ್ಟಸ್ವಾಮಿ ಬಿ.ಎಸ್, **"**ಕೆಂಪವೀರಪ್ಪಗೌಡರ ಕಾಲದ ಅಪ್ರಕಟಿತನ ತಾಮ್ರಶಾಸನ**", ಇತಿಹಾಸ ದರ್ಶನ 2013:** 56–57.

20. ಗೋಪಾಲರಾವ್ ಎಚ್.ಎಸ್, **"**ಇಮ್ಮಡಿ ಕೃಷ್ಣರಾಜ ಒಡೆಯರ ದಾನಪತ್ರಗಳು**", ಇತಿಹಾಸ ದರ್ಶನ 1998:** 38–43.

21. ಶೈಲಜ ಬಿ.ಎಂ., **ಪಾಳೆಯಗಾರರ ಶಾಸನಗಳು ಸಂಪುಟ: 1**.

22. ಪುಟ್ಟಸ್ವಾಮಿ, **ಪಾಳೆಯಗಾರರ ಶಾಸನಗಳು ಸಂಪುಟ: 2**.

23. **ರಾಯರೇಖಾ** ಕೃತಿಕಾರನ ಹೆಸರು ದೊರೆತಿಲ್ಲ. ಇದರ ಪ್ರಕಾರ ಮಿಡಿಗೇಶಿಯ ನಾಡಪ್ರಭುಗಳ ಮನೆತನದ ಮೂಲಪುರುಷರಾದ ಏಳು ಜನ ಸೋದರರು ಸೊಲ್ಲಾಪುರದಿಂದ ದಕ್ಷಿಣ ದೇಶಕ್ಕೆ ಏಳು ಬಂಡಿಯಲ್ಲಿ ಬರುತ್ತಾರೆ. ಏಳು ಜನ ಸೋದರರು ಪ್ರತ್ಯೇಕವಾಗಿ ಒಂದೊಂದು ಊರುಕಟ್ಟಿಕೊಂಡು ನೆಲೆಸುತ್ತಾರೆ ಇತ್ಯಾದಿ ವಿವರಗಳಿವೆ. ಅದೇ ರೀತಿಯ ಐತಿಹ್ಯಗಳನ್ನು ಯಲಹಂಕ ನಾಡಪ್ರಭುಗಳ ಬಗೆಗೂ ಕಾಣಬಹುದು. ಏಳು ಜನ ಸೋದರರು ಏಳು ಬಂಡಿಯಲ್ಲಿ ಕಂಚಿಯ ಕಡೆಯಿಂದ ಬಂದು ಆವತಿಯಲ್ಲಿ ನೆಲೆಸಿದರು. ನಂತರ ಬೇರೆ ಬೇರೆ ಊರುಗಳಲ್ಲಿ ನೆಲೆನಿಂತರೆಂದು ಹೇಳಲಾಗುವ ಐತಿಹ್ಯಗಳ ಹಿಂದೆ ಒಂದು ಆಶಯ ಮತ್ತು ಸಂಕೇತಗಳಿರುವುದನ್ನು ಗಮನಿಸಬಹುದು.

24. **ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ**' 1961.

25. ನರಸಿಂಹಾಚಾರ್ ಆರ್., 2005: 563

26. **ಉದ್ಧೃತ:** ಮಂಜುನಾಥ ಎಂ.ಜಿ., 2012: ಪ್ರಸ್ತಾವನೆ ಪು.25

27. ಮಂಜುನಾಥ ಎಂ.ಜಿ, **ಹೊನ್ನಕವಿಯ ಸಮಗ್ರಸಾಹಿತ್ಯ**' 2012.

28. **ಅದೇ.**: 1–58.

29. ಕರ್ಲಮಂಗಲಂ ಶ್ರೀಕಂಠಯ್ಯ, 1961: ಮುನ್ನುಡಿ 3–4

30. ನೋಡಿ: ಪ್ರಸ್ತುತ ಮಹಾಪ್ರಬಂಧದ ಅನುಬಂಧ–1

31. ಕೃಷ್ಣಮೂರ್ತಿ ಪಿ.ವಿ., 1996: 14–15

32. ನರಸಿಂಹಯ್ಯ ಎಸ್.ಕೆ., 1924: 43.

33. ಮಂಜುನಾಥ ಎಂ.ಜಿ., **ಬೆಂಗಳೂರಿನ ಬಖೈರುಗಳು**', 2012.

34. **ಬೆಂಗಳೂರಿನ ಬಖೈರುಗಳು** ಕೃತಿಯ ಸಂಪಾದಕರು ತಮ್ಮ ಪ್ರಸ್ತಾವನೆಯಲ್ಲಿ "ವಾಸ್ತವವಾಗಿ ಈ ಬಖೈರುಗಳು ಮೂಲ ಮರಾಠಿ ಭಾಷೆಯಿಂದ ಇಂಗ್ಲಿಷ್‌ಗೆ ಅನುವಾದಿಸಲ್ಪಟ್ಟಿರುವಂತೆಯೂ, ಮರಾಠಿ ಮೂಲದಿಂದ ಇಂಗ್ಲೀಷ್‌ಗೆ ಅನುವಾದಿಸಲ್ಪಟ್ಟಿರುವುದನ್ನು ಗಮನಿಸಿದರೆ ಹಾಗೂ ಈ ಬಖೈರುಗಳಲ್ಲಿ ತೆಲುಗು ಹಾಗೂ ತಮಿಳು ಶಬ್ದಗಳು ಬಳಕೆಯಾರುವುದನ್ನು ಗಮನಿಸಿದರೆ ಈ ಬಖೈರುಗಳ ಕೃರ್ತ್ಯಗಳು ಮರಾಠಿ ಮಾತೃಭಾಷಿಕ ವ್ಯಕ್ತಿಗಳು ಇಂಗ್ಲೀಷ್ ಅನ್ನು ಬೆನ್ನಾಗಿ ಕಲಿತು ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ಬ್ರಿಟಿಷರ ಸೇವೆಗೆ ಸೇರಿಕೊಂಡು ನಂತರ ಬೆಂಗಳೂರಿನಲ್ಲಿ ಸೇವೆಯನ್ನು ಮುಂದುವರಿಸಿದ್ದು ಇಲ್ಲಿ ಈ ಬಖೈರುಗಳನ್ನು ರಚಿಸಿದ್ದಾರೆಂದು ತೋರುತ್ತದೆ" (2006: 3–4) ಎಂದಿದ್ದಾರೆ. ಆದರೆ ಇಲ್ಲಿನ ಎಲ್ಲಾ ದಾಖಲೆಗಳನ್ನು ಮರಾಠಿಯಿಂದ ಅನುವಾದಿಸಿದಂತೆ ತೋರುವುದಿಲ್ಲ. ಇಲ್ಲಿ ಕೆಲವನ್ನು ಕೇಳಿಬರೆದಂತೆ ಇದೆ. ಉದಾ. "ಬೆಂಗಳೂರಿನ ಬಳಿಯ ಕೆಲವು ವಿಶೇಷಗವಿಗಳು ಮತ್ತು ಪೂಜಾ ಸ್ಥಾನಗಳು" ಇದನ್ನು ಸಿ.ಲಚ್ಮನ್ ಅವರು ರಚಿಸಿರುವುದಾಗಿ ತಿಳಿದು ಬರುತ್ತದೆ. "ಬೆಂಗಳೂರು ಬಖೈರು" ಮಾತ್ರ ಮೂಲ ಮರಾಠಿಯಿಂದ ಬ್ರಾಹ್ಮಣ ಸುಬ್ಬರಾವ್ ಅವರಿಂದ ಇಂಗ್ಲೀಷ್‌ಗೆ ಅನುವಾದಗೊಂಡಿದೆ. ಆದ್ದರಿಂದ ಸುಬ್ಬರಾವ್ ಮರಾಠಿ ಭಾಷಿಕ ಮೂಲದವನಾಗಿರುವಂತಿದೆ.

35. ಕಾವಲಿ ಸೋದರರಲ್ಲಿ ಬೋರಯ್ಯ, ವೆಂಕಟ ಲಕ್ಷ್ಮಯ್ಯ ಮತ್ತು ರಾಮಸ್ವಾಮಿ ಇವರುಗಳು ಕರ್ನಲ್ ಮೆಕೆಂಜಿಗೆ ನೆರವಾಗಿದ್ದರು.

36. Rama Sundari Mantena, 2009: 137.

37. ಪುಟ್ಟಯ್ಯ ಬಿ., 1923: 723-741.

38. **ತುಳು ಕರ್ನಾಟಕದ ಅರಸು ಮನೆತನಗಳು,** 2000.

39. ವಸು ಎಂ.ವಿ., (ಸಂ), **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** 2001.

40. ಕೊಟ್ರೇಶ್ ಎಂ. (ಸಂ), **ಕಲ್ಯಾಣ ಕರ್ನಾಟಕದ ಅರಸು ಮನೆತನಗಳು,** 2010.

41. ಶ್ಯಾಮಲ ಸಿ.ಆರ್., **ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ.** 2017.

42. ಅಮರೇಶ ಯತಗಲ್, **ಕರ್ನಾಟಕ ನಾಯಕ ಅರಸುಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು,** 2018.

43. ಯೋಗೀಶ್ವರಪ್ಪ ಡಿ.ಎನ್., **ಪ್ರಾದೇಶಿಕತೆ: ಕರ್ನಾಟಕದ ಪಾಳೆಯಗಾರರು,** 2016.

44. ನರಸಿಂಹಯ್ಯ ಎಸ್.ಕೆ., **ಮಾಗಡಿ ಕೆಂಪೇಗೌಡ: ಬೆಂಗಳೂರು ಸ್ಥಾಪಕ ಮತ್ತು ಆತನ ಪೂರ್ವೀಕರು,** 1924(1922).

45. ನರಸಿಂಹಯ್ಯ ಎಸ್.ಕೆ., **Magadi Kempe Gowda,** 1922.

46. ಕೃಷ್ಣರಾವ್ ಎಂ.ವಿ., **ಬೆಂಗಳೂರು ಕೆಂಪೇಗೌಡ,** 1964.

47. ದಯಾನಂದ ಪಟೇಲ್ ಟಿ ಮತ್ತು ವೀರಪ್ಪ ಜಿ ಟಿ., (ಸಂ)., **ಯಲಹಂಕ ಪ್ರಭುಗಳು ಒಂದು ಅಧ್ಯಯನ,** ಮಂಡ್ಯ ಸಾಹಿತ್ಯ ಪರಿಷತ್ತು, ಮಂಡ್ಯ, 1994.

48. ಕೃಷ್ಣಯ್ಯ ಎಂ.ಎಚ್. ಮತ್ತು ದೇವರಕೊಂಡಾ ರೆಡ್ಡಿ, **ಬೆಂಗಳೂರು ಕೆಂಪೇಗೌಡರ ವಂಶಸ್ಥರು,** ಜನತಾ ಶಿಕ್ಷಣ ಸಂಸ್ಥೆ, ಬೆಂಗಳೂರು, 1996.

49. ರಾಜೇಗೌಡ ಹ.ಕ., **ಬೆಂಗಳೂರು ಕೆಂಪೇಗೌಡ ಮತ್ತು ಅವನ ವಂಶಸ್ಥರು,** 2005.

50. ಪುಟ್ಟಸ್ವಾಮಿ ಬಿ.ಎಸ್., **ಯಲಹಂಕ ನಾಡಪ್ರಭು ಕೆಂಪೇಗೌಡ ಮತ್ತು ಆತನ ವಂಶಸ್ಥರು,** ಮನೋಜ್ ಪಬ್ಲಿಕೇಷನ್ಸ್, ಬೆಂಗಳೂರು, 2011.

51. ಬೋರಯ್ಯ ಎಚ್.ಎಂ., **ಯಲಹಂಕ ಮಹಾನಾಡ ಪ್ರಭುಗಳು,** 2020.

52. ಕೃಷ್ಣಮೂರ್ತಿ ಪಿ.ವಿ., **ಶಾಸನ, ಇತಿಹಾಸ ಮಂಥನ,** 2011.

53. ಕೃಷ್ಣಮೂರ್ತಿ ಪಿ.ವಿ, **ಸುಗುಟೂರು ವೀರಶೈವ ಅರಸುಮನೆತನ,** 1993.

54. ಅರುಣಿ ಎಸ್.ಕೆ., **ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ,** 2007.

55. ಅರುಣಿ ಎಸ್.ಕೆ., **ಬೆಂಗಳೂರು ಪರಂಪರೆ,** 2019.

56. ಲಿಂಗಯ್ಯ ಡಿ., **ಯಲಹಂಕ ನಾಡಪ್ರಭುಗಳು ಜಾನಪದ ಸಂಪುಟ (ಜನಪದ ಕಾವ್ಯಗಳು ಮತ್ತು ಲೇಖನಗಳ ಸಂಕಲನ),** 2005.

57. ಗೋಪಾಲ್ ಆರ್., **ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು,** 2010.

58. ಗೋಪಾಲ್ ಆರ್. **ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ,** 2013.

59. ಕೃಷ್ಣರಾವ್ ಎಂ ವಿ ಮತ್ತು ಕೇಶವಭಟ್ಟ ಎಂ., **ಕರ್ಣಾಟಕದ ಇತಿಹಾಸ ದರ್ಶನ,** 1970: 503–518.

60. ರಾಜಗೋಪಾಲ್ ರಾವ್ ಎನ್., **ಕರ್ನಾಟಕ ಪರಂಪರೆ:** 2014(1970): 183–187.

61. ಸುಂದರರಾವ್ ಬ.ನ., **ಬೆಂಗಳೂರಿನ ಇತಿಹಾಸ,** 2011(1985): 23–77.

62. ವಸು ಎಂ.ವಿ., **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** 2001 : 281–305.

63. Suryanath Kamath,(Ed.), **Bangalore District Gazetteer** 1990: 61-64.

64. Fazlul Hasan, **Bangalore Through the Centuries**, 1970: 1-30.

65. Maya Jayapal, **Bangalore The Story of a City,** 1997: 5-22.

66. T.V. Annaswamy, **Bengaluru to Bangalore Urban History of Bangalore from the Pre-Historic Period to the end of 18th century** , 2003: 109-139

67. Yashswini Sharma, **Bangalore: The Early City,** 2016.

68. ಗಂಗಾಂಬಿಕೆ ಎಸ್., **"**ಹೊಸ ಪರಿವೀಕ್ಷಣೆಯ ಹಿನ್ನೆಲೆಯಲ್ಲಿ ನಾಡಪ್ರಭು ಕೆಂಪೇಗೌಡನ ಇತಿಹಾಸದ ಗೊಂದಲಗಳೊಂದಿಗೆ ಒಂದು ಸಂವಾದ**",**

69. ಗಂಗಾಂಬಿಕೆ ಎಸ್., **"**ಕೆಂಪೇಗೌಡರ ಆಗಮನದಿಂದ ಹೈದರ್ ಅಲಿ ಆಗಮನದವರೆಗೆ ಬೆಂಗಳೂರು ಪರಿಸರದ ಇತಿಹಾಸ ಮತ್ತು ಸಂಸ್ಕೃತಿ (ಕ್ರಿ.ಪೂ. 1500–1760ರವರೆಗಿನ ಕಾಲವನ್ನು ಅನುಲಕ್ಷಿಸಿ)**"**

70. ಗಂಗಾಂಬಿಕೆ ಎಸ್., **ಕೆಂಪೇಗೌಡರು ಮತ್ತು ಅವರ ವಂಶೀಯರು ಹೊಸ ಪರಿವೀಕ್ಷಣೆಗಳು,** ಅಪ್ಸರ ಪ್ರಕಾಶನ, ಮೈಸೂರು, 2020.

71. ಗೋವರ್ಧನ ಸುಂಕಂ., **"**ಬೆಂಗಳೂರು ಪರಿಸರದ ರಾಜಕೀಯ ಅವಲೋಕನ (ಹೊಯ್ಸಳೋತ್ತರ ಯುಗದಿಂದ ನಾಡಪ್ರಭುಗಳ ಆಗಮನದವರೆಗೆ)**"**

72. ಗೋವರ್ಧನ ಸುಂಕಂ., **ಮಾಗಡಿ ತಾಲ್ಲೂಕಿನ ಶಾಸನಗಳು ಹೊಸ ಹೊಳಹುಗಳು**, ಅದಮ್ಯ ಪ್ರಕಾಶನ, ಬೆಂಗಳೂರು, 2020.

73. ರಾಜೇಶ್ ಹಂ.ಗು., **"**ಕೆಂಪಾಪುರ ಸಮಾಧಿಯ ಕೆಂಪೇಗೌಡ ಯಾರು**",**

74. ರಾಜೇಶ್ ಹಂ.ಗು., **"**ಬೆಂಗಳೂರಿನ ನೆಲೆ–ಹಿನ್ನೆಲೆ**",**

75. ರಾಜೇಶ್ ಹಂ.ಗು., **"**ಕೆಂಪೇಗೌಡನ ಸೊಸೆ ಲಕ್ಷ್ಮೀದೇವಿಯ ಆತ್ಮಬಲಿದಾನ: ಒಂದು ಚಾರಿತ್ರಿಕ ಪರಿಶೀಲನೆ**"**

76. ನಾರಾಯಣಾಚಾರ್ಯ ಕೆ., **ಮಧುಗಿರಿ ಚರಿತ್ರೆ,** 1945.

77. ಸದಾಶಿವಪ್ಪ, ಹು.ಪು., **ಹುಲಿಯೂರು ದುರ್ಗ,** 1978.

78. ಮಂಜುಳ ಎಸ್.ಎ., **ಹುತ್ತರೀದುರ್ಗ,** 1986.

79. ಲಕ್ಷ್ಮಣ್ ತೆಲಗಾವಿ (ಸಂ.), **ಹರತಿಸಿರಿ,** 1987.

80. ಅಂತಪ್ಪ ಐ., **ಬ್ರಿಟಿಷರು ಬರುವುದಕ್ಕೆ ಮುಂಚೆ ಬೆಂಗಳೂರು ಮತ್ತು ಸುತ್ತಮುತ್ತಲಲ್ಲಿ ಕ್ರೈಸ್ತ ಧರ್ಮದ ಉಗಮ** 1648–1800, 2000.

81. ಸುಮಿತ್ರ ಎಂ., **ಕರಗ ಸಂಪ್ರದಾಯ,** 2002.

82. ಚಂದ್ರಮೌಳಿ ಕೆ., **ಬೆಂಗಳೂರಿನ ನೋಟಗಳು,** 2002.

83. ಯೋಗೀಶ್ವರಪ್ಪ ಡಿ.ಎನ್., **ಹಾಗಲವಾಡಿ ನಾಯಕರು,** 2003.

84. ಯೋಗೀಶ್ವರಪ್ಪ ಡಿ.ಎನ್., **ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು,** 2009.

85. ಯೋಗೀಶ್ವರಪ್ಪ ಡಿ.ಎನ್, **ನಾಯಕತನ ಪದ್ಧತಿ,** 2016.

86. ಕಾವಲಮ್ಮ ಆರ್., **ಮಧುಗಿರಿ ಮಹಾನಾಡು ಪ್ರಭುಗಳು**, 2005.

87. ನಾಗರಾಜ್ ಟಿ.ವಿ., **ಮೊರಸು ಒಕ್ಕಲಿಗರ ದ್ಯಾವರ ಸಂಪ್ರದಾಯಗಳು,** 2005.

88. ಮುನಿರಾಜಪ್ಪ, **ಮಾಗಡಿ ಸೀಮೆಯ ಇತಿಹಾಸ ಸಂಸ್ಕೃತಿ,** 2007

89. ವೆಂಕಟಾಚಲ ಶಾಸ್ತ್ರೀ ಟಿ.ವಿ., **ಕನಕಪುರ ಎಂಬ ಕಾನಕಾನ ಹಳ್ಳಿಯ ಚರಿತ್ರೆ,** 2007.

90. ಸುಮತೀಂದ್ರ ನಾಡಿಗ್, ಸಂತೇಬೆನ್ನೂರು, **ಸಂತೇಬೆನ್ನೂರು ನಾಯಕರು,** 2008.

91. ಲಕ್ಷ್ಮಣ್ ತೆಲಗಾವಿ, **ಎಪ್ಪತ್ತೇಳು ಪಾಳೆಯಗಾರರು**, 2010.

92. ಗುಡ್ಡದೇಶ್ವರಪ್ಪ ಎಚ್, **ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, 2010.

93. ನಾಗರಾಜು ಎಂ.ಎಚ್., **ಮೊರಸು ಒಕ್ಕಲಿಗರು ಒಂದು ಸಾಂಸ್ಕೃತಿಕ ಅಧ್ಯಯನ,** 2011.

94. ಗೋಪಾಲಗೌಡ ಕಲ್ವಮಂಜಲಿ, **ಕೋಲಾರ ಚಿಕ್ಕಬಳ್ಳಾಪುರ ಪ್ರಾಂತ ಆವತಿ ನಾಡಪ್ರಭುಗಳು ಇತಿಹಾಸ,** 2012.

95. ಹನುಮಂತೇಗೌಡ ಕೆಂಕೆರೆ, **ದೇವಗುಂದ ಮಹಾನಾಡ ಪ್ರಭುಗಳು,** 2015.

96. ವೆಂಕಟೇಶ್ ಎಸ್. **ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ**, 2016.

97. ಶ್ಯಾಮಲ ಸಿ ಆರ್, **ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ,** 2017.

98. ಸಿದ್ಧಗಂಗಯ್ಯ ಬಿ ಕಂಬಾಳು, **ಹುಲಿಕಲ್ಲು,** 2015.

99. ಸಿದ್ಧಗಂಗಯ್ಯ ಬಿ ಕಂಬಾಳು, **ಶಿವಗಂಗೆ,** 2017.

100. ಬೋರಯ್ಯ ಎಂ.ಎಚ್., **ಆವತಿ ನಾಡಪ್ರಭುಗಳು,** 2017.

101. ನಾಗರಾಜು ಎಂ.ಎಚ್., **ಗುಬ್ಬಿ ಹೊಸಹಳ್ಳಿ ಪ್ರಭುಗಳು,** 2020.

102. ನಾಡನ್ನು ಕುರಿತು ಈವರೆಗೆ ಅನೇಕ ವಿದ್ವಾಂಸರು ಚರ್ಚೆಗಳನ್ನು ನಡೆಸಿದ್ದಾರೆ. ಮುಖ್ಯವಾಗಿ K.A. Nilkanta Sastri, The Colas, Madras, 2000(1955); T.V. Mahalingam. Administration and Social life under Vijayanagar Part-1, Madras, 1969; Y. Subbarayalu, Political Geography of the Cola Country, Tamil Nadu State Department of Archaeology, Madras, 1973; Burton Stein, Peasant State and Society in Medieval South India. OUP, 1999 (1980); K.R. Basavaraja, History and Culture of Karnataka, Dharwad, 1984, Noboru Karashima, A Concordance of Nayakas, OUP, 2002; G.S. Dikshit, Local Bodies in Medieval South India, Hospet, 2004; ಎ.ವಿ. ವೆಂಕಟರತ್ನಂ ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಮೈಸೂರು, 1974 ಮುಂತಾದವರು.

103. Burton Stein 1999: 90

104. ಚನ್ನಬಸವಯ್ಯ ಹಿರೇಮಠ 2014: 39

105. ಶೆಟ್ಟರ್ ಷ. 2007: 147

106. Malini Adiga 2006: 16–17

107. **ಉದ್ಧೃತ:** Burton Stein 1999: 91

108. ಮನು ವಿ ದೇವದೇವನ್ 2009: 35–36

109. ನೊಬೊರು ಕರಾಶಿಮಾ 2014: 135

110. ಚಿದಾನಂದಮೂರ್ತಿ ಎಂ. 2002 (1966): 379

111. ನಾಗರಾಜು ಎಚ್.ಎಂ. 1999: 85

112. ವೆಂಕಟರತ್ನಂ ಎ.ವಿ. : ಮೈಸೂರು, 1974: 90

113. ವೆಂಕಟರತ್ನಂ ಎ.ವಿ: ಮೈಸೂರು, 1974: 97–98

114. ವೆಂಕಟರತ್ನಂ ಎ ವಿ: 1974: 90–95

115. ವೆಂಕಟರತ್ನಂ ಎ.ವಿ: 1974: 93–94

116. ಕಾವಲಮ್ಮ ಆರ್: **ಮಧುಗಿರಿ ಮಹಾನಾಡು ಪ್ರಭುಗಳು:** ಬೆಂಗಳೂರು, 2005

117. **ಎ.ಕ. (ಅನು.) 9:** ಬೆಂಗಳೂರು ಶಾ.ಸಂ.165

118. **ಎ.ಕ. (ರೈ) 9:** ದೇವನಹಳ್ಳಿ ಶಾ.ಸಂ.60

119. **ಎ.ಕ. (ರೈ) 9:** ಬೆಂಗಳೂರು ಶಾ.ಸಂ.129

120. ಮಂಜುನಾಥ ಎಂ.ಜಿ. **ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ,** ಬೆಂಗಳೂರು, 2006 ಪ್ರಸ್ತಾವನೆ: 26; ಎಚ್.ಎಂ. ಬೋರಯ್ಯ, **ಯಲಹಂಕ ಮಹಾನಾಡ ಪ್ರಭುಗಳು,** ಬೆಂಗಳೂರು, 2020: 19

121. ವೆಂಕಟರತ್ನಂ ಎ ವಿ, **ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ,** 1974:14.

122. ಯೋಗೀಶ್ವರಪ್ಪ ಡಿ.ಎನ್. **ನಾಯಕತನ ಪದ್ಧತಿ,** ಬೆಂಗಳೂರು: 2016: 2

123. ಶ್ಯಾಮಲ ಸಿ.ಆರ್., **ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ,** ಮುಂಬೈ: 2017: 11

124. Burton Stein**, Peasant State and Society in Medieval South India,** OUP, 1999

125. Noboru Karashima, **A Concordance of Nayakas,** OUP, 2002

126. ಡಿ.ಎನ್. ಯೋಗೀಶ್ವರಪ್ಪ, **ನಾಯಕತನ ಪದ್ಧತಿ,** ಬೆಂಗಳೂರು, 2016:5

127. ಲಕ್ಷ್ಮಣ್ ತೆಲಗಾವಿ, **"**ವಿಜಯನಗರದ ಅಮರನಾಯಕರು ಮತ್ತು ಪಾಳೆಯಗಾರರು**",** 2009: 23–24

128. ಶ್ಯಾಮಲ ಸಿ.ಆರ್., **ಪೂರ್ವ ಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ,** ಮುಂಬೈ: 2017: 11

129. ಸುಮತೀಂದ್ರ ನಾಡಿಗ್ ಎಸ್. **ಸಂತೆಬೆನ್ನೂರು ನಾಯಕರು,** ಬೆಂಗಳೂರು, 2008: 3.

130. ಸೂರ್ಯನಾಥ ಕಾಮತ್, (ಸಂ.) **ಕರ್ನಾಟಕ ಗ್ಯಾಸೆಟಿಯರ್ ಸಂಪುಟ–1,** 1984: 9.

131. **ಅದೇ.**: 19.

132. Rice B.L., **Mysore Gazetteer Vol.-1**, Archibald Constable & Com, Whitehall Gardens.London: 1897.

133. ಸೂರ್ಯನಾಥ ಕಾಮತ್, **ಪೂರ್ವೋಕ್ತ,** 1984: 16.

134. **ಅದೇ.**: 28.

135. ರಾಜೇಶ್ ಹಂ.ಗು., **"**ಕೆಂಪೇಗೌಡರ ಬೆಂಗಳೂರು: ನೆಲೆ–ಹಿನ್ನೆಲೆ**",** 2020: 500.

136. **ಅದೇ.**

137. **ಅದೇ.**: 499.

138. ಸೂರ್ಯನಾಥ ಕಾಮತ್, **ಪೂರ್ವೋಕ್ತ,** 1984: 27.

139. **ಎ.ಕ. (ರೈ)9**: ಬೆಂಗಳೂರು–133.

# ಅಧ್ಯಾಯ–2

# ದಕ್ಷಿಣ ಕರ್ನಾಟಕದ ಚಾರಿತ್ರಿಕ ಅವಲೋಕನ

ಕರ್ನಾಟಕ ಇತಿಹಾಸದ ವಿವಿಧ ಕಾಲಘಟ್ಟಗಳಲ್ಲಿ ಹತ್ತಾರು ಪ್ರಸಿದ್ಧ ರಾಜಮನೆತನಗಳು ನೂರಾರು ಸಾಮಂತ ಮನೆತನಗಳು, ಪಾಳೆಯಗಾರರ ಮನೆತನಗಳು ಆಳ್ವಿಕೆ ನಡೆಸಿವೆ. ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರೆಗಿನ ಚರಿತ್ರೆಯಲ್ಲಿ ಈ ಎಲ್ಲಾ ಮನೆತನಗಳು ತಮ್ಮ ನಂತರದ ಮನೆತನದ ಮೇಲೆ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಧಾರ್ಮಿಕವಾಗಿ ಒಂದನೊಂದು ಪ್ರಭಾವಿಸುತ್ತಾ ಬಂದಿವೆ. ಆದ್ದರಿಂದ ಯಾವುದೇ ಮನೆತನದ ಚರಿತ್ರೆಯನ್ನು ಅಧ್ಯಯನ ನಡೆಸುವ ಸಂದರ್ಭದಲ್ಲಿ ಅದರ ಹಿಂದಿನ ಮತ್ತು ಸಮಕಾಲೀನ ರಾಜಮನೆತನಗಳ ಚರಿತ್ರೆಯನ್ನು ಅವಲೋಕಿಸುವುದು ಯುಕ್ತವಾದ ಮಾರ್ಗವಾಗಿದೆ. ಏಕೆಂದರೆ, ಹಿಂದಿನ ಮನೆತನಗಳು ಮುಂದಿನ ಮನೆತನಗಳ ಮೇಲೆ ಸಹಜವಾಗಿ ಪ್ರಭಾವ ಬೀರಿರುತ್ತವೆ. ಅಲ್ಲದೆ, ಅಧ್ಯಯನ ನಡೆಸುತ್ತಿರುವ ಮನೆತನವು ತನ್ನ ಸಮಕಾಲೀನ ಮನೆತನಗಳ ಜೊತೆಗೆ ಯಾವ ರೀತಿಯ ಸಂಬಂಧಗಳನ್ನು ಹೊಂದಿತ್ತು? ಅವುಗಳ ನಡುವಿನ ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಕೊಡುಕೊಳ್ಳುವಿಕೆ ಮತ್ತು ಇತರ ಸಂಬಂಧಗಳು ಹೇಗಿದ್ದವು? ಹಾಗೂ ಆ ಕಾಲಘಟ್ಟದ ಘಟನೆಯ ಕಾರ್ಯಕಾರಣ ಸಂಬಂಧಗಳೇನು? ಮೊದಲಾದ ಅಂಶಗಳನ್ನು ಕುರಿತು ಅಧ್ಯಯನ ನಡೆಸಲು ಪ್ರಸ್ತುತ ಅಧ್ಯಾಯವು ಮುಖ್ಯವಾಗಿರುತ್ತದೆ. ಆದ್ದರಿಂದ ಈ ಅಧ್ಯಾಯದ ಮೊದಲ ಭಾಗದಲ್ಲಿ ಕರ್ನಾಟಕವನ್ನು ಆಳಿದ ಪ್ರಮುಖ ರಾಜಮನೆತನಗಳಾದ ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಚೋಳರು, ವಿಜಯನಗರ ಸಾಮ್ರಾಟರು, ಬಹಮನಿ ಮತ್ತು ಆದಿಲ್‌ಷಾಹಿಗಳ ಸಂಕ್ಷಿಪ್ತ ಇತಿಹಾಸವನ್ನು ಅವಲೋಕಿಸಲಾಗಿದೆ. ಎರಡನೇ ಭಾಗದಲ್ಲಿ ಯಲಹಂಕ ನಾಡಪ್ರಭುಗಳ ಸಮಕಾಲೀನವಾದ ದಕ್ಷಿಣ ಕರ್ನಾಟಕದ ಕೆಲವು ಪ್ರಮುಖ ನಾಯಕರು, ಅರಸರು, ನಾಡಪ್ರಭುಗಳು ಮತ್ತು ಪಾಳೆಯಗಾರ ಮನೆತನಗಳ ಇತಿಹಾಸವನ್ನು ಅವಲೋಕಿಸಲಾಗಿದೆ. ಪ್ರಸ್ತುತ ಅಧ್ಯಾಯವು ಮುಂದಿನ ಅಧ್ಯಾಯಗಳಿಗೆ ಒಂದು ಚಾರಿತ್ರಿಕ ಭೂಮಿಕೆಯನ್ನು ಒದಗಿಸಿಕೊಡುವ ನಿಟ್ಟಿನಲ್ಲಿ ಮುಖ್ಯವಾದುದಾಗಿದೆ.

## 2.1 ಕರ್ನಾಟಕದ ಚಾರಿತ್ರಿಕ ಅವಲೋಕನ

ಕರ್ನಾಟಕಕ್ಕೆ ಸುಮಾರು 2000 ವರ್ಷಗಳಿಗೂ ಹಿಂದಿನ ಇತಿಹಾಸವಿದೆ. ಈ ಇತಿಹಾಸ ಅಧ್ಯಯನಕ್ಕೆ ಬಹುಮುಖ್ಯ ಆಕರಗಳೆಂದರೆ ಶಾಸನಗಳು. ಶಾಸನಗಳ ಲಭ್ಯತೆಯ ಒಟ್ಟು

ಪ್ರಮಾಣದ ಹಿನ್ನೆಲೆಯಲ್ಲಿ ನೋಡಿದಾಗ ಕರ್ನಾಟಕವು ತಮಿಳುನಾಡಿನ ನಂತರದ ಸ್ಥಾನದಲ್ಲಿದೆ. ಆದರೆ, ಮೊದಲ ಸಹಸ್ರಮಾನದಲ್ಲಿ ದೊರೆತಿವ ಭಾಷಿಕ ಶಾಸನಗಳ ಸಂಖ್ಯೆ ದೃಷ್ಟಿಯಿಂದ ಕನ್ನಡದಲ್ಲಿ ಅತಿಹೆಚ್ಚು ಶಾಸನಗಳು ದೊರೆತಿವೆ. ಷ.ಶೆಟ್ಟರ್ ಅವರು ಮೊದಲ ಸಹಸ್ರಮಾನದಲ್ಲಿ ದೊರೆತಿವ ಕನ್ನಡ ಶಾಸನಗಳ ಸಂಖ್ಯೆ 2020 ಎಂಬುದಾಗಿ ಪಟ್ಟಿಮಾಡಿದ್ದಾರೆ.[1] ಈ ಎಲ್ಲ ಶಾಸನಗಳ ಜೊತೆಗೆ ಸಂಸ್ಕೃತ, ಪ್ರಾಕೃತ, ತಮಿಳು, ತೆಲುಗು ಮತ್ತಿತರ ಭಾಷೆಯಲ್ಲಿರುವ ಶಾಸನಗಳು, ಕನ್ನಡ, ತಮಿಳು ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚನೆಯಾಗಿರುವ ಸಾಹಿತ್ಯ ಕೃತಿಗಳು, ವಿದೇಶಿಯ ಬರವಣಿಗೆಗಳು ಬಹುಮುಖ್ಯ ಆಕರಗಳಾಗಿವೆ. ಪ್ರಸ್ತುತ ಅಧ್ಯಾಯದಲ್ಲಿ ಚಾರಿತ್ರಿಕ ಅವಲೋಕನವನ್ನು ನಡೆಸುತ್ತಿದ್ದು, ಹೆಚ್ಚಾಗಿ ಮೂಲ ಆಕರಗಳಿಗೆ ಹೋಗದೆ ಆನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ.

ಚಾರಿತ್ರಿಕವಾಗಿ ನೋಡಿದಾಗ ಪ್ರಾಚೀನ ಕರ್ನಾಟಕವು ಮೌರ್ಯರಿಗೂ ಮೊದಲು ನಂದರಿಂದಲೂ ಆಳಲ್ಪಟ್ಟಿತ್ತೆಂದು ತಿಳಿದು ಬರುತ್ತದೆ.[2] ನಂದರ ನಂತರ ಬಂದ ಮೌರ್ಯರು ಕರ್ನಾಟಕದೊಂದಿಗೆ ಪ್ರತ್ಯಕ್ಷ ಸಂಬಂಧ ಹೊಂದಿದ್ದ ಬಗ್ಗೆ ಶಾಸನ ಮತ್ತು ಸಾಹಿತ್ಯಕ ಆಕರಗಳು ಬೆಳಕು ಚೆಲ್ಲುತ್ತವೆ.

### 2.1.1 ಕರ್ನಾಟಕದಲ್ಲಿ ಮೌರ್ಯರು

ಭಾರತದಲ್ಲಿ ಮೊದಲ ಸಾಮ್ರಾಜ್ಯವನ್ನು ಸ್ಥಾಪಿಸಿದವರು ಮೌರ್ಯರು. ಮೌರ್ಯ ಸಾಮ್ರಾಜ್ಯದ ಸ್ಥಾಪಕನಾದ ಚಂದ್ರಗುಪ್ತ ಮೌರ್ಯನು ತನ್ನ ಕೊನೆಗಾಲದಲ್ಲಿ ಜೈನ ಗುರು ಭದ್ರಬಾಹುವಿನೊಡನೆ ಶ್ರವಣಬೆಳಗೊಳಕ್ಕೆ ಬಂದು ಸಲ್ಲೇಖನ ವ್ರತ ಕೈಗೊಂಡು ಚಂದ್ರಗಿರಿ (ಕಳ್ವಪ್ಪು) ಬೆಟ್ಟದಲ್ಲಿ ನಿರ್ವಾಣ ಹೊಂದಿದನು.[3] ಅನಂತರ ಅಧಿಕಾರಕ್ಕೆ ಬಂದ ಚಂದ್ರಗುಪ್ತ ಮೌರ್ಯನ ಮೊಮ್ಮಗ ಮತ್ತು ಬಿಂದುಸಾರನ ಮಗ ಅಶೋಕನು ಕರ್ನಾಟಕದ ಮಧ್ಯಭಾಗದವರೆಗೂ ತನ್ನ ಶಾಸನಗಳನ್ನು ಹಾಕಿಸಿದನು. ಕರ್ನಾಟಕದ 9 ಸ್ಥಳಗಳಲ್ಲಿ (ಚಿತ್ರದುರ್ಗ ಜಿಲ್ಲೆಯ ಜಟಿಂಗ ರಾಮೇಶ್ವರ, ಬ್ರಹ್ಮಗಿರಿ, ಸಿದ್ಧಾಪುರ, ರಾಯಚೂರು ಜಿಲ್ಲೆಯ ಮಸ್ಕಿ, ಕೊಪ್ಪಳದ ಗವಿಮಠ, ಪಾಲ್ಕಿಗುಂಡು, ಬಳ್ಳಾರಿ ಜಿಲ್ಲೆಯ ಉಡೇಗೊಳ, ನಿಟ್ಟೂರು ಹಾಗೂ ಗುಲ್ಬರ್ಗ ಜಿಲ್ಲೆಯ ಸನ್ನತಿ) ಅಶೋಕನ 17 ಶಾಸನಗಳು ದೊರೆತಿವೆ. ಇವೆಲ್ಲ ಶಾಸನಗಳು ಬ್ರಾಹ್ಮಿಲಿಪಿ ಮತ್ತು ಪ್ರಾಕೃತ ಭಾಷೆಯಿಂದ ಕೂಡಿದೆ. 1915ರಲ್ಲಿ ಚಾರ್ಲ್ಸ್ ಬೇಡನ್ ಎಂಬ ಎಂಜಿನಿಯರ್ ಪತ್ತೆ ಮಾಡಿದ ಮಸ್ಕಿ ಶಾಸನದಲ್ಲಿ ಮೊದಲ ಬಾರಿಗೆ ಅಶೋಕನ ಹೆಸರು ಕಂಡು ಬಂದಿತು. ನಂತರ ನಿಟ್ಟೂರು ಮತ್ತು ಉಡೇಗೊಳಗಳಲ್ಲಿ ದೊರೆತ ಶಾಸನಗಳಲ್ಲಿಯೂ ಅಶೋಕನ ಹೆಸರುಗಳು ಕಂಡುಬಂದವು.

ಅಶೋಕನು ಬೌದ್ಧ ಧರ್ಮದ ಪ್ರಸಾರಕ್ಕಾಗಿ ಮಹಿಷಮಂಡಲ(ಮೈಸೂರು)ಕ್ಕೆ 'ಮಹಾದೇವ' ಹಾಗೂ ಬನವಾಸಿಗೆ 'ರಖ್ಖಿತ' ಎಂಬ ಬೌದ್ಧ ಸನ್ಯಾಸಿಗಳನ್ನು ಕಳುಹಿಸಿದನೆಂದು ತಿಳಿದು ಬರುತ್ತದೆ.[4] ಇದರಿಂದ ಕರ್ನಾಟಕದಲ್ಲಿ ಬೌದ್ಧಧರ್ಮದ ಪ್ರಸಾರ ಮತ್ತು ಸ್ತೂಪಗಳ ನಿರ್ಮಾಣ ಕಲೆಯು ಆರಂಭವಾಯಿತು. ಬನವಾಸಿ, ಸನ್ನತಿ ಮೊದಲಾದ ಕಡೆಗಳಲ್ಲಿ ಪ್ರಾಚೀನ ಸ್ತೂಪಗಳ ಅವಶೇಷಗಳು ಕಂಡುಬಂದಿವೆ. ದಕ್ಷಿಣ ಕರ್ನಾಟಕದಲ್ಲಿ ಬೆಂಗಳೂರು ಸಮೀಪದ ರಾಜಘಟ್ಟದಲ್ಲಿಯೂ ಬೌದ್ಧ ಚೈತ್ಯಾಲಯದ ಅವಶೇಷಗಳು ದೊರೆತಿವೆ.[5]

### 2.1.2 ಶಾತವಾಹನರು

ಮೌರ್ಯರ ನಂತರ ಕರ್ನಾಟಕವನ್ನಾಳಿದ ಶಾತವಾಹನರು ಕನ್ನಡ ಮೂಲದವರೆ ಆಗಿದ್ದರು. ಶಾತವಾಹನ ಮನೆತನದ ಹಲವು ರಾಜರ ಹೆಸರುಗಳು ಕನ್ನಡದ ಹೆಸರುಗಳೇ ಆಗಿವೆ ಎಂಬುದು ವಿದ್ವಾಂಸರ ಅಭಿಮತ. ಉದಾ: ಹಾಲ, ಪುಲುಮಾವಿ, ನಾಗನಿಕ ಇತ್ಯಾದಿ. ಶಾತವಾಹನ ಮನೆತನದ ಮೂಲ ಪುರುಷ ಸಿಮುಖ. ಈ ಮನೆತನದ ಹಾಲ ಎಂಬ ದೊರೆಯು **ಗಾಥಾಸಪ್ತಸತಿ** ಎಂಬ ಪ್ರಾಕೃತ ಗ್ರಂಥವನ್ನು ರಚಿಸಿದನು. ಅವರ ರಾಜಧಾನಿ ಪೈಠಾಣ ಅಥವಾ ಪ್ರತಿಷ್ಠಾನವಾಗಿತ್ತು. ತಾಳಗುಂದ ಸ್ತಂಬಶಾಸನದ ಪ್ರಕಾರ ಶಾತಕರ್ಣಿಯು ತಾಳಗುಂದದ ಪ್ರಣವೇಶ್ವರನನ್ನು ಪೂಜಿಸಿದನೆಂದು ತಿಳಿದುಬರುತ್ತದೆ. ಮೈಸೂರು ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತೆಂದು ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ.[6] ಕ್ರಿಸ್ತಶಕದ ಆರಂಭ ಕಾಲಕ್ಕೆ ಸೇರಿರುವ ರೋಮ್ ಸಾಮ್ರಾಜ್ಯದ ನಾಣ್ಯಗಳು ಬೆಂಗಳೂರಿನ ಪರಿಸರದಲ್ಲಿ ದೊರೆತಿವೆ. ಇದರಿಂದ ಪ್ರಾಚೀನ ಕಾಲದಿಂದಲೂ ಬೆಂಗಳೂರು ಪರಿಸರವು ವಿದೇಶಿಯರ ವ್ಯಾಪಾರ ಚಟುವಟಿಕೆಗೆ ಪಾತ್ರವಾಗಿತ್ತೆಂದು ತಿಳಿಯಬಹುದಾಗಿದೆ.[7]

### 2.1.3 ಕದಂಬರು (ಕ್ರಿ.ಶ. 345–540)

ಶಾತವಾಹನರ ನಂತರ ಕರ್ನಾಟಕದ ವಾಯವ್ಯ ಭಾಗದಲ್ಲಿ ಕದಂಬರು ಹಾಗೂ ದಕ್ಷಿಣದಲ್ಲಿ ಗಂಗರು ಅಧಿಕಾರಕ್ಕೆ ಬಂದರು. ಕದಂಬರು 'ಕನ್ನಡದ ಮೊದಲ ರಾಜ ಮನೆತನ'ವಾಗಿದೆ. ಈ ಮನೆತನದ ಸ್ಥಾಪಕ ಮಯೂರವರ್ಮ. ವಿದ್ಯಾಭ್ಯಾಸಕ್ಕಾಗಿ ಕಂಚಿಗೆ ಹೋಗಿದ್ದಾಗ ಪಲ್ಲವರ ಅಶ್ವ ಸೇನಾಧಿಕಾರಿಯಿಂದ ಅವಮಾನಿತನಾದ ವಟು ಮಯೂರಶರ್ಮನು ಬ್ರಾಹ್ಮಣ್ಯ ತೊರೆದು ಮಯೂರವರ್ಮನಾದನು. ಅವನು ಶ್ರೀ ಪರ್ವತದಲ್ಲಿ ಸೇನೆಯನ್ನು ಕಟ್ಟಿ, ಪಲ್ಲವರ ಗಡಿರಕ್ಷಣ ಪಡೆ (ಅಂತಪಾ಼ಲರು) ಅವರನ್ನು ಸೋಲಿಸುವ ಮೂಲಕ ಪ್ರತಿಕಾರ ತೀರಿಸಿಕೊಂಡನು. ಹೀಗೆ ಸ್ವಾಭಿಮಾನದ ಸಂಕೇತವಾಗಿ ಕದಂಬ ಮನೆತನ ಸ್ಥಾಪನೆಗೊಂಡಿತು.

ಅನಂತರ ಬಂದ ಕದಂಬ ದೊರೆಗಳಲ್ಲಿ ಪ್ರಸಿದ್ಧನಾದವನು ಕಾಕುಸ್ಥವರ್ಮ (ಕ್ರಿ.ಶ. 425–450). ಕನ್ನಡದ ಮೊಟ್ಟ ಮೊದಲ ಶಾಸನವಾದ ಹಲ್ಮಿಡಿಯು ಇವನ ಕಾಲಕ್ಕೆ ಸೇರಿದೆ. ಈ ಶಾಸನವು ಭಾಗಶಃ ಸಂಸ್ಕೃತ ಭಾಷೆಯಲ್ಲಿದೆ. ಕಾಕುಸ್ಥವರ್ಮನು ಗುಪ್ತರ ರಾಜಕುಮಾರ ಕುಮಾರಗುಪ್ತನಿಗೆ ತನ್ನ ಮಗಳನ್ನು ಕೊಟ್ಟು ವೈವಾಹಿಕ ಸಂಬಂಧ ಬೆಳೆಸಿದ್ದನು. ಈ ವೈವಾಹಿಕ ಸಂಬಂಧಕ್ಕೆ ಗುಪ್ತರ ದೂತನಾಗಿ ಬಂದವನು ಮಹಾಕವಿ ಕಾಳಿದಾಸ. ಅವನ **ಕುಂತಲೇಶ್ವರ ದೌತ್ಯ** ಕೃತಿಯು ಈ ಬಗ್ಗೆ ತಿಳಿಸಿಕೊಡುತ್ತದೆಂದು ನಂಬಲಾಗಿದೆ. ಏಕೆಂದರೆ, ಈವರೆಗೂ ದೊರೆತಿಲ್ಲದ ಈ ಕೃತಿಯಲ್ಲಿನ ಸಂಗತಿಗಳು ನಂತರದ ಸಾಹಿತ್ಯಕ ಉಲ್ಲೇಖಗಳಿಂದ ತಿಳಿಯುತ್ತದೆ.[8] ಕದಂಬರು ಕ್ರಿ.ಶ. 345 ರಿಂದ 540 ರವರೆಗೆ ಆಳ್ವಿಕೆ ನಡೆಸಿದರು. ಬನವಾಸಿ ಕದಂಬರ ರಾಜಧಾನಿ. ಕದಂಬರ ರಾಜ್ಯ ದಕ್ಷಿಣದಲ್ಲಿ ತುಮಕೂರಿನವರೆಗೆ ವಿಸ್ತರಿಸಿತ್ತೆಂದು ಎಸ್. ಶ್ರೀಕಂಠಶಾಸ್ತ್ರಿ ಅವರು ಅಭಿಪ್ರಾಯಪಟ್ಟಿದ್ದಾರೆ.

### 2.1.4 ಗಂಗರು (ಕ್ರಿ.ಶ. 350–1004)

ಕರ್ನಾಟಕದಲ್ಲಿ ದೀರ್ಘಕಾಲ ಆಳಿದ ರಾಜ ಮನೆತನ ಎಂದರೆ 'ಗಂಗರು'. ಈ ಮನೆತನ ಕ್ರಿ.ಶ. 350 ರಿಂದ 1004 ರವರೆಗೆ ಸುಮಾರು 650 ವರ್ಷಗಳ ಕಾಲ ಆಳಿತು. ಕೋಲಾರ (ಕುವಲಾಳ ಪುರ), ತಲಕಾಡು (ತಲವನಪುರ)ಗಳು ರಾಜಧಾನಿಗಳಾಗಿದ್ದರೆ, ಮಣ್ಣೆ (ಮಾನ್ಯಪುರ) ಮತ್ತು ಮಾಕುಂದಗಳು ಕೆಲಕಾಲ ಗಂಗರ ಉಪರಾಜಧಾನಿಗಳಾಗಿದ್ದವು. ಮದಗಜ ಇವರ ಲಾಂಛನ. ಗಂಗ ಮನೆತನದ ಸ್ಥಾಪಕ ಕೊಂಗಣಿವರ್ಮ ಅಥವಾ ದಡಿಗ. ಗಂಗರು ಗಂಗಡಿಕಾರ ಎಂಬ ಒಕ್ಕಲು ಸಮುದಾಯಕ್ಕೆ ಸೇರಿದವರೆಂಬ ಅಭಿಪ್ರಾಯವಿದೆ. ಗಂಗ ದೊರೆಗಳು ವೈದಿಕ ಹಾಗೂ ಜೈನ ಎರಡೂ ಧರ್ಮಗಳಿಗೂ ಆಶ್ರಯ ನೀಡಿದರು. ಗಂಗರಲ್ಲಿ ದುರ್ವಿನೀತ (529–79) ಮತ್ತು ಶ್ರೀಪುರುಷ (725–775) ಪ್ರಸಿದ್ಧ ದೊರೆಗಳು.

ದುರ್ವಿನೀತ ಕಲಿಯೂ, ಕವಿಯೂ ಆಗಿದ್ದನು. ಶತ್ರುಗಳನ್ನು ಹಲವು ಯುದ್ಧಗಳಲ್ಲಿ ಸೋಲಿಸಿ ರಾಜ್ಯವನ್ನು ವಿಸ್ತರಿಸಿದನು. ಭಾರವಿಯ **'ಕಿರಾತಾರ್ಜುನೀಯ'** ಕೃತಿಯ 15ನೇ ಸರ್ಗಕ್ಕೆ ಟೀಕೆ ಬರೆದನು. ಗುಣಾಢ್ಯನ **'ವಡ್ಡಕತಾ'** ಕೃತಿಯನ್ನು ಪ್ರಾಕೃತದಿಂದ ಸಂಸ್ಕೃತಕ್ಕೆ ಭಾಷಾಂತರಿಸಿದನು. ರಾಜ್ಯದಲ್ಲಿ ಸಾಗರದಂತಹ ಹಲವು ಕೆರೆಗಳನ್ನು ಕಟ್ಟಿಸಿದನೆಂದು ನಲ್ಲಾಳ ತಾಮ್ರಶಾಸನವು ತಿಳಿಸುತ್ತದೆ. ಕನ್ನಡದ ಮೊದಲು ಉಪಲಬ್ದ ಗ್ರಂಥವಾದ ಶ್ರೀವಿಜಯನ **'ಕವಿರಾಜ ಮಾರ್ಗ'**ವು ಹಿಂದಿನ ಕನ್ನಡದ ಗದ್ಯ ಕವಿಗಳನ್ನು ನೆನೆಯುವಾಗ "ವಿಮಲ, ಉದಯ, ನಾಗಾರ್ಜುನ, ಜಯಬಂಧು, ದುರ್ವಿನೀತ– ಮುಂತಾದವರು ಗದ್ಯಕಾವ್ಯ ಮಾರ್ಗದಲ್ಲಿ ಕೃತಿರಚನೆ

ಮಾಡಿ ಆ ಗದ್ಯದ ಆಶ್ರಮಗುರುಗಳು ಎಂದರೆ ಪೀಠಾಚಾರ್ಯರೆಂಬ ಗೌರವವನ್ನು ಗಳಿಸಿದರು" ಎಂದಿದೆ.[9]

ಗಂಗರಲ್ಲಿ ಪ್ರಸಿದ್ಧನಾದ ಮತ್ತೊಬ್ಬ ದೊರೆ ಶ್ರೀಪುರುಷ. ಇವನು ಕೂಡ ಅನೇಕ ಕೆರೆಗಳನ್ನು ನಿರ್ಮಾಣ ಮಾಡಿಸಿದನು. ಅವುಗಳಲ್ಲಿ ಕುಣಿಗಲ್ ದೊಡ್ಡಕೆರೆಯೂ ಒಂದು. ಗಂಗದೊರೆ 4ನೇ ರಾಚಮಲ್ಲನ ಪ್ರಧಾನಮಂತ್ರಿಯಾದ ಚಾವುಂಡರಾಯನು ಶ್ರೇಷ್ಠ ದಂಡನಾಯಕನೂ, ಸಾಹಿತಿಯೂ ಆಗಿದ್ದನು. **'ಚಾವುಂಡರಾಯಪುರಾಣ'** ಎಂಬ ಕೃತಿಯನ್ನು ಕನ್ನಡದಲ್ಲಿಯೂ, **'ಚರಿತ್ರಸಾರ'**ವನ್ನು ಸಂಸ್ಕತದಲ್ಲಿಯೂ ರಚಿಸಿದನು. ಚಾವುಂಡರಾಯನು ಕ್ರಿ.ಶ.981ರಲ್ಲಿ 58 ಅಡಿ ಎತ್ತರದ ಗೊಮ್ಮಟೇಶ್ವರ ಮೂರ್ತಿಯನ್ನು ಶ್ರವಣಬೆಳಗೊಳದಲ್ಲಿ ಮಾಡಿಸಿದನು.

ಗಂಗರು ಆಳ್ವಿಕೆ ನಡೆಸುತ್ತಿದ್ದ ಪ್ರದೇಶ ದಟ್ಟ ಅರಣ್ಯದಿಂದ ಕೂಡಿದ ಪ್ರದೇಶವಾಗಿದ್ದು, ಇಂದಿಗೂ ಆನೆಗಳ ಆವಾಸ ಸ್ಥಾನವಾಗಿದೆ. ಆದ್ದರಿಂದ ಅವರು ತಮ್ಮ ರಾಜ ಲಾಂಛನವಾಗಿ ಆನೆಯನ್ನು ಆಯ್ಕೆಮಾಡಿಕೊಂಡಿದ್ದಾರೆಂದು ತೋರುತ್ತದೆ. ಜೊತೆಗೆ ಕೃಷಿ ಮೂಲದಿಂದ ಬಂದವರಾದ್ದರಿಂದ ಗಂಗರು ಕೆರೆ ನಿರ್ಮಾಣದ ಮೂಲಕ ನೀರಾವರಿಗೆ ಹಾಗೂ ಕೃಷಿಯ ವಿಸ್ತರಣೆಗೆ ಅಪಾರ ಪ್ರೋತ್ಸಾಹ ನೀಡಿದರು. ಹಂ.ಗು. ರಾಜೇಶ್ ಅವರು ಗುರುತಿಸುವಂತೆ "ದೀರ್ಘಕಾಲದ ಗಂಗರ ಆಳ್ವಿಕೆಯಲ್ಲಿ ಭೂ ಒಡೆತನ ಬಹುತೇಕ ಕೃಷಿಕರ ಕೈಯಲ್ಲಿತ್ತು. ಅಷ್ಟು ಮಾತ್ರವಲ್ಲ ಇತರ ವೃತ್ತಿಯಾಧಾರಿತ ಜಾತಿಗಳ ಜನರು ಕೂಡ ಕೃಷಿಯಲ್ಲಿ ತೊಡಗಿದ್ದರು."[10]

ರಾಜೇಶ್ ಅವರ ಅಭಿಪ್ರಾಯವನ್ನು ಪುಷ್ಟೀಕರಿಸುವ ರೀತಿಯಲ್ಲಿ ಷ. ಶೆಟ್ಟರ್ ಅವರು ಗಂಗರನ್ನು ಕುರಿತು ಹೀಗೆ ದಾಖಲಿಸುತ್ತಾರೆ: "ಕೃಷಿಯ ಜೀವನಾಡಿಯಾದ ಕೆರೆಗಳನ್ನು ತೋಡಿಸುವುದು, ತೂಬನ್ನಿಕ್ಕಿಸಿ, ಅವುಗಳನ್ನು ಬಳಸಿಕೊಳ್ಳುವುದು, ಬ್ರಹ್ಮದೇಯ ಮತ್ತು ದೇವಾಲಯ ನಿರ್ಮಾಣದಷ್ಟೇ ಪುಣ್ಯ ಕಾರ್ಯವೆಂಬುದನ್ನು ಕರ್ನಾಟಕದ ಇತಿಹಾಸದಲ್ಲಿ ಸ್ಪಷ್ಟವಾಗಿ ತೋರಿಸಿಕೊಟ್ಟವರಲ್ಲಿ ಮೊದಲಿಗರೆಂದರೆ ಗಂಗರು. ಅಂದರೆ ಆ ಮೊದಲು ಕೆರೆಕಟ್ಟೆಗಳನ್ನು ಕಟ್ಟಿಸಿರಲಿಲ್ಲವೆಂದಲ್ಲ, ಇವನ್ನು ವ್ಯವಸ್ಥಿತವಾಗಿ ಪೋಷಿಸಿ ಬ್ರಹ್ಮದೇಯ ಹಾಗು ದೇವಾಲಯಗಳಷ್ಟೇ ಇವೂ ಮುಖ್ಯವೆಂಬುದನ್ನು ತೋರಿಸಿಕೊಟ್ಟವರಲ್ಲಿ ಇವರಿಗೆ ಸಮಾನರಿರಲಿಲ್ಲ... ಬ್ರಹ್ಮದೇಯ ಮತ್ತು ದೇವಾಲಯಗಳ ಹತೋಟಿಯಿಂದ ಕೆರೆಗಳನ್ನು ಮುಕ್ತಮಾಡಿ ಅವನ್ನು ಸ್ವತಂತ್ರ ನಿಬಂಧನೆಗಳಿಗೊಳಪಡಿಸಿ, ಕೆರೆಯ ನೀರನ್ನು ಬಳಸುವ ಕೃಷಿಕರಿಗೆ ಹಕ್ಕು-ಜವಾಬ್ದಾರಿಗಳೊಡನೆ ಅವನ್ನು ವಹಿಸಿಕೊಡುವುದು, ಈ ವ್ಯವಸ್ಥೆಯ ಉದ್ದೇಶವಾಗಿತ್ತು."

ಮುಂದುವರೆದು ಹೀಗೆ ಹೇಳುತ್ತಾರೆ: "ದಾನವಾಗಿ ಬಂದ ನೆಲವನ್ನು ನೀರಾವರಿಗೊಳಪಡಿಸಲಾಗಲೀ ಗದ್ದೆಯನ್ನು ಹೆಚ್ಚು ಸಮೃದ್ಧಿಗೊಳಿಸಲಾಗಲೀ ಬ್ರಹ್ಮದೇಯದ ವೈದಿಕರು ಕೆರೆ–ಕಾಲುವೆಗಳನ್ನು ತೋಡಿಸಿದ ನಿದರ್ಶನಗಳು ಗಂಗರ ಶಾಸನಗಳಲ್ಲಿಲ್ಲ".[11] ಇದರಿಂದಲೇ ಗಂಗರು ಕೃಷಿ ಮತ್ತು ನೀರಾವರಿಗೆ ಕೊಟ್ಟ ಮಹತ್ವ ಅರ್ಥವಾಗುತ್ತದೆ. ಗಂಗರ ಕಾಲದಲ್ಲಿ ನಿರ್ಮಾಣವಾದ ಅನೇಕ ಕೆರೆಗಳು ಇಂದಿಗೂ ಕೂಡ ಕೃಷಿಗೆ ನೀರುಣಿಸುತ್ತಿರುವುದನ್ನು ನೋಡಬಹುದು (ಉದಾ.: ಕುಣಿಗಲ್ ದೊಡ್ಡಕೆರೆ). ಗಂಗರು ಕೆರೆಗಳ ನಿರ್ಮಾಣಕ್ಕೆ ಆದ್ಯತೆ ಕೊಟ್ಟಂತೆಯೇ ಮುಂದೆ ಗಂಗವಾಡಿ ಪ್ರದೇಶದಲ್ಲಿಯೇ ಏಳಿಗೆಗೆ ಬಂದ ಯಲಹಂಕ ನಾಡಪ್ರಭುಗಳು ಕೂಡ ಕೆರೆ ನಿರ್ಮಾಣಕ್ಕೆ ಅಪಾರ ಆದ್ಯತೆ ನೀಡಿರುವುದನ್ನು ಗಮನಿಸಬಹುದು. ಬಹುಶಃ ಗಂಗರ ಪ್ರಭಾವವನ್ನು ಯಲಹಂಕ ನಾಡಪ್ರಭುಗಳಲ್ಲಿ ಕಾಣಬಹುದು. ಮತ್ತೊಂದು ಸಂಗತಿ ಎಂದರೆ ಗಂಗರು ತಮ್ಮ ಶಾಸನಗಳಲ್ಲಿ ತಮ್ಮನ್ನು 'ನಂದಗಿರಿನಾಥ'ರೆಂದು ಕರೆದುಕೊಂಡಿದ್ದಾರೆ. ಯಲಹಂಕ ನಾಡಪ್ರಭುಗಳ ಏಳಿಗೆ ಕೂಡ ಅದೇ ನಂದಿಬೆಟ್ಟದ ಪರಿಸರದ ಆವತಿಯಿಂದಲೇ ಆಗಿರುವುದು ವಿಶೇಷ. ಈ ಹಿನ್ನೆಲೆಯಲ್ಲಿ ಭೌಗೋಳಿಕ ಪ್ರಭಾವವನ್ನು ವಿಶ್ಲೇಷಿಸುವ ಅಗತ್ಯವಿದೆ.

### 2.1.5 ಬಾದಾಮಿ ಚಾಲುಕ್ಯರು (ಕ್ರಿ.ಶ. 500–757)

ಕದಂಬರ ನಂತರ ಚಾಲುಕ್ಯರು ಬಾದಾಮಿಯಿಂದ ಸುಮಾರು 250 ವರ್ಷಗಳ ಕಾಲ ಆಳಿದರು. ಚಾಲುಕ್ಯ ಮನೆತನದ ಮೂಲ ಪುರುಷ ಜಯಸಿಂಹನಾದರೂ, ಈ ಮನೆತನದ ನಿಜವಾದ ಸ್ಥಾಪಕ 1ನೇ ಪುಲಕೇಶಿ. ಇವರ ಲಾಂಛನ ವರಾಹ (ಹಂದಿ). ಚಾಲುಕ್ಯರಲ್ಲಿ ಅತ್ಯಂತ ಪ್ರಸಿದ್ಧ ದೊರೆ ಇಮ್ಮಡಿ ಪುಲಕೇಶಿ (609–642). ಮಹತ್ವಾಕಾಂಕ್ಷಿಯಾಗಿದ್ದ ಪುಲಕೇಶಿಯು ಅಧಿಕಾರದಲ್ಲಿದ್ದ ತನ್ನ ಚಿಕ್ಕಪ್ಪ ಮಂಗಳೇಶನನ್ನು ಪದಚ್ಯುತಗೊಳಿಸಿ ಅಧಿಕಾರಕ್ಕೆ ಬಂದನು. ನಂತರ ಯಶಸ್ವಿ ಜೈತ್ರಯಾತ್ರೆಯನ್ನು ಕೈಗೊಂಡು ದಕ್ಷಿಣ ಭಾರತವನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿದ್ದನು. ಕಂಚಿಯ ಪಲ್ಲವ, ಲಾಟ, ಮಾಳ್ವ, ಗೂರ್ಜರರನ್ನು ಜಯಿಸಿದನು. ಅಲ್ಲದೆ ಅಳುಪರು, ಗಂಗರು ಇವನ ಕರ್ನಾಟ ಸೇನೆಗೆ ಶರಣಾದರು. ಉತ್ತರ ಪಥೇಶ್ವರನಾದ ಹರ್ಷವರ್ಧನನನ್ನು ನರ್ಮದಾ ನದಿ ತೀರದಲ್ಲಿ ಸೋಲಿಸಿದನು. ಇವನ ದಿಗ್ವಿಜಯವನ್ನು ಆಸ್ಥಾನ ಕವಿ ರವಿಕೀರ್ತಿ ರಚಿಸಿದ ಐಹೊಳೆ ಶಾಸನವು (634) ವಿವರಿಸುತ್ತದೆ. ಇವನ ಸೇನೆ 'ಕರ್ಣಾಟ ಬಲಂ ಅಜೇಯಂ' ಎಂದೇ ಪ್ರಸಿದ್ಧವಾಗಿತ್ತು. ಪುಲಕೇಶಿಗೆ 'ದಕ್ಷಿಣ ಪಥೇಶ್ವರ' ಹಾಗೂ 'ಪರಮೇಶ್ವರ' ಎಂಬೆಲ್ಲ ಬಿರುದುಗಳಿದ್ದವು.

ಶ್ರೀಪುರುಷ ಕಟ್ಟಿಸಿದ ಕುಣಿಗಲ್ ದೊಡ್ಡಕೆರೆಯು ಹತ್ತನೆಯ ಶತಮಾನದಲ್ಲಿ ಒಡೆದು ಹೋದಾಗ ರಾಷ್ಟ್ರಕೂಟ ದೊರೆ ಮುಮ್ಮಡಿ ಕೃಷ್ಣನ ಅಧೀನದಲ್ಲಿದ್ದ ಚಾಲುಕ್ಯ ಮಾನ್ಧಾತ ಎಂಬಾತನು ಕೆರೆಯನ್ನು ದುರಸ್ಥಿ ಮಾಡಿಸಿದ ಬಗ್ಗೆ ಅದೇ ಕೆರೆ ಏರಿಯ ಮೇಲಿರುವ ಶಾಸನವು ಉಲ್ಲೇಖಿಸುತ್ತದೆ. 8ನೆಯ ಶತಮಾನದ ಕೊನೆಗಾಗಲೇ ಗಂಗಮಂಡಲ ಪ್ರದೇಶದಲ್ಲಿ ರಾಷ್ಟ್ರಕೂಟರ ಸಾಮಂತರಾಗಿ ಚಾಳುಕ್ಯ ವಂಶದವರು ಬೇರೂರಿದ್ದರೆಂದು ಪಿ.ವಿ. ಕೃಷ್ಣಮೂರ್ತಿ ಅವರು ಅಭಿಪ್ರಾಯ ಪಡುತ್ತಾರೆ.[12]

**2.1.6 ರಾಷ್ಟ್ರಕೂಟರು (ಕ್ರಿ.ಶ. 754–973)**

ಬಾದಾಮಿಯ ಚಾಲುಕ್ಯರನ್ನು ಮೂಲೆಗೊತ್ತಿ ಅಧಿಕಾರಕ್ಕೆ ಬಂದ ರಾಷ್ಟ್ರಕೂಟರು ಕರ್ನಾಟಕವನ್ನು ಭಾರತದ ಪರಮಾಧಿಪತ್ಯದ ಕೇಂದ್ರವಾಗಿ ರೂಪಿಸಿದರು. ಇವರ ಮೊದಲ ರಾಜಧಾನಿ 'ಮಯೂರಖಂಡಿ' (ಬೀದರ್ ಜಿಲ್ಲೆಯ ಮೊರ್ಖಂಡಿ) ನಂತರ ಮಾನ್ಯಖೇಟವನ್ನು ರಾಜಧಾನಿಯಾಗಿ ಮಾಡಿಕೊಂಡರು. ತಮ್ಮನ್ನು 'ಲಟ್ಟಲೂರು ಪುರವರಾಧೀಶ್ವರ'ರೆಂದು ಕರೆದುಕೊಂಡಿದ್ದಾರೆ. ಇವರ ಲಾಂಛನ – 'ಗರುಡ'. ಧ್ವಜ–ಪಾಲಿಧ್ವಜ. ರಾಷ್ಟ್ರಕೂಟ ಮನೆತನದ ಸ್ಥಾಪಕ ದಂತಿದುರ್ಗ. ಈ ಮನೆತನದ ಪ್ರಸಿದ್ಧ ದೊರೆಗಳೆಂದರೆ ಧ್ರುವ (780–793), ಗೋವಿಂದ (793–814), ಅಮೋಘವರ್ಷ ನೃಪತುಂಗ (814–878) ಮತ್ತು ಮೂರನೇ ಕೃಷ್ಣ (939–967).

ಧ್ರುವನು ಗುಜರಾತಿನ ಪ್ರತಿಹಾರ ಮನೆತನದ ವತ್ಸರಾಜನನ್ನು ಹಾಗೂ ಬಂಗಾಳದ ಪಾಲ ಮನೆತನದ ಧರ್ಮಪಾಲನನ್ನು ಝಾನ್ಸಿ ಮತ್ತು ಗಂಗಾನದಿ ಬಯಲಿನಲ್ಲಿ ಸೋಲಿಸಿದನು. ಆದರೆ ಕನೂಜನ್ನು ಗೆಲ್ಲುವ ಧ್ರುವನ ಮಹತ್ವಾಕಾಂಕ್ಷೆಗೆ ಅವನ ಮುಪ್ಪು ಅಡ್ಡಿಯಾದ್ದರಿಂದ ಹಿಂದಿರುಗಿದನು. ಧ್ರುವನ ನಂತರ ಮೂರನೇ ಗೋವಿಂದನು ಅಧಿಕಾರಕ್ಕೆ ಬಂದನು. ಆರಂಭದಲ್ಲಿಯೇ ಗಂಗವಾಡಿಯಲ್ಲಿ ರಾಜ್ಯಪಾಲನಾಗಿದ್ದ ಅವನ ಅಣ್ಣಾ ಕಂಬರಾಜನು ಗೋವಿಂದನ ವಿರುದ್ಧ ಧಂಗೆ ಎದ್ದನು. ದಂಗೆಯನ್ನು ಶಮನಗೊಳಿಸಿ, ಅಣ್ಣನಿಗೆ ಕ್ಷಮಾಧಾನ ನೀಡಿದನು. ತಂದೆಯಂತೆ ಮಹತ್ವಾಕಾಂಕ್ಷಿಯಾಗಿದ್ದ ಗೋವಿಂದನು ಕನೂಜಿನ ಮೇಲೆ ಆಕ್ರಮಣ ಕೈಗೊಂಡನು. ಧರ್ಮಪಾಲ ಮತ್ತು ನಾಗಭಟ್ಟರನ್ನು ಸೋಲಿಸಿ ಕನೂಜಿನ ಕಡೆಗೆ ಮುನ್ನಡೆದ ಗೋವಿಂದನಿಗೆ ಕನೂಜಿನ ನಾಮ ಮಾತ್ರ ದೊರೆ ಚಕ್ರಾಯುಧನು ಶರಣಾದನು. ಸಂಜನ್ ತಾಮ್ರಪಟ "ಗೋವಿಂದನ ಕುದುರೆಗಳು ಹಿಮಾಲಯದ ತಪ್ಪಲ ಹಿಮಕರಗಿದ ನೀರನ್ನು ಕುಡಿದವು, ಅವನ ಆನೆಗಳು ಗಂಗಾಜಲ ಪಾನ ಮಾಡಿದವು" ಎಂದು ಬಣ್ಣಿಸಿದೆ.

ನಂತರ ಅಧಿಕಾರಕ್ಕೆ ಬಂದ ನೃಪತುಂಗನು 64 ವರ್ಷಗಳಷ್ಟು ದೀರ್ಘಕಾಲ ಆಳ್ವಿಕೆ ನಡೆಸಿದನು. ಸಾಹಿತ್ಯ ಪ್ರೇಮಿಯಾಗಿದ್ದ ನೃಪತುಂಗನು ಯುದ್ಧಕ್ಕೆ ಬದಲು ನೆರೆಹೊರೆಯ ರಾಜ್ಯಗಳೊಂದಿಗೆ ವೈವಾಹಿಕ ಸಂಬಂಧ ಹೊಂದುವ ಮೂಲಕ ಸಾಮ್ರಾಜ್ಯದಲ್ಲಿ ಶಾಂತಿ ನೆಲೆಗೊಳ್ಳುವಂತೆ ಮಾಡಿದನು. ಇವನ ಪ್ರಸಿದ್ಧ ದಂಡನಾಯಕನಾದ ಬಂಕೇಶನ ಹೆಸರಿನಲ್ಲಿ ಧಾರವಾಡ ಬಳಿ 'ಬಂಕಾಪುರ' ಎಂಬ ಪಟ್ಟಣ ಮಾಡಿಸಿದನು. ಅರಬ್ ಪ್ರವಾಸಿ ಸುಲೈಮಾನನು ಪ್ರಪಂಚದ "ನಾಲ್ವರು ಶ್ರೇಷ್ಠ ಚಕ್ರವರ್ತಿಗಳಲ್ಲಿ ಅಮೋಘವರ್ಷನೂ ಒಬ್ಬ. ಉಳಿದ ಮೂವರೆಂದರೆ – ರೋಮನ ಚಕ್ರವರ್ತಿ, ಬಾಗ್ದಾದಿನ ಖಲೀಫ ಮತ್ತು ಚೀನಾದ ಚಕ್ರವರ್ತಿ" ಎಂದಿದ್ದಾನೆ. ಕನ್ನಡದ ಮೊದಲ ಉಪಲಬ್ಧ ಕೃತಿಯಾದ ಕವಿರಾಜಮಾರ್ಗವನ್ನು ಇವನ ಆಸ್ಥಾನ ಕವಿ ಶ್ರೀವಿಜಯ ರಚಿಸಿದನು. ಸ್ವತಃ ನೃಪತುಂಗನು **'ಪ್ರಶ್ನೋತ್ತರ ಮಾಲ'** ಎಂಬ ಸಂಸ್ಕೃತ ಗ್ರಂಥವನ್ನು ರಚಿಸಿದ್ದಾನೆ. ಎಲ್ಲೋರ, ಜೋಗೇಶ್ವರಿ, ಎಲಿಫೆಂಟಾಗಳು ರಾಷ್ಟ್ರಕೂಟರ ಪ್ರಮುಖ ವಾಸ್ತುಶಿಲ್ಪ ಕೇಂದ್ರಗಳು. ವಿಶ್ವಪ್ರಸಿದ್ಧ ಎಲ್ಲೋರ ಕೈಲಾಸನಾಥ ದೇವಾಲಯವನ್ನು 1ನೇ ಕೃಷ್ಣನು ಒಂದೇ ಬಂಡೆಯಲ್ಲಿ ಮಾಡಿಸಿದನು. ಮೂರನೇ ಕೃಷ್ಣನ ಕಾಲದಲ್ಲಿ ದಕ್ಷಿಣ ಕರ್ನಾಟಕ ಬಹು ಚಟುವಟಿಕೆಯ ಕೇಂದ್ರವಾಗಿತ್ತು. ಚೋಳರ ಎದುರಿನ ಯುದ್ಧದಲ್ಲಿ ರಾಷ್ಟ್ರಕೂಟರ ಸಾಮಂತರಾಗಿದ್ದ ಗಂಗರು ಸಕ್ರಿಯವಾಗಿ ಪಾಲ್ಗೊಂಡಿದ್ದರು.

### 2.1.7 ಚೋಳರು (1004–1118)

ಹತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಕರ್ನಾಟಕದಲ್ಲಿ ರಾಜಕೀಯ ಅಸ್ಥಿರತೆ ತಲೆದೋರಿತು. ದಕ್ಷಿಣ ಕರ್ನಾಟಕದಲ್ಲಿ ದೀರ್ಘಕಾಲ ಆಳ್ವಿಕೆ ನಡೆಸಿದ ಗಂಗ ಮನೆತನವು ಈ ವೇಳೆಗೆ ಅವನತಿಯ ಹಾದಿ ಹಿಡಿದಿತ್ತು. ಉತ್ತರ ಕರ್ನಾಟಕದಲ್ಲಿ ರಾಷ್ಟ್ರಕೂಟರೂ ಅವನತಿ ಹೊಂದಿ, ಕಲ್ಯಾಣ ಚಾಲುಕ್ಯ ಮನೆತನವು ಪ್ರವರ್ಧಮಾನಕ್ಕೆ ಬಂದಿತು. ದಕ್ಷಿಣ ಕರ್ನಾಟಕದಲ್ಲಿ ದೀರ್ಘಕಾಲ ಆಳಿದ ಗಂಗಮನೆತನವನ್ನು ಪಲ್ಲಟಗೊಳಿಸಿ ತಮಿಳುನಾಡಿನ ಚೋಳರು ಕಾವೇರಿ ಕೊಳ್ಳದ ಕರ್ನಾಟಕವನ್ನು ಆಕ್ರಮಿಸಿದರು. ನಂತರ ತಮ್ಮ ಗಮನವನ್ನು ತುಂಗಾಭದ್ರ ಮತ್ತು ಕೃಷ್ಣಾ ನದಿ ಕೊಳ್ಳದ ಕಡೆಗೆ ಹರಿಸಿದರು. ಆರಂಭದಲ್ಲಿ ಅಪಜಯವನ್ನುಂಡರೂ, ಅಂತಿಮವಾಗಿ ಚಾಲುಕ್ಯರಿಂದ ಕೃಷ್ಣಾ ನದಿ ಬಯಲನ್ನು ತಮ್ಮ ತೆಕ್ಕೆಗೆ ತೆಗೆದುಕೊಳ್ಳುವಲ್ಲಿ ಯಶಸ್ವಿಯಾದರು. ಇದೇ ಕಾಲಘಟ್ಟದಲ್ಲಿ ಮಲೆನಾಡಿನಲ್ಲಿ ಏಳಿಗೆಗೆ ಬಂದ ಹೊಯ್ಸಳ ಮನೆತನವು ಮಲೆನಾಡಿನಿಂದ ಬಯಲು ಸೀಮೆಯತ್ತ ತಮ್ಮ ರಾಜ್ಯವನ್ನು ವಿಸ್ತರಿಸುತ್ತಾ ಬಂದು ಚೋಳರನ್ನು ಮುಖಾಮುಖಿಗೊಂಡರು. ಪರಿಣಾಮ: ಒಂದು ಶತಮಾನದ ನಂತರ ಚೋಳರನ್ನು

ಕರ್ನಾಟಕದಿಂದ ಹೊರಗಟ್ಟಿದರಲ್ಲದೆ, ಹೊಯ್ಸಳರು ತಮಿಳುನಾಡಿಗೂ ಪ್ರವೇಶಿಸಿದರು. ಮುಂದೆ ಒಂದು ಶತಮಾನದ ನಂತರ ಹೊಯ್ಸಳ ರಾಜ್ಯವು ಇಬ್ಭಾಗವಾಯಿತು. ಹೀಗಾಗಿ ವಿಜಯನಗರ ಸಾಮ್ರಾಜ್ಯ ಆರಂಭವಾಗುವವರೆಗೂ ರಾಜಕೀಯ ಸ್ಥಿರತೆಯನ್ನು ಕಾಣಲಾಗದಿದ್ದರೂ, ಕೃಷಿ, ವ್ಯಾಪಾರ, ಮಾರುಕಟ್ಟೆ ಸೇರಿದಂತೆ ಆರ್ಥಿಕ ಕ್ಷೇತ್ರದಲ್ಲಿ ಮಾತ್ರವಲ್ಲದೆ ಸೈನಿಕ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿಯೂ ತೀವ್ರ ಬದಲಾವಣೆಗಳು ಆರಂಭವಾದವು. ಈ ರಾಜಕೀಯ ಅಸ್ಥಿರತೆಯು 14ನೆಯ ಶತಮಾನದ ಹೊತ್ತಿಗೆ ಘನೀಕರಣಗೊಂಡು ಒಂದು ವ್ಯವಸ್ಥೆಯಾಗಿ ರೂಪುಗೊಳ್ಳುವುದರಲ್ಲಿ ಪರ್ಯಾವಸಾನಗೊಂಡಿತು. ಇಂತಹ ಅನಿರೀಕ್ಷಿತ ಬದಲಾವಣೆಗಳಿಂದ ಬೆಂಗಳೂರು ಪರಿಸರ ಸಹ ಹೊರತಾಗಿರಲಿಲ್ಲ ಎಂದು ಹಂ.ಗು. ರಾಜೇಶ್ ಅವರು ಚೋಳರ ಆಗಮನ ಕಾಲದ ದಕ್ಷಿಣ ಕರ್ನಾಟಕದ ಪರಿಸ್ಥಿತಿಯನ್ನು ವಿಶ್ಲೇಷಿಸಿದ್ದಾರೆ.[13]

ಚೋಳರು ಗಂಗರನ್ನು ಸೋಲಿಸಿ ಕ್ರಿ.ಶ. 1001ರಲ್ಲಿ ಗಂಗವಾಡಿ ಪ್ರದೇಶವನ್ನು ಗೆದ್ದುಕೊಂಡರು. ಗಂಗವಾಡಿ ಪ್ರಾಂತ್ಯದಲ್ಲಿ ಬಹುತೇಕ ದಕ್ಷಿಣ ಕರ್ನಾಟಕವು ಒಳಗೊಳ್ಳುತ್ತಿತ್ತು. ಸುಮಾರು ನೂರು ವರ್ಷಗಳಿಗೂ ಅಧಿಕ ಕಾಲ ಆಳ್ವಿಕೆ ನಡೆಸಿದ ಚೋಳರು ಕರ್ನಾಟಕದ ರಾಜಕೀಯ, ಆಡಳಿತ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮ ಪ್ರಭಾವವನ್ನು ಬೀರಿದರು. ಬೆಂಗಳೂರು, ತಲಕಾಡು ಸುತ್ತಮುತ್ತಲ ಪ್ರದೇಶಗಳು ಚೋಳರ ಮುಡಿಕೊಂಡ ಚೋಳ ಮಂಡಲಕ್ಕೆ ಒಳಪಟ್ಟಿದ್ದವು. ಇದರಲ್ಲಿ ಕಿಳಲೆ ನಾಡು, ಮುರಸುನಾಡು, ಸೀಗಲ್ ನಾಡು, ರಾಜೇಂದ್ರಚೋಳ ಒಳನಾಡು ಮುಂತಾದ ಉಪವಿಭಾಗಗಳಿದ್ದವು. ತಲಕಾಡು 'ರಾಜಪುರಂ' ಎಂದೂ, ಕುಣಿಗಲ್ 'ರಾಜೇಂದ್ರಚೋಳಪುರಂ' ಎಂದೂ ಮರುನಾಮಕರಣ ಗೊಂಡಿದ್ದವು. ಹೀಗೆ ಅನೇಕ ಊರುಗಳ ಹೆಸರುಗಳನ್ನು ಬದಲಾವಣೆ ಮಾಡಿದರಲ್ಲದೆ, ತಮಿಳು ಭಾಷಿಕ ಮೂಲದ ಆಡಳಿತ ಅಧಿಕಾರಿಗಳನ್ನು ನೇಮಕ ಮಾಡಿದರು. ಬೆಂಗಳೂರು ಪರಿಸರದಲ್ಲಿ ಚೋಳರು ಉಂಟುಮಾಡಿದ ಪ್ರಭಾವವನ್ನು ಕುರಿತು ಹಂ.ಗು. ರಾಜೇಶ್ ಹೀಗೆ ದಾಖಲಿಸುತ್ತಾರೆ: "ಚೋಳರ ಕಾಲದ ಆಡಳಿತದಲ್ಲಿನ ಮತ್ತೊಂದು ವಿಶೇಷ ಎಂದರೆ ವಿವಿಧ ರೀತಿಯ ಆಡಳಿತ ವಿಭಾಗಗಳು ಮತ್ತು ಅಧಿಕಾರಿ ವರ್ಗಗಳನ್ನು ಪರಿಚಯಿಸಿದ್ದಾಗಿದೆ. ಬೆಂಗಳೂರಿನ ಪರಿಸರದಲ್ಲಿನ ಚೋಳರ ಶಾಸನಗಳನ್ನು ಅವಲೋಕಿಸಿದರೆ ದಂಡನಾಯಕ, ಸೇನಾಪತಿ, ನಾಡಗಾವುಂಡ, ಮಹಾಮಾತ್ರ, ನಾಡನಾಯಗನ್ ಮೊದಲಾದ ಅಧಿಕಾರಿ ವರ್ಗಗಳು ಹಾಗೂ ಮಂಡಲ, ವಳನಾಡು, ಪರ್ರು, ನಾಡು ಮೊದಲಾದ ಆಡಳಿತ ವಿಭಾಗಗಳನ್ನು ಹೆಸರಿಸಬಹುದಾಗಿದೆ. ಬೆಂಗಳೂರಿನ ಪರಿಸರದ ಶಾಸನಗಳಲ್ಲಿ ದಂಡನಾಯಕನ ಮೊದಲ ಉಲ್ಲೇಖ ಸಿಗುವುದೇ ಚೋಳರ ಮೊದಲ ಶಾಸನದಲ್ಲಿ... ಚೋಳರಿಗೆ ಪೂರ್ವದ ಶಾಸನಗಳಲ್ಲಿ ದಂಡನಾಯಕ ಎಂಬ ಸೇನಾ ಮುಖ್ಯಸ್ಥನ

ಪ್ರಸ್ತಾಪ ಕಂಡು ಬರುವುದಿಲ್ಲವಾದ್ದರಿಂದ ಇದು ಚೋಳರ ಆಡಳಿತದ ಕಾಣಿಕೆ ಎನ್ನಬಹುದು. ತಮ್ಮ ನಂತರದ ಆಡಳಿತದಲ್ಲಿ ಚೋಳರ ಪ್ರಭಾವ ಎಷ್ಟಿತ್ತೆಂದರೆ ಹೊಯ್ಸಳರು ಚೋಳರ ತಮಿಳು ಅಧಿಕಾರಿಗಳನ್ನೆ ಮುಂದುವರೆಸಿದಂತೆ ಕಾಣುತ್ತದೆ".[14] ಇದರಿಂದಾಗಿ ಒಂದು ಕಾಲಘಟ್ಟದಲ್ಲಿ ಬೆಂಗಳೂರು ಪರಿಸರವು ತಮಿಳುಮಯವಾದ ಆಡಳಿತದಿಂದ ಕೂಡಿತ್ತು ಎಂಬುದಂತೂ ನಿಶ್ಚಿತ. ಅದೇ ರೀತಿ ಸಾಂಸ್ಕೃತಿಕವಾಗಿಯೂ ಚೋಳರ ಪ್ರಭಾವವಾಗಿರುವುದನ್ನು ಗುರುತಿಸಬಹುದು. ಉದಾ.: ಹಲಸೂರು ದೇವಾಲಯದ ಮೂಲ ರಚನೆ ಚೋಳರ ಶೈಲಿಯಲ್ಲಿರುವುದನ್ನು ಗುರುತಿಸಬಹುದು. ನಂತರ ನಾಡಪ್ರಭುಗಳ ಕಾಲದಲ್ಲಿ ಆ ದೇವಾಲಯದ ವಿಸ್ತರಣೆಯಾಗಿರುವುದನ್ನು ಎಸ್.ಕೆ. ಅರುಣಿ ಅವರು ಗುರುತಿಸಿದ್ದಾರೆ.[15]

### 2.1.8 ಕಲ್ಯಾಣ ಚಾಲುಕ್ಯರು (ಕ್ರಿ.ಶ. 973–1189)

ಬಾದಾಮಿ ಚಾಲುಕ್ಯರ ಮುಂದುವರಿದ ಸಂತತಿಯೇ ಕಲ್ಯಾಣ ಚಾಲುಕ್ಯರು. 2ನೆಯ ತೈಲನೇ ಈ ಮನೆತನದ ಸ್ಥಾಪಕ. 'ಕಲ್ಯಾಣ' ಇವರ ರಾಜಧಾನಿಗಳಲ್ಲಿ ಒಂದು. ವರಾಹ ಇವರ ಲಾಂಛನ. ಕಲ್ಯಾಣ ಚಾಲುಕ್ಯರಲ್ಲಿ ಪ್ರಸಿದ್ಧನಾದವನು 6ನೇ ವಿಕ್ರಮಾದಿತ್ಯ (1076–1126). ವಿಕ್ರಮಾದಿತ್ಯನು ಅಧಿಕಾರಕ್ಕೆ ಬಂದ ನೆನೆಪಿಗಾಗಿ ಚಾಲುಕ್ಯ ವಿಕ್ರಮ ಶಕೆಯನ್ನು ಕ್ರಿ.ಶ. 1076ರಲ್ಲಿ ಆರಂಭಿಸಿದನು. ಇವನು ಚೋಳ, ಹೊಯ್ಸಳ, ಪಾಂಡ್ಯ, ಗೋವೆಯ ಕದಂಬ, ಶಿಲಾಹಾರ, ಸೇವುಣ ಎಲ್ಲರನ್ನೂ ಸೋಲಿಸಿದನು. ಇವನನ್ನು ಕುರಿತು **'ವಿಕ್ರಮಾಂಕ ದೇವಚರಿತ್ರೆ'** ಎಂಬ ಕೃತಿಯನ್ನು ಬಿಲ್ಹಣನು ರಚಿಸಿದನು. ವಿಕ್ರಮಾದಿತ್ಯನ ದಂಡನಾಯಕ 'ಮಹಾದೇವ' ಎಂಬಾತನು ಇಟಗಿಯಲ್ಲಿ ಮಹಾದೇವ ದೇವಾಲಯ ಕಟ್ಟಿಸಿದನು. ಇದನ್ನು 'ದೇವಾಲಯಗಳ ಚಕ್ರವರ್ತಿ' ಎಂದು ಶಾಸನವೊಂದು ಬಣ್ಣಿಸಿದೆ. ಈ ವಂಶದ ಮತ್ತೊಬ್ಬ ದೊರೆ 3ನೆಯ ಸೋಮೇಶ್ವರನು **'ಮಾನಸೊಲ್ಲಾಸ'** ಎಂಬ ವಿಶ್ವಕೋಶವನ್ನು ಸಂಸ್ಕೃತದಲ್ಲಿ ರಚಿಸಿದನು. ಇದಲ್ಲದೆ, ತನ್ನ ತಂದೆಯನ್ನು ಕುರಿತು **'ವಿಕ್ರಮಾಂಕಾಭ್ಯುದಯಂ'** ಎಂಬ ಕೃತಿಯನ್ನು ಬರೆದನು. **'ಮಿತಾಕ್ಷರ ಸಂಹಿತೆ'** ಬರೆದ ವಿಜ್ಞಾನೇಶ್ವರನು **"ಭೂತಲದಲ್ಲಿ ಕಲ್ಯಾಣದಂಥ ರಾಜಧಾನಿ ಹಿಂದಿಲ್ಲ, ಮುಂದಿರದು; ವಿಕ್ರಮಾರ್ಕನಂಥ ಅರಸನು ಕಂಡಿಲ್ಲ, ಕೇಳಿಲ್ಲ"** ಎಂದು ಕಲ್ಯಾಣ ನಗರವನ್ನು ಬಣ್ಣಿಸಿದ್ದಾನೆ. 19ನೆಯ ಶತಮಾನದ ಕೆಲವು ಶಾಸನಗಳಲ್ಲಿ ಬೆಂಗಳೂರನ್ನು 'ಕಲ್ಯಾಣನಗರಿ' ಎಂದು ಕರೆದಿರುವುದು ಇಲ್ಲಿ ಉಲ್ಲೇಖನೀಯ ಅಂಶವಾಗಿದೆ.[16]

### 2.1.9 ಹೊಯ್ಸಳರು (ಕ್ರಿ.ಶ. 1006–1343)

ಹೊಯ್ಸಳ ಮನೆತನದ ಸ್ಥಾಪಕ ಸಳ ಅಥವಾ ನೃಪಕಾಮ. ಇವರ ರಾಜಧಾನಿ ಸೊಸೆವೂರು (ಶಶಕಪುರ), ಹಳೆಬೀಡು (ದೋರಸಮುದ್ರ), ಬೇಲೂರು (ವೇಲಾಪುರಿ)ಗಳಾಗಿದ್ದವು. 'ಹುಲಿಯನ್ನು ಕೊಲ್ಲುವ ಸಳನ ಶಿಲ್ಪ'ವೇ ಇವರ ರಾಜ ಲಾಂಛನವಾಗಿತ್ತು. ಹೊಯ್ಸಳರಲ್ಲಿ ಪ್ರಸಿದ್ಧನಾದವನು ವಿಷ್ಣುವರ್ಧನ. ಇವನ ಪಟ್ಟದರಸಿ 'ನಾಟ್ಯರಾಣಿ ಶಾಂತಲೆ'. ವಿಷ್ಣುವರ್ಧನನು ಕಲ್ಯಾಣ ಚಾಲುಕ್ಯರ ಪ್ರಭುತ್ವವನ್ನು ವಿರೋಧಿಸಿ ಸ್ವತಂತ್ರಗೊಂಡ ಮೊದಲ ರಾಜ. ಇವನು ತಲಕಾಡಿನಲ್ಲಿ ಚೋಳರನ್ನು ಸೋಲಿಸಿ, 'ತಲಕಾಡುಕೊಂಡ' ಎಂಬ ಬಿರುದನ್ನು ತಳೆದನು. ಈ ವಿಜಯದ ಸಂಕೇತವಾಗಿ ತಲಕಾಡಿನಲ್ಲಿ 'ಕೀರ್ತಿನಾರಾಯಣ' ಹಾಗೂ ಬೇಲೂರಿನಲ್ಲಿ 'ವಿಜಯನಾರಾಯಣ' ದೇವಾಲಯಗಳನ್ನು ಕಟ್ಟಿಸಿದನು. ತಮಿಳುನಾಡಿನಲ್ಲಿ ಕುಲೋತ್ತುಂಗ ಚೋಳನ ಉಪಟಳ ತಾಳಲಾರದೆ ಕರ್ನಾಟಕಕ್ಕೆ ಬಂದ ರಾಮಾನುಜಾಚಾರ್ಯರಿಗೆ ಮೇಲುಕೋಟೆಯಲ್ಲಿ ಆಶ್ರಯ ಕಲ್ಪಿಸಿದನು. ವಿಷ್ಣುವರ್ಧನನ ದಂಡನಾಯಕನಾದ ಕೇತಮಲ್ಲನು ಹಳೆಬೀಡಿನ ಹೊಯ್ಸಳೇಶ್ವರ ದೇವಾಲಯವನ್ನು ಕ್ರಿ.ಶ. 1121 ರಲ್ಲಿ ಕಟ್ಟಿಸಿದನು. ಹೊಯ್ಸಳರು ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೆ ಅನುಪಮ ಕೊಡುಗೆ ನೀಡಿದರು. ಬೇಲೂರು, ಹಳೆಬೀಡು, ಸೋಮನಾಥಪುರಗಳು ಹೊಯ್ಸಳರ ಪ್ರಮುಖ ವಾಸ್ತುಶಿಲ್ಪ ಕೇಂದ್ರಗಳಾಗಿವೆ. ಎಸ್. ಶ್ರೀಕಂಠ ಶಾಸ್ತ್ರೀ ಅವರು ತಮ್ಮ 'ಹೊಯ್ಸಳ ವಾಸ್ತುಶಿಲ್ಪ' ಕೃತಿಯಲ್ಲಿ ಹೊಯ್ಸಳರ ಕಾಲದ ವಾಸ್ತುಶಿಲ್ಪಗಳು ಕಂಡುಬರುವ ಕರ್ನಾಟಕದ 92 ಸ್ಥಳಗಳನ್ನು ಪರಿಚಯಿಸಿದ್ದಾರೆ. ಬೆಂಗಳೂರು ಪರಿಸರದಲ್ಲಿಯೂ ಹೊಯ್ಸಳರ ಕೆಲವು ದೇವಾಲಯಗಳು ಕಂಡುಬಂದಿವೆ. ಈ ದೇವಾಲಯಗಳು ನಾಡಪ್ರಭುಗಳ ಕಾಲದಲ್ಲಿ ವಿಸ್ತರಣೆಗೊಂಡಿರುವುದನ್ನು ಗಮನಿಸಬಹುದು. ಉದಾ.: ಮಾಗಡಿ ತಾಲ್ಲೂಕು ಕಲ್ಲೂರಿನ ವರದರಾಜಸ್ವಾಮಿ ದೇವಾಲಯ.[17]

### 2.1.10 ವಿಜಯನಗರ ಸಾಮ್ರಾಜ್ಯ (ಕ್ರಿ.ಶ. 1336–1672)

ಹೊಯ್ಸಳರ ನಂತರ ಏಳಿಗೆಗೆ ಬಂದ ಸಾಮ್ರಾಜ್ಯವೇ ವಿಜಯನಗರ ಸಾಮ್ರಾಜ್ಯ. ವಿಜಯನಗರ ಸಾಮ್ರಾಜ್ಯವನ್ನು ಹರಿಹರ, ಬುಕ್ಕ, ಮಾರಪ್ಪ, ಮುದ್ದಪ್ಪ ಮತ್ತು ಕಂಪಣ ಎಂಬ ಐವರು ಸಂಗಮ ಸೋದರರು ಕ್ರಿ.ಶ. 1336ರಲ್ಲಿ ಸ್ಥಾಪಿಸಿದರು. ವಿಜಯನಗರ ಸಾಮ್ರಾಜ್ಯದ ಲಾಂಛನ ವರಾಹ. ಮುದ್ರೆ ಶ್ರೀ ವಿರೂಪಾಕ್ಷ. ಹಂಪೆ, ಆನೆಗುಂದಿ, ಪೆನುಗೊಂಡ, ಚಂದ್ರಗಿರಿ, ವೆಲ್ಲೂರುಗಳು ವಿಜಯನಗರ ಸಾಮ್ರಾಜ್ಯದ ರಾಜಧಾನಿಗಳಾಗಿದ್ದವು. ವಿಜಯನಗರ ಸಾಮ್ರಾಜ್ಯವನ್ನು ನಾಲ್ಕು ಮನೆತನಗಳು ಸುಮಾರು 335 ವರ್ಷಗಳ ಕಾಲ ಆಳಿದವು.

ಅವುಗಳೆಂದರೆ: ಸಂಗಮ (1336–1485), ಸಾಳ್ವ (1485–1505), ತುಳುವ (1505–1570) ಮತ್ತು ಅರವೀಡು (1570–1672).

ಸಂಗಮ ವಂಶದ ಮೊದಲ ದೊರೆ ಹರಿಹರ. ನಂತರ ಬುಕ್ಕ, 1ನೇ ದೇವರಾಯ, 2ನೇ ದೇವರಾಯರು ಅಧಿಕಾರಕ್ಕೆ ಬಂದರು. 2ನೇ ದೇವರಾಯನು (1424–46) ಕೃಷ್ಣದೇವರಾಯನಷ್ಟೆ ಪ್ರಸಿದ್ಧನಾದರೂ, ಇವನಿಗೆ ಚರಿತ್ರೆಯಲ್ಲಿ ಸೂಕ್ತ ಸ್ಥಾನಮಾನ ಸಿಕ್ಕಿಲ್ಲ. ಇವನ ದಂಡನಾಯಕ ಲಕ್ಕಣನು ಸಿಂಹಳ ದೇಶದ ಮೇಲೆ ದಂಡೆತ್ತಿ ಹೋಗಿ ಕಪ್ಪ ಕಾಣಿಕೆ ಪಡೆದನು. ಬರ್ಮಾದ ಪೆಗು, ತೆನೆಸ್ಸರಿಂ ರಾಜ್ಯಗಳೂ ದೇವರಾಯನಿಗೆ ಕಪ್ಪ ಸಲ್ಲಿಸುತ್ತಿದ್ದವು. ಇವನಿಗೆ 'ಪ್ರೌಢದೇವರಾಯ', 'ಗಜಬೇಂಟೆಕಾರ' ಎಂಬ ಹೆಸರುಗಳೂ ಇದ್ದವು. ಸ್ವತಃ ಸಾಹಿತಿಯೂ ಆಗಿದ್ದ ರಾಯನು ಸಂಸ್ಕೃತದಲ್ಲಿ **'ಮಹಾನಾಟಕ ಸುಧಾನಿಧಿ'** ಬರೆದಿದ್ದನು. ತೆಲುಗಿನ ಶ್ರೀನಾಥ ಕವಿಗೆ ಕನಕಾಭಿಷೇಕ ಮಾಡಿಸಿದನು. ಇವನ ರಾಜ್ಯದಲ್ಲಿ ಎಲ್ಲಾ ಧರ್ಮಿಯರೂ ಶಾಂತಿ, ಸೌಹಾರ್ದತೆಯಿಂದ ಸಹಬಾಳ್ವೆ ನಡೆಸುತ್ತಿದ್ದರು.

ನಂತರ ಸಾಳ್ವ ಮನೆತನದ ನರಸಿಂಹ ಕೆಲಕಾಲ ಆಳಿದನು. ಅನಂತರ ಬಂದ ತುಳುವ ಮನೆತನದಲ್ಲಿ ಪ್ರಸಿದ್ಧನಾದವನು ಕೃಷ್ಣದೇವರಾಯ (1509–29). ದಿಗ್ವಿಜಯಕ್ಕೆ ಹೆಸರಾಗಿದ್ದ ಕೃಷ್ಣ ದೇವರಾಯನು ಅಖಂಡ ದಕ್ಷಿಣ ಭಾರತವನ್ನು ಆಳಿದನು. ಬಿಜಾಪುರದ ಸುಲ್ತಾನನ ಬಂಧನದಲ್ಲಿದ್ದ ಬಹುಮನಿಯ ರಾಜಕುಮಾರ 2ನೇ ಮಹಮದ್‌ನನ್ನು ಬಿಡುಗಡೆಗೊಳಿಸಿ ಮತ್ತೆ ಬೀದರ್‌ನಲ್ಲಿ ಪಟ್ಟಾಭಿಷೇಕ ಮಾಡಿದನು. ಆದ್ದರಿಂದ ಕೃಷ್ಣದೇವರಾಯನು 'ಯವನ ರಾಜ್ಯ ಪ್ರತಿಷ್ಠಾಪನಾಚಾರ್ಯ' ಎಂದು ಕರೆಸಿಕೊಂಡನು. ಸ್ವತಃ ಕವಿಯೂ ಆಗಿದ್ದ ರಾಯನು ತೆಲುಗಿನಲ್ಲಿ **'ಆಮುಕ್ತ ಮಾಲ್ಯದ'** ಹಾಗೂ ಸಂಸ್ಕೃತದಲ್ಲಿ **'ಜಾಂಭವತಿ ಕಲ್ಯಾಣ'** ಎಂಬ ಕೃತಿಗಳನ್ನು ರಚಿಸಿದನು. ಇವನ ಆಸ್ಥಾನದಲ್ಲಿ ಅಷ್ಟ ದಿಗ್ಗಜರೆಂಬ ಪ್ರಖ್ಯಾತ ಎಂಟು ಜನ ಕವಿಗಳು ಇದ್ದರು. ಇವರೆಲ್ಲರೂ ಬಹುತೇಕ ತೆಲುಗು ಕವಿಗಳೇ ಆಗಿದ್ದರು. ರಾಯನು ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಕ್ಕೂ ಅಪಾರ ಕೊಡುಗೆ ನೀಡಿದನು.

ಕೃಷ್ಣದೇವರಾಯನ ಕಾಲದಲ್ಲಿ ಅಮರನಾಯಕ ಪದ್ಧತಿ ಹೆಚ್ಚು ರೂಢಿಗೆ ಬಂದಿತು. ಏಕೆಂದರೆ ಕೃಷ್ಣದೇವರಾಯನು ಗೆದ್ದ ವಿಶಾಲ ಭೂಪ್ರದೇಶದ ಆಡಳಿತಕ್ಕಾಗಿ ಹೆಚ್ಚು ಚಾಲ್ತಿಯಲ್ಲಿಲ್ಲದಿದ್ದ ನಾಯಂಕರ ಪದ್ಧತಿಯನ್ನು ಪ್ರವರ್ಧಮಾನಕ್ಕೆ ತಂದನು. ಸಾಮ್ರಾಜ್ಯದ ವಿವಿಧ ಘಟಕಗಳಾದ ನಾಡು – ಸೀಮೆ – ವಳಿತ – ವೇಂಠೆ – ಭಾವಡಿ – ಸ್ಥಳ ಇವುಗಳಲ್ಲಿ ತನ್ನ ಅಧೀನ ನಾಯಕರನ್ನು ಅಮರನಾಯಕರನ್ನಾಗಿ ನೇಮಕಗೊಳಿಸಿ, ನಾಯಕತನದ ಸೇವೆಗಾಗಿ ಭೂ

ಉಂಬಳಿಗಳನ್ನು ಕೊಟ್ಟನು. ಟಿ.ಎಚ್. ಸರಿತಾ ಅವರು ಪಟ್ಟಿ ಮಾಡಿರುವಂತೆ ಕೃಷ್ಣದೇವರಾಯನು ತನ್ನ ಅಧಿಕಾರಾವಧಿಯಲ್ಲಿ ಕರ್ನಾಟಕದಲ್ಲಿ 44 ಜನರಿಗೆ ನಾಯಕತನವನ್ನು ನೀಡಿದನು.[18] ಅರವೀಡು ಮನೆತನದ ಕಾಲದಲ್ಲಿ ಉಚ್ಛ್ರಾಯಸ್ಥಿತಿಯನ್ನು ಕಂಡಿದ್ದ ಅಮರನಾಯಕ ಪದ್ಧತಿಯು 1565ರ ರಕ್ಕಸತಂಗಡಿ ಯುದ್ಧದಲ್ಲಿ ವಿಜಯನಗರ ಸೋತ ನಂತರ ಈ ಪದ್ಧತಿಯು ನಿಧಾನವಾಗಿ ಕ್ಷೀಣಿಸತೊಡಗಿತು. ವಿಜಯನಗರ ದುರ್ಬಲವಾದ ನಂತರ ಅನೇಕ ನಾಯಕರು ಸ್ವತಂತ್ರಗೊಳ್ಳಲಾರಂಭಿಸಿದರು.

ವಿಜಯನಗರ ಸಾಮ್ರಾಜ್ಯದ ಕೊನೆಯ ಮನೆತನ ಅರವೀಡು. ಈ ಮನೆತನದಲ್ಲಿ ಅಳಿಯ ರಾಮರಾಯ ಪ್ರಸಿದ್ಧನು. 1565ರಲ್ಲಿ ನಡೆದ ರಕ್ಕಸ ತಂಗಡಿ ಯುದ್ಧದ ಮುಂದಾಳತ್ವವನ್ನು ಈತನೇ ವಹಿಸಿದ್ದನು. ಷಾಹಿ ಸುಲ್ತಾನರ ಒಕ್ಕೂಟದ ಸೇನೆಯನ್ನು ಎದುರುಸಿದ ವಿಜಯನಗರದ ಸೇನೆ ಆರಂಭದಲ್ಲಿ ಯಶಸ್ಸನ್ನು ಸಾಧಿಸಿತ್ತಾದರೂ, ಅಂತಿಮವಾಗಿ ಷಾಹಿಸುಲ್ತಾನರು ರಾಮರಾಯರನ್ನು ಕೊಂದು ಜಯವನ್ನು ಸಾಧಿಸಿದರು. ಸುಲ್ತಾನರು ಹಂಪಿಯನ್ನು ಲೂಟಿ ಮಾಡಿದರು. ವಿಜಯನಗರ ರಾಜ ಪರಿವಾರ ಹಂಪಿಯನ್ನು ತೊರೆದು ಪೆನುಗೊಂಡೆಗೆ ಹೋಯಿತು. ನಂತರ ಚಂದ್ರಗಿರಿಯಲ್ಲಿ ನೆಲೆಸಿದರು. ಕೊನೆಗೆ 3ನೇ ಶ್ರೀರಂಗರಾಯನು 'ಸಾಮ್ರಾಜ್ಯವಿಲ್ಲದ ಸಾಮ್ರಾಟ'ನಾಗಿ ಅಲೆದನು. ಅಂತಿಮವಾಗಿ 1672 ರಲ್ಲಿ ವಿಜಯನಗರ ರಾಜ್ಯವು ಕಣ್ಮರೆಯಾಯಿತು.

ಹಂಪೆ ಪಟ್ಟಣದಲ್ಲಿ ನೀರು ಸರಬರಾಜಿಗೆ ಮಾಡಲಾಗಿದ್ದ ವ್ಯವಸ್ಥೆಯು ಅದ್ಭುತವಾಗಿದೆ. ಹಂಪೆ, ಲೇಪಾಕ್ಷಿ, ಪೆನುಗೊಂಡ ಮುಂತಾದವು ವಿಜಯನಗರ ಸಾಮ್ರಾಜ್ಯದ ಪ್ರಮುಖ ಕಲೆ ಮತ್ತು ವಾಸ್ತುಶಿಲ್ಪ ಕೇಂದ್ರಗಳು. ಹಂಪಿಯ ವಿಜಯವಿಠ್ಠಲ ದೇವಾಲಯದ ಸಂಕೀರ್ಣದಲ್ಲಿರುವ ವಸಂತ ಮಂಟಪದ ಕಂಬಗಳಲ್ಲಿ ಸಪ್ತಸ್ವರಗಳು ಹೊರ ಹೊಮ್ಮುತ್ತವೆ. ಅಲ್ಲಿನ ಕಲ್ಲಿನ ರಥ ಪ್ರಮುಖ ಆಕರ್ಷಣೆಯಾಗಿದೆ. ಸುಗ್ರೀವ ನರಸಿಂಹ, ಸಾಸಿವೆ ಕಾಳು, ಕಡಲೆಕಾಳು ಗಣಪ, ವಿರೂಪಾಕ್ಷ ದೇವಾಲಯ ಮುಂತಾದವು ಪ್ರಮುಖವಾದುವು. ಯಲಹಂಕ ನಾಡಪ್ರಭುಗಳು ಕೂಡ ಕಲೆ ಮತ್ತು ವಾಸ್ತುಶಿಲ್ಪದಲ್ಲಿ ವಿಜಯನಗರದ ಸಾಮ್ರಾಟರನ್ನೆ ಅನುಕರಣೆ ಮಾಡಿರುವುದನ್ನು ಕಾಣಬಹುದು. ವಿಶೇಷವಾಗಿ, ಬೆಂಗಳೂರಿನಲ್ಲಿ ದೊಡ್ಡ ಬಸವಣ್ಣ, ದೊಡ್ಡ ಗಣಪತಿ, ಮಾಗಡಿಯ ಸೋಮೇಶ್ವರ, ಹಲಸೂರಿನ ಸೋಮೇಶ್ವರ ದೇವಾಲಯಗಳು ವಿಜಯನಗರ ಕಾಲದ ಕಲೆ ಮತ್ತು ವಾಸ್ತುಶಿಲ್ಪದ ಅತ್ಯುತ್ತಮ ಉದಾಹರಣೆಗಳು.

ವಿಜಯನಗರಕ್ಕೆ ಭೇಟಿ ನೀಡಿದ ನಿಕೊಲೊಕಾಂಟಿ (1420), ಅಬ್ದುಲ್ ರಜಾಕ್ (1443), ನಿಕಿಟಿನ್ (1480), ಬಾರ್ಬೋಸಾ (1516), ಪೇಸ್ (1520), ನ್ಯೂನಿಜ್ (1535) ಮೊದಲಾದ ವಿದೇಶಿ ಪ್ರವಾಸಿಗರು ವಿಜಯನಗರ ಕುರಿತು ವಿಪುಲವಾಗಿ ಬರೆದಿದ್ದಾರೆ.[19] ರಾಬರ್ಟ್ ಸಿವೆಲ್ಲರ **'ಫರ್ಗಾಟನ್ ಎಂಪೈರ್'** ವಿಜಯನಗರ ಸಾಮ್ರಾಜ್ಯದ ಕುರಿತು ಹೊರಬಂದ ಮೊದಲ ಸಂಶೋಧನಾತ್ಮಕ ಗ್ರಂಥವಾಗಿದೆ.[20] ಹಂಪೆಯು ಮಧ್ಯಕಾಲೀನ ಕರ್ನಾಟಕದಲ್ಲಿ ಒಂದು ಮಹಾನಗರವಾಗಿ ರೂಪುಗೊಂಡಿತು.

ವಿಜಯನಗರ ಸಾಮ್ರಾಜ್ಯದ ಪತನಾನಂತರ ಕೆಲವು ಸಾಮಂತ ರಾಜ್ಯಗಳು ಅಥವಾ ನಾಯಕರು ಸ್ವತಂತ್ರವನ್ನು ಘೋಷಿಸಿಕೊಂಡು ಆಳ್ವಿಕೆ ನಡೆಸಲಾರಂಭಿಸಿದವು. ಆದರೆ, ಕೊನೆಯವರೆಗೂ ವಿಜಯನಗರ ಸಾಮ್ರಾಟರಿಗೆ ನಿಷ್ಠೆಯಿಂದಿದ್ದ ಮನೆತನಗಳಲ್ಲಿ ಯಲಹಂಕ ನಾಡಪ್ರಭುಗಳ ಮನೆತನ ಕೂಡ ಒಂದಾಗಿದೆ. ದಕ್ಷಿಣದಲ್ಲಿ ಮೈಸೂರು ದೊರೆಗಳು ಪ್ರವರ್ಧಮಾನಕ್ಕೆ ಬಂದಂತೆ ಅನೇಕ ಪಾಳೆಯಪಟ್ಟುಗಳು ಕಣ್ಮರೆಯಾಗುತ್ತಾ ಬಂದವು. ಚಿಕ್ಕದೇವರಾಜ ಒಡೆಯರ್ ಕಾಲದಲ್ಲಿ ಆರಂಭವಾದ ಈ ಬೆಳವಣಿಗೆಯು ಹೈದರ್ ಮತ್ತು ಟಿಪ್ಪುಸುಲ್ತಾನನ ಕಾಲದಲ್ಲಿ ಮುಕ್ತಾಯವಾಯಿತು.

### 2.1.11 ಬಹಮನಿ ಸುಲ್ತಾನರು (ಕ್ರಿ.ಶ. 1347–1527)

ಬಹಮನಿ ಸಾಮ್ರಾಜ್ಯವನ್ನು 1347ರಲ್ಲಿ 'ಅಲ್ಲಾವುದ್ದಿನ್ ಹಸನ್‌ಗಂಗೂ ಬಹಮನ್ ಷಾ' ಸ್ಥಾಪಿಸಿದನು. ಗುಲ್ಬರ್ಗ, ಬೀದರ್ ಇವರ ರಾಜಧಾನಿಯಾಗಿತ್ತು. ಬಹಮನಿಗಳಲ್ಲಿ ಅಲ್ಲಾವುದ್ದಿನ್ ಹಸನ್ ಗಂಗೂ ಬಹಮನ್ ಷಾ, ಮಹಮದ್ ಷಾ, ಅಲ್ಲಾವುದ್ದಿನ್ ಷಾ, ಫಿರೋಜ್ ಷಾ ಪ್ರಮುಖರಾದವರು. ಬಹಮನಿ ಸಾಮ್ರಾಜ್ಯದಲ್ಲಿ ಪ್ರಧಾನಮಂತ್ರಿಯಾಗಿದ್ದ 'ಮಹಮದ್ ಗವಾನ'ನು (1447–1481) ರಾಜ್ಯದ ವಿಸ್ತರಣೆಗೆ ಶ್ರಮಿಸಿದನು. ಇವನ ಮಹತ್ವದ ಸಾಧನೆ ಎಂದರೆ ಬೀದರ್‌ನಲ್ಲಿ ಮದರಸ (ವಿದ್ಯಾಕೇಂದ್ರ) ಸ್ಥಾಪನೆ (1472). ಮೂರು ಅಂತಸ್ತಿನ ಮದರಸದಲ್ಲಿ ಉಚಿತ ವಿದ್ಯಾರ್ಥಿನಿಲಯ, ಉಪನ್ಯಾಸ ಕೊಠಡಿ, ಗ್ರಂಥಾಲಯಗಳ ವ್ಯವಸ್ಥೆಗಳಿದ್ದವು. ಅಂತಿಮವಾಗಿ ರಾಜದ್ರೋಹದ ಸುಳ್ಳು ಆರೋಪದ ಮೇಲೆ ಗವಾನನನ್ನು ಮರಣದದಂಡನೆಗೆ ಗುರಿಪಡಿಸಲಾಯಿತು. ಗವಾನನ ಮರಣ ನಂತರ ಬಹಮನಿ ರಾಜ್ಯ 5 ಷಾಹಿ ಮನೆತನಗಳಾಗಿ ವಿಘಟನೆ ಹೊಂದಿತು. ಅವುಗಳೆಂದರೆ ಬಿಜಾಪುರದ ಆದಿಲ್ ಷಾಹಿ (1489), ಅಹ್ಮದ್ ನಗರದ ನಿಜಾಂ ಷಾಹಿ (1490), ಬಿರಾರಿನ ಇಮದ್ ಷಾಹಿ (1490), ಗೋಲ್ಕಂಡದ ಕುತುಬ್ ಷಾಹಿ (1518) ಹಾಗೂ ಬೀದರಿನ ಬರೀದ್ ಷಾಹಿ (1528) ಮನೆತನಗಳಾಗಿವೆ.

**2.1.12 ಬಿಜಾಪುರದ ಆದಿಲ್‌ಷಾಹಿ**

ಷಾಹಿ ಸುಲ್ತಾನರಲ್ಲಿ ಪ್ರಮುಖರಾದವರು ಬಿಜಾಪುರದ ಆದಿಲ್‌ಷಾಹಿಗಳು. ಈ ಮನೆತನದ ಸ್ಥಾಪಕ 'ಯೂಸೂಫ್ ಆದಿಲ್‌ಖಾನ್'. ಆದಿಲ್‌ಷಾಹಿಗಳಲ್ಲಿ ಪ್ರಸಿದ್ಧನಾದ ಸುಲ್ತಾನ 2ನೆಯ ಇಬ್ರಾಹಿಂ ಆದಿಲ್‌ಷಾ (1580–1627). ಇವನು ಸಾಹಿತ್ಯ, ಸಂಗೀತ, ಕಲೆ ವಾಸ್ತುಶಿಲ್ಪಗಳಿಗೆ ಪ್ರೋತ್ಸಾಹ ನೀಡಿದನು. ಸ್ವತಃ ಕವಿಯೂ ಆಗಿದ್ದ ಇಬ್ರಾಹಿಂ ಆದಿಲ್‌ಷಾನ ಆಸ್ಥಾನದಲ್ಲಿ 300 ಜನ ಕವಿಗಳಿದ್ದರು. ಇವನನ್ನು 'ಜಗದ್ಗುರು' ಎಂದು ಕರೆಯುತ್ತಿದ್ದರು. 'ಕಿತಾಬ್ ಎ ನವರಸ್' ಎಂಬ ಉರ್ದು ಕೃತಿಯನ್ನು ಬರೆದು, ಮುಸಲ್ಮಾನರಿಗೆ ಹಿಂದೂ ಸಂಗೀತದ ಪರಿಚಯ ಮಾಡಿಕೊಟ್ಟನು. 'ನವರಸಪುರ' ಎಂಬ ರಾಜಧಾನಿಯನ್ನು ನಿರ್ಮಾಣ ಮಾಡಿಸಿದನು. ಇವನನ್ನು 'ಕರ್ನಾಟಕದ ಅಕ್ಬರ್' ಎಂದರೆ ತಪ್ಪಾಗದು. ಇವನು ನಿರ್ಮಾಣ ಮಾಡಿಸಿದ 'ಇಬ್ರಾಹಿಂ ರೋಜ' ಸ್ಮಾರಕವು ದಕ್ಷಿಣ ಭಾರತದ 'ತಾಜ್‌ಮಹಲ್' ಎಂದೇ ಪ್ರಸಿದ್ಧವಾಗಿದೆ. ನಂತರ ಅಧಿಕಾರಕ್ಕೆ ಬಂದ ಮಹಮದ್ ಆದಿಲ್‌ಷಾ (1627–56) ಬಿಜಾಪುರದಲ್ಲಿ 'ಗೋಲಗುಮ್ಮಟ'ವನ್ನು ಕಟ್ಟಿಸಿದನು. ಇವನ ಕಾಲದಲ್ಲಿ ದಕ್ಷಿಣ ಕರ್ನಾಟಕದ ಮೇಲೆ 4 ಬಾರಿ ದಂಡಯಾತ್ರೆಗಳು ನಡೆದವು. ಈ ದಂಡಯಾತ್ರೆಯ ನೇತೃತ್ವವನ್ನು ವಹಿಸಿದ್ದವರು ದಂಡನಾಯಕ ರಣದುಲ್ಲಾಖಾನ್ ಮತ್ತು ಶಿವಾಜಿಯ ತಂದೆ ಷಹಜಿ. ದಂಡಯಾತ್ರೆಗಳ ಸಂದರ್ಭದಲ್ಲಿ ಇಕ್ಕೇರಿಯ ವೀರಭದ್ರನಾಯಕ, ಬೆಂಗಳೂರಿನ ಕೆಂಪೇಗೌಡರನಲ್ಲದೆ, ಚಿಕ್ಕನಾಯಕನಹಳ್ಳಿ, ಸಕ್ಕರಾಯಪಟ್ಟಣ, ವೆಲ್ಲೂರು, ಜಿಂಜಿ, ತಂಜಾವೂರುಗಳನ್ನೂ ಗೆದ್ದರು. ಬೆಂಗಳೂರು, ಹೊಸಕೋಟೆಗಳನ್ನು ಷಹಜಿಗೆ ಜಾಗೀರಾಗಿ ಕೊಡಲಾಯಿತು. ರಣದುಲ್ಲಾಖಾನನು 1643ರಲ್ಲಿ ಮರಣ ಹೊಂದಿದನಾದರೂ, ಆ ಹೊತ್ತಿಗೆ ಬಹುಪಾಲು ಕರ್ನಾಟಕವನ್ನೆ ಆತನು ಗೆದ್ದಂತಾಗಿತ್ತು.[21] ಚಾಂದ್ ಬೀಬಿಯು ಇದೇ ಷಾಹಿ ಮನೆತನಕ್ಕೆ ಸೇರಿದ ಬೇಗಂ ಆಗಿದ್ದಳು.

ಉರ್ದು ಭಾಷೆಯು ಬಹಮನಿ ರಾಜ್ಯದ ಸೈನಿಕ ಶಿಬಿರದಲ್ಲಿ ಹುಟ್ಟಿದ ಭಾಷೆ. ಬಿಜಾಪುರದ 1ನೇ ಇಬ್ರಾಹಿಂ ಆದಿಲ್‌ಷಾ ಇದನ್ನು ಅಧಿಕೃತ ರಾಜಭಾಷೆಯಾಗಿ ಮಾನ್ಯ ಮಾಡಿದನು. ಸೂಫಿ ಸಂತ 'ಖ್ವಾಜಾ ಬಂದೇ ನವಾಜ ಗೇಸೂ ದರಾಜ' ಉರ್ದುವಿನಲ್ಲಿ ಮೊದಲ ಕೃತಿಯನ್ನು ಗುಲ್ಬರ್ಗದಲ್ಲಿ ರಚಿಸಿದನು. ಬಹುಶಃ ಆದಿಲ್ ಷಾಹಿಗಳ ದಂಡಯಾತ್ರೆಯ ಜೊತೆಗೆ ಸೂಫಿ ಧರ್ಮ ಕೂಡ ದಕ್ಷಿಣಕ್ಕೆ ಪ್ರಸಾರವಾಗಿರುವಂತೆ ಕಾಣುತ್ತದೆ. ಏಕೆಂದರೆ, ಬೆಂಗಳೂರಿನಲ್ಲಿಯೂ ಹಲವು ಹಳೆಯ ಸೂಫಿ ಸಂತರ ದರ್ಗಾಗಳು ಇವೆ.

## 2.2 ದಕ್ಷಿಣ ಕರ್ನಾಟಕದ ಪ್ರಮುಖ ಅರಸು ಮನೆತನಗಳು

ಸ್ಥಳೀಯ ಮುಖ್ಯಸ್ಥರಾಗಿದ್ದ ನಾಡಪ್ರಭುಗಳು ವಿಜಯನಗರ ಕಾಲಘಟ್ಟದಲ್ಲಿ ವಿಶೇಷವಾಗಿ ಕೃಷ್ಣದೇವರಾಯ ಮತ್ತು ನಂತರದ ಕಾಲದಲ್ಲಿ ಉನ್ನತ ಸ್ಥಾನಮಾನ ಹೊಂದಲು ಅವಕಾಶ ದೊರೆಯಿತು. ಈ ನಾಡಪ್ರಭುಗಳು ತಮ್ಮ ಸೇವೆ, ಶೌರ್ಯ ಮತ್ತು ರಾಜನಿಷ್ಠೆಯ ಮೂಲಕ ಸಾಮ್ರಾಟನ ಗಮನ ಸೆಳೆದು ನಾಯಕತನವನ್ನು ಪಡೆದರು. ಇವರು ಅಮರಂ ಎಂಬ ನಿರ್ದಿಷ್ಟ ಭೂಮಿಯನ್ನು ಪಡೆದುಕೊಂಡು ವಿಜಯನಗರ ಸಾಮ್ರಾಟನಿಗೆ ನಿಷ್ಠನಾಗಿ, ಸೈನಿಕ ಸೇವೆ ಮತ್ತು ಕಂದಾಯ ಸಂಗ್ರಹದ ಜವಾಬ್ದಾರಿಯನ್ನು ಮಿತ ಸ್ವಾಯತ್ತ ಅಧಿಕಾರಗಳೊಂದಿಗೆ ನಾಡು, ಮಾಗುಣಿ, ರಾಜ್ಯ ಮುಂತಾದ ಆಡಳಿತ ವಿಭಾಗಗಳಲ್ಲಿ ಮೇಲ್ವಿಚಾರಣೆ ನಡೆಸುತ್ತಿದ್ದರು. ಆದ್ದರಿಂದ ಈ ಅಮರನಾಯಕರನ್ನು ವಿವಿಧ ಪ್ರದೇಶಗಳಲ್ಲಿ ನಾಡಪ್ರಭು, ಪಾಳೆಯಗಾರರು, ನಾಯಕರು, ಒಡೆಯರು ಮುಂತಾದ ಹೆಸರುಗಳಿಂದ ಗುರುತಿಸಲಾಗುತ್ತದೆ. ವಿಜಯನಗರದ ಪತನ ನಂತರ ಯಾವುದೇ ಒಂದು ಪ್ರಬಲ ರಾಜ ಮನೆತನ ತಲೆ ಎತ್ತದೆ ಸಣ್ಣಪುಟ್ಟ ನಾಯಕರು, ಪಾಳೆಯಗಾರರು ಏಳಿಗೆಗೆ ಬಂದರು. ಅವರಲ್ಲಿ ಪ್ರಮುಖರಾದವರು ಮೈಸೂರಿನ ಒಡೆಯರು, ಕೆಳದಿ ಮತ್ತು ಚಿತ್ರದುರ್ಗದ ನಾಯಕರು ಹಾಗೂ ಯಲಹಂಕದ ನಾಡಪ್ರಭುಗಳು, ಚನ್ನಪಟ್ಟಣ ಪಾಳೆಯಗಾರರು, ಮಧುಗಿರಿ ನಾಡಪ್ರಭುಗಳು ಇತ್ಯಾದಿ. ಯಲಹಂಕ ನಾಡಪ್ರಭುಗಳ ಸಮಕಾಲಿನ ಇತರ ಮನೆತನಗಳ ಇತಿಹಾಸನ್ನು ಅರ್ಥಮಾಡಿಕೊಳ್ಳುವುದರಿಂದ ಯಲಹಂಕ ನಾಡಪ್ರಭುಗಳ ಕಾಲದ ದಕ್ಷಿಣ ಕರ್ನಾಟಕದ ರಾಜಕೀಯ, ಸಾಮಾಜಿ, ಆರ್ಥಿಕ ಮತ್ತು ಸಾಂಸ್ಕೃತಿಕ ಸಂಗತಿಗಳ ಕೊಡುಕೊಳ್ಳುವಿಕೆಯನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಮುಖ ನಾಡಪ್ರಭುಗಳ ಮತ್ತು ಪಾಳೆಯಗಾರ ಇತಿಹಾಸನವನ್ನು ಕುರಿತು ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಳ್ಳವುದು ಮುಂದಿನ ಅಧ್ಯಯನದ ದೃಷ್ಠಿಯಿಂದ ಉಪಯುಕ್ತವಾದುದಾಗಿದೆ.

### 2.2.1 ಕೆಳದಿ ನಾಯಕರು (1499–1773)

ಕೆಳದಿ ನಾಯಕ ಮನೆತನದ ಸ್ಥಾಪಕರು ಚೌಡಪ್ಪ ಮತ್ತು ಭದ್ರಪ್ಪ ಸೋದರರು. ಇವರು ಸಾಗರ ಸಮೀಪದ 'ಪಳ್ಳಿ ಬಯಲು' ಗ್ರಾಮದ ವೀರಶೈವ ಕೃಷಿಕ ಸಮುದಾಯಕ್ಕೆ ಸೇರಿದ ಬಸಪ್ಪ ಮತ್ತು ಬಸವಮ್ಮಾಂಬೆ ಎಂಬ ದಂಪತಿಗಳ ಮಕ್ಕಳೆಂದು **'ಕೆಳದಿ ನೃಪ ವಿಜಯ'** ಕೃತಿಯು ತಿಳಿಸುತ್ತದೆ. ಚೌಡಪ್ಪನು ಅಧಿಕಾರಕ್ಕೆ ಬಂದ ಬಗೆಗೆ ಕೆಲವು ಸ್ವಾರಸ್ಯಕರವಾದ ಐತಿಹ್ಯಗಳಿವೆ. ಅವುಗಳಲ್ಲಿ ಒಂದು– ಕೃಷಿ ಚಟುವಟಿಕೆಯನ್ನು ಪರಿಶೀಲಿಸಲು ಹೋಗಿದ್ದ ಚೌಡಪ್ಪನು ವಿಶ್ರಾಂತಿಗಾಗಿ ಮರದ ನೆರಳಿನಲ್ಲಿ ಮಲಗಿದ್ದಾಗ ನಾಗರ ಸರ್ಪವೊಂದು ಅವನ ತಲೆಯ ಮೇಲೆ

ಹೆಡೆಯಾಡಿಸುತ್ತಿದ್ದಿತು. ಆ ಮಾರ್ಗದಲ್ಲಿ ಹೋಗುತ್ತಿದ್ದ ವೆಂಕಟಾದ್ರಿ ಯಜಮಾನ ಎಂಬ ಜ್ಯೋತಿಷಿಯು ಅಚ್ಚರಿಯಿಂದ ನೋಡುತ್ತಾ ನಿಂತಿದ್ದನು. ಇದೇ ವೇಳೆಗೆ ಮಗ ಮನೆಗೆ ಬಾರದಿರುವುದನ್ನು ಕಂಡು ಹುಡುಕುತ್ತಾ ಬಂದ ತಾಯಿಯು ಈ ದೃಶ್ಯವನ್ನು ಕಂಡು ಚೀರಿದಳು. ಆಗ ವೆಂಕಟಾದ್ರಿ ಯಜಮಾನನು ಆಕೆಯನ್ನು ಸಂತೈಸಿ, ಇದು ಶುಭಸೂಚಕವೆಂದು, ಚೌಡಪ್ಪನಿಗೆ ರಾಜಾಧಿಪತ್ಯದ ಯೋಗವಿದೆಯೆಂದು ತಿಳಿಸಿದನು. ಮತ್ತೊಂದು ಐತಿಹ್ಯದ ಪ್ರಕಾರ ಚೌಡಪ್ಪನಿಗೆ ಯಾದವ ಮತ್ತು ಮುರಾರಿ ಎಂಬ ಆಳುಗಳಿದ್ದರು. ಹೊಲ ಉಳುವ ಸಂದರ್ಭದಲ್ಲಿ ಅವರಿಗೆ ಒಂದು ಕಬ್ಬಿಣದ ಕತ್ತಿಯೊಂದು ಸಿಕ್ಕಿತು. ಅವರು ಅದನ್ನು ತಂದು ತಮ್ಮ ಮನೆಯ ಮಾಡಿನ ಮೇಲಿಟ್ಟರು. ಕಾಗೆಗಳು ಹಾರಿ ಬಂದು ಕತ್ತಿಯ ಮೇಲೆ ಕುಳಿತಾಗಲೆಲ್ಲ ಕತ್ತಿಯು ಚಂಗನೆ ಹಾರಿ ಕಾಗೆಗಳನ್ನು ಕೊಂದುಬಿಡುತ್ತಿತ್ತು. ಈ ಆಶ್ಚರ್ಯವನ್ನು ಕಂಡು ಆಕರ್ಷಿತನಾದ ಚೌಡಪ್ಪ ಆ ಕತ್ತಿಯನ್ನು ತನಗೆ ಕೊಡಬೇಕೆಂದು, ಅದಕ್ಕೆ ಪ್ರತಿಯಾಗಿ ಅಪಾರ ಹಣ ಮತ್ತು ಬೇರೊಂದು ಕತ್ತಿಯನ್ನು ಕೊಡುವುದಾಗಿಯೂ ಆಸೆ ತೋರಿಸುತ್ತಾನೆ. ಆಳುಗಳು ಹಣಸ್ವೀಕರಿಸಲೊಪ್ಪದೆ, ಕತ್ತಿಯನ್ನ ಒಡೆಯನಿಗೆ ಕಾಣಿಕೆಯಾಗಿ ಕೊಟ್ಟರು. ತರುವಾಯ ಕತ್ತಿಯನ್ನು ಮನೆಗೆ ತಂದು ತೊಳೆದು ಅದಕ್ಕೆ 'ನಾಗರಮುರಿ' ಎಂದು ಹೆಸರಿಟ್ಟನು. ಇದು ಚೌಡಪ್ಪನಿಗೂ ಅವನ ವಂಶಸ್ಥರಿಗೂ ದಿವ್ಯಾಯುಧವಾಯಿತು. ಇನ್ನೊಂದು ಐತಿಹ್ಯದ ಪ್ರಕಾರ ಹೊಲ ಉಳುವಾಗ ಸರ್ಪವೊಂದು ತೋರಿಸಿದ ಜಾಗದಲ್ಲಿ ನೇಗಿಲ ಮೊನೆ ಸಿಕ್ಕಿಕೊಂಡಿತು. ಅಗೆದು ನೋಡಿದಾಗ, ಅಲ್ಲೊಂದು ನಿಧಿ ನಿಕ್ಷೇಪ ಕಂಡರು. ಅದನ್ನು ತೆಗೆಯಲು ಯತ್ನಿಸಿದರೂ ಸಾಧ್ಯವಾಗಲಿಲ್ಲ. ಆ ರಾತ್ರಿ ವಿಪ್ರನೊಬ್ಬ ಕನಸಿನಲ್ಲಿ ಬಂದು "ಆ ಕೊಪ್ಪರಿಗೆಯನ್ನು ವಿಧ್ಯುಕ್ತವಾಗಿ ಪೂಜಿಸಿ, ನರಬಲಿ ನೀಡಿದರೆ ನಿಧಿ ಕೈಸೇರುವುದು" ಎಂದು ಸೂಚಿಸಿದನು. ಮರುದಿನ ಕನಸಿನ ಸಂಗತಿಯನ್ನು ವೆಂಕಟಾದ್ರಿ ಯಜಮಾನನಿಗೆ ಚೌಡಪ್ಪ ತಿಳಿಸಿದನು. ಈ ವಿಷಯವನ್ನು ಕೇಳಿಸಿಕೊಂಡ ಚೌಡಪ್ಪನ ಸೇವಕರು ತಮ್ಮನ್ನೇ ಬಲಿಕೊಡಬೇಕೆಂದು ಚೌಡಪ್ಪನನ್ನು ಒತ್ತಾಯಿಸಿದರು. ಕೊನೆಗೆ ನಿರುಪಾಯನಾದ ಚೌಡಪ್ಪ ಅವರಿಬ್ಬರನ್ನು ಬಲಿಕೊಟ್ಟನು. ಒಡನೆಯೇ ನಿಧಿನಿಕ್ಷೇಪ ಚೌಡಪ್ಪನ ಪಾಲಾಯಿತು.[22] ಇಂತಹ ಕಥನಗಳಲ್ಲಿ ಕೆಲವೊಂದು ಇತರ ಪಾಳೆಯಗಾರರ ಮನೆತನದಲ್ಲಿಯೂ ಕೇಳಿಬರುತ್ತದೆ. ಕೆಳದಿಯ ಮನೆತನದವರ ಐತಿಹ್ಯವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಒಂದು ವಿಚಾರ ಸ್ಪಷ್ಟವಾಗುತ್ತದೆ. ಚೌಡಪ್ಪನ ಸೇವಕರಾದ ಯಾದವ ಮತ್ತು ಮುರಾರಿ ಇವರಿಗೆ ಸಿಕ್ಕ ನಾಗರಮುರಿ ಖಡ್ಗವನ್ನು ಚೌಡಪ್ಪ ಆಮಿಷ ತೋರಿಸಿದರೂ ಅವರು ಕೊಟ್ಟಂತೆ ಕಾಣುವುದಿಲ್ಲ. ಬಹುಶಃ ಈ ಆಳುಗಳಿಗೆ ನಿಧಿಯೂ ಸಿಕ್ಕಿರಬಹುದು. ಅದನ್ನು ಪಡೆಯುವ ಸಲುವಾಗಿ ಚೌಡಪ್ಪನು ತನ್ನ ನಿಷ್ಠಾವಂತ ಸೇವಕರನ್ನೆ ಕೊಂದು ನಾಗರಮುರಿ ಖಡ್ಗ ಮತ್ತು ನಿಧಿಯನ್ನು ಸ್ವಾಧೀನ

ಪಡಿಸಿಕೊಂಡಿರುವ ಸಾಧ್ಯತೆಗಳಿವೆ. ಆಳುಗಳನ್ನು ಕೊಂದ ಪಾಪಪ್ರಜ್ಞೆಯ ಪರಿಹಾರಾರ್ಥವಾಗಿ ಅವರ ಹೆಸರಲ್ಲಿ ಸ್ಮಾರಕವನ್ನು ಕಟ್ಟಿಸಿರುವಂತೆ ತೋರುತ್ತದೆ.

ಚೌಡಪ್ಪ ಮತ್ತು ಭದ್ರಪ್ಪ ಅವರ ಶೌರ್ಯ ಮತ್ತು ಸಾಧನೆಯನ್ನು ವಿಜಯನಗರದ ಸಾಮ್ರಾಟ ಕೃಷ್ಣದೇವರಾಯನು ಕೇಳಿ ತಿಳಿದನು. ಇವರನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು, ಅವಿಧೇಯ ಪಾಳೆಯಗಾರರ ಬಂಡಾಯವನ್ನು ಶಮನಗೊಳಿಸಲು ಕಳುಹಿಸಿದನು. ಸೋದರರ ಯಶಸ್ಸನ್ನು ಕಂಡ ಕೃಷ್ಣದೇವರಾಯನು ಅವರಿಗೆ ಚಂದ್ರಗುತ್ತಿ, ಕೆಳದಿ, ಇಕ್ಕೇರಿ, ಪೇರ್‌ಬಯಲು, ಯಲಗಳಲೆ, ಮಾದೂರು, ಕಲಿಸೆ ಮತ್ತು ಲಾತವಾಡಿ ಎಂಬ 8 ಮಾಗಣಿಗಳನ್ನು ನೀಡಿ, ಗೌರವಿಸಿದನು. ಹೀಗೆ ಚೌಡಪ್ಪ ಮತ್ತು ಭದ್ರಪ್ಪ ಸೋದರರಿಂದ ಕೆಳದಿ ರಾಜ್ಯದ ಉದಯವಾಯಿತು. ಚೌಡಪ್ಪನು ಕೆಳದಿಯಲ್ಲಿ ರಾಮೇಶ್ವರ ದೇವಾಲಯವನ್ನು ನಿರ್ಮಿಸಿ, ಅದಕ್ಕೆ ತನ್ನ ಊರಾದ ಪಳ್ಳಿ ಬಯಲನ್ನು ಉಂಬಳಿಯಾಗಿ ನೀಡಿದನು.

ಕೆಳದಿಯ ನಾಯಕರ ಬಗೆಗೆ ಕೆಲವು ಐತಿಹ್ಯಗಳಿವೆ. ಅಂತವೇ ಐತಿಹ್ಯಗಳು ಯಲಹಂಕ ನಾಡಪ್ರಭುಗಳ ಬಗೆಗೂ ಇವೆ. ಅವುಗಳಲ್ಲಿ ಒಂದು ಮೇಲೆ ನೋಡಿದ ನಿಧಿ ದೊರೆತು ರಾಜ್ಯ ಕಟ್ಟಿದ ಕಥೆ. ಮತ್ತೊಂದು ಐತಿಹ್ಯ ಕೆಳದಿ ಬಗೆಗೆ ಇದೆ. ಚೌಡಪ್ಪನು ಪಳ್ಳಿ ಬಯಲಿನ ಮೇಲು ಭಾಗದಲ್ಲಿ ಅನೆಹಳ್ಳಕ್ಕೆ ಅಡ್ಡಕಟ್ಟಿ ಹಾಕಿ ದೊಡ್ಡ ಕೆರೆಯನ್ನು ಕಟ್ಟಿಸಿದನು. ಆದರೆ ಕೋಡಿಯು ನಿಲ್ಲಲಿಲ್ಲ. ಗರ್ಭಿಣಿ ಹೆಂಗಸೊಬ್ಬಳನ್ನು ಬಲಿಕೊಟ್ಟರೆ ನಿಲ್ಲುವುದೆಂದು ಜೋಯಿಸನೊಬ್ಬ ಹೇಳುತ್ತಾನೆ. ಆದರೆ ಶಿವಭಕ್ತನಾದ ಚೌಡಪ್ಪನು ಇಂಥ ಮೂಢನಂಬಿಕೆಯನ್ನು ಒಪ್ಪದೆ ನಿರಾಕರಿಸುತ್ತಾನೆ. ಆಗ ಚಂದ್ರಪ್ಪ ಎಂಬುವನ ಗರ್ಭಿಣಿ ಹೆಂಡತಿಯು ರಹಸ್ಯವಾಗಿ ಕೆರೆಗೆ ಬಲಿಯಾದಳು. ಚೌಡಪ್ಪನು ಅವಳ ತ್ಯಾಗದ ನೆನಪಿಗಾಗಿ ಕೆರೆಯ ದಂಡೆಯ ಮೇಲೆ ಅವಳ ವಿಗ್ರಹವನ್ನು ಸ್ಥಾಪಿಸಿ ಗುಡಿ ಕಟ್ಟಿಸಿದನು. ಕೆರೆಯ ಪಕ್ಕದ ಊರಿಗೆ 'ಕೆಳದಿ' ಎಂದು ಹೆಸರಿಟ್ಟು ಅದನ್ನೆ ರಾಜಧಾನಿ ಮಾಡಿಕೊಂಡನು.[23] ಬೆಂಗಳೂರು ಕೋಟೆಯ ಸಂದರ್ಭದಲ್ಲಿ ಕೆಂಪೇಗೌಡನ ಗರ್ಭಿಣಿ ಸೊಸೆ ಲಕ್ಷ್ಮಮ್ಮ ಕೋಟೆಯ ದ್ವಾರಕ್ಕೆ ಬಲಿಯಾದ ಕಥೆಯ ಜೊತೆಗೆ ಈ ಕಥೆಯೂ ಸಾಮ್ಯತೆಯನ್ನು ಹೊಂದಿದೆ.

ಮತ್ತೊಂದು ದಂತಕಥೆ ಇಕ್ಕೇರಿಗೆ ಸಂಬಂಧಿಸಿದ್ದಾಗಿದೆ. ಒಮ್ಮೆ ಚೌಡಪ್ಪನು ಬೇಟೆಗೆ ಹೋದಾಗ ಮೊಲಗಳು ನಾಯಿಗಳನ್ನು ಹೆದರಿಸಿ ಓಡಿಸಿದವು. ಇಂಥ ಸಾಧು ಪ್ರಾಣಿಗಳು ನಾಯಿಗಳನ್ನು ಓಡಿಸಿದ್ದರಿಂದ ಇದು ಗಂಡು ಭೂಮಿಯೆಂದು ತಿಳಿದು ರಾಜಧಾನಿಯನ್ನು

ಇಕ್ಕೇರಿಗೆ ಸ್ಥಳಾಂತರಿಸಿದನು.[24] ಬೆಂಗಳೂರು ನೆಲೆಯ ಆಯ್ಕೆಯ ಹಿಂದೆ ಕೂಡ ಇಂತಹದೆ ಕಥೆ ಇರುವುದನ್ನು ಗಮನಿಸಬೇಕು.

ಚೌಡಪ್ಪನ ನಂತರ ಅಧಿಕಾರಕ್ಕೆ ಅವನ ಹಿರಿಯ ಮಗನಾದ **ಸದಾಶಿವ ನಾಯಕ (1540–65)** ಕೆಳದಿಯ ಆರಂಭಿಕ ಅರಸರಲ್ಲಿ ಪ್ರಸಿದ್ಧನಾದವನು. ರಾಮರಾಯನ ತಮ್ಮನಾದ ವೆಂಕಟಾದ್ರಿಯು ಇವನಿಗೆ ಗುತ್ತಿ–36, ಮಂಗಳೂರು ಮತ್ತು ಬಾರಕೂರು ಪ್ರದೇಶಗಳನ್ನು ಇವನಿಗೆ ಒಪ್ಪಿಸಿದನು. ಸದಾಶಿವ ನಾಯಕನು ತನ್ನನ್ನು ಶಾಸನವೊಂದರಲ್ಲಿ 'ಪಡುವಣ ಸಮುದ್ರಾಧೀಶ್ವರ' ಎಂದು ಕರೆದುಕೊಂಡಿದ್ದಾನೆ. 1560ರಲ್ಲಿ ರಾಜಧಾನಿಯನ್ನು ಇಕ್ಕೇರಿಗೆ ವರ್ಗಾಯಿಸಿದನು. ಸದಾಶಿವ ನಾಯಕನು ಬಂಕಾಪುರದ ಮಾದಣ್ಣ ಒಡೆಯರ ಮೂಲಕ ಮದಗದ ಕೆರೆಯನ್ನು ನಿರ್ಮಾಣ ಮಾಡಿಸಿದನು. ಅಲ್ಲಿ ರಾಮೇಶ್ವರ ದೇವಾಲಯವನ್ನು ಕಟ್ಟಿಸಿದನು. ಕುಶಾವತಿ ನದಿ ದಂಡೆಯಲ್ಲಿ 'ಸದಾಶಿವಪುರ'ವನ್ನು ಸ್ಥಾಪಿಸಿದನು. ಕೆಳದಿಯಲ್ಲಿ ಜಂಗಮ ಮಠವನ್ನು ಕಟ್ಟಿಸಿದನು. ಹಾಲಳ್ಳಿ, ಕುಕ್ಕೆ ಮೊದಲಾದ ಕಡೆಗಳಲ್ಲಿ ಮಠ, ದೇಗುಲಗಳನ್ನು ಕಟ್ಟಿಸಿದನು. ಧರ್ಮ ಸಹಿಷ್ಣುವಾದ ನಾಯಕನು ಜೈನಗುರು ದೇವಚಂದ್ರದೇವರಿಗೆ ಮತ್ತು ಉಡುಪಿಯ ವಾದಿರಾಜ ತೀರ್ಥರಿಗೆ ಭೂದಾನ ಮಾಡಿದನು. ಈತ ಒಂದು ಟಂಕಸಾಲೆಯನ್ನು ಸ್ಥಾಪಿಸಿ, 'ಶ್ರೀ ಸದಾಶಿವ' ಎಂಬ ನಾಣ್ಯವನ್ನು ಚಲಾವಣೆಗೆ ತಂದನು. ಸದಾಶಿವನು ತನ್ನ ಕೊನೆಗಾಲದಲ್ಲಿ ರಾಜ್ಯಾಡಳಿತವನ್ನು ಭದ್ರಪ್ಪ ನಾಯಕನಿಗೆ ವಹಿಸಿ ಕೊಟ್ಟು 'ಜಗ್ಗುಪಾಳ್ಯ' ಎಂಬಲ್ಲಿ ಕೊನೆಯುಸಿರೆಳೆದನು.

ಭದ್ರಪ್ಪ ನಾಯಕನು (ಇವನು ಇಮ್ಮಡಿ ಸದಾಶಿವನಾಯಕನೆಂದು ಪ್ರಸಿದ್ಧಿ) ಸ್ವಲ್ಪ ಕಾಲ ಆಳ್ವಿಕೆ ನಡೆಸಿ, ತನ್ನ ಅಳಿಯನಾದ ದೊಡ್ಡ ಸಂಕಣ್ಣ ನಾಯಕನಿಗೆ 1567ರಲ್ಲಿ ಪಟ್ಟಾಭಿಷೇಕ ಮಾಡಿದನು. **ದೊಡ್ಡ ಸಂಕಣ್ಣ ನಾಯಕ (1567–70)** ಒಬ್ಬ ಜಂಗಮನನ್ನು ಕೊಂದ ಕಾರಣ ವಿಜಯನಗರದ ರಾಮರಾಯನು ಇವನನ್ನು ಪದಚ್ಯುತಗೊಳಿಸದನೆಂದು 'ಕೆಳದಿ ಅರಸರ ವಂಶಾವಳಿ' ತಿಳಿಸುತ್ತದೆ. ಇವನು ಅರಸನಾಗುವುದಕ್ಕೆ ಮೊದಲು ಅಂದರೆ 1558ರಲ್ಲಿ ವಿಜಯನಗರದ ರಾಮರಾಯನ ತಮ್ಮ ವಿಠ್ಠಲರಾಯನೊಡಗೂಡಿ ಗೋವೆಯನ್ನು ಗೆದ್ದು, ಪೋರ್ಚುಗೀಸ್ ಗವರ್ನರ್‌ನನ್ನು ಸೆರೆಹಿಡಿದಿದ್ದನು. ಇದರಿಂದ ಸಂತುಷ್ಟನಾದ ವಿಜಯನಗರ ಚಕ್ರವರ್ತಿಯು ದೊಡ್ಡ ಸಂಕಣ್ಣಿಗೆ 'ಮಹದೇವಪುರ'ವನ್ನು ಉಂಬಳಿಯಾಗಿ ನೀಡಿ 'ಭುಜಕೀರ್ತಿ' ಎಂಬ ಬಿರುದು ನೀಡಿ ಸನ್ಮಾನಿಸಿದನು. ಕೆಲಕಾಲದ ನಂತರ ವೈರಾಗ್ಯ ಉಂಟಾಗಲಾಗಿ ತನ್ನ ತಮ್ಮ ಚಿಕ್ಕ ಸಂಕಣ್ಣನಾಯಕನಿಗೆ ರಾಜ್ಯಭಾರವನ್ನು ವಹಿಸಿ ತೀರ್ಥಯಾತ್ರೆಗೆ ಹೊರಟನು. ದೆಹಲಿಯಲ್ಲಿ ಅಕ್ಬರನು ಆಳುತ್ತಿರುವಾಗ ಅಂಕುಶಖಾನನೆಂಬ ಜಟ್ಟಿಯ ಸೊಕ್ಕನ್ನು ಮುರಿದನು. ಇವನ

ಪರಾಕ್ರಮವನ್ನು ಮೆಚ್ಚಿದ ಅಕ್ಬರನು ಇವನ ಕೋರಿಕೆಯಂತೆ ದೆಹಲಿಯ 'ಚಾವಳಿಕೆ ಮುಂಡೈ' ಎಂಬಲ್ಲಿ ಮಠಕಟ್ಟಲು ನೆರವಾದನು. ವಾರಣಾಸಿಯಲ್ಲಿ ಜಂಗಮಘಾಟ್ ಮತ್ತು ಜಂಗಮಪುರವನ್ನು ನಿರ್ಮಿಸಿದನು. ನಂತರ ನೇಪಾಳ, ಹಿಮಾಚಲ ಪ್ರದೇಶದ ಹರಿದ್ವಾರ, ಕೇದಾರ, ಕಾಶ್ಮೀರ ಮುಂತಾದ ಸ್ಥಳಗಳನ್ನು ಸಂದರ್ಶಿಸಿ ಅಲ್ಲೆಲ್ಲಾ ಜಂಗಮ ಮಠ ಸ್ಥಾಪಿಸಿದನು. ನಂತರ ಪೈಠಾಣಕ್ಕೆ ಬಂದು ಅಲ್ಲಿನ ಅಘೋರೇಶ್ವರ ದೇವಾಲಯ ದರ್ಶಿಸಿ, ಅದೇ ರೀತಿಯ ದೇವಾಲಯವನ್ನು ಇಕ್ಕೇರಿಯಲ್ಲಿ ಕಟ್ಟಿಸಿದನು. ಇವನ ನಂತರ ಚಿಕ್ಕ ಸಂಕಣ್ಣ ನಾಯಕ (1570–80) ಅಧಿಕಾರಕ್ಕೆ ಬಂದನು. ಚಿಕ್ಕ ಸಂಕಣ್ಣನನ್ನು ದೊಡ್ಡ ಸಂಕಣ್ಣ ನಾಯಕನ ಮಗನಾದ ಹಿರಿಯ ರಾಜಾರಾಮ ನಾಯಕನು ಕೊಂದು ಅಧಿಕಾರಕ್ಕೆ ಬಂದನು. ರಾಜಾರಾಮ ನಾಯಕನ (1580–86) ನಂತರ ಹಿರಿಯ ವೆಂಕಟಪ್ಪ ನಾಯಕ ಅಧಿಕಾರಕ್ಕೆ ಬಂದನು.

#### 2.2.1.1 ಹಿರಿಯ ವೆಂಕಟಪ್ಪ ನಾಯಕ (1592–1629)

ಇವನ ಕಾಲದಲ್ಲಿ ಕೆಳದಿ ರಾಜ್ಯವು ವಿಸ್ತಾರವಾಗಿ ಬೆಳೆಯಿತು ಮತ್ತು ಸಾಂಸ್ಕೃತಿಕವಾಗಿಯೂ ಕೂಡ ಉಚ್ಛ್ರಾಯ ಸ್ಥಿತಿಯಲ್ಲಿದ್ದಿತು. ಇವನ ದಳವಾಯಿಯಾದ ಲಿಂಗಣ್ಣನು ಹೊಸಂಗಡಿ, ಕಡಿರಿ, ಬಗ್ಗವಾಡಿ, ಕೊಲ್ಲೂರು ಪ್ರದೇಶಗಳನ್ನು ಗೆದ್ದು ಕೊಲ್ಲೂರು ಮೂಕಾಂಬಿಕೆಗೆ ಪೂಜಾದಿಗಳು ಸಾಂಗವಾಗಿ ನೆರವೇರಲು ವ್ಯವಸ್ಥೆ ಮಾಡಿದನು.

ಬಿಜಾಪುರದ ಆದಿಲ್‌ಷಾಹಿಯ ದಂಡನಾಯಕ ರಣದುಲ್ಲಾಖಾನ್‌ನು ಕೆಳದಿ ರಾಜ್ಯದ ಮೇಲೆ ದಂಡೆತ್ತಿ ಬಂದಾಗ, ವೆಂಕಟಪ್ಪ ನಾಯಕನು ರಣದುಲ್ಲಾಖಾನನನ್ನು ಹಿಮ್ಮೆಟ್ಟಿಸಿ ಓಡಿಸಿದನೆಂದು ಹೇಳಲಾಗುತ್ತದೆ. ತರೀಕೆರೆಯ ಪಾಳೆಯಗಾರ ಹನುಮನಾಯಕನನ್ನು ಸೋಲಿಸಿದ ನೆನಪಿಗಾಗಿ ಹಂಗಳದಲ್ಲಿ ವಿಜಯಸ್ತಂಭ ನೆಟ್ಟನು. ಗೇರುಸೊಪ್ಪೆಯ 'ಕಾಳು ಮೆಣಸಿನ ರಾಣಿ' ಎಂದೇ ಪೋರ್ಚುಗೀಸರಿಂದ ಕರೆಯಲ್ಪಟ್ಟ ಚನ್ನಾಭೈರಾದೇವಿಯು ಕಡಲ ತೀರದ ಬಸರೂರು ಕೋಟೆಯನ್ನು ಬಿಜಾಪುರದ ಇಮ್ಮಡಿ ಇಬ್ರಾಹಿಂ ಆದಿಲ್‌ಶಾಹನಿಗೆ ಬಿಟ್ಟುಕೊಟ್ಟಳು. ಇದೇ ಕಾರಣವನ್ನು ಮುಂದಿಟ್ಟುಕೊಂಡು ಗೇರುಸೊಪ್ಪೆಯನ್ನು ಗೆದ್ದು, ಹೊನ್ನಾವರ, ಬಸ್ರೂರು ಮತ್ತು ಭಟ್ಕಳ ಕೋಟೆಗಳನ್ನು ವಶಪಡಿಸಿಕೊಂಡನು. ಆ ಮೂಲಕ ಕಾಳು ಮೆಣಸಿನ ವ್ಯಾಪಾರ ಕೇಂದ್ರಗಳು ಮತ್ತು ವ್ಯವಹಾರಗಳ ಮೇಲೆ ಸಂಪೂರ್ಣ ನಿಯಂತ್ರಣ ಸಾಧಿಸಿದನೆಂದು ಬಾರ್ಬೊಸಾ ದಾಖಲಿಸುತ್ತಾನೆ. ವೆಂಕಟಪ್ಪ ನಾಯಕನೊಡನೆ ಗೋವೆಯ ಪೋರ್ಚುಗೀಸರು ವ್ಯಾಪಾರ ಒಪ್ಪಂದವನ್ನು ಮಾಡಿಕೊಂಡಿದ್ದರೆ, ಬ್ರಿಟಿಷರು ವ್ಯಾಪಾರ ಸಂಬಂಧವನ್ನು ಹೊಂದಿದ್ದರು.

ಕಾರ್ಕಳದ ಭೈರರಸ ಒಡೆಯನು ಶೃಂಗೇರಿಪುರ ಮತ್ತು ಮಠವನ್ನು ಲೂಟಿ ಮಾಡಿದಾಗ ಅವನನ್ನು ಸೋಲಿಸಿ, ಅಲ್ಲಿನ ಸ್ವಾಮಿಗಳಾದ ಅಭಿನವ ನರಸಿಂಹ ಭಾರತಿಗಳಿಗೆ ಲೂಟಿಯಾದ ಸಂಪತ್ತನ್ನು ಹಿಂತಿರುಗಿಸಿದನು. ಅಲ್ಲದೆ ಅವರ ವಾಸಕ್ಕೆ ಮಠವೊಂದನ್ನು ಕಟ್ಟಿಸಿದನು. ಅಲ್ಲಿಯೇ ಬ್ರಾಹ್ಮಣ ಅಗ್ರಹಾರ ಸ್ಥಾಪಿಸಿ, 'ಶೃಂಗೇರಿ ಪುನರ್ ಪ್ರತಿಷ್ಠಾಪಕ' ಎಂಬ ಬಿರುದು ತಳೆದನು.

ವೆಂಕಟಪ್ಪ ನಾಯಕನು ಇಕ್ಕೇರಿಯನ್ನು ಕೋಟೆ, ಕೊತ್ತಳ, ಅರಮನೆ ಮತ್ತು ಸರೋವರಗಳಿಂದ ಸುಂದರ ನಗರವಾಗಿಸಿದನು. ವರದಾ ನದಿ ದಂಡೆಯಲ್ಲಿ ವಿಶ್ವನಾಥಪುರ ಎಂಬ ನಗರವನ್ನೂ, ತನ್ನ ಅಜ್ಜನ ಹೆಸರಿನಲ್ಲಿ 'ಸದಾಶಿವ ಸಾಗರ'(ಸಾಗರ)ದಲ್ಲಿ ಸದಾಶಿವ ನಾಯಕ ಪೇಟೆಯನ್ನು ನಿರ್ಮಿಸಿದನು. ಸಂಗಮೇಶ್ವರದಲ್ಲಿ ಸರೋವರವನ್ನು ಕಟ್ಟಿಸಿದನು. ನೂರಾರು ಕೆರೆ ಮತ್ತು ಕೋಟೆಗಳನ್ನು ನಿರ್ಮಿಸಿದ ವೆಂಕಟಪ್ಪ ನಾಯಕನು ಕೆಳದಿಯ ಅರಸರದಲ್ಲಿ ಸುಪ್ರಸಿದ್ಧನಾಗಿದ್ದಾನೆ.

ವೆಂಕಟಪ್ಪ ನಾಯಕನು ತನ್ನ ನಂತರ ಮೊಮ್ಮಗನಾದ ವೀರಭದ್ರ ನಾಯಕ (1629–45)ನನ್ನು ಸಿಂಹಾಸನಕ್ಕೆ ತಂದನು. ನಂತರ ಸ್ಥಳೀಯ ಪಾಳೆಗಾರರ ಉಪಟಳಗಳನ್ನು ನಿಯಂತ್ರಿಸಲು ಹರಸಾಹಸಪಟ್ಟನು. ಕಳಸದ ಭೈರರಸನು ಕೆಳದಿ ರಾಜ್ಯಕ್ಕೆ ಮುತ್ತಿಗೆ ಹಾಕಿದನಲ್ಲದೆ, ಶೃಂಗೇರಿ ಮಠವನ್ನು ಲೂಟಿ ಮಾಡಿದನು. ಆಗ ವೀರಭದ್ರನು ಮಠಕ್ಕೆ ಹಲವು ಅನುಕೂಲಗಳನ್ನು ಮಾಡಿಕೊಟ್ಟನು. ತನ್ನ ಅಧೀನದಲ್ಲಿದ್ದ ಬಸವಾಪಟ್ಟಣದ ಕೆಂಗನಾಯಕನು ಬಂಡೆದ್ದರಿಂದ ಅವನ ಜಾಗೀರನ್ನು ವೀರಭದ್ರನಾಯಕನು ಕಿತ್ತುಕೊಂಡನು. ಇದರ ಪ್ರತೀಕಾರಕ್ಕಾಗಿ ಕೆಂಗನಾಯಕನು ಬಿಜಾಪುರದ ಸುಲ್ತಾನ ಮಹಮ್ಮುದ್ ಆದಿಲ್ ಶಾಹನ ಮೊರೆ ಹೋದನು. ಕೂಡಲೆ ಬಿಜಾಪುರದ ದಂಡನಾಯಕ ರಣದುಲ್ಲಾಖಾನನು ಸೇನಾ ಸಮೇತವಾಗಿ ಬಂದು ಇಕ್ಕೇರಿಯ ಮೇಲೆ ದಾಳಿ ಮಾಡಿದನು (1637). ಅವನ ದಾಳಿಯನ್ನು ಎದುರಿಸಲಾಗದೆ ವೀರಭದ್ರ ನಾಯಕನು ಭುವನಗಿರಿಯಲ್ಲಿ ಆಶ್ರಯ ಪಡೆದನು. ಅಲ್ಲಿಗೂ ರಣದುಲ್ಲಾಖಾನನು ದಾಳಿ ಮಾಡಿದಾಗ ಅನ್ಯಮಾರ್ಗವಿಲ್ಲದೆ ಖಾನನೊಡನೆ ನಾಯಕನು ಒಪ್ಪಂದಕ್ಕೆ ಮುಂದಾದನು. ಒಪ್ಪಂದದಂತೆ ಹಣ ಸಂದಾಯ ಮಾಡದಿದ್ದಾಗ ಖಾನನು ಮತ್ತೊಮ್ಮೆ ಬಿದನೂರು ಕೊಳ್ಳೆ ಹೊಡೆದನು.

ಈ ನಡುವೆ ಇಂಗ್ಲಿಷ್ ಈಸ್ಟ್ ಇಂಡಿಯ ಕಂಪನಿಯು ವೀರಭದ್ರನ ಒಡೆತನದಲ್ಲಿದ್ದ ಮೆಣಸಿನ ವ್ಯಾಪಾರ ಕೇಂದ್ರಗಳನ್ನು ಸ್ವಾಧೀನ ಪಡಿಸಿಕೊಳ್ಳಲು ಪ್ರಯತ್ನಿಸಿತು. 'ರಾಬಿನ್ ಸನ್' ಮತ್ತು 'ಪೀಟರ್ ಮಂಡಿ' 1637ರಲ್ಲಿ ಇಕ್ಕೇರಿ ಅರಮನೆ ಮತ್ತು ಆಸ್ಥಾನಕ್ಕೆ ಭೇಟಿ ನೀಡಿದರು. ಇಕ್ಕೇರಿಯಲ್ಲಿನ ರಾಜಕೀಯ ಪಿತೂರಿಯಿಂದ ಬೇಸತ್ತು 1639ರಲ್ಲಿ ತನ್ನ ರಾಜಧಾನಿಯನ್ನು

ಬಿದನೂರಿಗೆ ವರ್ಗಾಯಿಸಿದನು. ವೀರಭದ್ರ ನಾಯಕನಿಗೆ ಎಲ್ಲಾ ರೀತಿಯಲ್ಲಿಯೂ ಬೆಂಬಲವಾಗಿ ನಿಂತವನು ಅವನ ಸಮೀಪ ಸಂಬಂಧಿ ಶಿವಪ್ಪನಾಯಕ. ಈತನು 1645ರಲ್ಲಿ ಕಂಡ್ಲೂರು ಎಂಬ ಗ್ರಾಮದಲ್ಲಿ ಮೃತಪಟ್ಟನು. ಆಗ ಈತನ ಪತ್ನಿ ಕೊಲ್ಲೂರಮ್ಮಾಜಿಯು ಇವನೊಡನೆ ಸತಿ ಸಹಗಮನವಾದಳು.

### 2.2.1.2 ಶಿವಪ್ಪನಾಯಕ (1645–65)

ಕೆಳದಿ ಅರಸರಲ್ಲಿಯೇ ಶ್ರೇಷ್ಠ ಮತ್ತು ಸಮರ್ಥ ಅರಸನೆಂದರೆ ಶಿವಪ್ಪನಾಯಕ. ವೀರಭದ್ರ ನಾಯಕನು ತನಗೆ ನಿಷ್ಠೆಯಿಂದ ನೆರವಾದ ಶಿವಪ್ಪನಾಯಕನಿಗೆ 1645ರಲ್ಲಿ ವೇಣುಪುರ (ಬಿದನೂರು)ದಲ್ಲಿ ಪಟ್ಟಾಭಿಷೇಕ ಮಾಡಿದನು. **'ಚಿಕ್ಕ ದೇವರಾಜ ವಂಶಾವಳಿ'**ಯಲ್ಲಿ ಶಿವಪ್ಪನಾಯಕನು ವೀರಭದ್ರ ನಾಯಕನನ್ನು ಹತ್ಯೆ ಮಾಡಿ, ಅಧಿಕಾರಕ್ಕೆ ಬಂದನಾದ್ದರಿಂದ ಮೈಸೂರಿನ ಯುವರಾಜನಾಗಿದ್ದ ಚಿಕ್ಕದೇವರಾಜನು ಶಿವಪ್ಪನಾಯಕನು ಕಳುಹಿಸಿದ್ದ ಉಡುಗೊರೆಯನ್ನು ನಿರಾಕರಿಸಿದನೆಂದು ಹೇಳಲಾಗಿದೆ.

ವಿಜಯನಗರ ಸಾಮ್ರಾಜ್ಯದ ಕೊನೆಯ ದೊರೆಯಾದ ಶ್ರೀರಂಗರಾಯನು ಬಿಜಾಪುರ ಮತ್ತು ಗೋಲ್ಕೊಂಡ ಸುಲ್ತಾನರ ದಾಳಿಯಿಂದ ವೆಲ್ಲೂರನ್ನು ಕಳೆದುಕೊಂಡು 'ಸಾಮ್ರಾಜ್ಯವಿಲ್ಲದ ಸಾಮ್ರಾಟ'ನಾದನು (1646). ಆಗ ಶಿವಪ್ಪನಾಯಕನು ಶ್ರೀರಂಗರಾಯನಿಗೆ ಆಶ್ರಯ ನೀಡಿದನಲ್ಲದೆ, ಐಗೂರಿನ ಪಾಳೆಯಗಾರನಿಂದ ಬೇಲೂರನ್ನು ಗೆದ್ದು ಕೊಟ್ಟನು.

ಶಿವಪ್ಪನಾಯಕನು ಮೈಸೂರಿನ ದೊಡ್ಡ ದೇವರಾಜ ಒಡೆಯನ (1659–72) ಸೈನ್ಯವನ್ನು ಹಿಮ್ಮೆಟ್ಟಿಸಿ, ಶ್ರೀರಂಗಪಟ್ಟಣವನ್ನು ಮುತ್ತುವ ಪ್ರಯತ್ನ ನಡೆಸಿದನು. ನಂತರ ಕಡೂರು, ಸಕ್ಕರೆ ಪಟ್ಟಣ, ಬನವಾಸಿ, ಸೋದೆ ಮುಂತಾದವುಗಳನ್ನು ಗೆದ್ದು ಕಪ್ಪ ಕಾಣಿಕೆ ಪಡೆದನು. ಇವನ ಕಾಲದಲ್ಲಿ ಕೆಳದಿ ರಾಜ್ಯ ಆರ್ಥಿಕವಾಗಿ ಉಚ್ಛ್ರಾಯ ಸ್ಥಿತಿಯನ್ನು ಕಂಡಿತು. 1652ರಲ್ಲಿ ಮಂಗಳೂರು, ಗಂಗೊಳ್ಳಿ, ಕುಂದಾಪುರ ಮತ್ತು ಹೊನ್ನಾವರಗಳಿಂದ ಪೋರ್ಚುಗೀಸರನ್ನು ಓಡಿಸಿ, 'ಕ್ಯಾಂಬೋಲಿನ್ ಕೋಟೆ'ಯನ್ನು ವಶಪಡಿಸಿಕೊಂಡಿದ್ದು ಕೆಳದಿಯ ಇತಿಹಾಸದಲ್ಲಿ ಮಹತ್ವದ ಸಾಧನೆಯಾಗಿದೆ. ನಂತರ ಬೇಕಲ್, ಚಂದ್ರಗಿರಿ, ಮಂಗಳೂರುಗಳಲ್ಲಿ ಭದ್ರಕೋಟೆಯನ್ನು ಕಟ್ಟಿಸಿದನು. ಬಿಜಾಪುರದ ಮುಹಮ್ಮದ್ ಆದಿಲ್ ಶಾಹನ ಮರಣದ ನಂತರ ಶಿವಪ್ಪನು ಇಕ್ಕೇರಿ, ಸೊರಬ, ಉಡುಗಣಿ, ಮಹದೇವಪುರ ಕೋಟೆಗಳನ್ನು ಮರುವಶಕ್ಕೆ ಪಡೆದನು.

ಶ್ರೀರಂಗಪಟ್ಟಣ ಮುತ್ತಿಗೆ ಹಾಕಲು ಶಿವಪ್ಪನಾಯಕನ ಸೈನ್ಯ 'ಗ್ರಾಮ' ಎಂಬಲ್ಲಿ ಬೀಡುಬಿಟ್ಟಿತು. ಈ ವೇಳೆ ಮೈಸೂರಿನ ದೊಡ್ಡ ದೇವರಾಜನ ದಳವಾಯಿ ಹಂಪರಾಜಯ್ಯನು ಭಾರಿ ಸೈನ್ಯದೊಡನೆ ಮುಖಾಮುಖಿಯಾದನು. ಈ ಯುದ್ಧದಲ್ಲಿ ನಾಯಕನು ಜಯಸಾಧಿಸಿದನು. ಕೊನೆಗೆ ಮೈಸೂರಿನವರು ಬಿಜಾಪುರದ ದಂಡನಾಯಕ ಬಹ್ಲೂಲ್ ಖಾನನ ನೆರವನ್ನು ಕೋರಿದರು. ಆದರೆ, ಬಿಜಾಪುರದ ಸೈನ್ಯ ಕೂಡ ನಾಯಕನ ಮುಂದೆ ನಿಲ್ಲದಾಯಿತು. ಆದರೆ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಳ್ಳುವ ವೇಳೆಗೆ ಸೇನಾಪಾಳಯದಲ್ಲಿ ಸಾಂಕ್ರಾಮಿಕ ರೋಗ ಹರಡಿದ್ದರಿಂದ ಅನಿವಾರ್ಯವಾಗಿ ಬಿದನೂರಿಗೆ ಹಿಂತಿರುಗಿದನು.

ಶಿವಪ್ಪನಾಯಕನು ಕೆಳದಿಯ ರಾಜ್ಯವನ್ನು ಉತ್ತರದಲ್ಲಿ ಬಿಜಾಪುರ ಮತ್ತು ಮರಾಠ ಸೀಮೆಗಳಿಂದ ಆರಂಭಿಸಿ ದಕ್ಷಿಣದಲ್ಲಿ ಶ್ರೀರಂಗಪಟ್ಟಣದವರೆಗೆ, ಪಶ್ಚಿಮದಲ್ಲಿ ಅರಬ್ಬಿ ಸಮುದ್ರದಿಂದ ಆರಂಭಿಸಿ, ಪೂರ್ವದಲ್ಲಿ ಚಿತ್ರದುರ್ಗದವರೆಗೆ ವಿಸ್ತರಿಸಿದ್ದನು. "ಶಿವಪ್ಪನಾಯಕನ ಶಿಸ್ತು" ಎಂಬ ಕಂದಾಯಪದ್ಧತಿಯನ್ನು ಜಾರಿಗೆ ತಂದನು. ಕಂದಾಯದ ಲೆಕ್ಕಾಚಾರಕ್ಕಾಗಿ 1000 ಅಡಕೆ ಮರಗಳನ್ನು ಒಂದು ಮಾನದಂಡವಾಗಿ ಇಟ್ಟುಕೊಂಡು ಮರದಿಂದ ಮರಕ್ಕೆ ಸುಮಾರು ಹದಿನೆಂಟುವರೆ ಅಡಿ ಅಂತರ ಇರಬೇಕೆಂದು ನಿಗದಿಪಡಿಸಿದನು. ಗೋವಿನ ಪಾದದಷ್ಟೂ ಭೂಮಿಯನ್ನು ಪಾಳು ಬಿಡದಂತೆ ಅಚ್ಚುಕಟ್ಟಾದ ಕ್ರಮವಹಿಸಿ ರಾಜ್ಯಾದಾಯವನ್ನು ಹೆಚ್ಚಿಸಿದನು. ಇವು ಶಿವಪ್ಪನಾಯಕನ ದೂರದರ್ಶಿತ್ವ ಮತ್ತು ಜಾಣ್ಮೆಗೆ ಸಾಕ್ಷಿಯಾಗಿದೆ. ಶಿವಪ್ಪನಾಯಕನು ವಾರಣಾಸಿಯಲ್ಲಿ ಮಠವೊಂದನ್ನು ಸ್ಥಾಪಿಸಿದನು. ಮಠದಲ್ಲಿ ಅವನ ತೈಲವರ್ಣಚಿತ್ರವೊಂದು ದೊರೆತಿದೆ. ಶಿವಪ್ಪನಾಯಕನು ಅಂತಿಮವಾಗಿ 1661ರಲ್ಲಿ ಬಿದನೂರಿನಲ್ಲಿ ಮರಣ ಹೊಂದಿದನು. ಮುಮ್ಮಡಿ ಕೆಂಪೇಗೌಡನು ಕಾಶಿಯಲ್ಲಿ ಮಠವನ್ನು ಸ್ಥಾಪಿಸಿ, ಆ ಮಠಕ್ಕೆ ಅಳಲುಕುಪ್ಪೆಯನ್ನು ದಾನವಾಗಿ ಕೊಟ್ಟ ಸಂಗತಿಯನ್ನು ಇಲ್ಲಿ ಸ್ಮರಿಸಬಹುದು. ಇದು ಆ ಕಾಲದ ನಾಯಕರು, ಹೀಗೆ ಉತ್ತರ ಭಾರತದಲ್ಲಿ ಮಠಗಳನ್ನು ನಿರ್ಮಿಸುವುದು ಅದರಲ್ಲೂ ಕಾಶಿಯಲ್ಲಿ ಮಠವನ್ನು ನಿರ್ಮಿಸುವುದು ಪಾಳೆಯಗಾರರಲ್ಲಿ ಒಂದು ಧಾರ್ಮಿಕ ಪ್ರತಿಷ್ಠೆಯ ವಿಷಯವಾಗಿದ್ದಂತೆ ತೋರುತ್ತದೆ.

ಶಿವಪ್ಪನಾಯಕನ ನಂತರ ಅವನ ತಮ್ಮ ಇಮ್ಮಡಿ ವೆಂಕಟಪ್ಪ ನಾಯಕ ಒಂದು ವರ್ಷ ಮಾತ್ರ ಆಳ್ವಿಕೆ ಮಾಡಿದನು. ಇವನನ್ನು ಶಿವಪ್ಪನಾಯಕನ ಅಳಿಯನಾದ ಶಿವಲಿಂಗ ನಾಯಕನು ಹತ್ಯೆ ಮಾಡಿಸಿದನೆಂದು ಹೇಳಲಾಗುತ್ತದೆ. ನಂತರ ಶಿವಪ್ಪನಾಯಕನ ಮಗ ಭದ್ರಪ್ಪ ನಾಯಕ (1661–64) ನಂತರ ಶಿವಪ್ಪನಾಯಕನ 5ನೇ ಹೆಂಡತಿಯ ಮಗ **ಹಿರಿಯ ಸೋಮಶೇಖರ**

**ನಾಯಕ (1663–71)** ಅಧಿಕಾರಕ್ಕೆ ಬಂದನು. ಇವನ ಮಡದಿ ಸುಪ್ರಸಿದ್ಧ ರಾಣಿ ಚೆನ್ನಮ್ಮಾಜಿ. ಈಕೆ ಕೋಟೆಪುರದ ಸಿದ್ಧಪ್ಪ ಶೆಟ್ಟಿಯ ಮಗಳು. ಮೈಸೂರಿನ ಅರಸರಿಂದ ಕಣತ್ತೂರು ಮತ್ತು ಬೇಲೂರುಗಳನ್ನು ಗೆದ್ದುಕೊಂಡನು. ಬಿಜಾಪುರದ ಇಮ್ಮಡಿ ಆದಿಲ್‌ಶಾಹನ ಸೈನ್ಯವು 1668ರಲ್ಲಿ ಕೆಳದಿ ರಾಜ್ಯಕ್ಕೆ ಮುತ್ತಿಗೆ ಹಾಕಿತು. ಇವನ ಕಾಲದಲ್ಲಿ ವಿದೇಶಗಳೊಡನೆ ವ್ಯಾಪಾರ ವೃದ್ಧಿಸಿತು. ಇವನ ಕೊನೆಯ ದಿನಗಳು ದುರಂತಮಯವಾಗಿತ್ತು. ಶತ್ರುಗಳ ವಿಷ ಪ್ರಯೋಗದಿಂದ ಇವನಿಗೆ ಮನೋವಿಕಾರ ಉಂಟಾಯಿತು. ಕೆಲಕಾಲ ಮಡದಿ ಚೆನ್ನಮ್ಮಾಜಿ ರಾಜ್ಯಾಡಳಿತವನ್ನು ನೋಡಿಕೊಂಡಳು.

### 2.2.1.3 ರಾಣಿ ಚೆನ್ನಮ್ಮಾಜಿ (1672–97)

ಚೆನ್ನಮ್ಮಾಜಿಯು ಮೈಸೂರಿನ ಚಿಕ್ಕದೇವರಾಜ ಒಡೆಯರ ದಳವಾಯಿಗಳಾದ ಕುಮಾರಯ್ಯ ಮತ್ತು ಸೋದೆ ಅರಸರು ಮೊದಲಾದವರನ್ನು ಜಯಿಸಿ, ರಾಜ್ಯದಲ್ಲಿ ಸ್ಥಿರತೆಯನ್ನು ತಂದಳು. ಹುಲಿಕೆರೆ ಕೋಟೆಯನ್ನು ಗೆದ್ದು, ತನ್ನ ಹೆಸರಿನ ಮೇರೆಗೆ 'ಚನ್ನಗಿರಿ' ಎಂದು ಅದಕ್ಕೆ ನಾಮಕರಣ ಮಾಡಿದಳು. ಶಿವಾಜಿಯ ಮಗ ರಾಜಾರಾಮನು ಮೊಗಲ್ ಚಕ್ರವರ್ತಿ ಔರಂಗಜೇಬನಿಗೆ ಹೆದರಿ ಚೆನ್ನಮ್ಮಾಜಿಯಲ್ಲಿ ಆಶ್ರಯ ಕೋರಿದನು. ಅವನನ್ನು ಬೆನ್ನಟ್ಟಿ ಬಂದ ಔರಂಗಜೇಬನ ಸೈನ್ಯವನ್ನು ಹಿಮ್ಮೆಟ್ಟಿಸುವಲ್ಲಿ ಯಶಸ್ವಿಯಾದಳು (1690). ಇದರಿಂದ ಅವಳ ಕೀರ್ತಿ ಎಲ್ಲೆಡೆ ಪಸರಿಸಿತು. ಈಕೆಯ ದತ್ತುಪುತ್ರನಾದ **ಬಸಪ್ಪನಾಯಕ** (1697–1714) ವೀರನೂ, ವಿದ್ವಾಂಸನೂ ಆಗಿದ್ದನು. ಈತನು 'ಶಿವತತ್ತ್ವ ರತ್ನಾಕರ' ಎಂಬ ವಿಶ್ವಕೋಶವನ್ನು ರಚಿಸಿದನು. ಅಲ್ಲದೆ, 'ಸುರದ್ರುಮ' ಎಂಬ ಸಂಸ್ಕೃತ ಗ್ರಂಥ ಮತ್ತು ಸಂಸ್ಕೃತ ಮತ್ತು ಕನ್ನಡ (ಗೀರ್ವಾಣ–ಕರ್ಣಾಟಕ) ಭಾಷೆಗಳಲ್ಲಿ 'ಸೂಕ್ತಿ ಸುಧಾಕರ' ಎಂಬ ಗ್ರಂಥವನ್ನು ರಚಿಸಿದನೆಂದು ಹೇಳಲಾಗುತ್ತದೆ. ಆನಂತರ ಅಧಿಕಾರಕ್ಕೆ ಬಂದ **ಕಿರಿಯ ಬಸಪ್ಪ ನಾಯಕನು** (1739–54) ಚಿತ್ರದುರ್ಗದ ಮದಕರಿ ನಾಯಕನನ್ನು ಮಾಯಕೊಂಡ ಬಳಿ ನಡೆದ ಯುದ್ಧದಲ್ಲಿ ಕೊಂದನು (1748). ಇವನ ರಾಣಿ ವೀರಮ್ಮಾಜಿ ಉತ್ತಮ ಆಡಳಿತಗಾರ್ತಿಯಾಗಿದ್ದಳು. ಇವನ ಕಾಲದಲ್ಲಿ ಮರಾಠರು ಕೆಳದಿ ರಾಜ್ಯದ ಮೇಲೆ ಮತ್ತೆ ಮತ್ತೆ ದಾಳಿ ಮಾಡುವ ಮೂಲಕ ಅಪಾರ ಸಂಪತ್ತನ್ನು ಸಂಗ್ರಹಿಸಿದರು. ಇದರಿಂದಾಗಿ ಎಲ್ಲಾ ಪ್ರಕಾರದ ಭೂಮಿಯ ಮೇಲಿನ ಕಂದಾಯ ಹೆಚ್ಚಿತು. ಪ್ರಜೆಗಳು ಅತೃಪ್ತರಾದರು. ನಿರಂತರ ಯುದ್ಧಗಳಿಂದಾಗಿ ರಾಜ್ಯದ ಆರ್ಥಿಕ ಶಕ್ತಿ ಕುಸಿಯಿತು. ಇವನ ನಂತರ ದತ್ತು ಪುತ್ರ ಚನ್ನಬಸಪ್ಪ ಅಧಿಕಾರಕ್ಕೆ ಬಂದನು. ಆದರೆ ಅವನು ಶೀಘ್ರದಲ್ಲಿ ತೀರಿಕೊಂಡಿದ್ದರಿಂದ ಅವನ ಸ್ಥಾನಕ್ಕೆ ದತ್ತು ತಾಯಿಯಾದ ವೀರಮ್ಮಾಜಿಯು

ಸೋಮಶೇಖರನೆಂಬ ಮಗುವನ್ನು ಅಧಿಕಾರಕ್ಕೆ ತಂದಳು. ಬಿದನೂರು ಸಿಂಹಾಸನದ ವಾರಸುದಾರನೆಂದೂ, ಸಿಂಹಾಸನ ವಂಚಿತನಾಗಿರುವುದಾಗಿ ಹೇಳಿಕೊಂಡು ಬಂದ ಕಪಟಿಯೊಬ್ಬನ ಸಲಹೆಯಂತೆ ಹೈದರಾಲಿಯು ಚಿತ್ರದುರ್ಗದ ಪಾಳೆಯಗಾರನ ಸಹಾಯದಿಂದ 1762ರಲ್ಲಿ ಬಿದನೂರನ್ನು ಮುತ್ತಿದನು. ಪರಾಕ್ರಮದಿಂದ ಹೈದರಾಲಿಯ ಸೇನೆಯನ್ನು ಎದುರಿಸಿದಳಾದರೂ ಅಂತಿಮವಾಗಿ ಬಂಧನಕ್ಕೊಳಗಾದಳು. ನಂತರ ಅವಳನ್ನು ಸೋಮಶೇಖರ ನಾಯಕನೊಡನೆ ಶ್ರೀರಂಗಪಟ್ಟಣಕ್ಕೆ ಕರೆದೊಯ್ಯಲಾಯಿತು. 1763ರಲ್ಲಿ ಕೆಳದಿ ರಾಜ್ಯವು ಮೈಸೂರು ರಾಜ್ಯದಲ್ಲಿ ವಿಲೀನವಾಗುವ ಮೂಲಕ ಚರಿತ್ರೆಯ ಪುಟಗಳಲ್ಲಿ ಕಣ್ಮರೆಯಾಯಿತು.

ಕೆರೆ ನಿರ್ಮಾಣ, ಮಠಗಳಿಗೆ ಪ್ರೋತ್ಸಾಹ, ಕೃಷಿ ಅಭಿವೃದ್ಧಿ, ನಗರ ನಿರ್ಮಾಣ, ದೇವಾಲಯಗಳ ನಿರ್ಮಾಣ, ವ್ಯಾಪಾರ ಚಟುವಟಿಕೆ ಹೀಗೆ ಅನೇಕ ವಿಚಾರಗಳಲ್ಲಿ ಕೆಳದಿಯ ಅರಸರಿಗೂ, ಯಲಹಂಕ ನಾಡಪ್ರಭುಗಳಿಗೂ ಸಾಮ್ಯತೆಗಳಿರುವುದನ್ನು ಗಮನಿಸಬಹುದು.

### 2.2.2 ಚಿತ್ರದುರ್ಗದ ನಾಯಕರು (1568–1779)

ವಿಜಯನಗರ ಪತನದ ನಂತರ ಪ್ರಬಲರಾದ ಸಾಮಂತರಲ್ಲಿ ಚಿತ್ರದುರ್ಗದ ನಾಯಕರು ಪ್ರಮುಖರು. ಇವರು 'ಮದಕರಿ ನಾಯಕರು' ಎಂತಲೂ ಪ್ರಸಿದ್ಧರಾಗಿದ್ದಾರೆ. ಬಿ.ಎಲ್.ರೈಸ್ ದಾಖಲಿಸುವಂತೆ ತಿರುಪತಿ ಬಳಿಯ 'ಮೆದಕೇರಿ' ಎಂಬ ಗ್ರಾಮದಿಂದ ಬಂದವರಾದ್ದರಿಂದ ತಮ್ಮ ಮೂಲಸ್ಥಳದ ಸೂಚಕವಾಗಿ ಇಟ್ಟುಕೊಂಡ ಮೆದಕೇರಿಯು 'ಮದಕರಿ'ಯಾಗಿದೆ. ಇವರ ವಂಶಸ್ಥರು ಮೂಲತಃ ಪಶುಪಾಲನೆ ಮತ್ತು ಬೇಟೆಯಾಡುತ್ತಾ ಜೀವನ ನಡೆಸುವ ಬೇಡ ಅಥವಾ ಬೋಯ ಸಮುದಾಯಕ್ಕೆ ಸೇರಿದವರು. ಚಿತ್ರದುರ್ಗವನ್ನು ಕೇಂದ್ರವಾಗಿರಿಸಿಕೊಂಡು 1568 ರಿಂದ 1779ರವರೆಗೆ 'ಕಾಮಗೇತಿ' ವಂಶದ 'ಮತ್ತಿ' ಮತ್ತು 'ಬಿಳಿಚೋಡು' ಮನೆತನಗಳ 13 ಮಂದಿ ನಾಯಕರು ಆಳ್ವಿಕೆ ನಡೆಸಿದರು. 'ಚಿತ್ರನಾಯಕ' ಇವೆರಡೂ ಮನೆತನಗಳ ಮೂಲಪುರುಷ ಎನ್ನಲಾಗಿದೆ. 'ಮತ್ತಿ' ಮನೆತನದ ಮೊದಲ ಅರಸ ಮತ್ತಿ ತಿಮ್ಮಣ್ಣ ನಾಯಕನಾದರೆ, 'ಬಿಳಿಚೋಡು' ಮನೆತನದ ಮೊದಲ ಅರಸ ಬಿಚ್ಚುಗತ್ತಿ ಭರಮಣ್ಣ ನಾಯಕನಾಗಿದ್ದಾನೆ.

ಉತ್ತರ ದೇಶದ ಜಡಕಲ್ಲು ದುರ್ಗದಿಂದ ದಿಲ್ಲಿಯ ನಾಡ ತಳವಾರರಾದ ವಾಲ್ಮೀಕಿ ಗೋತ್ರದ ಕಾಮಗೇತಿ ವಂಶದ ಸಬ್ಬಗಡಿ ಓಬನಾಯಕ, ಜಡವಿನಾಯಕ, ಬುಳ್ಳನಾಯಕರೆಂಬ ಮೂವರು ಸೋದರರು ಹಂಪಿಯ ಮಾರ್ಗವಾಗಿ ಚಿತ್ರದುರ್ಗ ಪರಿಸರಕ್ಕೆ ಬಂದರು. ಇವರಲ್ಲಿ ಜಡವಿ ನಾಯಕನ ಮಗ ಹಿರೀಹನುಮನಾಯಕನು ಸಾಗಲೆ ಗ್ರಾಮದಲ್ಲಿ ನೆಲೆಸಿದರೆ, ಸಬ್ಬಗಡಿ ಓಬನಾಯಕನ ಮಗ ತಿಮ್ಮಣ್ಣನಾಯಕನು ಮತ್ತಿ ಗ್ರಾಮದಲ್ಲಿ ನೆಲೆಸಿದನು. ಬುಳ್ಳನಾಯಕನ

ಮಕ್ಕಳಾದ ಚಿಕ್ಕಹನುಮನಾಯಕ ಮತ್ತು ಓಬಣ್ಣನಾಯಕರು ಬಿಳಿಚೋಡು ಗ್ರಾಮದಲ್ಲಿ ನೆಲೆಸಿದರು. ಮತ್ತಿ ಗ್ರಾಮದಲ್ಲಿ ನೆಲೆಸಿದ್ದ ತಿಮ್ಮಣ್ಣನಾಯಕನಿಂದ ಚಿತ್ರದುರ್ಗದ ನಾಯಕರ ಖಚಿತ ಇತಿಹಾಸ ಆರಂಭವಾಗುತ್ತದೆ. ಆದ್ದರಿಂದ ಇವನನ್ನು ಈ ಮನೆತನದ ಮೊದಲ ಐತಿಹಾಸಿಕ ವ್ಯಕ್ತಿ ಎಂದು ಪರಿಗಣಿಸಲಾಗಿದೆ.

### 2.2.2.1 ಮತ್ತಿ ತಿಮ್ಮಣ್ಣನಾಯಕ (1568–89)

ತಿಮ್ಮಣ್ಣನಾಯಕನ ಪುಂಡಾಟವನ್ನು ನಿಯಂತ್ರಿಸಲು ಬಂದ ವಿಜಯನಗರದ ಸಾಳ್ವ ನರಸಿಂಗರಾಯನ ಸೈನಿಕ ಶಿಬಿರಕ್ಕೆ ರಾತ್ರಿಯ ವೇಳೆ ನುಗ್ಗಿ ಅವನ ಖಾಸಾ ಕುದುರೆಯನ್ನೆ ಬಹುಸಾಹಸಪಟ್ಟು ಹೊತ್ತೊಯ್ದನು. ತಿಮ್ಮಣ್ಣನಾಯಕನ ಅಸೀಮ ಸಾಹಸವನ್ನು ಮೆಚ್ಚಿದ ಸಾಳ್ವ ನರಸಿಂಹರಾಯನು, ಅವನಿಗೆ ಹಿರಿಯೂರು (1556) ಮತ್ತು ಹೊಳಲಕೆರೆಯ (1563) ನಾಯಕತನ ಕೊಟ್ಟನು. 1568ರಲ್ಲಿ ಚಿತ್ರದುರ್ಗದ ಅಮರನಾಯಕತನವನ್ನು ಪಡೆದುಕೊಳ್ಳುವ ಮೂಲಕ ಚಿತ್ರದುರ್ಗ ನಾಯಕರ ಚರಿತ್ರೆ ಆರಂಭವಾಯಿತು. ತಿಮ್ಮಣ್ಣನು ಸಾಳ್ವ ನರಸಿಂಗರಾಯನೊಡನೆ ಕಲಬುರ್ಗಿ ಕೋಟೆಯನ್ನು ಯಶಸ್ವಿಯಾಗಿ ಮುತ್ತಿದನು. ಅದಕ್ಕಾಗಿ ಅವನಿಗೆ ವಿಜಯನಗರದ ಅರಸನು 'ಹಗಲು ಕಗ್ಗೊಲೆಯ ಮಾನ್ಯ' ಎಂಬ ಬಿರುದು ನೀಡಿದನು.[25] ತಿಮ್ಮಣ್ಣನ ಏಳಿಗೆಯನ್ನು ಸಹಿಸದ ವಿರೋಧಿಗಳು ವಿಜಯನಗರದ ಚಕ್ರವರ್ತಿಯಲ್ಲಿ ಚಾಡಿ ಹೇಳಿದರು. ತಿಮ್ಮಣ್ಣನನ್ನು ವಿಜಯನಗರಕ್ಕೆ ಕರೆಸಿಕೊಂಡ ಚಕ್ರವರ್ತಿಯು ಅಲ್ಲಿಯೇ ಅವನನ್ನು ಸೆರೆಗೆ ದೂಡಿದನು. ಕೊನೆಗೆ ಅಲ್ಲಿಯೇ ಮರಣ ಹೊಂದಿದನು. ಅವನ ಬಳಿಯಲ್ಲಿಯೇ ಇದ್ದ ಮಗ ದಧ್ಯನ್ನದ (ದ್ರವ್ಯಾನ್ನದ) ಓಬಣ್ಣನಾಯಕನು ತಂದೆಯ ಸಂಸ್ಕಾರವನ್ನು ಅಲ್ಲಿಯೇ ನೆರವೇರಿಸಿ, ಚಿತಾಭಸ್ಮದೊಡನೆ ತಲೆಮರೆಸಿಕೊಂಡು ಬಂದು ಚಿತ್ರದುರ್ಗ ಸೇರಿದನು. ಇದೇ ಕಾಲಘಟ್ಟದಲ್ಲಿ ವಿಜಯನಗರದ ಅರಸರು ಯಲಹಂಕ ನಾಡಪ್ರಭು ಕೆಂಪೇಗೌಡನನ್ನು ಕೂಡ ಹೀಗೆಯೇ ಬಂಧಿಸಿ, ಕೆಲವರ್ಷಗಳ ಕಾಲ ಸೆರೆಗೆ ತಳ್ಳಿದ್ದನ್ನು ಇಲ್ಲಿ ಸ್ಮರಿಸಬಹುದು.

### 2.2.2.2. ಓಬಣ್ಣನಾಯಕ (1589–1603)

ಈತನು ವಿಜಯನಗರದ ಅಧೀನತೆಯಿಂದ ಹೊರಬಂದು ಸ್ವತಂತ್ರವಾಗಿ ಆಳಲಾರಂಭಿಸಿದನು. ಗುಂಟನೂರು ಮಲ್ಲಪ್ಪ ಈತನ ಪ್ರಧಾನಿ.[26] ಕನಕಗಿರಿಯ ರಂಗಪ್ಪನಾಯಕನ ಮಗಳಾದ ಕನಕವ್ವ ನಾಗತಿಯನ್ನು ಮದುವೆಯಾದನು. ಆಕೆಯು ಆತ್ಮಹತ್ಯೆ ಮಾಡಿಕೊಂಡಳು. ತನ್ನ ತಂಗಿ ಹೊನ್ನವ್ವೆಯನ್ನು ಹರಪನಹಳ್ಳಿಯ ದಾದಾನಾಯಕನಿಗೆ ಮದುವೆ ಮಾಡಿಕೊಟ್ಟು

ಉಚ್ಚಂಗಿ ದುರ್ಗವನ್ನು ಬಳುವಳಿಯಾಗಿ ನೀಡಿದನು. ಹೀಗೆ ನೆರೆಹೊರೆಯವರೊಡನೆ ವೈವಾಹಿಕ ಸಂಬಂಧದ ಮೂಲಕ ಶಾಂತಿ ಸ್ಥಾಪಿಸಲು ಪ್ರಯತ್ನಿಸಿದನು. ಆದರೆ ಇಲ್ಲಿ ಅದೇ ಶಾಂತಿ ಭಂಗಕ್ಕೂ ಕಾರಣವಾಯಿತು. ಓಬಣ್ಣನಾಯಕನ ನಂತರ ಅವನ ಮಗ **ಒಂದನೇ ಕಸ್ತೂರಿ ರಂಗಪ್ಪನಾಯಕ (1603–52)** ಬಂದನು. ಇವನು 1608ರಲ್ಲಿ ರಂಗಪಟ್ಟಣ ನಿರ್ಮಿಸಿದನು. ತರಿಕೆರೆಯ ಪಾಳೆಯಗಾರ ಪೂವಲ (ಮುಮ್ಮಡಿ) ಹನುಮಪ್ಪನಾಯಕನು ಚಿತ್ರದುರ್ಗದ ಕೆಲವು ಪ್ರದೇಶಗಳನ್ನು ಗೆದ್ದು, 1638ರಲ್ಲಿ ಚಿತ್ರದುರ್ಗವನ್ನು ಮುತ್ತಲು ಮುಂದಾದನು. ಆಗ ಅವನನ್ನು ಕಂದವಾಡಿ ಮತ್ತು ಡೊಂಕಾಪುರದ ಬಳಿಯ ಕದನಗಳಲ್ಲಿ ಸೋಲಿಸಿ ಸೆರೆಹಿಡಿದನು. ರಂಗಪ್ಪನಾಯಕನಿಗೆ ಸರ್ಜೇರಾಯನೆಂಬ ಮಗ ಜನಿಸಿದ ಸಂದರ್ಭದಲ್ಲಿ ಅವನನ್ನು ಬಿಡುಗಡೆಗೊಳಿಸಿದನು.[27]

ಕಸ್ತೂರಿ ರಂಗಪ್ಪನಾಯಕನು ಬಸವಾಪಟ್ಟಣ, ಮಾಯಕೊಂಡ, ಸಂತೆಬೆನ್ನೂರು, ಹೊಳಲ್ಕೆರೆ, ಅಣಜಿ, ಜಗಳೂರು ಮುಂತಾದ ಪ್ರಾಂತಗಳನ್ನು ಚಿತ್ರದುರ್ಗಕ್ಕೆ ಸೇರಿಸಿಕೊಳ್ಳುವ ಮೂಲಕ ತನ್ನ ರಾಜ್ಯವನ್ನು ವಿಸ್ತರಿಸಿದನು. ವಾರ್ಷಿಕ 65,000 ದುರ್ಗಿ ಪಗೋಡ ಉತ್ಪನ್ನ ಬರುವ 22 ಸೀಮೆಗಳನ್ನು ಆಳುತ್ತಿದ್ದನು. ಕಸ್ತೂರಿ ರಂಗಪ್ಪನಾಯಕನು 1652ರಲ್ಲಿ ಮರಣಹೊಂದಿದಾಗ ಅವನ 12 ಮಂದಿ ನಾಗತಿಯರಲ್ಲಿ 7 ಮಂದಿ ಸಹಗಮನವಾದರು. ಅವನ ದೇಹವನ್ನು ಅರಮನೆಯಲ್ಲಿಯೇ ಸುಟ್ಟರೆಂದು ತಿಳಿದುಬರುತ್ತದೆ.[28]

ನಂತರ **ಇಮ್ಮಡಿ ಮದಕರಿನಾಯಕ (1652–75)** ಆನಂತರ ಅವನ ತಮ್ಮನ **'**ಸಾಕುಮಗ**'**ನಾದ ಇಮ್ಮಡಿ ಓಬಣ್ಣನಾಯಕ ಅಧಿಕಾರಕ್ಕೆ ಬಂದರು. ಆದರೆ ದಳವಾಯಿಗಳು ಮತ್ತು ಗುರಿಕಾರರು ಸೇರಿ ಅವನ ತಲೆಕಡಿದರು. ಅವರೆಲ್ಲರೂ ಸೇರಿ ಕಸ್ತೂರಿ ರಂಗಪ್ಪನಾಯಕನ ಮೊಮ್ಮಗನೂ, ಹಿರಿಯ ಮಗ ಸರ್ಜೇರಾಯನ ಮಗನೂ ಆದ ಚಿಕ್ಕಣ್ಣ ನಾಯಕನಿಗೆ ಪಟ್ಟಕಟ್ಟಿದರು.

### 2.2.2.3 ಕಸ್ತೂರಿ ಚಿಕ್ಕಣ್ಣನಾಯಕ (1675–86)

ಚಿಕ್ಕಣ್ಣನಾಯಕನ ಕಾಲವು ಧಾರ್ಮಿಕ ಮತ್ತು ರಾಜಕೀಯ ದೃಷ್ಟಿಯಿಂದ ಮುಖ್ಯವಾಗಿದೆ. ಈತನು ತನ್ನ ಪರಿವಾರ ಸಮೇತನಾಗಿ ವೀರಶೈವ ಧರ್ಮವನ್ನು ಸ್ವೀಕರಿಸಿ, ಉಗ್ರಚನ್ನವೀರ ದೇವರನ್ನು ಗುರುಗಳಾಗಿ ಸ್ವೀಕರಿಸಿದನು. ಲಾಲಕೋಟೆ ಸಮೀಪ ಒಂದು ವೀರಶೈವ ಮಠವನ್ನೂ ಕಟ್ಟಿಸಿದನು. ಆದರೆ ಈ ಧರ್ಮ ಹಿಡಿಸದೆ ಕೆಲವೇ ತಿಂಗಳಲ್ಲಿ ಪರಿವಾರ ಸಮೇತ ಹೊರಬಂದನು. ಆದರೆ ನಾಯಕನಹಟ್ಟಿಯ ಮಲ್ಲವ್ವನಾಗತಿ ಅಲ್ಲಿಯೇ ಉಳಿದದ್ದು ಮಾತ್ರವಲ್ಲ,

ಲಿಂಗಧರಿಸಿ ಪ್ರತ್ಯೇಕವಾಗಿಯೇ ವಾಸಿಸತೊಡಗಿದಳು.[29] ಯಲಹಂಕ ನಾಡಪ್ರಭುಗಳು ಕೂಡ ಶೈವ ಧರ್ಮದ ಪ್ರಭಾವಕ್ಕೆ ಒಳಗಾಗಿ ಶೈವರಾಗುತ್ತಾರಲ್ಲದೆ, ಮಾಗಡಿ ಪರಿಸರದಲ್ಲಿ 66 ವಿರಕ್ತ ಮಠಗಳನ್ನು ಕಟ್ಟಿಸಿದರೆಂದು ತಿಳಿದುಬರುತ್ತದೆ.

ನಂತರ ನಿಡುಗಲ್ಲು ನಾಯಕರಿಂದ ಸಾಣೀಕೆರೆಕೋಟೆ, ಹರಪನಹಳ್ಳಿಯ ನಾಯಕರಿಂದ ಅಣಜಿಕೋಟೆಗಳನ್ನು ಗೆದ್ದುಕೊಂಡನು. ಬುಟುಗಲ ಓಬಯ್ಯನಿಂದ ರಾಯದುರ್ಗವನ್ನು ಗೆದ್ದು, ಅವನ ಮಗನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟು ರಾಯದುರ್ಗ ಹಿಂತಿರುಗಿಸಿದನು. 1684ರಲ್ಲಿ ಗೋಲ್ಕೊಂಡದ ಸೇನೆ ರಾಮಗಿರಿಗೆ ಹಾಕಿದ ಮುತ್ತಿಗೆಯನ್ನು ವಿಫಲಗೊಳಿಸಿದನು. 1685ರಲ್ಲಿ ಕೂಡ್ಲಿಗಿ ಸಮೀಪದ ಉಜ್ಜಯಿನಿ ದುರ್ಗವನ್ನು ಚಿತ್ರದುರ್ಗದವರು ಆಕ್ರಮಿಸಿಕೊಂಡು, ಜರಿಮಲೆ ಬೊಮ್ಮಣ್ಣನನ್ನು ಇರಿಸಿದರು. ಆಗ ಹರಪನಹಳ್ಳಿಯ ನಾಯಕನು ಕೆಳದಿಯ ನಾಯಕರ ನೆರವಿನಿಂದ ಉಜ್ಜಯಿನಿ ದುರ್ಗವನ್ನು ಗೆದ್ದು, ಬೊಮ್ಮಣ್ಣನನ್ನು ಬಂಧಿಸಿ, ಬಿದನೂರಿಗೆ ಕರೆದೊಯ್ಯಿತು. ಈ ಘಟನೆ ಚಿತ್ರದುರ್ಗದ ನಾಯಕರು ಕೆಳದಿ ಮತ್ತು ಹರಪನಹಳ್ಳಿಯ ನಾಯಕರನ್ನು ಸದಾ ವಿರೋಧಿಸುವಂತೆ ಮಾಡಿತು.

ಚಿಕ್ಕಣ್ಣನಾಯಕನು ಮಕ್ಕಳಿಲ್ಲದೆ 1686ರಲ್ಲಿ ಮರಣಹೊಂದಿದನು. ಆಗ ಚಿಕ್ಕಣ್ಣನ ಅಣ್ಣನಾದ ಮುಮ್ಮಡಿ ಮದಕರಿನಾಯಕ / ಲಿಂಗಣ್ಣನಾಯಕ ಅಧಿಕಾರಕ್ಕೆ ಬಂದು ಕೆಲಕಾಲ ಆಳಿದನು (1686–88). ಇವನನ್ನು ದಳವಾಯಿ ಪಂಚಮರ ಮುದ್ದಣ್ಣ ಮೂಗುಕೊಯ್ಯಿಸಿ, ಉರುಲು ಹಾಕಿಸಿ ಕೊಂದನು. ಇದರಿಂದ ದಳವಾಯಿ ಮುದ್ದಣ್ಣ ದುರ್ಗದ ಸರ್ವಾಧಿಕಾರಿಯಾದನು. ಮುಂದಿನ ರಾಜಕೀಯ ವಿಪ್ಲವಗಳಲ್ಲಿ ಬುಳ್ಳನಾಯಕನ ಸಂತತಿಯ ಬಿಳಿಚೋಡು ಮನೆತನದ ಭರಮಣ್ಣ ನಾಯಕನು ಚಿತ್ರದುರ್ಗದ ನಾಯಕನಾದನು. ಅಲ್ಲಿಗೆ 'ಮತ್ತಿ' ಮನೆತನ ಅಂತ್ಯಗೊಂಡು, 'ಬಿಳಿಚೋಡು' ಮನೆತನದವರಿಂದ ಚಿತ್ರದುರ್ಗದ ರಾಜ್ಯಾಡಳಿತವು ಮುಂದುವರೆಯಿತು.

### 2.2.2.4 ಬಿಚ್ಚುಗತ್ತಿ ಭರಮಣ್ಣನಾಯಕ (1689–1721)

ಚಿತ್ರದುರ್ಗದ ನಾಯಕರಲ್ಲಿ ಪ್ರಸಿದ್ಧನಾದವನು ಭರಮಣ್ಣನಾಯಕ. ಇವನ ಕಾಲದಲ್ಲಿ ಚಿತ್ರದುರ್ಗ ಸಂಸ್ಥಾನ ವಿಸ್ತಾರಗೊಂಡಿತು. ಇವನು ಮುರಿಗಾಮಠದ ಸಂಸ್ಥಾಪಕರಾದ ಮುರಿಗಾ ಶಾಂತವೀರರ ಮಾರ್ಗದರ್ಶನದಲ್ಲಿ ಅರಸನಾದನೆಂದು ಹೇಳಲಾಗುತ್ತದೆ. ಭರಮಣ್ಣನಾಯಕನ ಕಾಲದಲ್ಲಿ 'ವೀರಕ್ಷಾಮ' / 'ಡೆಂಕೆಬರ' ಬಂದು ಅನೇಕ ಜನ ಸತ್ತರು. 1703–04ರಲ್ಲಿ 'ಗುಳ್ಳೆರೋಗ' ಬಂದು ಆಗಲೂ ಅನೇಕರು ಮಡಿದರು.

ಭರಮಣ್ಣನಾಯಕನು ನೆರೆಹೊರೆಯ ಸಂಸ್ಥಾನಗಳೊಡನಲ್ಲದೆ, ಮೊಗಲರ ಜೊತೆಗೂ ಯುದ್ಧಕ್ಕಿಳಿಯಬೇಕಾಯಿತು. ಹರಪನಹಳ್ಳಿಯ ನಾಯಕರ ಕಿರುಕುಳ ಮೇಲಿಂದ ಮೇಲೆ ಶುರುವಾಯಿತು. ದಾವಣಗೆರೆ ತಾಲ್ಲೂಕಿನ ಆಲೂರು ಕೋಟೆಯನ್ನು ಕಟ್ಟುವ ಸಮಯದಲ್ಲಿ ಮತ್ತೆ ಹರಪನಹಳ್ಳಿಯವರು ಕಿರುಕುಳ ಮುಂದುವರೆಸಿದರು. ಆಗ ಚಿತ್ರದುರ್ಗದವರು ಹರಪನಹಳ್ಳಿಯ ಸೈನಿಕರ ರಕ್ತದ ಕೆಸರಿನಿಂದಲೇ ಕೋಟೆಯನ್ನು ಕಟ್ಟಿದರೆಂಬ ಹೇಳಿಕೆಯು ಅವರ ಆಕ್ರೋಶದ ತೀವ್ರತೆಯನ್ನು ತೋರ್ಪಡಿಸುತ್ತದೆ.

ಮರಾಠರಿಗೂ ಸಿರಾದಲ್ಲಿನ ಮೊಗಲರ ಸುಭೆದಾರ ಕಾಸಿಂಖಾನನಿಗೂ ಯುದ್ಧ ಏರ್ಪಟ್ಟಿತು. ಮರಾಠರ ಸಂತಾಜಿ ಘೋರ್ಪಡೆಯ ನೆರವಿಗೆ ಚಿತ್ರದುರ್ಗದ ಸೇನೆಯು ಕುಡುತಿನಿ ವೆಂಕಣ್ಣ ಮತ್ತು ಹೊಳಲ್ಕೆರೆ ಬೊಮ್ಮಣ್ಣ ಮೊದಲಾದವರ ಮುಂದಾಳತ್ವದಲ್ಲಿ ನಿಂತಿತು. 1696ರ ಜನವರಿ 5ರಂದು ನಡೆದ ದೊಡ್ಡೇರಿ ಕದನದಲ್ಲಿ ಸುಭೆದಾರ ಕಾಸಿಂಖಾನ್ ಪ್ರಾಣ ಕಳೆದುಕೊಂಡನು. ಸಂತಾಜಿಯು ದೊಡ್ಡೇರಿ ಕೋಟೆಯನ್ನು ದುರ್ಗದವರಿಗೆ ಹಿಂತಿರುಗಿಸಿದನು. ಅದೇ ವರ್ಷ ದಿಲಾವರ್‌ಭಕ್ಷ್ ಚಿತ್ರದುರ್ಗದ ಮೇಲೇರಿ ಬಂದಾಗ ಭರಮಣ್ಣನು ಮೂರು ಲಕ್ಷ ವರಹಗಳನ್ನು ಕೊಟ್ಟು ಒಪ್ಪಂದ ಮಾಡಿಕೊಂಡನು.

ಭರಮಣ್ಣನಾಯಕನು ತನ್ನ ಆಳ್ವಿಕೆಯ ಅವಧಿಯಲ್ಲಿ ಭರಮಸಾಗರ ಕೆರೆ, ಅಣಜಿಕೆರೆ, ಭೀಮಸಮುದ್ರದ ಕೆರೆಗಳನ್ನೊಳಗೊಂಡಂತೆ 21 ಕೆರೆಗಳನ್ನೂ, ಚಿತ್ರದುರ್ಗದ ಏಕನಾಥಮ್ಮನಗುಡಿ, ನೀಲಕಂಠೇಶ್ವರ ದೇವಸ್ಥಾನ, ಚಂದ್ರಮೌಳೇಶ್ವರ ದೇವಸ್ಥಾನ, ಬಿಳಿಚೋಡಿನ ಹನುಮಂತರಾಯನ ಗುಡಿ ಸೇರಿದಂತೆ 30 ದೇವಾಲಯಗಳನ್ನು ಕಟ್ಟಿಸಿದನು. ಅಲ್ಲದೆ, ಅಣಜಿಕೋಟೆ, ಆಲೂರುಕೋಟೆ ಸೇರಿದಂತೆ 9 ಕೋಟೆಗಳನ್ನೂ, ಚಿತ್ರದುರ್ಗದ ಬೆಟ್ಟದಲ್ಲಿ ವೀರವ್ವನಾಗತಿ ಅರಮನೆ ಸೇರಿದಂತೆ 4 ಅರಮನೆಗಳನ್ನೂ ಹಾಗೂ ಭರಮಸಾಗರ, ರಂಗವ್ವನಹಳ್ಳಿ ಇವೇ ಮೊದಲಾದ 7 ಗ್ರಾಮಗಳನ್ನು ಮಾಡಿಸಿದನು.

### 2.2.2.5 ಹಿರೇ ಮದಕರಿನಾಯಕ (1721–49)

ತಂದೆ ಭರಮಣ್ಣ ನಾಯಕನಂತೆ ಹಿರೇಮದಕರಿನಾಯಕ ಕೂಡ ಪ್ರಸಿದ್ಧನಾದ ಅರಸ. ಅಧಿಕಾರಕ್ಕೆ ಬಂದ ಆರಂಭದ 5 ವರ್ಷ ಮೊಗಲರು ಮತ್ತು ಮರಾಠರೊಡನೆ ಹೋರಾಡಬೇಕಾಯಿತು. ರತ್ನಗಿರಿ ಸೀಮೆಯ ಕೆಲಪ್ರದೇಶಗಳನ್ನು, ಗುಡೇಕೋಟೆ ಮತ್ತು ಅದಕ್ಕೆ ಸೇರಿದ ಗ್ರಾಮಗಳನ್ನು ಗೆದ್ದನು. ಬಿದನೂರು ಮತ್ತು ಹರಪನಹಳ್ಳಿಯವರಿಂದ ಹೊಳಲು ಹಾಗೂ ಮೈಲಾರಕೋಟೆಗಳನ್ನು ಬಿಡಿಸಿಕೊಂಡನು. ಮಹಾರಾಷ್ಟ್ರದ ಪನ್ಹಾಳದ ಫತೇಸಿಂಗನು ಬೃಹತ್

ಸೇನೆಯೊಡನೆ ಚಿತ್ರದುರ್ಗದ ಮೇಲೇರಿ ಬಂದನು. ಹೊದಿಗೆರೆ, ಮರವಂಜಿ ಮತ್ತು ನಂದಿಹಳ್ಳಿ ಸಮೀಪ ನಡೆದ ಕದನದಲ್ಲಿ ಸೋತ ಮದಕರಿಯು ಸಂಧಿ ಮಾಡಿಕೊಂಡು 60,000 ವರಹ ನಜರನ್ನು ಒಪ್ಪಿಸಿದನು. ನಂತರ ಮದಕರಿಯು ಸಂತೆಬೆನ್ನೂರನ್ನು ಮುತ್ತಲು ಫತೇಸಿಂಗನಿಗೆ ನೆರವಾದನು. ಈ ವೇಳೆ ಇಬ್ಬರಿಗೂ ಅಪಾರ ಕೊಳ್ಳೆ ದೊರಕಿತು. ಹಿರೇಮದಕರಿನಾಯಕನು 1743ರಲ್ಲಿ ಬಿದನೂರು, ಆನೆಗೊಂದಿ, ರಾಯದುರ್ಗ ಮತ್ತು ಹರಪನಹಳ್ಳಿಯವರು ಮುತ್ತಿದ ರಾಮಗಿರಿದುರ್ಗವನ್ನು ವೀರಾವೇಶದಿಂದ ಹೋರಾಡಿ ಮರುವಶಪಡಿಸಿ ಕೊಂಡನು. ಹಿರೇಮದಕರಿನಾಯಕನು ಹರಪನಹಳ್ಳಿಯ ಸೋಮಶೇಖರ ನಾಯಕನಿಂದ ತೀವ್ರಗಾಯಗೊಂಡು 1749ರಲ್ಲಿ ಮರಣಹೊಂದಿದನು.

ಹಿರೇಮದಕರಿ ನಾಯಕನು 60 ಸೀಮೆಗಳ ಮೇಲೆ ಅಧಿಪತ್ಯ ಸಾಧಿಸಿದ್ದನು. ಅವುಗಳಿಂದ 3 ಲಕ್ಷ ವರಹಗಳನ್ನು ಸಂಗ್ರಹಿಸುತ್ತಿದ್ದನು. ಈತನ ಆಳ್ವಿಕೆಯಲ್ಲಿ 64 ಗಡಿಗಳಿದ್ದವು. ಪ್ರತಿ ಗಡಿಯನ್ನು ಗಡಿವಾಳನಾಯಕನ ನೇತೃತ್ವದ ಮದ್ದುಗುಂಡನ್ನುಳ್ಳ 750 ಸೈನಿಕರು ನೋಡಿಕೊಳ್ಳುತ್ತಿದ್ದರು. ಇವನ ಸೇವೆಯಲ್ಲಿ 'ಜಾನ್' ಎಂಬ ಫ್ರೆಂಚ್ ವ್ಯಕ್ತಿಯು ಇದ್ದನು. ಹಿರೇಮದಕರಿನಾಯಕನ ಕಾಲದಲ್ಲಿಯೇ ಚಿತ್ರದುರ್ಗ ಸಂಸ್ಥಾನವು ಮೊಗಲರ ನಿಜಾಂ ಉಲ್ ಮುಲ್ಕ್ ಅಸಫ್‌ಝಾನ ಅಧೀನಕ್ಕೆ ಒಳಪಟ್ಟು, ಬಿಜಾಪುರ ಸುಭಾಗೆ ಖಡಣಿ ನೀಡುವ ರಾಜ್ಯವಾಯಿತು.

ನಂತರ ಹಿರೇಮದಕರಿನಾಯಕನ ಮಗನಾದ ಇಮ್ಮಡಿ ಕಸ್ತೂರಿ ರಂಗಪ್ಪನಾಯಕ (1749–54) ಅಧಿಕಾರಕ್ಕೆ ಬಂದನು. ಸಿರಾದ ಸುಬೇದಾರನಿಂದ ಸಿರಾಸೀಮೆಯ ನಾಡತಳವಾರಿಕೆಯನ್ನು ಪಡೆದನು. 1751ರಲ್ಲಿ ಬೂದಿಹಾಳನ್ನು ಗೆದ್ದುಕೊಂಡು ಅದಕ್ಕೆ 'ಗಿರಿಜಾನಗರ' ಎಂದು ಮರುನಾಮಕರಣ ಮಾಡಿದನು. ವಾರ್ಷಿಕ ಸಾವಿರ ಪೊಗದಿ ಕೊಡುವ ಒಪ್ಪಂದದ ಮೇರೆಗೆ ತೇಕಲವಟ್ಟಿ ಗ್ರಾಮವನ್ನು ಕ್ರಯಕ್ಕೆ ಪಡೆದನು. ಮರಾಠ ಪೇಶ್ವೆಗಳಿಗೆ ಚಿತ್ರದುರ್ಗ ಸಂಸ್ಥಾನವು ಸಲ್ಲಿಸಬೇಕಾದ ಚೌತನ್ನು ಸಲ್ಲಿಸದಿದ್ದಾಗ ಪೇಶ್ವೆ ನಾನಾ ಸಾಹೇಬನು ವಡ್ಡನಹಳ್ಳಿ ಮತ್ತು ಹಣಜಿಗಳಿಗೆ ಮುತ್ತಿಗೆ ಹಾಕಿದನು. ನಾಯಕನು ಚೌತ್ ಕೊಡಲೊಪ್ಪಿದ ನಂತರ ಮುತ್ತಿಗೆಯನ್ನು ಹಿಂತೆಗೆದರು.

ಮಕ್ಕಳಿಲ್ಲದ ಕಸ್ತೂರಿ ರಂಗಪ್ಪನಾಯಕನು ತನ್ನ ಕೊನೆಗಾಲದಲ್ಲಿ ಅನಾರೋಗ್ಯಕ್ಕೆ ತುತ್ತಾಗಿ 1754ರಲ್ಲಿ ಮರಣ ಹೊಂದಿದನು. ಈ ವೇಳೆ ಹೊಸ ದೊರೆ ಅಧಿಕಾರಕ್ಕೆ ಬರುವವರೆಗೂ ಕಸ್ತೂರಿ ರಂಗಪ್ಪನ ತಾಯಿಯಾದ ಗಂಡಿಲ ಓಬವ್ವನಾಗತಿಯು ಆಳ್ವಿಕೆಯನ್ನು ನಡೆಸಿದಳು. ಇವಳ ಎರಡು

ವರ್ಷದ ಆಳ್ವಿಕೆಯು ಸರ್ವಾಧಿಕಾರದಿಂದ ಕೂಡಿತ್ತು. ಹಲವು ಅನುಮಾನಾಸ್ಪದ ರಾಜಕೀಯ ಕೊಲೆಗಳು ನಡೆಯತೊಡಗಿದವು. ಈ ನಡುವೆ ಜಾನಕಲ್ಲಿನ ಕಿಲ್ಲೆದಾರನಾಗಿದ್ದ ತೊದಲು ಭರಮಪ್ಪನಾಯಕನ ಮಗ 'ಚಿಕ್ಕ ಮದಕರಿನಾಯಕ'ನಿಗೆ ಪಟ್ಟಕಟ್ಟಿದಳು.

### 2.2.2.6 ರಾಜಾ ವೀರಮದಕರಿನಾಯಕ (1754–79)

ಇವನು ಅಧಿಕಾರಕ್ಕೆ ಬಂದಾಗ ಕೇವಲ 12 ವರ್ಷದ ಬಾಲಕ. ಆದ್ದರಿಂದ ರಾಜ್ಯಸೂತ್ರವನ್ನು ಹಿಡಿದ ಓಬವ್ವನಾಗತಿಯು ಎರಡು ವರ್ಷಗಳ ಸರ್ವಾಧಿಕಾರವನ್ನು ನಡೆಸಿ, 1756ರಲ್ಲಿ ತೀರಿಕೊಂಡಳು. ವೀರಮದಕರಿನಾಯಕನು ಚಿತ್ರದುರ್ಗ ನಾಯಕ ಮನೆತನದ ಕೊನೆಯ ಮತ್ತು ಪ್ರಸಿದ್ಧ ಅರಸ.

ವೀರಮದಕರಿಯು ಆರಂಭದಲ್ಲಿಯೇ ರಾಯದುರ್ಗ ಮತ್ತು ಹರಪನಹಳ್ಳಿಯ ನಾಯಕರನ್ನು ಎದುರಿಸಬೇಕಾಯಿತು. ನಂತರ ಜರಿಮಲೆ ಮತ್ತು ತರಿಕೆರೆ ನಾಯಕರ ಹಾವಳಿಯನ್ನು ಅಡಗಿಸಿದನು. ಮೈಸೂರು ಸಂಸ್ಥಾನದ ಹೈದರಾಲಿಯು ಒಂದೊಂದೇ ಸಂಸ್ಥಾನಗಳನ್ನು ಕೈವಶ ಮಾಡಿಕೊಳ್ಳುತ್ತಾ ಬಂದನು. ಹಾಗೆ ವಶವಾದ ಕೊನೆಯ ಸಂಸ್ಥಾನವೇ ಚಿತ್ರದುರ್ಗವಾಗಿತ್ತು.

ಹೈದರಾಲಿಯ ಕುಟಿಲತನವನ್ನು ಅರಿತಿದ್ದ ಮದಕರಿಯು ಅತ್ತ ಮರಾಠರ ಜೊತೆಗೂ ಬಾಂದವ್ಯ ಇರಿಸಿಕೊಂಡಿದ್ದನು. ಪೇಶ್ವೆ ಮಾದವರಾಯನಿಗೂ ಸಹಾಯ ಮಾಡುವ ಮೂಲಕ ಹೈದರಾಲಿಯ ಕೋಟೆಗಳಾದ ಸಾವನದುರ್ಗ, ಹುತ್ತರಿದುರ್ಗ, ನುಗ್ಗೆಹಳ್ಳಿ, ಹಾಗಲವಾಡಿ, ಬಾಣಾವರ ಮೊದಲಾದವುಗಳನ್ನು ಗೆಲ್ಲಲು ಮದಕರಿಯು ಕಾರಣನಾದನು. ಇವುಗಳ ಜೊತೆಗೆ 1769ರಲ್ಲಿ ತುರುವೇಕೆರೆ, ಬೆಳ್ಳೂರು, ದೇವರಾಯನದುರ್ಗ, ಮಂಜರಾಬಾದ್, ದಾರಿನಾಯಕನಪಾಳ್ಯ, ಚಿಕ್ಕಬಳ್ಳಾಪುರ, ಮುಳಬಾಗಿಲು ಮೊದಲಾದವುಗಳ ಗೆಲುವಿಗೆ ಕಾರಣನಾದನು. ಇದರಿಂದ ಹೈದರಾಲಿಯು ಮದಕರಿಯ ವಿರುದ್ಧ ಆಕ್ರೋಶಗೊಂಡನು. ಪರಿಣಾಮವಾಗಿ ಹೈದರಾಲಿಯು ಚಿತ್ರದುರ್ಗದ ಕೋಟೆಯ ಮೇಲೆ ನಾಲ್ಕು ಬಾರಿ ಆಕ್ರಮಣ ನಡೆಸಿದನು. ಅಂತಿಮವಾಗಿ ಚಿತ್ರದುರ್ಗದ ಕೋಟೆಯು ಹೈದರಾಲಿ ಮತ್ತವನ ಮಿತ್ರಕೂಟದ ವಶವಾಯಿತು. ಹೈದರಾಲಿಯು ಸೆರೆಸಿಕ್ಕ ಮದಕರಿನಾಯಕನನ್ನು ಅವನ ಪರಿವಾರದೊಡನೆ ಶ್ರೀರಂಗಪಟ್ಟಣಕ್ಕೆ ಸಾಗಿಸಿ, ಅಲ್ಲಿ ಬಂಧನದಲ್ಲಿಟ್ಟನು. ಶ್ರೀರಂಗಪಟ್ಟಣದ ಬಂಧನದಲ್ಲಿದ್ದ ಮದಕರಿನಾಯಕನು ಅನ್ನದಲ್ಲಿ ವಿಷಹಾಕಲ್ಪಟ್ಟು ಅಸಹಜ ಸಾವಿಗೆ ತುತ್ತಾದನು. ಹೀಗೆ ಮದಕರಿನಾಯಕ ಮತ್ತು ಅವನ ಸಂತತಿಯು ದುರಂತ ಅಂತ್ಯ ಕಂಡಿತು. ಚಿತ್ರದುರ್ಗ

ಕೋಟೆಯಲ್ಲಿದ್ದ ಅಪಾರ ಸಂಪತ್ತನ್ನು ಹೈದರಾಲಿಯು ದೋಚಿದನು. ನಂತರ ಹೈದರಾಲಿಯು ಚಿತ್ರದುರ್ಗಕ್ಕೆ 'ಫಾರೂಕಬಾದ್' ಎಂದು ನಾಮಕರಣ ಮಾಡಿದನು.

### 2.2.3 ಮೈಸೂರು ಒಡೆಯರು (1399–1947)

ಮೈಸೂರು ಒಡೆಯರ್ ಮನೆತನದ ಸ್ಥಾಪಕರಾದ ಯದುರಾಯ ಮತ್ತು ಕೃಷ್ಣರಾಯ ದ್ವಾರಕನಗರದಿಂದ ವಿಜಯನಗರ, ಯಾದವಗಿರಿ (ಮೇಲುಕೋಟೆ) ಮಾರ್ಗವಾಗಿ ಮೈಸೂರು ಪ್ರದೇಶಕ್ಕೆ ಬಂದರು.[30] ಸ್ಥಳೀಯ ನಾಯಕನೊಬ್ಬನ ಮಗಳನ್ನು ಯದುರಾಯನು ಮದುವೆಯಾಗಿ ಆ ಸಂಸ್ಥಾನದ ನೇತೃತ್ವ ವಹಿಸಿಕೊಳ್ಳುತ್ತಾನೆ. ಹೀಗೆ ಒಡೆಯರ್ ಮನೆತನದ ಮೊದಲ ದೊರೆಯಾದ ಯದುರಾಯನು ಕ್ರಿ.ಶ. 1399 ರಿಂದ 1423ರವರೆಗೆ ಸುಮಾರು 23 ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಇವನ ನಂತರ ಇವನ ಮಗ 1ನೇ ಬೆಟ್ಟದ ಚಾಮರಾಜ ಒಡೆಯರ್ (1423–59), ನಂತರ 1ನೇ ತಿಮ್ಮರಾಜ ಒಡೆಯರ್ (1459–78), 2ನೇ ಚಾಮರಾಜ ಒಡೆಯರ್ (1478–1513), 3ನೇ ಬೆಟ್ಟದ ಚಾಮರಾಜ ಒಡೆಯರು (1513–53) ಕ್ರಮವಾಗಿ ಆಳ್ವಿಕೆ ನಡೆಸಿದರು. 3ನೇ ಬೆಟ್ಟದ ಚಾಮರಾಜ ಒಡೆಯರ್ ಕೃಷ್ಣದೇವರಾಯನ ಸಮಕಾಲೀನನಾಗಿದ್ದು, ಮೈಸೂರಿನ ಚಾಮುಂಡಿ ಬೆಟ್ಟದ ಮೇಲೆ ಚಾಮುಂಡೇಶ್ವರಿ ದೇವಾಲಯವನ್ನು ಕಟ್ಟಿಸಿದನು. ಮೈಸೂರಿನ ಕೋಟೆಯ ನಿರ್ಮಾಣ ಕಾರ್ಯವನ್ನು ಆರಂಭಿಸಿ ಆ ಸ್ಥಳಕ್ಕೆ 'ಮೈಸೂರು ನಗರ' ಎಂದು ಹೆಸರಿಟ್ಟನು. ಇವನ ನಂತರ 2ನೇ ತಿಮ್ಮರಾಜ ಒಡೆಯರ್ (1553–72), ನಂತರ ಬೋಳ 4ನೇ ಚಾಮರಾಜ ಒಡೆಯರ್ (1572–76) ಅಧಿಕಾರಕ್ಕೆ ಬಂದನು. ಚಾಮುಂಡಿ ಬೆಟ್ಟವನ್ನು ಏರುವಾಗ ಸಿಡಿಲು ಬಡಿದು ತಲೆ ಬೋಳಾಯಿತಾದ್ದರಿಂದ ಬೋಳ ಚಾಮರಾಜ ಎನ್ನುತ್ತಾರೆ.[31] ನಂತರ 5ನೇ ಬೆಟ್ಟದ ಚಾಮರಾಜ ಒಡೆಯರ್ (1576–78) ಆಳ್ವಿಕೆ ನಡೆಸಿದರು. ಇವರೆಲ್ಲರೂ ವಿಜಯನಗರದ ಸಾಮಂತರಾಗಿದ್ದು, ಕಪ್ಪಕಾಣಿಕೆ ಸಲ್ಲಸುತ್ತಿದ್ದರು. 5ನೇ ಬೆಟ್ಟದ ಚಾಮರಾಜ ಒಡೆಯರ್ ನಂತರ ಅವರ ಸಹೋದರ 1ನೇ ರಾಜ ಒಡೆಯರ್ ಆಳ್ವಿಕೆ ನಡೆಸಿದರು.

#### 2.2.3.1 ಒಂದನೇ ರಾಜ ಒಡೆಯರ್ (1578–1617)

ಮೈಸೂರಿನ ಆರಂಭಿಕ ಅರಸರಲ್ಲಿ ರಾಜಒಡೆಯರ್ ಅತ್ಯಂತ ಪ್ರಸಿದ್ಧನಾದವನು. ಇವನು ಪಟ್ಟಕ್ಕೆ ಬರುವ ಹೊತ್ತಿಗೆ ವಿಜಯನಗರ ಸಾಮ್ರಾಟರು ತಾಳಿಕೋಟೆ ಯುದ್ಧದಲ್ಲಿ ಸೋತು ದುರ್ಬಲರಾಗಿದ್ದರು. ಇದರ ಲಾಭ ಪಡೆದ ರಾಜ ಒಡೆಯರ್ ವಿಜಯನಗರಕ್ಕೆ ಮೈಸೂರು ಒಡೆಯರ್ ಕೊಡುತ್ತಿದ್ದ ಕಪ್ಪವನ್ನು ನಿಲ್ಲಿಸಿ, ತಾನು ಸ್ವತಂತ್ರನೆಂಬುದಾಗಿ ಘೋಷಿಸಿಕೊಂಡನು.

ಶ್ರೀರಂಗಪಟ್ಟಣದಲ್ಲಿದ್ದ ವಿಜಯನಗರದ ಪ್ರತಿನಿಧಿ ಶ್ರೀರಂಗರಾಯನಿಂದ ಕ್ರಿ.ಶ. 1610ರಲ್ಲಿ ಶ್ರೀರಂಗಪಟ್ಟಣವನ್ನು ಪಡೆದುಕೊಂಡನು.[32]

ರಾಜ ಒಡೆಯರು ತಮ್ಮ ಶಕ್ತಿ ಸಾಮಾರ್ಥ್ಯಗಳಿಂದ ಕೇವಲ 33 ಹಳ್ಳಿಗಳು ಮತ್ತು 300 ಜನ ಸೈನಿಕರಿಂದ ಕೂಡಿದ್ದ ಸಂಸ್ಥಾನವನ್ನು ರಾಜ್ಯದ ವ್ಯಾಪ್ತಿಗೆ ವಿಸ್ತರಿಸಿದನು. ರಾಜ ಒಡೆಯರ್ ಮೊದಲ ಬಾರಿಗೆ ದಳವಾಯಿತನವನ್ನು ಆರಂಭಿಸಿದನು. ಇದೇ ಸಮಯದಲ್ಲಿ ಪೆನುಗೊಂಡೆಯಲ್ಲಿದ್ದ ವಿಜಯನಗರ ಸಾಮ್ರಾಜ್ಯದ 2ನೇ ವೆಂಕಟಾದ್ರಿಯು ಕನ್ನಡ ಪ್ರಾತ್ಯದ ಆಡಳಿತವನ್ನು ನೋಡಿಕೊಳ್ಳಲು ಸನ್ನದ್ಧನ್ನು ನೀಡಿ ರಾಜ ಒಡೆಯರಿಗೆ 'ಮೈಸೂರಿನ ರಾಜ' ಎಂಬ ಮನ್ನಣೆ ನೀಡಿದನು.

ಸೈನ್ಯವನ್ನು ಸಂಘಟಿಸಿ ಅದರ ಮೇಲ್ವಿಚಾರಣೆ ನೋಡಿಕೊಳ್ಳಲು ದಳವಾಯಿಯಾಗಿ 'ಬೆಟ್ಟದರಸು' ಎಂಬ ಅಧಿಕಾರಿಯನ್ನು ನೇಮಿಸಿದನು.[33] ದೈವಭಕ್ತನಾದ ರಾಜ ಒಡೆಯರ್ ಶ್ರೀರಂಗಪಟ್ಟಣ, ಮೈಸೂರು, ಮೇಲುಕೋಟೆಗಳಲ್ಲಿ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿಸಿ, ಮೇಲುಕೋಟೆಯ ಚೆಲುವರಾಯಣಸ್ವಾಮಿಗೆ 'ರಾಜಮುಡಿ' ಎಂಬ ವಜ್ರ ಕಿರೀಟವನ್ನು ಕಾಣಿಕೆಯಾಗಿ ನೀಡಿದನು. ವಿಜಯನಗರದಲ್ಲಿ ಆಚರಿಸುತ್ತಿದ್ದ 'ನವರಾತ್ರಿ ಉತ್ಸವ'ವನ್ನು 1610ರಿಂದ ಮೈಸೂರಿನಲ್ಲಿ ದಸರಾ ಉತ್ಸವವಾಗಿ ಆಚರಣೆಗೆ ತಂದನು. ರಾಜ ಒಡೆಯರ್ 1617ರಲ್ಲಿ ಮೇಲುಕೋಟೆಯಲ್ಲಿ ಮರಣ ಹೊಂದಿದನು. ಇವನ ನಂತರ ಮಗಳ ಮಗ 6ನೇ ಚಾಮರಾಜ ಒಡೆಯರ್ ಆಡಳಿತ ನಡೆಸಿದನು.

### 2.2.3.2 6ನೇ ಚಾಮರಾಜ ಒಡೆಯರ್ (1617–37)

ಈತ ಅಧಿಕಾರಕ್ಕೆ ಬಂದಾಗ ಅಪ್ರಾಪ್ತ ವಯಸ್ಕನಾದ್ದರಿಂದ ದಳವಾಯಿಯಾಗಿದ್ದ ಬೆಟ್ಟದರಸು ಅಧಿಕಾರವನ್ನು ವಹಿಸಿಕೊಂಡ. ಚಾಮರಾಜ ಒಡೆಯರು ಜಗದೇವರಾಯನನ್ನು ಸೋಲಿಸಿ ಚನ್ನಪಟ್ಟಣವನ್ನು, ವೆಂಕಟಪ್ಪನಾಯಕನನ್ನು ಸೋಲಿಸಿ ಬೇಲೂರನ್ನು ವಶಪಡಿಸಿಕೊಂಡನು. ಜೊತೆಗೆ ತಲಕಾಡು, ಕೆರಗೋಡು, ಮಳವಳ್ಳಿ, ಬೆಳ್ಳೂರು, ನಾಗಮಂಗಲಗಳನ್ನು ಗೆದ್ದು ಮೈಸೂರು ರಾಜ್ಯದ ವ್ಯಾಪ್ತಿಯನ್ನು ವಿಸ್ತರಿಸಿದನು. ಸೈನ್ಯ ಮತ್ತು ಯುದ್ಧೋಪಕರಣಗಳ ಸರಬರಾಜಿಗಾಗಿ ಶ್ರೀರಂಗಪಟ್ಟಣದಲ್ಲಿ ಶಸ್ತ್ರಾಗಾರವನ್ನು ಸ್ಥಾಪಿಸಿದನು. ಕಾವೇರಿ ನದಿಯ ಕಾಲುವೆಯನ್ನು ದುರಸ್ತಿಗೊಳಿಸಿ, ಒಂದು ಸೇತುವೆಯನ್ನು ಮಾಡಿಸಿದನು. ಧರ್ಮ ಸಹಿಷ್ಣುವಾಗಿದ್ದ ಚಾಮರಾಜ ಒಡೆಯರ್ ಶೈವ, ವೈಷ್ಣವ, ಜೈನ ಹೀಗೆ ಸರ್ವಧರ್ಮಗಳಿಗೂ ಆಶ್ರಯ ನೀಡಿದ್ದನು. ಸ್ವತಃ ವಿದ್ವಾಂಸನಾಗಿದ್ದ ಚಾಮರಾಜ ಒಡೆಯರ್

ವಾಲ್ಮೀಕಿ ರಾಮಾಯಣದ ಕನ್ನಡ ರೂಪವಾದ 'ಚಾಮರಾಜೋಕ್ತಿ ವಿಲಾಸ' ಎಂಬ ಗ್ರಂಥವನ್ನು ರಚಿಸಿದನು.

6ನೇ ಚಾಮರಾಜ ಒಡೆಯರ್ ನಂತರ ಅಧಿಕಾರಕ್ಕೆ ಬಂದ ಅವನ ಚಿಕ್ಕಪ್ಪ 2ನೇ ರಾಜ ಒಡೆಯರ್ (1637–38) ಒಂದೆರಡು ವರ್ಷ ಆಳ್ವಿಕೆ ನಡೆಸಿ, ದಳವಾಯಿ ವಿಕ್ರಮರಾಯನಿಂದ ಕೊಲೆಗೀಡಾದನು. ನಂತರ 5ನೇ ಬೆಟ್ಟದ ಚಾಮರಾಜ ಒಡೆಯರರ 2ನೇ ಮಗನಾದ ರಣಧೀರ ಕಂಠೀರವ ನರಸರಾಜ ಒಡೆಯರ್ ಪಟ್ಟಕ್ಕೆ ಬಂದನು.

**2.2.3.3 ರಣಧೀರ ಕಂಠೀರವ ನರಸರಾಜ ಒಡೆಯರ್ (1638–59)**

ಮೈಸೂರಿನ ಆರಂಭದ ಅರಸರಲ್ಲಿ ಅತ್ಯಂತ ಪರಾಕ್ರಮಿ ಮತ್ತು ದಕ್ಷ ಆಡಳಿತಗಾರ ಹಾಗೂ ಸಮರ್ಥ ಯೋಧನಾಗಿದ್ದನು. ನರಸರಾಜನು ಯುವಕನಾಗಿದ್ದಾಗಲೇ ತಿರುಚನಾಪಳ್ಳಿಯ ಜಗಜಟ್ಟಿಯನ್ನು ಮಲ್ಲಯುದ್ಧಲ್ಲಿ ಸೋಲಿಸಿ, ಕೊಂದು 'ರಣಧೀರ ಕಂಠೀರವ' ಎಂಬ ಬಿರುದಿಗೆ ಪಾತ್ರನಾದನು. ಇವನು ಅಧಿಕಾರಕ್ಕೆ ಬಂದಾಗ ಬಿಜಾಪುರ ಮತ್ತು ಗೋಲ್ಕೊಂಡದ ಸುಲ್ತಾನರುಗಳು ತಮ್ಮ ರಾಜ್ಯ ವಿಸ್ತರಿಸುವ ಸಲುವಾಗಿ ಮೈಸೂರು ರಾಜ್ಯದ ಮೇಲೆ ದಂಡೆತ್ತಿ ಬರುತ್ತಿದ್ದರು. ಹಾಗೂ ಸಣ್ಣಪಟ್ಟ ಪಾಳೇಯಗಾರರು ತಮ್ಮ ಪಾಳೆಯಪಟ್ಟುಗಳ ವಿಸ್ತರಣೆಯಲ್ಲಿ ತೊಡಗಿದ್ದರು. ವಿಜಯನಗರ ಸಾಮ್ರಾಜ್ಯವು ಇವನ ಕಾಲದಲ್ಲಿ ಪೂರ್ಣ ಕಣ್ಮರೆಯಾಯಿತು. ನೆಪ ಮಾತ್ರದ ವಿಧೇಯತೆಯನ್ನೂ ತೋರದೆ ಮೊದಲ ಸರ್ವತಂತ್ರ ಸ್ವತಂತ್ರ ಅರಸನಾದ ಕಂಠೀರವ ನರಸರಾಜ ಒಡೆಯರ್ 2ನೇ ರಾಜ ಒಡೆಯರಿಗೆ ವಿಷ ಹಾಕಿಸಿ ಕೊಲ್ಲಿಸಿದ್ದ ವಿಕ್ರಮರಾಯನನ್ನು ಅಧಿಕಾರದಿಂದ ತೆಗೆದು, ಯಾವೊಬ್ಬ ದಳವಾಯಿಯೂ ಹೆಚ್ಚು ವರ್ಷಗಳ ಕಾಲ ಅಧಿಕಾರದಲ್ಲಿರದಂತೆ ಎಚ್ಚರ ವಹಿಸಿದನು.

ವಿಜಾಪುರದ ಸುಲ್ತಾನ ಮಹಮದ್ ಆದಿಲ್ ಷಾ ತನ್ನ ಸೈನ್ಯಾಧಿಕಾರಿಗಳಾಗಿದ್ದ ಶಾಹಜೀ, ರಣದುಲ್ಲಾಖಾನ್ ಮತ್ತು ಮುಸ್ತಫಾ ಖಾನ್‌ರನ್ನು ದಕ್ಷಿಣದ ದಂಡಯಾತ್ರೆಗೆ ಕಳುಹಿಸಿದನು. 1639ರಲ್ಲಿ ರಣದುಲ್ಲಾಖಾನ್ ಮತ್ತು ಶಾಹಜೀ ಶ್ರೀರಂಗಪಟ್ಟಣವನ್ನು ಮುತ್ತಿ ಕೋಟೆಯನ್ನು ಒಡೆಯುವ ಕಾರ್ಯದಲ್ಲಿ ತೊಡಗಿದ್ದರು. ನರಸರಾಜನು ಅವರನ್ನು ಪರಾಕ್ರಮದಿಂದ ಎದುರಿಸಿ, ಅಲ್ಲಿಂದ ಹಿಮ್ಮೆಟ್ಟುವಂತೆ ಮಾಡಿದನೆಂದು ಕನ್ನಡ ಸಾಹಿತ್ಯಗಳು ಹೇಳುತ್ತವೆ. ಆದರೆ ಕನ್ನಡೇತರ ಸಾಹಿತ್ಯಗಳು ಇದಕ್ಕೆ ವ್ಯತಿರಿಕ್ತವಾದ ಹೇಳಿಕೆಯನ್ನು ದಾಖಲಿಸಿವೆ ಎಂದು ಷೇಕ್ ಅಲಿ ಅವರು ಅಭಿಪ್ರಾಯಪಟ್ಟಿದ್ದಾರೆ.[34] ಅದೇನೇ ಇರಲಿ ಹೀಗೆ ಸುಮಾರು 8 ಬಾರಿ ಮೈಸೂರಿನ ಮೇಲೆ ದಾಳಿ ಮಾಡಿದ ಬಿಜಾಪುರದ ಸೈನ್ಯವನ್ನು ಹಿಮ್ಮೆಟ್ಟಿಸುವಲ್ಲಿ ಯಶಸ್ವಿಯಾದನು. ಬಿಜಾಪುರದ

ಸೇನಾಧಿಪತಿ ಅಫಜಲ್‌ಖಾನ್, ವೇದೋಜಿ ಪಂಥ್‌ರನ್ನು ಸೋಲಿಸಿ, ಹುಲಿಯೂರುದುರ್ಗ, ತುರುವೇಕೆರೆಗಳನ್ನು ವಶಪಡಿಸಿಕೊಂಡನು.

ದಕ್ಷಿಣದಲ್ಲಿ ಮಧುರೆಯ ತಿರುಮಲನಾಯಕನನ್ನು ಸೋಲಿಸಿ ಸಿಂಗನ್ನಲ್ಲೂರು, ಡಣ್ಣಾಯಕನ ಕೋಟೆಯನ್ನು ಮತ್ತು ಕಾವೇರಿ ನದಿ ಪ್ರದೇಶದ ಹಂಪಾಪುರ, ಬೆಟ್ಟದಪುರ, ಕಿತ್ತೂರು, ರುದ್ರಪಟ್ಟಣ, ಪಿರಿಯಾಪಟ್ಟಣ, ಕಣ್ಣೇಗಾಲ, ಅರಕಲಗೂಡು, ಕಲ್ಲೂರು, ಕಡಬ, ಮಾಯಸಂದ್ರ ಮತ್ತು ಇತರ ಪ್ರದೇಶಗಳನ್ನು ವಶಪಡಿಸಿಕೊಂಡನು. 1646ರಲ್ಲಿ ಇಕ್ಕೇರಿಯ ಶಿವಪ್ಪನಾಯಕ ಮತ್ತು ಬಿಜಾಪುರದ ಸೇನಾಧಿಪತಿ ಮುಸ್ತಫಾಖಾನ್ ಜಂಟಿಯಾಗಿ ಮೈಸೂರಿನ ಮೇಲೆ ದಂಡೆತ್ತಿ ಬಂದರು. ಅವರನ್ನು ಸೋಲಿಸಿ ಹಿಂದಕ್ಕಟ್ಟಿದನು. ಯಲಹಂಕನಾಡ ಯುದ್ಧದಲ್ಲಿ ಮಾಗಡಿಗೆ ಮುತ್ತಿಗೆ ಹಾಕಿದಾಗ, ಚಿಕ್ಕಕೆಂಪೇಗೌಡನು (ಮುಮ್ಮಡಿ ಕೆಂಪೇಗೌಡ) ಆಸ್ಥಾನಕ್ಕೆ ಬಂದು ಶರಣಾಗತನಾದಾಗ, ಅಭಯವನ್ನು ನೀಡಿ ಮಾಗಡಿಯನ್ನು ಹಿಂತಿರುಗಿಸಿದ ಬಗ್ಗೆ ಕೈಫಿಯತ್ತು ಮಾಹಿತಿ ನೀಡುತ್ತದೆ.[35] ಬಹುಶಃ ಕೆಂಪೇಗೌಡನಿಂದ ಕಪ್ಪಕಾಣಿಕೆಯನ್ನು ಸಂಗ್ರಹಿಸಿದನೆಂದು ಕಾಣುತ್ತದೆ. ಇವನ ಕಾಲದಲ್ಲಿ ಮೈಸೂರು ರಾಜ್ಯವು ಆಗ್ನೇಯದಲ್ಲಿ ಸತ್ಯಮಂಗಲ, ಪಶ್ಚಿಮದಲ್ಲಿ ಬೆಟ್ಟದಪುರ, ವಾಯವ್ಯದಲ್ಲಿ ಅರಕಲಗೂಡು, ಈಶಾನ್ಯದಲ್ಲಿ ಹೊಸೂರಿನವರೆಗೂ ವಿಸ್ತರಿಸಿತ್ತು.

ಕಂಠೀರವ ನರಸರಾಜ ಒಡೆಯರು ಕೃಷಿಗೆ ಪ್ರೋತ್ಸಾಹ ನೀಡಲು ಬಂಗಾರದೊಡ್ಡಿ ನಾಲೆಯನ್ನು ನಿರ್ಮಿಸಿದನು. ಶ್ರೀರಂಗಪಟ್ಟಣದಲ್ಲಿ ಒಂದು ಟಂಕಸಾಲೆನ್ನು ಸ್ಥಾಪಿಸಿ, 'ಕಂಠೀರವ ಪಣ' ಎಂಬ ನಾಣ್ಯವನ್ನು ಚಲಾವಣೆಗೆ ತಂದನು. ಧರ್ಮ ಮತ್ತು ಸಾಹಿತ್ಯದ ಪೋಷಕನಾಗಿದ್ದ ಕಂಠೀರವ ನರಸರಾಜ ಒಡೆಯರ್ ಅನೇಕ ದೇವಾಲಯ, ಅಗ್ರಹಾರಗಳಿಗೆ ದಾನ ದತ್ತಿಗಳನ್ನು ನೀಡಿದನು. ಶ್ರೀರಂಗಪಟ್ಟಣದ ಕೋಟೆಯಲ್ಲಿ ನರಸಿಂಹಸ್ವಾಮಿ ದೇವಾಲಯವನ್ನು ಕಟ್ಟಿಸಿದನು. ಇವನ ಆಳ್ವಿಕೆಯಲ್ಲಿ ಗೋವಿಂದ ವೈದ್ಯನು **'ಕಂಠೀರವ ನರಸರಾಜ ವಿಜಯಂ'**, ಭಾಸ್ಕರನ 'ಬೇಹಾರ ಗಣಿತ' ಮತ್ತು ತಿಮ್ಮರಸನ 'ಮಾರ್ಕಂಡೇಯ ಪುರಾಣ', 'ರಾಮಾಯಣ' ಗ್ರಂಥಗಳು ರಚನೆಯಾದವು. ಕಂಠೀರವ ನರಸರಾಜ ಒಡೆಯರಿಗೆ ಮಕ್ಕಳಿರಲಿಲ್ಲವಾದ್ದರಿಂದ ಬೋಳ 4ನೇ ಚಾಮರಾಜ ಒಡೆಯರ್ ಮೊಮ್ಮಗನಾದ ದೊಡ್ಡ ದೇವರಾಜ ಒಡೆಯರ್ ಅಧಿಕಾರಕ್ಕೆ ಬಂದನು.

### 2.2.3.4 ದೊಡ್ಡ ದೇವರಾಜ ಒಡೆಯರ್ (1659–72)

ಇವನ ಕಾಲದಲ್ಲಿ ವಿಜಯನಗರದ ಕೊನೆಯ ದೊರೆ 3ನೇ ಶ್ರೀರಂಗರಾಯ ರಾಜ್ಯ ಕಳೆದುಕೊಂಡು ಬಿದನೂರಿನಲ್ಲಿ ಆಶ್ರಯ ಪಡೆದಿದ್ದನು. ಅವನಿಗೆ ರಾಜ್ಯ ದೊರಕಿಸಿ ಕೊಡುವ ನೆಪದಿಂದ ಕೆಳದಿಯ ಶಿವಪ್ಪನಾಯಕ ಮೈಸೂರಿನ ಮೇಲೆ ದಂಡೆತ್ತಿ ಬಂದಾಗ ದೊಡ್ಡ

ದೇವರಾಜನು ಅವನನ್ನು ಸೋಲಿಸಿ ಹಿಮ್ಮೆಟ್ಟಿಸಿದನು. ನಂತರ ಕುಣಿಗಲ್ಲಿನಿಂದ ಆಳುತ್ತಿದ್ದ ಯಲಹಂಕ ನಾಡಪ್ರಭುಗಳ ಮನೆತನದ ಇಮ್ಮಡಿ ಹಿರಿಯ ಕೆಂಪೇಗೌಡನಿಂದ ಹುಲಿಯೂರುದುರ್ಗ ಮತ್ತು ಕುಣಿಗಲನ್ನು ವಶಪಡಿಸಿಕೊಂಡನು. ಮಧುರೆಯ ಚೊಕ್ಕನಾಥ ನಾಯಕನನ್ನು ಸೋಲಿಸಿ ಈರೋಡ್, ಧಾರಪುರಗಳನ್ನು ವಶಪಡಿಸಿಕೊಂಡನು. ಬಿಜಾಪುರದ ಸುಲ್ತಾನನ ಆಕ್ರಮಣಗಳನ್ನು ಎದುರಿಸಿ ರಾಜ್ಯವನ್ನು ಮಧುಗಿರಿ, ಕೊರಟಗೆರೆಯವರೆಗೆ ವಿಸ್ತರಿಸಿದನು. ಇವರ ಕಾಲದಲ್ಲಿ ಮೈಸೂರು ರಾಜ್ಯವು ಪಶ್ಚಿಮದಲ್ಲಿ ಸಕ್ಕರೆಪಟ್ಟಣದಿಂದ ಪೂರ್ವದಲ್ಲಿ ಸೇಲಂವರೆಗೂ, ಉತ್ತರದಲ್ಲಿ ಚಿಕ್ಕನಾಯಕನಹಳ್ಳಿಯಿಂದ ದಕ್ಷಿಣದಲ್ಲಿ ಕೊಯಮತ್ತೂರಿನವರೆಗೂ ವಿಸ್ತರಿಸಿತ್ತು. ದೇವರಾಜನು ಅನೇಕ ಕೆರೆ ಕೊಳಗಳನ್ನು ಕಟ್ಟಿಸಿದುದಲ್ಲದೆ, ಚಾಮುಂಡಿ ಬೆಟ್ಟಕ್ಕೆ ಸಾವಿರ ಮೆಟ್ಟಿಲುಗಳನ್ನು ಕಟ್ಟಿಸಿದನು. 700ನೇ ಮೆಟ್ಟಿಲ ಬಳಿ ಬೃಹತ್ ನಂದಿ ವಿಗ್ರಹವನ್ನು ಸ್ಥಾಪಿಸಿದನು. ಇವನ ಆಸ್ಥಾನದಲ್ಲಿದ್ದ ಚಾಮಯ್ಯ ಎಂಬ ಕವಿ 'ದೊಡ್ಡ ದೇವರಾಜ ಸಾಂಗತ್ಯ' ಎಂಬ ಕೃತಿಯನ್ನು ರಚಿಸಿದನು. 1671ರಲ್ಲಿ 'ಫ್ಲೇಕನ್' ಎಂಬ ಫ್ರೆಂಚ್ ಪ್ರತಿನಿಧಿಯು ಮೈಸೂರಿನೊಡನೆ ವ್ಯಾಪಾರ ಸಂಪರ್ಕವನ್ನು ಸ್ಥಾಪಿಸಲು ತಲಚೇರಿಯಿಂದ ಶ್ರೀರಂಗಪಟ್ಟಣಕ್ಕೆ ಭೇಟಿ ನೀಡಿದ್ದನು. ಇದರಿಂದ ದೊಡ್ಡದೇವರಾಜ ಒಡೆಯರ್ ಕಾಲದಲ್ಲಿ ಪ್ರಥಮವಾಗಿ ಯುರೋಪಿಯನ್ನರ ಸಂಪರ್ಕವು ಪ್ರಾರಂಭವಾಯಿತು. ದೊಡ್ಡ ದೇವರಾಜ ಒಡೆಯರಿಗೆ ಮಕ್ಕಳಿರಲಿಲ್ಲವಾದ್ದರಿಂದ ಇವರ ಸೋದರನ ಮಗ ಚಿಕ್ಕದೇವರಾಜ ಒಡೆಯರ್ ಪಟ್ಟಕ್ಕೆ ಬಂದನು.

**2.2.3.5 ಚಿಕ್ಕದೇವರಾಜ ಒಡೆಯರ್ (1572–1704)**

ಮೈಸೂರಿನ ಪ್ರಾರಂಭದ ದೊರೆಗಳಲ್ಲಿ ಚಿಕ್ಕದೇವರಾಜ ಒಡೆಯರ್ ಅತ್ಯಂತ ಪ್ರಸಿದ್ಧನೂ, ಸಮರ್ಥನೂ ಆಗಿದ್ದನು. ಇವನು ಚಿಕ್ಕಂದಿನಲ್ಲೆ ಕಲೆ, ಸಾಹಿತ್ಯದ ಬಗ್ಗೆ ಅಪಾರ ಆಸಕ್ತಿಯನ್ನು ಹೊಂದಿದ್ದನು. ಸಾಹಿತ್ಯಕ್ಕೆ ಈತ ನೀಡಿದ ಪ್ರೋತ್ಸಾಹ ಸಾಹಿತ್ಯ ಚರಿತ್ರೆಯಲ್ಲಿ ಇವನಿಗೆ ವಿಶಿಷ್ಠವಾದ ಸ್ಥಾನವನ್ನು ತಂದುಕೊಟ್ಟಿದೆ. ಇವನಿಗೆ 'ಕರ್ನಾಟಕ ಚಕ್ರವರ್ತಿ', 'ಅಪ್ರತಿಮವೀರ', 'ತೆಂಕಣರಾಜ', 'ನವಕೋಟಿನಾರಾಯಣ', 'ಮಹಾರಾಷ್ಟ್ರ ಭೂಪಾಲಜಾಲರಿಪು', 'ರಾಜ ಜಗದೇವ' ಎಂಬ ಬಿರುದುಗಳಿದ್ದವು. ಇವನ ಆಳ್ವಿಕೆಯಲ್ಲಿ ಕರ್ನಾಟಕವು ಸರ್ವತೋಮುಖ ಪ್ರಗತಿಯನ್ನು ಕಂಡಿತು. ರಾಜ್ಯ ವಿಸ್ತರಣೆಯಲ್ಲಿ ಮತ್ತು ಆಡಳಿತ ಕ್ಷೇತ್ರದಲ್ಲಿ ಇವನು ಮಹತ್ಸಾಧನೆ ಮಾಡಿದ್ದಾನೆ. ಇವನು ಜಾರಿಗೆ ತಂದ ಆಡಳಿತ ಸುಧಾರಣೆಗಳು ಚಿರಸ್ಮರಣೀಯವಾಗಿದೆ.

ಚಿಕ್ಕದೇವರಾಜ ಒಡೆಯರು ಅಧಿಕಾರಕ್ಕೆ ಬಂದಾಗ ಮರಾಠರು ದಕ್ಷಿಣ ಭಾರತವನ್ನು ಪ್ರವೇಶಿಸಿ ಬಿಜಾಪುರು ಮತ್ತು ಗೋಲ್ಕೋಂಡ ರಾಜ್ಯಗಳನ್ನು ನಿರ್ನಾಮಮಾಡಿ, ಆ ಪ್ರದೇಶಗಳನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡನು. ಇಂತಹ ಸನ್ನಿವೇಶದಲ್ಲಿ ಅಧಿಕಾರವಹಿಸಿಕೊಂಡ ಚಿಕ್ಕದೇವರಾಜ ಒಡೆಯರ್ ರಾಜ್ಯ ರಕ್ಷಣೆ ಮತ್ತು ವಿಸ್ತರಣೆ ಎರಡೂ ಕಾರ್ಯಗಳನ್ನು ಯಶಸ್ವಿಯಾಗಿ ನೆರವೇರಿಸಿದನು. ಮಧುರೆಯ ಚೊಕ್ಕನಾಯಕನನ್ನು ಸೋಲಿಸಿ ಸೇಲಂ ವಶಪಡಿಸಿಕೊಂಡನು. ಧಾರಪುರ, ಸತ್ಯಮಂಗಲ, ಹರಿಯಲೂರು, ತೊರೆಯೂರು ನಾಯಕರನ್ನು ಸೋಲಿಸಿದನು. ಉತ್ತರದಲ್ಲಿ ತುಮಕೂರು ಮತ್ತು ಹೊಸಕೋಟೆಗಳನ್ನು ವಶಪಡಿಸಿಕೊಂಡನು. ಕೆಳದಿ ಅರಸರಿಂದ ಬಾಣಾವರ, ವಸ್ತಾರೆ ಮತ್ತು ಚಿಕ್ಕಮಗಳೂರುಗಳನ್ನು ವಶಪಡಿಸಿಕೊಂಡನು. 1677ರಲ್ಲಿ ಶಿವಾಜಿಯ ಸೈನ್ಯ ಮೈಸೂರಿನ ಮೇಲೆ ದಾಳಿ ಮಾಡಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಚಿಕ್ಕದೇವರಾಜ ಒಡೆಯರ್ ಆ ಸೈನ್ಯವನ್ನು ಸೋಲಿಸಿ 'ಅಪ್ರತಿಮವೀರ' ಎಂಬ ಬಿರುದನ್ನು ಧರಿಸಿದನು. 1675ರಲ್ಲಿ ವಿಜಾಪುರದ ದಂಡನಾಯಕನನ್ನು ಸೋಲಿಸಿ, ಕೇತ ಸಮುದ್ರ, ಕೈದಾಳ, ತುರುವೇಕೆರೆ, ಚಿಕ್ಕನಾಯಕನಹಳ್ಳಿ, ಹೊನ್ನವಳ್ಳಿ ಪ್ರಾಂತ್ಯಗಳನ್ನು ವಶಪಡಿಸಿಕೊಂಡು ರಾಜ್ಯವನ್ನು ವಿಸ್ತರಿಸಿದನು. ಜಿಂಜಿಯ ಮರಾಠ ಸರದಾರರಾದ ದಾದಾಜಿ ಬಾಲಾಜಿ ಮತ್ತು ನಿಂಬಾಜಿ ಅವರು ಮೈಸೂರಿನ ಮೇಲೆ ದಂಡೆತ್ತಿ ಬಂದರು. ಚಿಕ್ಕದೇವರಾಜ ಒಡೆಯರ್ ಅವರ ವಿರುದ್ಧ ಹೋರಾಡಿ ಅವರನ್ನು ಕೊಂದು ಸೈನ್ಯವನ್ನು ಹಿಮ್ಮೆಟ್ಟಿಸಿನು. ನಂತರ ಶಿವಾಜಿಯ ಮಗ ಸಾಂಬಾಜಿಯನ್ನು ಬಾಣಾವರದ ಬಳಿ ಸೋಲಿಸಿ 'ಮಹಾರಾಷ್ಟ್ರ ಭೂಪಾಲ ಜಾಲರಿಪು' ಎಂಬ ಬಿರುದನ್ನು ಧರಿಸಿದನು. ಇಕ್ಕೇರಿಯ ಅರಸರಿಂದ ಹಾರನಹಳ್ಳಿ, ಕಡೂರು, ಬೇಲೂರು ಮತ್ತು ಹಾಸನಗಳನ್ನು ಗೆದ್ದು ತಮ್ಮ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಚಿಕ್ಕದೇವರಾಜ ಒಡೆಯರ್ ಶಾಹಜಿಯ ಮಗನಾದ ಏಕೋಜಿಯ ಬೆಂಗಳೂರು ಜಾಗೀರಿಗೆ ಸೇರಿದ್ದ ಕೆಂಗೇರಿ, ತ್ಯಾಮಗೊಂಡಲು, ಚಿಕ್ಕಹಳ್ಳಿಗಳನ್ನು ವಶಪಡಿಸಿಕೊಂಡನು. ಸದಾ ತಂಜಾವೂರಿನಲ್ಲೇ ಇರುತ್ತಿದ್ದ ಏಕೋಜಿ ಚಿಕ್ಕದೇವರಾಜ ಒಡೆಯರ ಸತತ ದಾಳಿಗಳಿಗೆ ಬೇಸತ್ತು ಬೆಂಗಳೂರನ್ನು ಒಡೆಯರಿಗೆ ಮಾರಲು ಮಾತುಕತೆ ಆರಂಭಿಸಿದನು. ಆದರೆ ಅವು ಮುಗಿಯುವ ಮುನ್ನವೇ ಮೊಗಲ್ ಫೌಜುದಾರನಾದ ಖಾಸಿಂಖಾನ್ 1687ರಲ್ಲಿ ಬೆಂಗಳೂರನ್ನು ವಶಪಡಿಸಿಕೊಂಡು ಚಿಕ್ಕದೇವರಾಜ ಒಡೆಯರಿಗೆ 3 ಲಕ್ಷಕ್ಕೆ ಮಾರಿಬಿಟ್ಟನು. ಇದರಿಂದ ಚಿಕ್ಕದೇವರಾಜ ಒಡೆಯರ್ ರಾಜ್ಯವು ಪೂರ್ವದಲ್ಲಿ ಬೆಂಗಳೂರು ಸೇಲಂನಿಂದ, ಪಶ್ಚಿಮದಲ್ಲಿ ಚಿಕ್ಕಮಗಳೂರು–ಕೊಡಗಿನವರೆಗೂ, ಉತ್ತರದಲ್ಲಿ ತುಮಕೂರಿನಿಂದ, ದಕ್ಷಿಣದಲ್ಲಿ ಪಳನಿ–ಆನೆಮಲೈವರೆಗೂ ವಿಸ್ತರಿಸಿತ್ತು. ದೆಹಲಿಯ ಮೊಗಲ್ ಸಾಮ್ರಾಟ ಔರಂಗಜೇಬನು ಒಡೆಯರಿಗೆ 'ರಾಜಾ ಜಗದೇವ' ಎಂಬ ಬಿರುದನ್ನು

ನೀಡದ್ದಲ್ಲದೆ, ಸ್ನೇಹದ ಕುರುಹಾಗಿ ಒಂದು ದಂತದ ಕಿರೀಟವನ್ನು ಉಡುಗೊರೆಯಾಗಿ ನೀಡಿದನು. ಇದರಿಂದ ಮೈಸೂರು ರಾಜ್ಯಕ್ಕೆ ವೈರಿಗಳ ದಾಳಿ ಕಡಿಮೆಯಾಯಿತು.

**ಆಡಳಿತ ಸುಧಾರಣೆ:** ಚಿಕ್ಕದೇವರಾಜ ಒಡೆಯರು ರಾಜ್ಯದಲ್ಲಿ ಆಡಳಿತಕ್ಕೆ ಅನುಕೂಲವಾಗಲು ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ 84 ವಿಭಾಗಗಳನ್ನಾಗಿ ವಿಂಗಡಿಸಿದ್ದು, ಒಂದೊಂದು ವಿಭಾಗದಲ್ಲಿಯೂ ಸುಬೇದಾರ, ಶಿರಸ್ತೆದಾರ, ಶ್ಯಾನಬೋಗ, ಓಲೆಕಾರ ಮೊದಲಾದ ಅಧಿಕಾರಿಗಳಿದ್ದರು. ರಾಜ್ಯದ ವ್ಯವಸ್ಥಿತ ಆಡಳಿತ ನಿರ್ವಹಣೆಗಾಗಿ 18 ಶಾಖೆಗಳನ್ನೊಳಗೊಂಡ (ಮೊಗಲರ ರಾಜ್ಯ ಪದ್ಧತಿಯ ಮೂಲದ) 'ಅಠಾರ ಕಛೇರಿ' ಎಂಬ ಕೇಂದ್ರಾಡಳಿತ ಕಛೇರಿಯನ್ನು ಸ್ಥಾಪಿಸಿದನು. ಎಲ್ಲಾ ಇಲಾಖೆಗಳ ಕಛೇರಿಯು ಒಂದೇ ಕಟ್ಟಡದಲ್ಲಿದ್ದವು. ಈ ಕಟ್ಟಡವನ್ನು 'ಅಠಾರ ಕಛೇರಿ' ಎಂದು ಕರೆಯುತ್ತಿದ್ದರು. ತೂಕ ಮತ್ತು ಅಳತೆಯಲ್ಲಿ ನಿಖರತೆಯನ್ನು ತಂದು ರಾಜ್ಯದಲ್ಲಿ ನಿಯಂತ್ರಿತ ಮಾರುಕಟ್ಟೆಗಳನ್ನು ಸ್ಥಾಪಿಸಿ, ವಾಣಿಜ್ಯ–ವ್ಯಾಪಾರದಲ್ಲಿ ಸುಧಾರಣೆಯನ್ನು ತಂದನು. ಬೆಂಗಳೂರನ್ನು ಕೈಗಾರಿಕ ನಗರವನ್ನಾಗಿ ಮಾಡಲು ಸುಮಾರು 12,000 ಮಂದಿ ನೇಯ್ಗೆಯವರನ್ನು ಬೆಂಗಳೂರಿನಲ್ಲಿ ನೆಲೆಗೊಳಿಸಿ, ಅವರ ಉತ್ಪಾದನೆಯ ವಸ್ತುಗಳ ರಫ್ತಿಗೂ ಸೂಕ್ತಕ್ರಮ ಕೈಗೊಂಡನು.

**ಕೃಷಿ ಅಭಿವೃದ್ದಿ ಮತ್ತು ಸುಂಕ ವ್ಯವಸ್ಥೆ:** ಕೃಷಿ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು ಕಾವೇರಿ ನದಿಗೆ ಅಣೆಕಟ್ಟೆಯನ್ನು ನಿರ್ಮಿಸಿ ಚಿಕ್ಕದೇವರಾಜ ನಾಲೆ ಮತ್ತು ದೊಡ್ಡದೇವರಾಜ ನಾಲೆ ಎಂಬ ಕಾಲುವೆಗಳನ್ನು ತೋಡಿಸಿ, ವ್ಯವಸಾಯಕ್ಕೆ ಅನುಕೂಲ ಮಾಡಿಕೊಟ್ಟರು. ಕಟ್ಟುನಿಟ್ಟಿನ ಆರ್ಥಿಕ ನೀತಿಯನ್ನು ಅನುಸರಿಸಿದ ಚಿಕ್ಕದೇವರಾಜ ಒಡೆಯರ್ ಎಲ್ಲಾ ಸರಕುಗಳ ಮೇಲೂ ಸುಂಕವನ್ನು ವಿಧಿಸಿ, ವಸೂಲಿ ಮಾಡಲು ರಾಜ್ಯದಾದ್ಯಂತ ಸುಂಕದ ಕಟ್ಟೆಗಳನ್ನು ಸ್ಥಾಪಿಸಿದನು. ರಾಜ್ಯದ ಆದಾಯದ ಪ್ರಮುಖ ತೆರಿಗೆಗಳೆಂದರೆ– ಆಮದು ಮತ್ತು ರಫ್ತು ಸುಂಕ, ವೃತ್ತಿ ತೆರಿಗೆ, ಭೂ ಕಂದಾಯ, ಮನೆಕಂದಾಯ, ವಿವಾಹ ತೆರಿಗೆ ಮುಂತಾದವು. ಇದರಿಂದ 7 ಲಕ್ಷ ಹಣ ಸಂದಾಯವಾಗುತ್ತಿತ್ತು.

**ದುಬಾರಿ ಭೂಕಂದಾಯ**: ಭೂಕಂದಾಯ ಪದ್ಧತಿಯನ್ನು ಸುಧಾರಿಸಿ ಭೂಮಿಯನ್ನು ಅಳತೆ ಮಾಡಿ ಅದರ ಉತ್ಪಾದನೆಗೆ ಅನುಗುಣವಾಗಿ ಕಂದಾಯವನ್ನು ನಿಗಧಿಗೊಳಿಸಿದನು. ರೈತರು ತಮ್ಮ ವಾರ್ಷಿಕ ಉತ್ಪಾದನೆಯ 1/3 ಭಾಗದಷ್ಟು ಕಂದಾಯವನ್ನು ಸರ್ಕಾರಕ್ಕೆ ನೀಡಬೇಕಾಗಿತ್ತು. ಕಂದಾಯದ ಅಧಿಕಾರಿಗಳ ಮೇಲೆ ಕಟ್ಟುನಿಟ್ಟಿನ ಕ್ರಮವನ್ನು ಕೈಗೊಂಡು ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಿದನು. ಅಧಿಕಾರಿಗಳಿಗೆ ವೇತನವನ್ನು ಅರ್ಧ ಧಾನ್ಯದ ರೂಪದಲ್ಲಿಯೂ ಅರ್ಧ ಹಣದ

ರೂಪದಲ್ಲಿಯೂ ನೀಡಲಾಗುತ್ತಿತ್ತು. ಅಧಿಕ ತೆರಿಗೆ ಹೊರೆಯಿಂದಾಗಿ 1682ರಲ್ಲಿ ನಂಜನಗೂಡು ರೈತರು ದಂಗೆ ಎದ್ದರು. ಜಂಗಮರು ಈ ದಂಗೆಗೆ ಬೆಂಬಲ ನೀಡಿದರು. ಇದೇ ಕಾರಣಕ್ಕಾಗಿ 300 ಜಂಗಮರನ್ನು ಹತ್ಯೆ ಮಾಡಿಸಿದನು.

ವ್ಯವಸ್ಥಿತ ತೆರಿಗೆ ವಸೂಲಿ, ಆಡಳಿತದಲ್ಲಿ ಮಿತವ್ಯಯ ವೆಚ್ಚವನ್ನು ಮಾಡಿ ರಾಜ್ಯದ ಸಂಪತ್ತನ್ನು ವೃದ್ಧಿಪಡಿಸಿದನು. ಅರ್ಥಸಚಿವ ಊಟದ ವೇಳೆಗೆ 2000 ಪಗೋಡಗಳನ್ನು ತಂದು ಖಜಾನೆಗೆ ತುಂಬಿಸದ ಹೊರತು ಊಟಕ್ಕೆ ಹೋಗುತ್ತಿರಲಿಲ್ಲ. 9 ಕೋಟಿಗಳಷ್ಟು ಅಪಾರ ಸಂಪತ್ತನ್ನು ಸಂಗ್ರಹಿಸಿ 'ನವಕೋಟಿ ನಾರಾಯಣ' ಎಂಬ ಬಿರುದಿಗೆ ಪಾತ್ರನಾದನು.

ಚಿಕ್ಕದೇವರಾಜ ಒಡೆಯರ್ ವಿಜಯನಗರದವರ ಉದಾರ ಧಾರ್ಮಿಕ ನೀತಿಯನ್ನೇ ಅನುಸರಿಸಿಕೊಂಡು ಬಂದನು. ವೈಷ್ಣವ ಮತಾವಲಂಬಿಯಾಗಿದ್ದ ಒಡೆಯರ್ ಎಲ್ಲಾ ಮತ ಧರ್ಮಗಳಿಗೂ ಸಮಾನ ಪ್ರೋತ್ಸಾಹ ನೀಡಿದನು. ಇವನಿಗೆ 'ಶ್ರೀವೈಷ್ಣವ ಮತ ಪ್ರತಿಷ್ಠಾಪಕ', 'ಸತ್‌ಶ್ರೀ ವೈಷ್ಣವ ಪ್ರಿಯ' ಎನ್ನುವ ಬಿರುದುಗಳಿದ್ದವು. ಬೆಂಗಳೂರಿನಲ್ಲಿ ಶಿಥಿಲವಾಗಿದ್ದ ಶೈವದೇವಾಲಯವನ್ನು ವೆಂಕಟರಮಣ ದೇವಾಲಯವಾಗಿ ಮಾಡಿದನು. ಶ್ರೀರಂಗಪಟ್ಟಣದಲ್ಲಿ ವರಾಹಸ್ವಾಮಿ ದೇವಾಲಯಗಳನ್ನು ನಿರ್ಮಿಸಿ, ಅವುಗಳಿಗೆ ದಾನ ದತ್ತಿಗಳನ್ನು ನೀಡಿದನು. ಶ್ರವಣಬೆಳಗೊಳಕ್ಕೆ ಭೇಟಿ ನೀಡಿ, ಮಹಾಮಸ್ತಕಾಭಿಷೇಕವನ್ನು ವೀಕ್ಷಿಸಿ, ಜೈನ ಯಾತ್ರಿಕರ ಸೌಕರ್ಯಕ್ಕಾಗಿ ಒಂದು ಕೊಳವನ್ನು ನಿರ್ಮಿಸಿದನು. ಸಾಮಾಜಿಕ ಕಳಕಳಿ ಹೊಂದಿದ್ದ ಚಿಕ್ಕದೇವರಾಜನು ಅನೇಕ ಅಗ್ರಹಾರಗಳನ್ನು ಮತ್ತು ಅನ್ನಛತ್ರಗಳನ್ನು ನಿರ್ಮಿಸಿದನು. ಇದರಿಂದಾಗಿ ಜನರು ಇವನನ್ನು 'ಧರ್ಮಪ್ರಭು' ಎಂದು ಕರೆಯುತ್ತಿದ್ದರು. ಯಲಹಂಕ ನಾಡಪ್ರಭು ಕೆಂಪೇಗೌಡ ಸಹ 'ಧರ್ಮಪ್ರಭು' ಎಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದನ್ನು ಇಲ್ಲಿ ಸ್ಮರಿಸಬಹುದು.[36] ಹೀಗೆ ಚಿಕ್ಕದೇವರಾಜ ಒಡೆಯರ್ ಮಹಾಯೋಧನಾಗಿ, ಉತ್ತಮ ಆಡಳಿತಗಾರನಾಗಿ, ಧರ್ಮ ಮತ್ತು ಸಾಹಿತ್ಯದ ಪೋಷಕನಾಗಿ ಕರ್ನಾಟಕದ ಸಂಸ್ಕೃತಿಗೆ ಅಪಾರ ಸೇವೆ ಸಲ್ಲಿಸಿದ್ದಾನೆ. ಸುಮಾರು 32 ವರ್ಷಗಳ ಕಾಲ ಯಶಸ್ವಿ ರಾಜ್ಯಭಾರ ಮಾಡಿದ ಚಿಕ್ಕದೇವರಾಜ ಒಡೆಯರ್ 1704ರಲ್ಲಿ ಮರಣ ಹೊಂದಿದನು. ಇವನ ನಂತರ ಇವನ ಮಗ 2ನೇ ಕಂಠೀರವ ನರಸರಾಜ ಒಡೆಯರ್ ಅಧಿಕಾರಕ್ಕೆ ಬಂದನು.

### 2.2.3.6 ಚಿಕ್ಕದೇವರಾಜ ಒಡೆಯರ್ ನಂತರದ ಅರಸರು

ಚಿಕ್ಕದೇವರಾಜನ ನಂತರ ಮೈಸೂರಿನ ಸಿಂಹಾಸನವನ್ನೇರಿದ ರಾಜರು ಅಸಕ್ತರು, ಅಸಮರ್ಥರೂ ಆಗಿದ್ದರಿಂದ ಒಡೆಯರ್ ಆಳ್ವಿಕೆಯ ಅವನತಿಗೆ ಕಾರಣವಾಯಿತು. ಇದರ ಲಾಭ

ಪಡೆದ ದಳವಾಯಿಗಳು ಪ್ರಬಲರಾದರು. ಇದರಿಂದ 1704ರಿಂದ 1761ರವರೆಗಿನ ಕಾಲವನ್ನು 'ದಳವಾಯಿಗಳ ಕಾಲ' ಎಂದೇ ಕರೆಯಲಾಗುತ್ತದೆ. ಚಿಕ್ಕದೇವರಾಜ ಒಡಯರ್ ಮರಣದ ನಂತರ ಇವರ ಮಗ 2ನೇ ಕಂಠೀರವ ನರಸರಾಜ ಒಡೆಯರ್ ಅಧಿಕಾರಕ್ಕೆ ಬಂದನು. ಇವನು ಕಿವುಡನೂ, ಮೂಕನೂ ಆಗಿದ್ದರಿಂದ ಕೇವಲ ಸನ್ನೆಗಳ ಮೂಲಕ 10 ವರ್ಷಗಳವರೆಗೆ ರಾಜ್ಯಭಾರ ಮಾಡಿದನು. ಇವನ ಕಾಲದಲ್ಲಿ ಮೇಲುಕೋಟೆಯ ಬಿಂದು ಮಾಧವ ದೇವಾಲಯ ನಿರ್ಮಾಣವಾಯಿತು.

ಇವನ ನಂತರ ಇವನ ಮಗ ದೊಡ್ಡ ಕೃಷ್ಣರಾಜ ಒಡೆಯರ್ ಅಧಿಕಾರಕ್ಕೆ ಬಂದನು. 1717ರಿಂದ 1732ರವರೆಗೆ ರಾಜ್ಯಭಾರ ನಡೆಸಿದನು. ಇವನು ಅಸಮರ್ಥನಾಗಿದ್ದರಿಂದ ದಳವಾಯಿಗಳು ಪ್ರಬಲರಾದರು. ಮೈಸೂರು ರಾಜ್ಯದ ಮೇಲೆ ಹೈದರಾಬಾದ್ ನಿಜಾಮ, ಅರ್ಕಾಟಿನ ನವಾಬ, ಮುರಾರಿರಾವ್ ಘೋರ್ಪಡೆ ದಾಳಿ ಮಾಡಿದನು. ಈ ದಾಳಿಯನ್ನು ಎದುರಿಸಲಾಗದೆ ದೊಡ್ಡ ಕೃಷ್ಣರಾಜ ಒಡೆಯರ್ ಅವರಿಗೆ ಒಂದು ಕೋಟಿ ರೂ.ಗಳನ್ನು ಕಪ್ಪಕಾಣಿಕೆಯಾಗಿ ನೀಡಿದನು. 1732ರಲ್ಲಿ ಪೇಶ್ವೆ 1ನೇ ಬಾಜೀರಾವ್ ಮೈಸೂರು ರಾಜ್ಯಕ್ಕೆ ದಾಳಿ ಮಾಡಿ 21 ಲಕ್ಷ ರೂಪಾಯಿ 'ಚೌತ್'ಸಂಗ್ರಹಿಸಿದನು. ಈ ರಾಜನ ಒಂದು ಪ್ರಮುಖ ಸಾಧನೆಯೆಂದರೆ ಮಾಗಡಿಯನ್ನು ಗೆದ್ದು, ಮೈಸೂರು ರಾಜ್ಯಕ್ಕೆ ಸೇರಿಸಿಕೊಂಡದ್ದು ಇವರ ಮರಣದ ನಂತರ 7ನೇ ಚಾಮರಾಜ ಒಡೆಯರ್ ಅಧಿಕಾರಕ್ಕೆ ಬಂದರು. ಇವರು 1734ರಲ್ಲಿ ಮರಣ ಹೊಂದಿದರು. ರಾಣಿ ದೇವಾಜಮ್ಮಣ್ಣಿ ತಮ್ಮ ದತ್ತುಪುತ್ರನಾದ 2ನೇ ಕೃಷ್ಣರಾಜ ಒಡೆಯರಿಗೆ ಪಟ್ಟಕಟ್ಟಿಸಿದಳು. ಇವನು ಹೆಸರಿಗೆ ಮಾತ್ರ ಅರಸನಾಗಿದ್ದು, ಪೂರ್ಣ ಆಡಳಿತವು ದಳವಾಯಿ ದೇವರಾಜಯ್ಯ ಮತ್ತು ನಂಜರಾಜಯ್ಯನ ಕೈಸೇರಿತು. ಇವರ ಕಾಲದಲ್ಲಿಯೇ ಹೈದರಾಲಿ ಮೈಸೂರು ಸೇನೆಯಲ್ಲಿ ಸೇರಿ, ಬಹುಬೇಗ ಬೆಳಕಿಗೆ ಬಂದನು. ಕ್ರಿ.ಶ. 1758ರಲ್ಲಿ ದಳವಾಯಿ ಮರಣ ಹೊಂದಲಾಗಿ ಆ ಹುದ್ದೆಗೆ ಹೈದರನನ್ನು ನೇಮಿಸಿಕೊಳ್ಳಲಾಯಿತು. 2ನೇ ಕೃಷ್ಣರಾಜ ಒಡೆಯರ್ ನಂತರ ಅವನ ಮಗ ನಂಜರಾಜನು 1760ರಲ್ಲಿ ಅಧಿಕಾರಕ್ಕೆ ಬಂದನು. ಇವನು ಅಸಮರ್ಥನಾಗಿದುದ್ದರಿಂದ ಹೈದರನೇ ಮೈಸೂರು ರಾಜ್ಯದ ಅಧಿಕಾರ ವಹಿಸಿಕೊಂಡನು. ಇದರಿಂದ ಒಡೆಯರ್ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ಹೆಸರಿಗೆ ಮಾತ್ರ ಅರಸರಾಗಿ ಮುಂದುವರಿಯುವ ಪರಿಸ್ಥಿತಿ ಬಂದಿತು.

### 2.2.4 ಆವತಿನಾಡ ಪ್ರಭುಗಳು

ನಂದಿಬೆಟ್ಟದ ಪರಿಸರವನ್ನು ತಮ್ಮ ಆಳ್ವಿಕೆಗೆ ಒಳಪಡಿಸಿದ ಆವತಿನಾಡ ಪ್ರಭುಗಳು ಮೂಲತಃ ಯಲಹಂಕನಾಡ ಪ್ರಭುಗಳು, ಸುಗಟೂರುನಾಡ ಪ್ರಭುಗಳು ಮತ್ತು ಮಧುಗಿರಿ ಮಹಾನಾಡ ಪ್ರಭುಗಳ ವಂಶಸ್ಥರಾಗಿದ್ದಾರೆ. ಈ ಮನೆತನಗಳ ಮೂಲಪುರುಷ ಒಬ್ಬನೇ ಆಗಿದ್ದು, ಅವನನ್ನು ರಣಭೈರೇಗೌಡನೆಂದು ಗುರುತಿಸಲಾಗುತ್ತದೆ. ಇವರ ಮೂಲದ ಬಗೆಗೆ ಪಿ.ವಿ. ಕೃಷ್ಣಮೂರ್ತಿ ಅವರು ದಾಖಲಿಸುವ ಪ್ರಕಾರ: "ಅವನು (ರಣಭೈರೇಗೌಡ) ಮತ್ತು ಅವನ ಸೋದರರು ದುಷ್ಟನಾದ ಸ್ಥಳೀಯ ಪಾಳೆಯಗಾರಿನಿಗೆ ತಮ್ಮ ಪತ್ರಿಯಾದ ಭೈಯಮ್ಮ ಎಂಬುವವಳನ್ನು ವಿವಾಹ ಮಾಡಿಕೊಡಲು ನಿರಾಕರಿಸಿ ಊರನ್ನು ಬಿಟ್ಟು ಪಾಲಾರು ನದಿಯನ್ನು ದಾಟಿ ಪೂರ್ವಕ್ಕೆ ಸಾಗಿ ಆವತಿ ಎಂಬಲ್ಲಿ ಬಂದು ನೆಲೆಸಿದರೆಂದು, ಕಾಲಾಂತರದಲ್ಲಿ ಅವರಿಗೆ ಗುಪ್ತನಿಧಿ ದೊರಕಲು ಕೋಟೆ ಕೊತ್ತಲಗಳನ್ನು ಕಟ್ಟಿಕೊಂಡು ನೆರೆ–ಹೊರೆಯ ಪ್ರದೇಶಗಳ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಿದರೆಂದು ಅನಂತರದಲ್ಲಿ ಆ ಸೋದರರು, ಎಲಹಂಕ, ಸುಗುಟೂರು,ಆವತಿ ಮುಂತಾದೆಡೆಗಳಲ್ಲಿ ಪ್ರತ್ಯೇಕ ರಾಜ್ಯಗಳನ್ನು ಕಟ್ಟಿಕೊಂಡು ಆಳತೊಡಿಗಿದರೆಂಬ ಐತಿಹ್ಯ ಹೆಚ್ಚು ಪ್ರಚಲಿತವಿದೆ"[37] ಒಂದೇ ಮೂಲಕ್ಕೆ ಸೇರಿದ್ದರಿಂದ ಇದೇ ರೀತಿಯ ಐತಿಹ್ಯ ಯಲಹಂಕನಾಡ ಪ್ರಭುಗಳ ಹಿನ್ನೆಲೆಯ ಬಗೆಗೂ ಇರುವುದು ಸಹಜವೇ ಆಗಿದೆ. ಆದರೆ ಅಲ್ಲಿ ರಣಭೈರೇಗೌಡನ ಮಗಳು ಹೆಸರು ದೊಡ್ಡಮ್ಮನ ಬದಲು ಭೈಯಮ್ಮ ಎಂದು ಪಿ.ವಿ. ಕೃಷ್ಣಮೂರ್ತಿಯವರು ಹೇಳಿದ್ದಾರೆ. ಭೈಯಮ್ಮನ ಐತಿಹ್ಯ ಕೂಡ ದೊಡ್ಡಮ್ಮನ ಐತಿಹ್ಯದಂತೆಯೇ ಇರುವ ಗುಮ್ಮನಾಯಕನಪಾಳ್ಯವನ್ನು ಆಳಿದ ರೆಡ್ಡಿಗಳ ಮೂಲದ ಮೋಪುರಪ್ಪ ಒಕ್ಕಲಿನವರ ವಲಸೆಯ ಕಥನದಲ್ಲಿ ಇದನ್ನು ಕಾಣಬಹುದಾಗಿದೆ.[38] ಯಲಹಂಕ ನಾಡಪ್ರಭುಗಳ ಮನೆತನದ ಮೂಲಪುರುಷ ರಣಭೈರೇಗೌಡನೆಂದು ಹೇಳುವುದರಿಂದ ಮಗಳು ದೊಡ್ಡಮ್ಮನೇ ಆಗಿರುತ್ತಾಳೆ. ಹೀಗೆ ಅನೇಕ ಐತಿಹ್ಯಗಳು ಇವೆಯಾದರೂ ಇವುಗಳನ್ನು ಐತಿಹಾಸಿಕ ಸಂಗತಿಗಳಾಗಿ ಒಪ್ಪಲು ಆಧಾರಗಳ ಕೊರತೆ ಇದೆ.

ಶಾಸನಗಳ ಆಧಾರದ ಹಿನ್ನೆಲೆಯಲ್ಲಿ ಈ ಮನೆತನದ ಚರಿತ್ರೆಯನ್ನು ಅರಿಯುವುದಾದರೆ, ಆವತಿನಾಡ ಪ್ರಭುಗಳ ಬಗೆಗೆ ದೊರಕುವ ಮೊದಲ ಶಾಸನ ಎಂದರೆ, ಕ್ರಿ.ಶ. 1428ರ ಕಾಲಕ್ಕೆ ಸೇರಿದ ಚಿಕ್ಕಬಳ್ಳಾಪುರ ತಾಲ್ಲೂಕಿನ ಕುಡುವತಿಯ ತಾಮ್ರಶಾಸನವಾಗಿದೆ.[39] ಇದರಲ್ಲಿ ಕುಲದೈವ ಭೈರವ, ಮನೆದೇವರು ಕರಗದಮ್ಮ ಎಂದು ಹೇಳಿಕೊಂಡಿದ್ದಾರಲ್ಲದೆ, ವಂಶಪರಂಪರೆಯನ್ನು ಹೇಳಿಕೊಂಡಿದ್ದಾರೆ. ಆ ಪ್ರಕಾರವಾಗಿ, ಮೂಲ ಪುರುಷ ಮರಿಭೈರೇಗೌಡ; ಅವನ ನಂತರ

ಅವನ ಮಗ ಮಾರೇಗೌಡ; ಅವನ ಮಗ ಶ್ರೀಮಹಾವತಿ ನಾಡುಪ್ರಭು ದೊಡ್ಡ ಬೈರೇಗೌಡ; ಅವನ ಮಗ ಕಾರೇಪುರ ಬೈರೆಭೂಪಾಲ. ಈತನು ಕಾರೇಪುರಕ್ಕೆ ಒಳಪಟ್ಟ ಕುಡುವತಿ ಗ್ರಾಮವನ್ನು ಶಿವರಾತ್ರಿ ನಂತರ ಆಚಾರ್ಯ ಪೂಜೆಗೆಂದು ಕುಡುವತಿ ಗ್ರಾಮದ ಸಮಸ್ತ ಆದಾಯ ಮತ್ತು ಬೆಳೆಯನ್ನು ನಂದಿಶ್ವರ ಗುರುಕ್ಕಳ್ ಎಂಬುವರಿಗೆ ದತ್ತಿಬಿಟ್ಟ ಸಂಗತಿಯನ್ನು ಸದರಿ ಶಾಸನವು ತಿಳಿಸುತ್ತದೆ.

ಈ ಮನೆತನದ ಮೂಲ ಪುರುಷನಾದ ಮರಿಭೈರೇಗೌಡನೇ ರಣಭೈರೇಗೌಡನ ಸೋದರನಾದ ಮಲ್ಲಭೈರೇಗೌಡನೆಂದು ಹೇಳಲಾಗುತ್ತದೆ. ಮಲ್ಲಭೈರೇಗೌಡನು ದೇವನಹಳ್ಳಿ ಮತ್ತು ದೊಡ್ಡಬಳ್ಳಾಪುರವನ್ನು ಸ್ಥಾಪಿಸಿದನೆಂದು ಹೇಳಲಾಗುತ್ತದೆ. ಈ ಬಗ್ಗೆ ಐತಿಹ್ಯಗಳಿವೆ. ಒಂದು ಐತಿಹ್ಯದ ಪ್ರಕಾರ– ಮಲ್ಲಭೈರೇಗೌಡನು ಒಮ್ಮೆ ಬಳ್ಳಾಪುರದ ಬಳಿ ಬೇಟೆಯಾಡುವಾಗ ಅಲ್ಲಿದ್ದ ಹುತ್ತಕ್ಕೆ ಒಂದು ಹಸು ಒಂದು ಬಳ್ಳದಷ್ಟು ಹಾಲು ಸುರಿಸುವುದನ್ನು ಕಂಡು ಅಚ್ಚರಿಗೊಂಡನಂತೆ. ಭಗವಾನ್ ಆದಿನಾರಾಯಣನು ಮಧ್ಯರಾತ್ರಿ ಭೈರೇಗೌಡನಿಗೆ ಸ್ವಪ್ನದಲ್ಲಿ ಪ್ರತ್ಯಕ್ಷನಾಗಿ ಆ ಹುತ್ತದಲ್ಲಿ ತಾನೇ ನೆಲೆಸಿರುವುದಾಗಿ ತಿಳಿಸಿದ. ಇದನ್ನು ಕೇಳಿದ ಮಲ್ಲಭೈರೇಗೌಡನು ಸ್ವಲ್ಪ ಕಾಲದೊಳಗೆ ಅಲ್ಲಿ ಒಂದು ಗುಡಿ ಮತ್ತು ಕೋಟೆಯನ್ನು ಕಟ್ಟಿಸಿ ಪೇಟೆಯನ್ನು ನಿರ್ಮಿಸಿದ.[40]

ಮಲ್ಲಭೈರೇಗೌಡನಿಂದ ಸ್ಥಾಪನೆಯಾದ ಬಳ್ಳಾಪುರಕ್ಕೂ, ಕೆಂಪೇಗೌಡನಿಂದ ಸ್ಥಾಪನೆಯಾದ ಆಧುನಿಕ ಬೆಂಗಳೂರಿಗೂ ರಚನೆಯಲ್ಲಿ ಸಾಕಷ್ಟು ಸಾಮ್ಯತೆಗಳಿವೆ. ಇತಿಹಾಸಕಾರ ಎಸ್. ವೆಂಕಟೇಶ್ ಅವರ ದಾಖಲಿಸುವಂತೆ: "ಮಲ್ಲಭೈರೇಗೌಡನು ಬಳ್ಳಾಪುರ ಸ್ಥಾಪಿಸಿದ ನಂತರ ಇಲ್ಲಿ ಅನೇಕ ಪೇಟೆಗಳನ್ನು ಸ್ಥಾಪಿಸಿದ್ದಲ್ಲದೆ ಸುತ್ತಲಿನ ಬೇಸಾಯಗಾರರು, ವ್ಯಾಪಾರಿಗಳು, ಶಿಲ್ಪಿಗಳು, ಕಟ್ಟಡ ನಿರ್ಮಾಣಕಾರರು, ಕಲಾವಿದರು ಮತ್ತಿತರ ಕಸುಬುದಾರರಿಗೆ ಇಲ್ಲಿ ಬಂದು ನೆಲೆಸಲು ಆಹ್ವಾನಿಸಿದನು. ಹೊರಗಡೆಯಿಂದ ವಲಸೆ ಬಂದ ಜನರಿಗೆ ಹೊಸಪಟ್ಟಣದಲ್ಲಿ ನಿವೇಶನಗಳನ್ನು ನೀಡಲಾಯಿತು. ಅವರವರ ವೃತ್ತಿಗನುಸಾರವಾಗಿ ಪೇಟೆಗಳನ್ನು ವಿಂಗಡಿಸಿ, ಅವರಿಗೆ ಎಲ್ಲಾ ಅನುಕೂಲಗಳನ್ನು ಮಾಡಿಕೊಟ್ಟನು. ಅಂದು ಅವನಿಂದ ಸ್ಥಾಪಿತವಾದ ಮತ್ತು ಹೆಸರಿಡಲದ ಅನೇಕ ಪೇಟೆ ಮತ್ತು ಬೀದಿಗಳ ಹೆಸರುಗಳು ಇಂದಿಗೂ ಚಾಲ್ತಿಯಲ್ಲಿವೆ. ಉದಾ.: ಕುಂಬಾರಪೇಟೆ, ಗಾಣಿಗರಪೇಟೆ, ಎಲೇಪೇಟೆ, ವಡ್ಡರಪೇಟೆ, ಕಲ್ಲುಪೇಟೆ, ನೇಕಾರರ ಬೀದಿ, ಸುಣ್ಣಕಲ್ಲುಬೀದಿ, ಶ್ರೇಣಿಗರಪೇಟೆ, ತಿಗಳರಪೇಟೆ, ಆಚಾರಬೀದಿ, ಶೆಟ್ಟರಬೀದಿ, ಬ್ರಾಹ್ಮಣರಬೀದಿ ಇನ್ನು ಅನೇಕ ವೃತ್ತಿಗನುಸಾರವಾಗಿ ಪೇಟೆಗಳು ನಿರ್ಮಾಣವಾದವು".[41] ವಿಜಯನಗರದ

ಕೃಷ್ಣದೇವರಾಯ ಮತ್ತು ಅಚ್ಯುತರಾಯನ ಸಮಕಾಲೀನನಾಗಿದ್ದನು. ಮಲ್ಲಭೈರೇಗೌಡನ ನಂತರ ಅವನ ಸೋದರ ಹಾವಳಿ ಬೈರೇಗೌಡನು ಅಧಿಕಾರಕ್ಕೆ ಬಂದನು.

### 2.2.4.1 ಹಾವಳಿ ಬೈರೇಗೌಡ

ಈತನು ಮನೆತನದ ಪ್ರಸಿದ್ಧ ದೊರೆ. ನಂದಿ ಸಮೀಪದ ಕಾರೇಪುರದಿಂದ ಆಳುತ್ತಿದ್ದನು. ಇವನು ವಿಜಯನಗರದ ಅರವೀಡು ಮನೆತನಕ್ಕೆ ಸೇರಿದ ದೊರೆ ಇಮ್ಮಡಿ ವೆಂಕಟಪತಿರಾಯನ ಸಮಕಾಲೀನ. ಅವನ ಅಧೀನ 77 ಪಾಳೆಯಗಾರರಲ್ಲಿ ಒಬ್ಬನಾಗಿದ್ದನೆಂದು ಶಾಸನ ಮತ್ತು ಸಾಹಿತ್ಯಗಳಿಂದ ತಿಳಿದುಬರುತ್ತದೆ. ಮಹತ್ವಾಕಾಂಕ್ಷಿಯೂ, ಪರಾಕ್ರಮಿಯೂ ಆದ ಈತನು ಪೆನುಗೊಂಡೆಯಿಂದ ಆಳುತ್ತಿದ್ದ ವಿಜಯನಗರದ ಅರಸ ಇಮ್ಮಡಿ ವೆಂಕಟಪತಿರಾಯ (ಕ್ರಿ.ಶ. 1586–1614) ಅಧಿಕಾರಕ್ಕೆ ಬಂದ ಆರಂಭದಲ್ಲಿ ಸ್ವತಂತ್ರ ಘೋಷಿಸಿಕೊಂಡನು. ಹೊಳವನಹಳ್ಳಿಯ ರಣಭೈರೇಗೌಡನಿಗೂ ಬಿಜ್ಜಾವರದ ಮಹಾನಾಡಪ್ರಭು ಇಮ್ಮಡಿ ಚಿಕ್ಕಪ್ಪಗೌಡ (ಇಮ್ಮಡಿ ಚಿಕ್ಕಭೂಪಾಲ)ನಿಗೂ ಯುದ್ಧ ಸಂಭವಿಸಿದಾಗ ಸಮಯ ಸಾಧಿಸಿ, ಚಿಕ್ಕಪ್ಪಗೌಡನ ವಶದಲ್ಲಿದ್ದ ಮಿಡಿಗೇಶಿಯನ್ನು ಹಾವಳಿ ಭೈರೇಗೌಡ ವಶಪಡಿಸಿಕೊಂಡನು. ಅಲ್ಲದೆ, ಇಮ್ಮಡಿ ವೆಂಕಟಪತಿರಾಯನು ಪಾವಗಡ ಸುತ್ತಮುತ್ತಲಿದ್ದ ಪಂಜುಗಳ್ಳರ ಹಾವಳಿಯನ್ನು ನಿಯಂತ್ರಿಸಿ, ಅಪೂರ್ಣಗೊಂಡಿದ್ದ ಪಾವಗಡದ ಕೋಟೆಯನ್ನು ಪೂರ್ಣಗೊಳಿಸಲು ಹೋಗಿದ್ದನು.[42] ಇದೇ ಸಮಯದಲ್ಲಿ ಪೆನುಗೊಂಡೆಗೆ ಮುತ್ತಿಗೆ ಹಾಕಿ 18 ಲಕ್ಷ ವಿತ್ತವನ್ನು ವಶಪಡಿಸಿಕೊಂಡನೆಂದು **ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ**ವು ತಿಳಿಸುತ್ತದೆ.[43] ಇವನನ್ನು ಮಟ್ಟಹಾಕಲು ವಿಜಯನಗರ ಸಾಮ್ರಾಟನಿಗೆ ನಿಷ್ಠನಾದ ಬಿಜ್ಜಾವರದ ಮಹಾನಾಡಪ್ರಭು ಇಮ್ಮಡಿ ಚಿಕ್ಕಭೂಪಾಲನು ತನ್ನ ಮಗ ತೋಂಟದರಾಯನ ಜೊತೆಗೆ ಮಿಡಿಗೇಶಿಯ ಚಿನ್ನಪ್ಪನಾಯಕ, ಕೊಡಗಿಹಳ್ಳಿಯ ಬಸವ, ದೊಡ್ಡೇರಿಯ ಕೆಂಪ, ಬುಕ್ಕಪಟ್ಟಣದ ಕೆಂಪಣಗೌಡ, ಮಾವಿನಕೆರೆಯ ತೋಟದಳವಾಯಿ ಮೊದಲಾದವರ ಜೊತೆಗೂಡಿ ಹಾವಳಿ ಭೈರೇಗೌಡನ ಮೇಲೆ ಬಿದ್ದರು.[44] ಹರುವೆ ಕೋಟೆ ಯುದ್ಧದಲ್ಲಿ ಅಂತಿಮವಾಗಿ ಭೈರೇಗೌಡನು ಸೋತನು. ಇವನ ನಂತರ ಇಮ್ಮಡಿ ಹಾವಳಿ ಭೈರೇಗೌಡನು ಅಧಿಕಾರಕ್ಕೆ ಬಂದನು.

### 2.2.4.2 ಇಮ್ಮಡಿ ಹಾವಳಿ ಭೈರಪ್ಪಗೌಡ (1596–1638)

ಈತನು ಕೃಷಿ ಭೂಮಿ ವಿಸ್ತರಣೆಗೆ ಕ್ರಮ ಕೈಗೊಂಡನೆಂದು ಹೇಳಲಾಗುತ್ತದೆ. ಚಿಂತಪಲ್ಲೆ ಗ್ರಾಮದ ಹೊಲಗದ್ದೆಗಳನ್ನು ಚಿನ್ನಪ್ಪರೆಡ್ಡಿ ಎಂಬಾತನಿಗೆ ಉಂಬಳಿಯಾಗಿ ಕೊಟ್ಟನೆಂದು ಶಾಸನವೊಂದು ತಿಳಿಸುತ್ತದೆ. ಈತ ಪಂಡಿತರನ್ನು ಗೌರವಿಸಿ ದಾನದತ್ತಿಗಳನ್ನು ನೀಡುತ್ತಿದ್ದನು.[45]

ನಂತರ 1638–39ರಲ್ಲಿ ಆವತಿನಾಡ ಪ್ರಭು ರಣದುಲ್ಲಾ ಖಾನನ ದಾಳಿಗೆ ಸಿಕ್ಕಿ ಸೋತು, ಬಿಜಾಪುರದ ಅಧೀನಕ್ಕೆ ಒಳಪಟ್ಟಂತೆ ತೋರುತ್ತದೆ. ನಂತರ ಇಮ್ಮಡಿ ಸೊಣ್ಣ ಭೈರೇಗೌಡನು ಅಧಿಕಾರಕ್ಕೆ ಬರುತ್ತಾನೆ. ಇವನ ಸಾಧನೆಯನ್ನು ಚಿಕ್ಕರಸ ಕವಿ ಬರೆದಿರುವ **'ಸೊಣ್ಣ ಭೈರೇಗೌಡನ ಚರಿತ್ರೆ'** ನಮಗೆ ಇಂದು ಉಪಲಬ್ದವಿಲ್ಲದೆ ಇರುವುದು ದುರಾದೃಷ್ಟಕರ. ಸೊಣ್ಣ ಭೈರೇಗೌಡನ ಮಗ ಗೋಪಾಲಗೌಡನು ದೇವನಹಳ್ಳಿಯ ಮದನಗೋಪಾಲಸ್ವಾಮಿ ದೇವರ ಪೂಜಾಕಾರ್ಯಗಳಿಗಾಗಿ ಹಲವು ಗ್ರಾಮಗಳು ಮತ್ತು ತೋಟಗಳನ್ನು ದತ್ತಿ ಬಿಟ್ಟ ಸಂಗತಿಗಳು ಶಾಸನಗಳಿಂದ ತಿಳಿಯುತ್ತದೆ. ಗೋಪಾಲಗೌಡನು ತಿರುಪತಿಯ ವೆಂಕಟೇಶ್ವರ ದೇವರನ್ನೇ ತನ್ನ ಅಧಿರಾಜ ಎಂಬಂತೆ ಭಾವಿಸಿ ಆಳುತ್ತಿದ್ದನೆಂದು ತಿಳಿದು ಬರುತ್ತದೆ. ಇದೊಂದು ವಿಶಿಷ್ಟವಾದ ಪ್ರಕರಣವೆಂಬಂತೆ ಕಾಣುತ್ತದೆ. ಇವನ ನಂತರ ದೊಡ್ಡಭೈರಪ್ಪಗೌಡ ಅಧಿಕಾರಕ್ಕೆ ಬರುತ್ತಾನೆ. ಈತನು ಕೂಡ ವೆಂಕಟೇಶ್ವರನ ಹೆಸರಿನಲ್ಲಿಯೇ ಆಳ್ವಿಕೆ ನಡೆಸುತ್ತಾನೆ. ಮಾವಳಿಪುರ ಗ್ರಾಮವನ್ನು ತನ್ನ ಹೆಸರಿನಲ್ಲಿ 'ದೊಡ್ಡ ಬೈರಸಾಗರ' ಎಂದು ಬದಲಿಸಿ ಸುಬ್ಬಾಭಟ್ಟನೆಂಬ ಬ್ರಾಹ್ಮಣನಿಗೆ ಸರ್ವಮಾನ್ಯವಾಗಿ ಬಿಟ್ಟನು. ಈ ಮನೆತನದ ಕೊನೆಯ ದೊರೆಗಳೆಂದರೆ– ವೆಂಕಟನಾರಾಯಣಗೌಡ – ಚನ್ನಪ್ಪ – ರಾಮಸ್ವಾಮಿ – ರಂಗಪ್ಪಯ್ಯಗೌಡ.

ಆವತಿನಾಡ ಪ್ರಭುಗಳ ಬಗೆಗೆ ಹೆಚ್ಚಿನ ಸಂಖ್ಯೆಯಲ್ಲಿ ಶಾಸನ ಮತ್ತು ಸಾಹಿತ್ಯಾಧಾರಗಳು ಇಲ್ಲದಿರುವುದರಿಂದ ಚರಿತ್ರೆಯ ರಚನೆಗೆ ಅಡ್ಡಿಯಾಗಿದೆ. ಒಟ್ಟಾರೆ, ಆವತಿ ನಾಡಪ್ರಭುಗಳು 15ನೆಯ ಶತಮಾನದ ಪೂರ್ವಾರ್ಧದಿಂದ 18ನೆಯ ಶತಮಾನದ ಉತ್ತರಾರ್ಧದವರೆಗೂ ದೇವನಹಳ್ಳಿ, ಆವತಿ ಮುಂತಾದ ಪ್ರದೇಶಗಳನ್ನು ಕೇಂದ್ರವಾಗಿರಿಸಿಕೊಂಡು ಆಳಿದರು.

### 2.2.5 ಸುಗುಟೂರು ಅರಸರು

ಮೂಲತಃ ಆವತಿನಾಡ ಪ್ರಭುಗಳ ಜೊತೆಗೆ ಸಂಬಂಧ ಹೊಂದಿರುವ ಮತ್ತೊಂದು ಪ್ರಮುಖ ಮನೆತನ ಎಂದರೆ ಸುಗುಟೂರು ಅರಸರು. ಸುಗುಟೂರು ಮನೆತನದ ಔನ್ನತ್ಯದ ಕಾಲದಲ್ಲಿ ಅವರ ರಾಜ್ಯವು ಕೋಲಾರ ಜಿಲ್ಲೆಯ ಬಹುಭಾಗ, ಬೆಂಗಳೂರು ಜಿಲ್ಲೆಯ ಆಗ್ನೇಯ ಭಾಗ ಹಾಗೂ ಅದಕ್ಕೆ ಹೊಂದಿಕೊಂಡಂತೆ ಇರುವ ಇಂದಿನ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರು, ಡೆಂಕಣಿಕೋಟೆ ತಾಲ್ಲೂಕಿನ ಹಲವು ಭಾಗಗಳನ್ನು ಹಾಗೂ ಈಗಿನ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಪುಂಗುನೂರು ಪ್ರದೇಶಗಳನ್ನು ಒಳಗೊಂಡಿತ್ತು.[46] ಈ ಮನೆತನದ ಅಧ್ಯಯನಕ್ಕೆ ಇರುವ ಆಕರಗಳಲ್ಲಿ ಬಹುಮುಖ್ಯವಾದ ಆಕರ ಸಮಕಾಲೀನ ಶಾಸನಗಳು. ಸುಗುಟೂರು ಅರಸು ಮನೆತನಕ್ಕೆ ಸಂಬಂಧಿಸಿದ ನೂರಕ್ಕೂ ಹೆಚ್ಚು ಶಾಸನಗಳ

ದೊರೆತಿವೆ. ಸಾಹಿತ್ಯ ಕೃತಿಗಳಲ್ಲಿ ಬಹುಮುಖ್ಯವಾದ ಕೃತಿ ಸುಗುಟೂರು ಅರಸರಲ್ಲಿ ಪ್ರಸಿದ್ಧನಾದ ಮುಮ್ಮಡಿ ತಮ್ಮೇಗೌಡನು ರಚಿಸಿದ **'ಶಂಕರಸಂಹಿತೆ'** ಎಂಬ ಕಾವ್ಯ. ಸಜ್ಜೆಯ ಸಿದ್ಧಲಿಂಗಾರ್ಯನ **ಮಳೆಯರಾಜ ಚರಿತೆಗಳು;** ಸುಗುಟೂರು ಅರಸರ ಸಮಕಾಲೀನರಾದ ಯಲಹಂಕ ನಾಡಪ್ರಭುಗಳ ಆಶ್ರಯದಲ್ಲಿ ರಚಿತವಾದ ಹೊನ್ನಕವಿಯ **'ಇಮ್ಮಡಿ ತಮ್ಮರಾಯ ಕೆಂಪರಾಯ ಪದಗಳು'** ಅಥವಾ **ಕೆಂಪೇಗೌಡ ಜಯಪ್ರಶಸ್ತಿ** ಮುಖ್ಯವಾದ ಆಕರಗಳಾಗಿವೆ. ಇವಲ್ಲದೆ ಜಾನಪದ ಮತ್ತು ಮೌಖಿಕ ಸಾಹಿತ್ಯಗಳು ಸುಗುಟೂರು ಅರಸರ ಇತಿಹಾಸ ರಚನೆಗೆ ನೆರವಾಗಿವೆ.

ಈ ಅರಸರ ಮೂಲನೆಲೆಯಾಗಿದ್ದ ಸುಗುಟೂರನ್ನು 'ಸುಕುಟೂರು', 'ಸುಗ್ಗುಟೂರು', 'ಸುಗುಟೂರು' ಎಂಬುದಾಗಿ ಕರೆಯಲಾಗಿದ್ದು, ಸುಗುಟೂರಿಗೆ 'ಅರುಮೊಳಿದೇವ ಚತುರ್ವೇದಿ ಮಂಗಲಂ', 'ದಕ್ಷಿಣದ ಅಹಿಚ್ಛತ್ರಪುರ' ಎಂಬ ಹೆಸರುಗಳಿದ್ದವು.[47] ಈ ವಂಶದ ಮೂಲದ ಬಗೆಗೆ ಆನೇಕಲ್ ಪಾಳೆಯಗಾರರ ಕೈಫಿಯತ್ತಿನ ಪ್ರಕಾರ: ಈ ವಂಶದ ಮೂಲ ಪುರುಷ ದೇವಪ್ಪಗೌಡ. ಈತ ಕಂಚಿ ಕಡೆಯ ಅಲಕೂರು ವಡೇರಹಳ್ಳಿ ಗ್ರಾಮದವನು. ಈತನಿಗೆ ತಮ್ಮೇಗೌಡ ಎಂಬ ಮಗ ಮತ್ತು ಬಯ್ಯಮ್ಮ ಎಂಬ ಮಗಳಿದ್ದಳು. ರೂಪವತಿಯಾದ ಬೈಯ್ಯಮ್ಮನನ್ನು ಕಂಚಿಯ ದೊರೆ ವಿವಾಹವಾಗಬಯಸಿ, ತನ್ನ ನಿಯೋಗಿಗಳನ್ನು ಕಳುಹಿಸುತ್ತಾನೆ. ಅನ್ಯ ಜಾತಿಯ ದೊರೆಗೆ ತನ್ನ ಮಗಳನ್ನು ಕೊಡುವುದರ ಬದಲು ದೇಶ ಬಿಟ್ಟು ಹೋಗುವುದೇ ಸೂಕ್ತವೆಂದು ತನ್ನ ಬಳಗದವರೆಲ್ಲರ ಜೊತೆಗೆ ಅದೇ ರಾತ್ರಿ ಬಂಡಿಗಳಲ್ಲಿ ಪಡುವಣ ದೇಶದ ಕಡೆಗೆ ಹೊರಡುತ್ತಾರೆ. ಅವರಿಗೆ ತುಂಬಿ ಹರಿಯುತ್ತಿದ್ದ ಪಾಲಾರ್ ನದಿಯು ಎದುರಾಗುತ್ತದೆ. ದೇವಪ್ಪಗೌಡನು ಚಿಂತಾಕ್ರಾಂತನಾಗಿರುವಾಗ ಬೈಯ್ಯಮ್ಮಳು ಗಂಗಾಭವಾನಿಯನ್ನು ಪ್ರಾರ್ಥಿಸಲಾಗಿ, ಪಾಲಾರ್ ನದಿಯು ಹೋಗಲು ದಾರಿ ಮಾಡಿಕೊಟ್ಟಿತು. ಏಳು ಬಂಡಿಯವರು ಸುರಕ್ಷಿತವಾಗಿ ನದಿ ದಾಟಿದರು. ಆ ಹೊತ್ತಿಗೆ ಕಂಚಿದೊರೆಯ ಕಡೆಯವರು ಬಂದರಾದರೂ ಮೈದುಂಬಿ ಹರಿಯುತ್ತಿದ್ದ ನದಿಯನ್ನು ದಾಟಲಾಗದೆ ಹಿಂದಿರುಗಿದರು. ಇತ್ತ ದೇವಪ್ಪಗೌಡನ ಕುಟುಂಬದವರು ಪಡುವಣ ದೇಶದಲ್ಲಿ ಸೂಕ್ತ ಸ್ಥಳವನ್ನು ಗುರುತಿಸಿ, ಕಾಡು ಕಡಿದು ಬಯಲು ಮಾಡಿ 'ಸುರಗುತ್ತಳಿ' ಕಟ್ಟಿಕೊಂಡು ನೆಲೆಸುತ್ತಾರೆ. ಆದ್ದರಿಂದ ಆ ಸ್ಥಳಕ್ಕೆ ಸುಗುಟೂರು ಎಂದು ಹೆಸರಾಯಿತು. ಮುಂದೆ ಈ ವಂಶದಲ್ಲಿ ಹುಟ್ಟಿದ ಹಿರಿಯ ತಮ್ಮಪ್ಪಗೌಡನು ಹೊಸದಾಗಿ ಕೋಟೆ ಕಟ್ಟಿಸಿದ್ದರಿಂದ ಆ ಸ್ಥಳ ಹೊಸಕೋಟೆ ಎಂದು ಹೆಸರಾಯಿತು.[48] ಇದಕ್ಕೆ ಪೂರಕವಾಗಿ ಕ್ರಿ.ಶ. 1422ರ ಮಾಲೂರು ತಾಲ್ಲೂಕು ಜೋಡಿಪುರದ ಶಾಸನದಲ್ಲಿ[49] ಸುಗುಟೂರು ತಮ್ಮೇಗೌಡನ ತಂದೆಯ ಹೆಸರು ದೇವಪ್ಪಗೌಡ ಎಂದಿದೆ. ಈ ಶಾಸನವೇ ಸುಗುಟೂರು ಅರಸರ ಮೊದಲ ಶಾಸನವಾಗಿದೆ. 1379ರ ಹೊಸಕೋಟೆ ತಾಲ್ಲೂಕಿನ ಶಾಸನವೊಂದರಲ್ಲಿ ನಾಗಣ್ಣ ಒಡೆಯರ

ಕುಮಾರ ದೇವಪ್ಪ ಒಡೆಯ ಎಂದಿದ್ದು, ಈ ಎರಡೂ ಶಾಸನಗಳಲ್ಲಿ ಬರುವ ದೇವಪ್ಪ ಒಬ್ಬನೇ ಅಥವಾ ಬೇರೆ ಬೇರೆಯೇ ಎಂಬ ಬಗ್ಗೆ ಖಚಿತ ತೀರ್ಮಾನಗಳಿಲ್ಲವಾದರೂ, ಜೋಡಿಪುರ ಶಾಸನದಲ್ಲಿ ಉಕ್ತವಾಗಿರುವ ದೇವಪ್ಪಗೌಡನೇ ಸುಗುಟೂರು ಅರಸ ಎಂಬುದರಲ್ಲಿ ಅನುಮಾನಗಳಿಲ್ಲ.

### 2.2.5.1 ಚಿಕ್ಕರಾಯ ಚಿಕ್ಕತಮ್ಮೇಗೌಡ

ದೇವಪ್ಪಗೌಡನ ನಂತರ ಹಿರಿಯ ತಮ್ಮಪ್ಪಗೌಡ (ತಮ್ಮೇಗೌಡ) ಸುಗುಟೂರನ್ನು ಆಳ್ವಿಕೆ ಮಾಡಿದರು. ಹಿರಿಯ ತಮ್ಮಪ್ಪಗೌಡನ ಮಗನೇ ಚಿಕ್ಕರಾಯ ಚಿಕ್ಕತಮ್ಮೇಗೌಡ. ಈತ ಆನೇಕಲ್ ಪರಿಸರದಲ್ಲಿ ಆಳ್ವಿಕೆ ನಡೆಸಿದ ಮೊದಲ ಸುಗುಟೂರು ದೊರೆ. ಚಿಕ್ಕರಾಯ ಚಿಕ್ಕತಮ್ಮೇಗೌಡನು ವಿಜಯನಗರ ದೊರೆ ಇಮ್ಮಡಿ ನರಸಿಂಹನ ಕಾಲದಲ್ಲಿ ಮುಸ್ಲಿಮರ ದಾಳಿಯಾದಾಗ ಶತ್ರುಗಳನ್ನು ನಿಗ್ರಹಿಸಿ, ದೊರೆ ನರಸಿಂಹನ ಮೆಚ್ಚುಗೆಗೆ ಪಾತ್ರನಾದನಲ್ಲದೆ, ಅವನಿಂದ ಕನಕಧ್ವಜ, ಗಂಡಪೆಂಡೇರ ಮತ್ತು ಚಿಕ್ಕರಾಯ ಬಿರುದುಗಳನ್ನು ಪಡೆದಿದ್ದನು. ಆನೇಕಲ್ ಸಮೀಪವಿರುವ (ಪ್ರಸ್ತುತ ತಮಿಳುನಾಡಿನಲ್ಲಿರುವ) ಶೈವಕೇಂದ್ರ ಗುಮ್ಮಳಾಪುರದಲ್ಲಿ ದೊರೆತಿರುವ ಶಾಸನದಲ್ಲಿನ ಚಿಕ್ಕರಾಯ ಈತನೇ ಎಂಬ ಅಭಿಪ್ರಾಯವಿದೆ. ಹೊಸೂರಿನಲ್ಲಿರುವ ಸುಜ್ಞಾನಮೂರ್ತಿ ಶಿವಾಚಾರ ಮಠಕ್ಕೆ ಸುಗುಟೂರು ಅರಸರು ದಾನದತ್ತಿಗಳನ್ನು ಬಿಟ್ಟಿದ್ದಾರೆ. **ಶಂಕರಸಂಹಿತೆ** ಮತ್ತು **ಮಳೆಯರಾಜ ಚಾರಿತ್ರ** ಕೃತಿಗಳು ಸುಗುಟೂರು ಅರಸರು ಸುಜ್ಞಾನಮೂರ್ತಿ ಗುರುಗಳ ಕರಜಾತರು ಎಂದು ಹೇಳುತ್ತವೆ. ಆದ್ದರಿಂದ ಚಿಕ್ಕರಾಯ ಚಿಕ್ಕತಮ್ಮೇಗೌಡನು ಹೊಸೂರಿನ ಸುಜ್ಞಾನಮೂರ್ತಿ ಶಿವಾಚಾರದ ಮಠವನ್ನು ಪೋಷಿಸಿದ್ದನೆಂದು ಕಾಣುತ್ತದೆ. ಚಿಕ್ಕತಮ್ಮೇಗೌಡ ಮತ್ತು ವೀರಾಂಬಿಕೆಯರ ಮಗನಾದ ಇಮ್ಮಡಿ ತಮ್ಮೇಗೌಡನು ನಂತರ ಅಧಿಕಾರಕ್ಕೆ ಬಂದನು. ಇಮ್ಮಡಿ ತಮ್ಮೇಗೌಡನ ನಂತರ ಅವನ ಮಗ ಮಂತ್ರಿ ಮುಮ್ಮಡಿ ತಮ್ಮೇಗೌಡನು ಅಧಿಕಾರಕ್ಕೆ ಬಂದನು.

### 2.2.5.2 ಮುಮ್ಮಡಿ ತಮ್ಮೇಗೌಡ

ಇವನು ಸುಗುಟೂರು ಅರಸರಲ್ಲಿ ಅತ್ಯಂತ ಪ್ರಸಿದ್ಧನಾದ ದೊರೆ. ಈತನ ತಾಯಿ ವೆಂಕಟಾಂಬೆ. ಸೆಜ್ಜೆ ಸಿದ್ಧಲಿಂಗ ಕವಿಯು ತನ್ನ **ಮಳೆಯರಾಜ ಚಾರಿತ್ರ**ದ ಅವತರಣಿಕಾ ಭಾಗದಲ್ಲಿ ಮುಮ್ಮಡಿ ತಮ್ಮೇಗೌಡನು ತನ್ನ 11ನೆಯ ವಯಸ್ಸಿನಲ್ಲಿ ಸಿಕಂದರ್ ಬಾದ್‌ಶಾಹನನ್ನು ಸೋಲಿಸಿದನೆಂದು ಹೇಳಿದ್ದಾನೆ. ಆದಿಲ್ ಷಾಹಿ ಮನೆತನದ 2ನೆಯ ಇಬ್ರಾಹಿಂನನ್ನೋ ಅಥವಾ ಆತನ ಮಗ ಮಹ್ಮದ್‌ನನ್ನೋ ಸಿದ್ಧಲಿಂಗ ಕವಿಯು ಸಿಕಂದರ್ ಬಾದಷಹ (ಪಾದವ) ಎಂದು ಕರೆದಿರುವಂತೆ ತೋರುತ್ತದೆ ಎಂದು ಪಿ.ವಿ. ಕೃಷ್ಣಮೂರ್ತಿ ಅವರು ಅಭಿಪ್ರಾಯ ಪಟ್ಟಿದ್ದಾರೆ.[50]

ಮುಮ್ಮಡಿ ತಮ್ಮೇಗೌಡನ ಆರಂಭಿಕ ದಿನಗಳು ಕಠಿಣ ಸವಾಲುಗಳಿಂದ ಕೂಡಿದ್ದವು. ಈ ಬಗ್ಗೆ ಹೊನ್ನಕವಿಯ **ಕೆಂಪರಾಯ ತಮ್ಮರಾಯನ ಪದಗಳು (ಕೆಂಪೇಗೌಡ ಜಯಪ್ರಶಸ್ತಿ)** ವಿವರಗಳನ್ನು ನೀಡುತ್ತದೆ. ಇಮ್ಮಡಿ ತಮ್ಮೇಗೌಡನು ಕಾಲವಾದಾಗ ಅವನ ಸೋದರ ಅಯಮಗೌಡನು ರಾಜ್ಯದ ಹಲವು ಪ್ರದೇಶಗಳನ್ನು ತನ್ನ ನಿಯಂತ್ರಣಕ್ಕೆ ತೆಗೆದುಕೊಳ್ಳುತ್ತಾನೆ. ಅಲ್ಲದೆ ಅಣ್ಣನ ಮಗ ಮುಮ್ಮಡಿ ತಮ್ಮೇಗೌಡನನ್ನು ರಾಜ್ಯದಿಂದ ಹೊರದೂಡುತ್ತಾನೆ. ಆಗ ಬೆಂಗಳೂರಿನ ಇಮ್ಮಡಿ ಕೆಂಪೇಗೌಡನು ಮುಮ್ಮಡಿ ತಮ್ಮೇಗೌಡನಿಗೆ ಆಶ್ರಯನೀಡುತ್ತಾನಲ್ಲದೆ, ಬಿಲಗೊಂಡನಹಳ್ಳಿ (ಸರ್ಜಾಪುರ), ಕೋಲಾರ, ಬೇಟೆರಾಯನಗುಡಿ ದುರ್ಗಗಳನ್ನು ಗೆದ್ದು ಕೊಡುತ್ತಾನೆ. ಅಲ್ಲದೆ, ಅಯಮಗೌಡನನ್ನು ಕೊಂದು, ಮುಮ್ಮಡಿ ತಮ್ಮೇಗೌಡನನ್ನು ಸುಗುಟೂರು ಸಿಂಹಾಸನದಲ್ಲಿ ಕೂರಿಸುತ್ತಾನೆ. ಈ ಘಟನೆಯ ಕಾಲದ ಬಗೆಗೆ ಖಚಿತ ವಿವರಗಳಿಲ್ಲವಾದರೂ, ಇಮ್ಮಡಿ ತಮ್ಮೇಗೌಡನನ್ನು ಉಲ್ಲೇಖಿಸುವ ಕೊನೆಯ ಶಾಸನದ ಕಾಲ ಕ್ರಿ.ಶ. 1600. ಮುಮ್ಮಡಿ ತಮ್ಮೇಗೌಡನನ್ನು ಉಲ್ಲೇಖಿಸುವ ಮೊದಲ ಶಾಸನದ ಕಾಲ ಕ್ರಿ.ಶ. 1608. ಹೀಗಾಗಿ ಈ ಘಟನೆಯು ಕ್ರಿ.ಶ. 1600–1608ರ ನಡುವೆ ನಡೆದಿರಬಹುದು. ಕರ್ಲಮಂಗಲ ಶ್ರೀಕಂಠಯ್ಯನವರು ಅಭಿಪ್ರಾಯ ಪಡುವಂತೆ ಇಮ್ಮಡಿ ಕೆಂಪೇಗೌಡನು ಅಯಮಗೌಡನನ್ನು ಕೊಂದ ಕದನದ ವಿವರವನ್ನು ಕಟ್ಟಿಕೊಡುವ **ಕೆಂಪರಾಯ ತಮ್ಮರಾಯನ ಪದಗಳು** ಕಾವ್ಯವು ಈ ಘಟನೆಯು ಕ್ರಿ.ಶ. 1612ರಲ್ಲಿ ನಡೆದುದೆಂದು ತಿಳಿಸುವುದು.[51] ಆದ್ದರಿಂದ ಹೀಗೆ ತೀರ್ಮಾನಿಸಬಹುದಾಗಿದೆ: ಇಮ್ಮಡಿ ತಮ್ಮೇಗೌಡನು 1608ರ ಸುಮಾರಿಗೆ ಕಾಲವಾದಾಗ ಅವನ ಮಗನಾದ ಮುಮ್ಮಡಿ ತಮ್ಮೇಗೌಡನು ಪಟ್ಟಕ್ಕೇರುತ್ತಾನೆ. ಇದನ್ನು ವಿರೋಧಿಸಿದ ಅಯಮಗೌಡ ಮುಮ್ಮಡಿ ತಮ್ಮೇಗೌಡನನ್ನು ರಾಜ್ಯದಿಂದ ಹೊರದೂಡುತ್ತಾನೆ. ರಾಜ್ಯಭ್ರಷ್ಟನಾದ ಮುಮ್ಮಡಿ ತಮ್ಮೇಗೌಡನಿಗೆ ಆಶ್ರಯ ಕಲ್ಪಿಸಿ, ಅಯಮಗೌಡನಿಂದ ರಾಜ್ಯವನ್ನು ದೊರಕಿಸಿ ಕೊಡಲು ಮಾತುಕತೆ – ಸಂಧಾನದಲ್ಲಿ ಸ್ವಲ್ಪ ಸಮಯ ಸರಿದಿರಬಹುದು. ಏಕೆಂದರೆ, **ಕೆಂಪರಾಯ ತಮ್ಮರಾಯನ ಪದಗಳು** ಮೊದಲ ಭಾಗದ 2ನೇ ಪದ್ಯದಲ್ಲಿ ಬರುವ "ಅಯಿಯಮ ಗೌಡಗೆ ಬುದ್ಧಿ ಹೇಳಿ ಕಳುಹಲು ಹೇಜಿಬರಿಂದ ಹಿತವಾಗಿ ಕೇಳದಿರಲು..." ಎಂಬ ಸಾಲುಗಳು ಇಮ್ಮಡಿ ಕೆಂಪೇಗೌಡನು ಅಯಿಮಗೌಡನಿಗೆ ಬುದ್ಧಿಮಾತುಗಳನ್ನು ಹೇಳಿ, ಸೌಹಾರ್ದಯುತವಾಗಿ ಮಾತುಕತೆಯ ಮೂಲಕ ಸಮಸ್ಯೆಯನ್ನು ಬಗೆಹರಿಸಲು ಪ್ರಯತ್ನಿಸದಂತೆ ಕಾಣುತ್ತದೆ. ಬಹುಶಃ ಅದಕ್ಕೆ ರಕ್ತ ಸಂಬಂಧವೂ ಕಾರಣವಿದ್ದಿರಬಹುದು. ಶಾಂತಿಯುತ ಮಾತುಕತೆಗಳು ಫಲಪ್ರದವಾಗದೆ ಹೋದಾಗ ಅಂತಿಮವಾಗಿ 1612ರಲ್ಲಿ ಇಮ್ಮಡಿ ಕೆಂಪೇಗೌಡನು ದಂಡದ ಮೂಲಕ ಬುದ್ಧಿಕಲಿಸಿದಂತೆ

ತೋರುತ್ತದೆ. ಹೀಗೆ 1612ರಲ್ಲಿ ಮುಮ್ಮಡಿ ತಮ್ಮೇಗೌಡನು ಮತ್ತೆ ಅಧಿಕಾರಕ್ಕೆ ಬಂದ ನಂತರ ಕೆಲವು ಶಾಸನಗಳನ್ನು ಹೊರಡಿಸಿದ್ದಾನೆ.

ನಾಡಪ್ರಭುಗಳು ನೆಲೆಸಿದ ನೆಲೆಯನ್ನೆ ಊರನ್ನಾಗಿ ಪರಿವರ್ತಿಸುವುದು, ಕೆರೆಗಳನ್ನು ನಿರ್ಮಿಸುವುದು, ದೇವಾಲಯಗಳನ್ನು ನಿರ್ಮಿಸುವುದನ್ನು ಇವು ನಾಡಪ್ರಭುಗಳ ಕಾಲದ ವೈಶಿಷ್ಟ್ಯವಾಗಿದೆ. ಇದರಿಂದ ಸುಗುಟೂರು ಅರಸರು ಕೂಡ ಹೊರತಲ್ಲ. ಸಂಸ್ಥಾನದ ದಕ್ಷಿಣಕ್ಕಿರುವ ಆನೇಕಲ್ ಮೊದಲು ನಿರ್ಜನಪ್ರದೇಶ. ದಟ್ಟಕಾಡಿದ್ದ ಈ ಪ್ರದೇಶದಲ್ಲಿ ಆನೆಗಳ ಸಂಖ್ಯೆ ಹೆಚ್ಚಾಗಿದ್ದರಿಂದ ಅದನ್ನು ಆನೆಮಲೆ ಎಂದು ಕರೆಯುತ್ತಿದ್ದರು. ವಿಜಯನಗರದ ಅರಸರು ಈ ಕಾಡಿನಿಂದ 20 ಆನೆಗಳನ್ನು ಹಿಡಿದು ಕಳುಹಿಸುವಂತೆ ಮುಮ್ಮಡಿ ತಮ್ಮೇಗೌಡನಿಗೆ ನಿರೂಪ ಕಳುಹಿಸುತ್ತಾರೆ. ಅದರಂತೆ ಆನೆಮಲೆ ಪ್ರದೇಶದ ಹುಲಿಕಲ್ಲು ಗುಡ್ಡದ ಬಳಿಯಲ್ಲಿ ಆನೆಗಳನ್ನು ಹಿಡಿದು ವಿಜಯನಗರದ ಅರಸರಿಗೆ ಕಳುಹಿಸಿಕೊಡಲಾಗುತ್ತದೆ. ಆನಂತರ ಮುಮ್ಮಡಿ ತಮ್ಮೇಗೌಡನು ಅಲ್ಲಿ ಊರೊಂದನ್ನು ಕಟ್ಟಿಸಿ, ಲಿಂಗೇಗೌಡ ಎಂಬಾತನನ್ನು ನೇಮಿಸುತ್ತಾನೆ. ಆತನು ಅಲ್ಲಿ ತನ್ನ ಹೆಸರಿನಲ್ಲಿ ಕೆರೆ, ತೋಪು, ಬಾವಿಗಳನ್ನು ಕಟ್ಟಿಸುತ್ತಾನೆ. ಈ ಲಿಂಗೇಗೌಡನು ನೆಲೆಸಿದ ಊರ ಪರಿಸರದಲ್ಲಿದ್ದ ತೋಟಗಾರ್ಪಾಳ್ಯ, ಪಂಟ್ಲುಗೆರೆ, ಸಿಡಿಹೊಸಕೋಟೆ, ಮಾಸ್ತಿ, ಮಾದಾಪಟ್ಟಣಗಳಲ್ಲಿನ ತೋಟಗಾರರಿಂದ ತೊಂದರೆ ಉಂಟಾಗುತ್ತದೆ. ಆಗ ಲಿಂಗೇಗೌಡನು ಮುಮ್ಮಡಿ ತಮ್ಮೇಗೌಡನಿಗೆ ದೂರುಕೊಡಲಾಗಿ, ತಮ್ಮೇಗೌಡನು ಸೈನ್ಯ ಸಮೇತ ಬಂದು ತೋಟಗಾರರ ಸ್ಥಳಗಳ ಮೇಲೆ ದಾಳಿಮಾಡಿ ಅವುಗಳನ್ನು ಸ್ವಾಧೀನಪಡಿಸಿಕೊಂಡು ಅವರ ಸ್ಥಳಗಳಲ್ಲಿ ತನ್ನ ಸೈನ್ಯವನ್ನು ಇರಿಸಿದನು. ಆದರೆ ಈ ಪ್ರಕರಣ ಮೂಲವಾಸಿಗಳಿಗೂ, ವಲಸಿಗರಿಗೂ ನಡೆದ ಸಂಘರ್ಷವನ್ನು ಪ್ರತಿನಿಧಿಸುತ್ತದೆ.

ಬಿಜಾಪುರದ ರಣದುಲ್ಲಾಖಾನನು, ಷಹಜಿಯ ಜೊತೆಯಲ್ಲಿ ಬೆಂಗಳೂರು, ಹೊಸಕೋಟೆ, ಕೋಲಾರ ಮೊದಲಾದ ಪ್ರದೇಶಗಳ ಮೇಲೆ 1638ರಲ್ಲಿ ದಾಳಿ ಮಾಡುತ್ತಾನೆ. ಈ ದಾಳಿಯ ಪರಿಣಾಮವಾಗಿ ಯಲಹಂಕ ನಾಡಪ್ರಭುಗಳು ಬೆಂಗಳೂರನ್ನು ಕಳೆದುಕೊಂಡು ಮಾಗಡಿ ಮತ್ತು ಕುಣಿಗಲ್ ಸೀಮೆಗಳ ಕಡೆಗೆ ಹೋಗಬೇಕಾದರೆ, ಸುಗುಟೂರು ಅರಸರು ಹೊಸಕೋಟೆಯನ್ನು ಕಳೆದುಕೊಂಡು ಆನೆಮಲೆಯಲ್ಲಿ ನೆಲೆಸಬೇಕಾಗುತ್ತದೆ. ಬೆಂಗಳೂರು, ಹೊಸಕೋಟೆಗಳು ಷಹಜಿಗೆ ಜಾಗೀರಾಗಿ ಲಭಿಸುತ್ತವೆ. ಮುಮ್ಮಡಿ ತಮ್ಮೇಗೌಡನು ಆರು ತಿಂಗಳಲ್ಲಿ ಆನೆಮಲೆಯಲ್ಲಿ ಮನೆಮಾಡಿಕೊಂಡು ಹೋಗಬೇಕು. ಅಲ್ಲಿಯವರೆಗೂ ಹೊಸಕೋಟೆಯಲ್ಲಿರಬಹುದೆಂದು ಷಹಜಿಯೊಡನೆ ಕರಾರು ಆಯಿತು. ಅದರಂತೆ ಮುಮ್ಮಡಿ

ತಮ್ಮೇಗೌಡನು ಲಿಂಗೇಗೌಡನ ಮೂಲಕ ಊರು, ಕೆರೆ, ಕೋಟೆಗಳನ್ನು ಆನೆಮಲೆ ಪ್ರದೇಶದ ಹುಲಿಕಲ್ಲಿನಲ್ಲಿ ಕಟ್ಟಿಸಿದನು. ಕೆರೆಗೆ 'ತಮ್ಮಾಂಬುಧಿ' ಎಂದು ಹೆಸರಿಟ್ಟನಲ್ಲದೆ, ಅಮೃತಮಲ್ಲಿಕಾರ್ಜುನ ದೇವಸ್ಥಾನವನ್ನು ತಮ್ಮಸಂದ್ರ ಎಂಬ ಅಗ್ರಹಾರವನ್ನು ಮಾಡಿಸಿ ಆ ಸ್ಥಳಕ್ಕೆ ಆನೆಕಲ್ಲು ಎಂದು ನಾಮಕರಣಮಾಡಿದನು. ಕಾಡು ಅಳಿದು ನಾಡಾದುದರಿಂದ ಆನೆಮಲೆ ಆಗಿದ್ದ ಈ ಪ್ರದೇಶವು ಆನೆಕಲ್ಲು ಎಂದಾಯಿತು (ಪ್ರಾಣಿ ಮತ್ತು ಕಲ್ಲು ಸೂಚಕ ಸ್ಥಳನಾಮ). ಹೀಗಾಗಿ ಮುಮ್ಮಡಿ ತಮ್ಮೇಗೌಡನೇ ಆನೆಕಲ್ ಪಟ್ಟಣದ ಸ್ಥಾಪಕ ಎಂಬುದು ಖಚಿತವಾಗುತ್ತದೆ.[52]

ಆನೇಕಲ್‌ನ ಕ್ರಿ.ಶ. 1614ಕ್ಕೆ ಸೇರಿದ ಶಾಸನದಲ್ಲಿ ಮುಮ್ಮಡಿ ತಮ್ಮೇಗೌಡನು ಕಾಡುಭಾರತಿ ತಿಮ್ಮಯ್ಯ ಎಂಬ ವಿಪ್ರನಿಗೆ ಹೊಸಕೋಟೆ ಸೀಮೆ, ಸಮೇತನಹಳ್ಳಿ ವಳಿತ, ಹಲಸಿಹಳ್ಳಿ ಗ್ರಾಮಕ್ಕೆ ಸೇರಿದ ಉಪಗ್ರಾಮವಾದ ತಿಪ್ಪಸಂದ್ರವನ್ನು ಮಾನ್ಯವಾಗಿ ನೀಡಿದ ವಿಚಾರವಿದೆ. ಈ ರೀತಿಯಲ್ಲಿ ಗ್ರಾಮಗಳನ್ನು ಮಾನ್ಯವಾಗಿ ಕೊಟ್ಟು ಗೌರವಿಸಿರುವುದು ಕೋಲಾರ, ಹೊಸಕೋಟೆಗಳ ಶಾಸನಗಳಲ್ಲಿಯೂ ಕಂಡುಬರುತ್ತದೆ. ಜಯಶಿಂಗನ ಮಗ ಮುಮ್ಮಡಿ ಶಿಂಗಸೇನಾನಾಯಕನು ಅರಸನೊಡಗೂಡಿ ಶತ್ರುಗಳೊಂದಿಗೆ ಹೋರಾಡಿ ಪ್ರಾಣಾರ್ಪಣೆ ಮಾಡಿದ್ದಕ್ಕಾಗಿ ಕಾಳನಾಯಕನಹಳ್ಳಿಯನ್ನು ನೆತ್ತರು ಕೊಡುಗೆಯಾಗಿ ನೀಡಿದ ವಿಷಯ ಆನೇಕಲ್ ತಾಲ್ಲೂಕಿನ ಕಾಳನಾಯಕನಹಳ್ಳಿಯ ಕ್ರಿ.ಶ. 1624ರ ಶಾಸನದಿಂದ ತಿಳಿದುಬರುತ್ತದೆ. ನೆತ್ತರು ಕೊಡುಗೆ ದತ್ತಿಗಳು ಹೆಚ್ಚಾಗಿ ಕಂಡುಬರುವುದರಿಂದ ಮುಮ್ಮಡಿ ತಮ್ಮೇಗೌಡನ ಉತ್ತರಾರ್ಧದ ಆಳ್ವಿಕೆಯು ಸುಗಮವಾಗಿರಲಿಲ್ಲ ಎಂಬುದು ಪಿ.ವಿ. ಕೃಷ್ಣಮೂರ್ತಿ ಅವರ ಅಭಿಪ್ರಾಯವಾಗಿದೆ.[53] ಕ್ರಿ.ಶ. 1635ರಲ್ಲಿ ಪೆನುಗೊಂಡೆಯ ಸಿಂಹಾಸನದಲ್ಲಿ ಮುಮ್ಮಡಿ ವೆಂಕಟಪತಿರಾಯನು ಆಸೀನನಾಗಲು ಇಮ್ಮಡಿ ಕೆಂಪೇಗೌಡನೊಡಗೂಡಿ ಮುಮ್ಮಡಿ ತಮ್ಮೇಗೌಡನು ಸಹಕರಿಸಿದ್ದನೆಂದು ತೋರುತ್ತದೆ. ಕ್ರಿ.ಶ. 1638ರಲ್ಲಿ ರಣದುಲ್ಲಾಖಾನನ ದಾಳಿಯ ಪರಿಣಾಮವಾಗಿ ಕೋಲಾರ, ಜಂಗಮಕೋಟೆ, ಹೊಸಕೋಟೆ ಮತ್ತು ಸುಗುಟೂರು ಪ್ರದೇಶಗಳು ಷಹಜಿಯ ವಶವಾದವು. ಮುಮ್ಮಡಿ ತಮ್ಮೇಗೌಡನು ಹೊಸಕೋಟೆ ತೊರೆದು ಆನೇಕಲ್‌ಗೆ ಹೋಗಿ ನೆಲೆಸುವಂತಾಯಿತು. ಆದಿಲ್‌ಷಾಹಿಗಳ ಅಧೀನನಾಗಿ ಅವರಿಗೆ ಕಪ್ಪಕಾಣಿಕೆಗಳನ್ನು ಕೊಡುವುದರ ಮೂಲಕ ತಮ್ಮ ಆಡಳಿತವನ್ನು ಆನೇಕಲ್ಲಿನಲ್ಲಿ ಮುಂದುವರಿಸಿದನು. ಕ್ರಿ.ಶ. 1640ರ ಶಾಸನವು ಆನೇಕಲ್ಲಿನ ಬಿದುರುಗೆರೆಯಲ್ಲಿ ದೊರೆತಿದ್ದು, ಮುಮ್ಮಡಿ ತಮ್ಮೇಗೌಡನು ಬಿದುರುಗೆರೆಯನ್ನು ಗೌಡನೋರ್ವನಿಗೆ ಕೊಡುಗೆಯಾಗಿ ನೀಡಿದ ವಿವರವನ್ನೊಳಗೊಂಡಿದೆ. ಅರಸರು ಹಲವು ಗ್ರಾಮಗಳನ್ನು ಗೌಡಾಳಿಕೆಗೆ ನೀಡಿ, ಗೌಡರು ಗ್ರಾಮಗಳಲ್ಲಿ ಉತ್ತಮವಾಗಿ ಕಾರ್ಯನಿರ್ವಹಿಸಿದ ಪಕ್ಷದಲ್ಲಿ ಅವರಿಗೆ ಗೌಡುಕೊಡುಗೆಯಾಗಿ ಕೆಲವು ಹಳ್ಳಿಗಳನ್ನು ನೀಡಿ ಅವರ ಕಾರ್ಯಕ್ಷಮತೆಯನ್ನು ಪ್ರೋತ್ಸಾಹಿಸಿ,

ಗೌರವಿಸುತ್ತಿದ್ದರೆಂಬುದನ್ನು ಈ ಶಾಸನದ ಸೂಕ್ಷ್ಮ ಅವಲೋಕನದಿಂದ ಗ್ರಹಿಸಬಹುದಾಗಿದೆ ಎಂದು ಗಂಗಾಂಬಿಕೆ ಎಸ್. ಅವರು ಅಭಿಪ್ರಾಯ ಪಡುತ್ತಾರೆ.[54]

ಮುಮ್ಮಡಿ ತಮ್ಮೇಗೌಡನ ನಂತರ ಅವನ ಮಗ ಚಿಕ್ಕರಾಯ ತಮ್ಮೇಗೌಡ ಅಧಿಕಾರಕ್ಕೆ ಬಂದನು. ಈತನು ಆನೇಕಲ್‌ನಲ್ಲಿ ಕಪ್ಪಕಾಣಿಕೆಗಳನ್ನು ಸಂಗ್ರಹಿಸಿ ಕೊಡುವ ಮೂಲಕ ತನ್ನ ಆಡಳಿತವನ್ನು ಮುಂದುವರೆಸಿದ್ದನು. ಅವನ ಮಗ ಮುಮ್ಮಡಿ ಚಿಕ್ಕರಾಯ ತಮ್ಮೇಗೌಡ. ಇವನು ಸಹ ಆನೇಕಲ್‌ನಲ್ಲಿ ಷಹಜಿಗೆ ಅಧೀನನಾಗಿದ್ದು, ಕಪ್ಪಕಾಣಿಕೆಗಳನ್ನು ಸಂಗ್ರಹಿಸಿಕೊಡುವ ಕಾರ್ಯದಲ್ಲಿ ಮುಂದುವರಿಯುತ್ತಾನೆ. ನಂತರ ಇಮ್ಮಡಿ ದೇವಪ್ಪಗೌಡನು ಶಾಸನಗಳ ಅವಲೋಕನದ ಹಿನ್ನೆಲೆಯಲ್ಲಿ ಕಂಡುಬರುತ್ತಾನೆ. ಈತನ ಆಳ್ವಿಕೆಗೆ ಆನೇಕಲ್ ಪ್ರದೇಶವು ಒಳಪಟ್ಟಿತ್ತೆಂಬುದು ಪತ್ರಾಗಾರದ ದಾಖಲೆಯೊಂದರಿಂದ ತಿಳಿದುಬರುತ್ತದೆ. ಕ್ರಿ.ಶ. 1729ರ ಮತ್ತು 1735ರ 2 ಶಾಸನಗಳಿಂದ ಆನೇಕಲ್ಲನ್ನು ಆಳುತ್ತಿದ್ದ ಸುಗುಟೂರು ಅರಸರ ದಳವಾಯಿ ವೀರಗೌಡನೆಂಬುವವನ ವಿಚಾರ ತಿಳಿದುಬರುತ್ತದೆ.

ಕ್ರಿ.ಶ. 1758ರಲ್ಲಿ ಹೈದರ್ ಅಲಿಯು ಆನೇಕಲ್ಲನ್ನು ಆಕ್ರಮಿಸಿ ಇಮ್ಮಡಿ ದೇವಪ್ಪಗೌಡನನ್ನು ಬಂಧಿಸಿ, ಇಸ್ಮಾಯಿಲ್ ಅಲಿ ಎಂಬ ತನ್ನ ಅಳಿಯನನ್ನು ಆನೇಕಲ್ಲಿನ ಕಿಲ್ಲೇದಾರನನ್ನಾಗಿ ನೇಮಿಸಿದನು. 1770ರ ಹೊತ್ತಿಗೆ ಪಾಳೆಯಗಾರನನ್ನು ಸೆರೆಯಿಂದ ಬಿಡುಗಡೆಮಾಡಿ ಆನೇಕಲ್ಲನ್ನು ಮಾತ್ರ ಅವನಿಗೆ ಕೊಟ್ಟು ಉಳಿದ ಭಾಗಗಳನ್ನು ತಮ್ಮ ವಶದಲ್ಲಿರಿಸಿಕೊಂಡರು. ಇವನ ಮರಣದ ತರುವಾಯ ಮಗನಾದ ಚಿಕ್ಕರಾಯನು ಅಧಿಕಾರಕ್ಕೆ ಬಂದನಾದರೂ ಆತನು ಬ್ರಿಟಿಷ್ ಸೈನ್ಯಕ್ಕೆ ಸಾಮಾನು ಸರಂಜಾಮುಗಳನ್ನು ಸರಬರಾಜ ಮಾಡುವ ಕೆಲಸದಲ್ಲಿ ತೊಡಗಿದ್ದನೆಂಬುದು ಸರ್ಕಾರಿ ದಾಖಲೆಯಿಂದ ತಿಳಿದುಬರುತ್ತದೆ. ಬ್ರಿಟಿಷರು ಬೆಂಗಳೂರನ್ನು ವಶಪಡಿಸಿಕೊಂಡಾಗ (1791) ಆನೇಕಲ್ ಸಹ ಅವರ ವಶವಾಗಿತ್ತು. ಆಗ ಸುಗುಟೂರು ವಂಶೀಯನಾದ ವೀರನಂಜುಂಡ ತಮ್ಮೇಗೌಡನ ಮಗ ಮುಮ್ಮಡಿ ಅಯಮಗೌಡನಿಗೆ ಆನೇಕಲ್‌ನಲ್ಲಿ ಅಧಿಕಾರವನ್ನು ವಹಿಸಿಕೊಡಲಾಯಿತು. 1793ರಲ್ಲಿ ಅಯಮಗೌಡನು ಸಂತಾನವಿಲ್ಲದೆ ಕಾಲವಾದನು. ಟಿಪ್ಪು ಸುಲ್ತಾನನ ದಾಳಿಗೆ ನಲುಗಿ ಆನೇಕಲ್ ಅವನ ವಶವಾಯಿತು. ಹೀಗೆ ಸುಮಾರು ಮೂರು ಶತಮಾನಗಳ ಕಾಲ ಆಳಿದ ನಾಡಪ್ರಭುಗಳ ಮನೆತನ ಕಣ್ಮರೆಯಾದರೂ ಅವರು ನೀಡಿದ ಕೊಡುಗೆಗಳು ಇಂದಿಗೂ ನಗರ, ದೇವಾಲಯ, ಕೆರೆ, ಸ್ಮಾರಕಗಳ ರೂಪದಲ್ಲಿ ಶಾಶ್ವತವಾಗಿ ಉಳಿದಿವೆ.

### 2.2.6 ಮಧುಗಿರಿ ಮಹಾನಾಡ ಪ್ರಭುಗಳು

ಮಧುಗಿರಿ ಮಹಾನಾಡ ಪ್ರಭುಗಳನ್ನು ಕುರಿತು ನಡೆದಿರುವ ಅಧ್ಯಯನಗಳು ಕಡಿಮೆ. ನಡೆಸಲು ಇರುವ ಅಧಾರಗಳು ಕೂಡ ವಿರಳ. ಇರುವ ಮುಖ್ಯ ಆಕರಗಳೆಂದರೆ– ಸಮಕಾಲೀನ ಶಾಸನಗಳು, ಮಲ್ಲಿಕಾರ್ಜುನ ಕವಿಯ **ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ,** ಸಿದ್ಧಮಲ್ಲೇಶ ಕವಿಯ **ತೋಂಟದ ರಾಮನ ಸಾಂಗತ್ಯ,** ಬಿ. ನಂಜುಂಡಸ್ವಾಮಿ ಅವರು ಬೆಳಕಿಗೆ ತಂದಿರುವ **ಜಯರೇಖೆ** ಮತ್ತು ಇತರ ಕೆಲವು ಹಸ್ತಪ್ರತಿಗಳು ನೆರವಿಗೆ ಬರುತ್ತವೆ. ಸಂಶೋಧನಾ ಅಧ್ಯಯನಗಳಲ್ಲಿ ಕೆ. ನಾರಾಯಣಾಚಾರ್ಯ **ಮಧುಗಿರಿ ಚರಿತ್ರೆ** (1945), ಆರ್. ಕಾವಲಮ್ಮ ಅವರ ಪಿಎಚ್.ಡಿ ಸಂಶೋಧನಾ ಕೃತಿ **ಮಧುಗಿರಿ ಮಹಾನಾಡು ಪ್ರಭುಗಳು** (2005), ಇತ್ತೀಚೆಗೆ ಬಂದ ಕೆಂಕೆರೆ ಹನುಮಂತೇಗೌಡ ಅವರ **ದೇವಗುಂದ ಮಹಾನಾಡ ಪ್ರಭುಗಳು** (2015) ಮುಖ್ಯವಾದವುಗಳಾಗಿವೆ.

ಮಧುಗಿರಿ ಮಹಾನಾಡ ಪ್ರಭುಗಳ ವಂಶಸ್ಥರಾದ ಮಾರೇಗೌಡ ಮತ್ತು ಅವನ ಆರು ಮಂದಿ ಸೋದರರು ಮೂಲತಃ ಸೊನ್ನಲಿಗೆಯ (ಸೊನ್ನಲಾಪುರ) ಸಿದ್ಧರಾಮೇಶ್ವರರ ಶಿಷ್ಯರು. ಒಮ್ಮೆ ಸಿದ್ಧರಾಮೇಶ್ವರರು "ನೀವು ಪುಣ್ಯವಂತರು, ಅದೃಷ್ಟಶಾಲಿಗಳು, ದೊರೆತನಕ್ಕೆ ಯೋಗ್ಯರು, ಇನ್ನು ಹೆಚ್ಚುದಿನ ಇಲ್ಲಿರಲಾಗದು. ನೀವು ಏಳು ಬಂಡಿದ್ರವ್ಯ ತೆಗೆದುಕೊಂಡು ದಕ್ಷಿಣ ದೇಶಕ್ಕೆ ಪ್ರಯಾಣಮಾಡಿ, ಐದು ಸ್ಥಳಗಳಲ್ಲಿ ದೇವಾಲಯಗಳನ್ನು ಕಟ್ಟಿಸಿ, ನಿಮ್ಮ ಕುಲದೇವರಾದ ನೊಣಬೇಶ್ವರನನ್ನು ಪ್ರತಿಷ್ಠಿಸಿ, ಈ ಪುಣ್ಯದಫಲವಾಗಿ ನೀವು ಏಳನಾಡ ಪ್ರಭುಗಳಾಗುವಿರಿ" ಎಂದು ಆಶೀರ್ವದಿಸಿ, ಏಳುಬಂಡಿ ದ್ರವ್ಯಕೊಟ್ಟು ಕಳಹಿಸಿಕೊಟ್ಟರೆಂಬ ಐತಿಹ್ಯಗಳಿವೆ.[55] ಹೀಗೆ ಸಿದ್ಧರಾಮೇಶ್ವರರಿಂದ ಆಶೀರ್ವಾದ ಪಡೆದು ದಕ್ಷಿಣಕ್ಕೆ ಹೋರಟ ಮಾರೇಗೌಡ, ಕಾಳಣ್ಣಗೌಡ, ಚನ್ನಪ್ಪಗೌಡ, ಕಾಳಚಿಕ್ಕಪ್ಪಗೌಡ, ರಾಮಪ್ಪಗೌಡ, ಸಂಗಪ್ಪಗೌಡ, ಚಿಕ್ಕಪ್ಪಗೌಡ ಎಂಬ ಏಳು ಸೋದರರು ಮಾರ್ಗಮಧ್ಯೆ ವಿಜಯನಗರ ದೊರೆ ಹರಿಹರನಿಗೆ ಯುದ್ಧವೊಂದರಲ್ಲಿ ನೆರವಾಗಿ, ತಮ್ಮ ಶೌರ್ಯ, ಪರಾಕ್ರಮವನ್ನು ಪ್ರದರ್ಶಿಸಿದರು. ಆಗ ಹರಿಹರನು "ನೀವು ಮುಂದೆ ಊರುಗಳನ್ನು ಸ್ಥಾಪಿಸಿದರೆ ನಿಮಗೆ "ಮಹಾನಾಡ ಪ್ರಭು" ಎಂಬ ಬಿರುದು ಕೊಡುವೆನೆಂದು ಹೇಳಿ ಪ್ರೋತ್ಸಾಹಿಸಿ ಕಳುಹಿಸಿದನು.

ಈ ಸೋದರರು ದಕ್ಷಿಣದತ್ತ ಬಂದು, ವಿಜಯನಗರದ ತಿರುಮಲರಾಯನ ಅನುಮತಿ ಪಡೆದು ಮಾರ್ಗಮಧ್ಯದಲ್ಲಿ ನಿಂತು ಕಾಡನ್ನು ಕಡಿಸಿ, ಬಿಡಾರಹಾಕಿ ಕ್ರಿ.ಶ. 1346ರಲ್ಲಿ ಕೋಟೆ ಕಟ್ಟಿಸಿ, ಅದಕ್ಕೆ 'ಕೋರಾ' ಎಂದು ಹೆಸರಿಟ್ಟರು ಎಂದು ಬಿ. ನಂಜುಂಡಸ್ವಾಮಿ ಅವರು ಬೆಳಕಿಗೆ

ತಂದಿರುವ 'ಜಯರೇಖೆ'ಯು ತಿಳಿಸುತ್ತದೆ.[56] ಕೆಲಕಾಲದ ನಂತರ ಈ ಸೋದರರು ಸ್ವತಂತ್ರವಾಗಿ ರಾಜ್ಯಕಟ್ಟಿ ಆಳಬೇಕೆಂಬ ಅಭಿಲಾಷೆಯಿಂದ ಐದು ಬಂಡಿ ದ್ರವ್ಯ ತೆಗೆದುಕೊಂಡು ನಾಲ್ಕೂ ದಿಕ್ಕುಗಳಲ್ಲಿ ಪ್ರವಾಸ ಹೊರಟರು. ಚನ್ನಪ್ಪಗೌಡ ತೆರಿಯೂರನ್ನು ಕಟ್ಟಿನಿಂತರೆ, ಸಂಗಪ್ಪಗೌಡ ಚೇಳೂರುನಲ್ಲಿ, ಕಾಳಚಿಕ್ಕಪ್ಪಗೌಡ ಗುಬ್ಬಿ ಹೊಸಹಳ್ಳಿಯಲ್ಲಿ, ರಾಮಪ್ಪಗೌಡ ಎಣ್ಣೆಗೆರೆಯಲ್ಲಿ ನಿಂತರೆ, ಚಿಕ್ಕಪ್ಪಗೌಡ ಬಿದರೆ ಕಟ್ಟಿನಿಂತನು. ಕಾಳಣ್ಣಗೌಡ ಮಾತ್ರ ಕೋರದಲ್ಲಿಯೇ ನಿಂತನು. ಹಿರಿಯನಾದ ಮಾರೇಗೌಡ ಒಂದು ಬಂಡಿ ದ್ರವ್ಯದ ಜೊತೆಗೆ ಮುಂದುವರೆದು ಜಯಮಂಗಲಿ ನದಿತೀರದಲ್ಲಿ, ನೀರು ವಸತಿಗಳ ಅನುಕೂಲವಿರುವ ಸ್ಥಳವನ್ನು ಕಂಡು ಕಾಡುಕಡಿಸಿ, ಕಾಡುಮೃಗಗಳನ್ನು ಕೊಂದು ಕ್ರಿ.ಶ. 1399ರಲ್ಲಿ ಗ್ರಾಮ ನಿರ್ಮಾಣಕ್ಕೆ ಶಿಲಾಭಾರವನ್ನು ಹಾಕಿ, ನೊಣಬೇಶ್ವರ ದೇವರನ್ನು ಪ್ರತಿಷ್ಠಾಪಿಸಿ, ಊರಿಗೆ 'ಮುಮ್ಮಡಿ ಪಟ್ಟಣ' ಎಂದು ಹೆಸರಿಟ್ಟನೆಂದು ನಾರಾಯಣಾಚಾರ್ಯ ಅವರು ದಾಖಲಿಸುತ್ತಾರೆ.[57] ಅಂದರೆ ಕೋರವನ್ನು ಸ್ಥಾಪಿಸಿದ 50 ವರ್ಷಗಳ ನಂತರ ಸೋದರರಲ್ಲಿ ಹಿರಿಯನಾದ ಮಾರೇಗೌಡನು ಮುಮ್ಮಡಿ ಪಟ್ಟಣವನ್ನು ಸ್ಥಾಪಿಸಿದ ಎಂಬುದನ್ನು ಮರುಪರಿಶೀಲಿಸಬೇಕಾಗುತ್ತದೆ. ಏಕೆಂದರೆ, ಏಳು ಜನರಲ್ಲಿ ಹಿರಿಯನಾದ ಮಾರೇಗೌಡನು ಕೋರಾ ಕಟ್ಟಿದ ಅರ್ಧ ಶತಮಾನದ ನಂತರ ಮುಮ್ಮಡಿ ಪಟ್ಟಣ ಕಟ್ಟಬೇಕಾದರೆ ಮಾರೇಗೌಡನ ವಯಸ್ಸು ಎಷ್ಟಾಗಿರಬಹುದು? ಎಂಬುದನ್ನು ಪ್ರಶ್ನೆ ಮಾಡಿಕೊಳ್ಳಬೇಕಾಗುತ್ತದೆ. ಒಂದು– ಈ ಊರುಗಳ ನಿರ್ಮಾಣದ ಕಾಲದಲ್ಲಿ ವ್ಯತ್ಯಾಸವಿರಬೇಕು. ಅಥವಾ ನಿರ್ಮಾಣ ಮಾಡಿದ ವ್ಯಕ್ತಿಗಳು ಬೇರೆ ಬೇರೆ ತಲೆಮಾರಿನವರಾಗಿರಬೇಕು. ಇತ್ತೀಚೆಗೆ ಮಹಾನಾಡಪ್ರಭುಗಳನ್ನು ಕುರಿತು ಅಧ್ಯಯನ ನಡೆಸಿರುವ ಕೆಂಕೆರೆ ಹನುಮಂತೇಗೌಡರು ಈ ಮನೆತನದ ಮೂಲಪುರುಷ ಮಸಣಗೌಡ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಜೊತೆಗೆ, ಏಳು ಜನ ಸೋದರರ ಹೆಸರುಗಳಲ್ಲಿಯೂ ವ್ಯತ್ಯಾಸಗಳಿರುವುದನ್ನು ಗಮನಿಸಬಹುದು.[58]

ಅದೇನೇ ಇರಲಿ. ಏಳ ಜನ ಸೋದರರು, ಏಳು ಬಂಡಿಯಲ್ಲಿ ಧಾರ್ಮಿಕ ಕ್ಷೇತ್ರಗಳ ಕಡೆಯಿಂದ ಬಂದರು ಎಂಬ ಐತಿಹ್ಯಗಳು ಪಾಳೆಯಗಾರರ ಕಾಲದ ಸಂತತಿಗಳ ಮೂಲದ ಬಗೆಗೆ ಹೇಳುವಾಗ ಸಾಮಾನ್ಯವಾಗಿ ಕೇಳಿಬರುತ್ತವೆ. ಉದಾ. ಆವತಿ ನಾಡಪ್ರಭುಗಳ ವಿಷಯದಲ್ಲಿಯೂ ಇಂತಹ ಕಥನಗಳು ಕೇಳಿಬರುತ್ತವೆ. ಇವುಗಳಲ್ಲಿನ ಐತಿಹಾಸಿಕ ಅಂಶಗಳನ್ನು ಶೋಧಿಸುವುದು ಸವಾಲಿನ ಸಂಗತಿಯಾಗಿದೆ. ಬಹುಶಃ ತಮ್ಮ ಮನೆತನಕ್ಕೆ ಒಂದು ಪರಂಪರೆ, ಹಿರಿಮೆ ಇದೆ ಎಂಬುದನ್ನು ತೋರ್ಪಡಿಸಿಕೊಳ್ಳಲು ಸಿದ್ಧರಾಮೇಶ್ವರರ ಆಶೀರ್ವಾದದಿಂದ ನಾಡು ಕಟ್ಟಿದರು. ಕಂಚಿಯ ಕಡೆಯಿಂದ ಬಂದರು. ದ್ವಾರಕೆಯಿಂದ ಬಂದರು ಇತ್ಯಾದಿ ಮೂಲದ ಬಗೆಗೆ

ಹೇಳಿಕೊಳ್ಳುವುದುಂಟು. ಏಳು ಎಂಬುದು ಒಂದು ಆಶಯ ವಾಚಕವಾಗಿ ತೋರುತ್ತದೆ. ಏಳು ಎಂಬುದು ಏಳಿಗೆಯ ಸೂಚಕವೂ ಆಗಿರಬಹುದು.

ಒಟ್ಟಾರೆ, ಏಳು ಸೋದರರು ಏಳು ಊರುಗಳಲ್ಲಿ ನೆಲೆನಿಂತರು. ಈ ಏಳು ಊರುಗಳ ಪ್ರದೇಶವೇ 'ಮಹಾನಾಡು' ಇವುಗಳ ಒಡೆಯರೇ "ಮಹಾನಾಡಪ್ರಭುಗಳು". ಇವರು ಹೊಸಪಟ್ಟಣವನ್ನು (ಗೌರಿಬಿದನೂರು) ಕೇಂದ್ರವಾಗಿ ಮಾಡಿಕೊಂಡು, ವಿಜಯನಗರದ ಮಾಂಡಲಿಕನಾಗಿ ರಾಜ್ಯಭಾರ ನಡೆಸುತ್ತಿದ್ದ ವಿಜಯನಗರ ಬುಕ್ಕರಾಯನ ಕೈಕೆಳಗೆ ಈ 'ಮಹಾನಾಡಪ್ರಭುಗಳು' ಆಳುತ್ತಿದ್ದರು. ನಂತರ ವಿಜಯನಗರದ ಸಾಮ್ರಾಟನಾದ ಬುಕ್ಕರಾಯನು, ಹೊಸಪಟ್ಟಣಕ್ಕೆ ಬದಲು ಪೆನುಗೊಂಡೆಯನ್ನು ಈ ಪ್ರದೇಶದ ರಾಜಧಾನಿಯನ್ನಾಗಿ ಮಾಡಿದನು. ನಂತರ ಮುಮ್ಮಡಿ ಪಟ್ಟಣದಿಂದ ಮಾರೇಗೌಡ, ವೀರೇಗೌಡ, ದೊಡ್ಡಗೌಡ ಮಹಾನಾಡನ್ನು ಆಳುತ್ತಿದ್ದರು. ಬಿಜಾಪುರದ ಆದಿಲಾಶಾಹನ ಸೈನ್ಯವು ಮುಮ್ಮಡಿ ಪಟ್ಟಣದ ಮೇಲೆರಗಿ ಬಂದು ಪಟ್ಟಣವನ್ನು ಸರ್ವನಾಶ ಮಾಡಿತಲ್ಲದೆ, ದೊಡ್ಡಗೌಡನನ್ನು ಕೊಂದಿತು. ಆಗಿನ್ನು ಅಪ್ರಾಪ್ತನಾಗಿದ್ದ ದೊಡ್ಡಗೌಡನ ಮಗ ಹಿರೇಚಿಕ್ಕಪ್ಪಗೌಡನು ತುಂಗವಟ್ಟಿಯಲ್ಲಿ ಬೆಳೆದು ದೊಡ್ಡವನಾದ ಮೇಲೆ ಪುನಃ ಮುಮ್ಮಡಿ ಪಟ್ಟಣವನ್ನು ಜೀರ್ಣೋದ್ಧಾರ ಮಾಡಿದನು. ಕೆಲಕಾಲದ ನಂತರ ಬಿಜ್ಜಮಹಾದೇವಿಯು ಚಿಕ್ಕಪ್ಪಗೌಡನ ಕನಸಿನಲ್ಲಿ ಬಂದು ರಾಜ್ಯಕಟ್ಟಲು ಹೇಳಿದಳಾದ ಕಾರಣ ಪಟ್ಟಣ ನಿರ್ಮಾಣಕ್ಕೆ ನೆಲೆ ಹುಡುಕುತ್ತಾ ಹೊರಡುತ್ತಾನೆ. ಸವಾರಿ ಹೊರಟು ಅರಣ್ಯ ತಿರುಗುತ್ತಿರಲು ನಾಯಿಗಳ ಮೇಲೆ ಕುಂದಲಿಗಳು ಹಾದುಬರಲು ಇದನ್ನು ನೋಡಿದ ಗೌಡರು ಆಶ್ಚರ್ಯದಿಂದ ಇದು ಗಂಡುಭೂಮಿ ಇದು ಪಟ್ಟಣವನ್ನು ಕಟ್ಟಲು ಯೋಗ್ಯ ಸ್ಥಳವೆಂದು ನಿಶ್ಚಯಿಸಿ, ಕೃಷ್ಣದೇವರಾಯನ ಅಪ್ಪಣೆ ಪಡೆದು ಕ್ರಿ.ಶ. 1524ರಲ್ಲಿ ಮರಗಿಡ ಕಡೆಸಿ, ಕೋಟೆ ಕೊತ್ತಲಗಳನ್ನು ನಿರ್ಮಾಣ ಮಾಡಿಸಿದನು.[59] ಈತ ತೋಂಟದ ಸಿದ್ಧಲಿಂಗನ ಭಕ್ತನಾಗಿದ್ದನು. ಚಿಕ್ಕಪ್ಪಗೌಡನು ತನ್ನ ಕೊನೆಗಾಲದಲ್ಲಿ ಮಗನಾದ ಕರಿತಿಮ್ಮ ಚಿಕ್ಕಪ್ಪಗೌಡನಿಗೆ ಪಟ್ಟಕಟ್ಟಿದನು. ಈ ವೇಳೆಗೆ ವಿಜಯನಗರ ಸಾಮ್ರಾಜ್ಯ ತಾಳಿಕೋಟೆ ಯುದ್ಧದಲ್ಲಿ (1565) ಸೋತು, ರಾಮರಾಯನ ಸೋದರನಾದ ತಿರುಮಲರಾಯನು 1567ರಲ್ಲಿ ಪೆನುಗೊಂಡೆಗೆ ಬಂದು ನೆಲೆನಿಂತನು. ನಂತರ ಅವನ ಮಗ ಶ್ರೀರಂಗರಾಯ (1574–1585) ಆಳ್ವಿಕೆ ನಡೆಸಿದನು. ಇವನ ಕಾಲದಲ್ಲಿ ಸುಲ್ತಾನರು ಪೆನುಗೊಂಡೆಯನ್ನು ಮುತ್ತಿದರು (1577). ಆಗ ಚನ್ನಪಟ್ಟಣವನ್ನು ಆಳುತ್ತಿದ್ದ ಶ್ರೀರಂಗರಾಯನ ಅಳಿಯ ಜಗದೇವರಾಯನು, ಕರಿತಿಮ್ಮ ಚಿಕ್ಕಪ್ಪಗೌಡನೊಡಗೂಡಿ ಹೋಗಿ ಶತ್ರುಗಳನ್ನು ಹಿಮ್ಮೆಟ್ಟುವಂತೆ ಮಾಡಿದರು. ಕರಿತಿಮ್ಮ ಚಿಕ್ಕಪ್ಪಗೌಡನಿಗೆ ಸಿದ್ಧಲಿಂಗನ ಪ್ರಸಾದದಿಂದ

ಸೋಮಾಂಬೆಯ ಉದರದಲ್ಲಿ ಇಮ್ಮಡಿ ಚಿಕ್ಕಪ್ಪಗೌಡ ಎಂಬ ಮಗನು ಜನಿಸಿದನೆಂದು **ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ** ಹೇಳುತ್ತದೆ.[60] ಇವನೇ ಮುಂದೆ ಅಧಿಕಾರಕ್ಕೆ ಬಂದನು.

### 2.2.6.1 ಇಮ್ಮಡಿ ಚಿಕ್ಕಪ್ಪಗೌಡ

ಮಧುಗಿರಿ ನಾಡಪ್ರಭುಗಳಲ್ಲಿಯೇ ಅತ್ಯಂತ ಪ್ರಸಿದ್ಧನಾದ ದೊರೆ. ಪೆನುಗೊಂಡೆಯಿಂದ ಆಳುತ್ತಿದ್ದ ವಿಜಯನಗರದ ಅರಸು ವೆಂಕಟಪತಿರಾಯನ (1586–1614) 77 ಜನ ಪಾಳೆಯಗಾರರಲ್ಲಿ ಇಮ್ಮಡಿ ಚಿಕ್ಕಪ್ಪಗೌಡ (ಇಮ್ಮಡಿ ಚಿಕ್ಕಭೂಪಾಲ) ಒಬ್ಬ. ಈತನು ತೋಂಟದ ಸಿದ್ಧಲಿಂಗನ ಹೆಸರಿನಲ್ಲಿ ಸಿದ್ಧಾಪುರ ಗ್ರಾಮವನ್ನು ನಿರ್ಮಿಸಿದನು. ಮದ್ದಗಿರಿ ಮತ್ತು ಚೆನ್ನರಾಯದುರ್ಗ ಎಂಬ ಎರಡು ಗ್ರಾಮಗಳನ್ನು ನಿರ್ಮಿಸಿದನಲ್ಲದೆ, ರಾಜ್ಯವನ್ನು ಕೋಟೆ, ಕೊತ್ತಲಗಳಿಂದ ಸುಭದ್ರಗೊಳಿಸತೊಡಗಿದನು. ಇದರಿಂದ ವಿಜಯನಗರದ ವೆಂಕಟಪತಿರಾಯನಿಗೆ ಇವನ ಬಗೆಗೆ ತಪ್ಪು ಅಭಿಪ್ರಾಯ ಬಂದಿತು. ಆದ್ದರಿಂದ ವೆಂಕಟಪತಿರಾಯನ ಆಜ್ಞೆಯ ಮೇರೆಗೆ ಯುದ್ಧಕ್ಕೆ ಬಂದ ಚೆನ್ನಪಟ್ಟಣದ ಜಗದೇಕರಾಯನನ್ನು ಸೋಲಿಸಿ, ಓಡಿಸಿದನು. ಇದರಿಂದ ಕುಪಿತಗೊಂಡ ವೆಂಕಟಪತಿರಾಯನೇ ಬೃಹತ್ ಸೈನ್ಯದೊಂದಿಗೆ ಬಂದು ಸಿದ್ಧಾಪುರ ಸಮೀಪ ಬೀಡುಬಿಟ್ಟನು. ತನ್ನ ಸ್ವಾಮಿಭಕ್ತಿಯನ್ನು ಋಜುವಾತು ಮಾಡಲು ಯೋಚಿಸಿದ ಚಿಕ್ಕಪ್ಪಗೌಡನು ಅಂದು ರಾತ್ರಿ ಪರಿಮಿತ ಸೈನ್ಯದೊಂದಿಗೆ ವೆಂಕಟಪತಿರಾಯನ ಪಾಳೆಯವನ್ನು ಪ್ರವೇಶಿಸಿ, ಗಾಢನಿದ್ರೆಯಲ್ಲಿದ್ದ ಅರಸನನ್ನು ಮಂಚಸಹಿತ ಎತ್ತಿತಂದು ವೈಭವೋಪೇತ ಮಂಟಪದಲ್ಲಿ ಇರಿಸಿದನು. ಸಾಮ್ರಾಟ ವೆಂಕಟಪತಿರಾಯನು ಮುಂಜಾನೆ ಎಚ್ಚರಗೊಳ್ಳುವ ಹೊತ್ತಿಗೆ ರಾಜೋಚಿತ ಕಾಣಿಕೆ ಸಮೇತ ಕೈಮುಗಿದು ನಿಂತನು. ಈ ವೀರನ ವಿನಯ ಮತ್ತು ನಿಷ್ಠೆಯನ್ನು ಕಂಡು ಚಕಿತನಾದ ವೆಂಕಟಪತಿರಾಯನು ಸಮರವನ್ನು ಸಮಾರಂಭವನ್ನಾಗಿಸಿ, ಚಿಕ್ಕಪ್ಪಗೌಡನಿಗೆ 'ರಾಜಾ' ಬಿರುದನ್ನು ನೀಡಿ ಗೌರವಿಸಿದನು.

**ಹರವೆಕೋಟೆ ಕಾಳಗ:** ಮುಖ್ಯವಾದ ಕದನವೆಂದರೆ, **ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯಕ್ಕೆ** ವಸ್ತುವಾಗಿರುವ ಆವತಿನಾಡಪ್ರಭು ಹಾವಳಿ ಭೈರೇಗೌಡನೊಂದಿಗೆ ನಡೆಸಿದ ಹರವೆಕೋಟೆ ಕಾಳಗ. ಈ ಕಾಳಗವು ಕ್ರಿ.ಶ. 1594 ರಿಂದ 1606ರ ಮಧ್ಯೆ ಘಟಿಸಿರಬೇಕೆಂದು ಎಂ.ಎಂ. ಕಲಬುರ್ಗಿ ಮತ್ತು ಆರ್.ಸಿ. ಹಿರೇಮಠ ಅವರು ಅಭಿಪ್ರಾಯ ಪಡುತ್ತಾರೆ.[61] ಈ ಮೊದಲು ಆವತಿ ನಾಡಪ್ರಭುಗಳ ವಿಷಯದಲ್ಲಿ ಚರ್ಚಿಸಿರುವಂತೆ, ಕಾರೇಹಳ್ಳಿಯಿಂದ ಆಳುತ್ತಿದ್ದ ಹಾವಳಿ ಭೈರೇಗೌಡನೂ ಇಮ್ಮಡಿ ಚಿಕ್ಕಪ್ಪಗೌಡನೂ ಮೊದಲಿನಿಂದಲೂ ವೈರತ್ವಕ್ಕೆ ಕಾರಣವೂ ಇತ್ತು. ಇಮ್ಮಡಿ ಚಿಕ್ಕಪ್ಪಗೌಡನ ಪಕ್ಕದ ನಾಡನ್ನು ಆಳುತ್ತಿದ್ದವನು ಹೊಳವನಹಳ್ಳಿಯ ರಣಭೈರೇಗೌಡ.

ಈತನು ಕೊರಟಗೆರೆ ಬೆಟ್ಟದ ಮೇಲೆ ಕೋಟೆಯನ್ನು ಪೇಟೆಯನ್ನು ಕಟ್ಟಿಸಿ, ತನ್ನ ರಾಜಧಾನಿ ಮಾಡಿಕೊಂಡು ಆಳುತ್ತಿದ್ದನು. ರಾಜ್ಯವಿಸ್ತರಣೆಯ ವಿಚಾರದಲ್ಲಿ ಚಿಕ್ಕಪ್ಪಗೌಡನಿಗೂ ರಣಭೈರೇಗೌಡನಿಗೂ ಕಲಹ ನಡೆಯುತ್ತಲೇ ಇತ್ತು. ಬೈರೇಗೌಡನ ದಂಡನಾಯಕರಾದ ತಿಮ್ಮೇಗೌಡ, ಬೈಜೇಗೌಡ, ಸಂಜೀವೇಗೌಡ ಮತ್ತು ರಾಮೇಗೌಡರು ಚಿಕ್ಕಪ್ಪಗೌಡನ ಮೇಲೇರಿ ಬಂದರು. ಈ ಸಮಯವನ್ನೇ ಕಾಯುತ್ತಿದ್ದ ಆವತಿ ನಾಡಿನ ಹಾವಳಿ ಭೈರೇಗೌಡನು ಚಿಕ್ಕಪ್ಪಗೌಡನಿಗೆ ಸೇರಿದ ಮಿಡಗೇಶಿಯನ್ನು ಸ್ವಾಧೀನ ಪಡಿಸಿಕೊಂಡನು. ಇದು ಸಹಜವಾಗಿಯೇ ಚಿಕ್ಕಪ್ಪಗೌಡನಲ್ಲಿ ಹಾವಳಿ ಭೈರೇಗೌಡನ ಬಗೆಗೆ ಕೋಪವನ್ನು ಉಂಟುಮಾಡಿತ್ತು. ಈ ಘಟನೆಯ ನಂತರ ಮಹತ್ವಾಕಾಂಕ್ಷಿಯಾದ ಹಾವಳಿ ಭೈರೇಗೌಡನು ವಿಜಯನಗರದ ಅರಸ ವೆಂಕಟಪತಿರಾಯನು ರಾಜಧಾನಿ ಪೆನುಗೊಂಡೆಯಿಂದ ದೂರ ಉಳಿದಿದ್ದ ಸಮಯವನ್ನು ಸಾಧಿಸಿ, ಕೆಲವು ಪಾಳೆಯಗಾರರ ಜೊತೆಗೂಡಿ ಪೆನುಗೊಂಡೆ ಕೋಟೆಯನ್ನು ವಶಪಡಿಸಿಕೊಂಡನು. **ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ**ದ 14ನೇ ಸಂಧಿಯಲ್ಲಿ ಹೇಳುವಂತೆ "ಹದಿನೆಂಟು ಲಕ್ಷ ವಿತ್ತವನ್ನು ಲೂಟಿ ಮಾಡಿದನು. ಮನೆ ಮನೆಗಳನ್ನು ಹೊಕ್ಕು ಧನಧಾನ್ಯ, ರತ್ನಾಭರಣಗಳನ್ನು ಹಾವಳಿ ಭೈರೇಗೌಡನ ಸೈನಿಕರು ಲೂಟಿ ಮಾಡಿದರು. ಹೆಂಗಳೆಯರ ಮಾನ ಹರಣ ಮಾಡಿದರಲ್ಲದೆ, ವಸ್ತ್ರಾಭರಣಗಳನ್ನು ಸುಲಿಗೆ ಮಾಡಿದರು. ಸಾಲು ಮಳಿಗೆಗಳ ಸಕಲಸಂಪದವೆಲ್ಲವೂ ಕಾಲಾಳುಗಳ ಕಾಟದಿಂದ ನಾಶವಾಯಿತು. ಸನ್ಯಾಸಿಗಳು, ಆಚಾರ್ಯರು, ವಿದ್ವಾಂಸರು, ಮುಂತಾದವರ ಮನೆಮಠಗಳನ್ನು ಅನ್ಯಾಯದಿಂದ ಸುಲಿಗೆ ಮಾಡಿದರು. ದೇವಮಂದಿರದ ಹೆಬ್ಬಾಗಿಲನ್ನು ನೂಕಿ ಭಂಡಾರವನ್ನು ಕೊಳ್ಳೆ ಹೊಡೆದರು. ವೆಂಕಟಪತಿರಾಯನ ಪಟ್ಟದ ಆನೆ, ಕುದುರೆಗಳನ್ನೆಲ್ಲ ಹಿಡಿದು ಭಂಡಾರದಲ್ಲಿದ್ದ 18 ಲಕ್ಷ ವಿತ್ತದ ಜೊತೆಗೆ ಹೊರಟನು.

ಈ ವಿಷಯ ಕೇಳಿದ ಇಮ್ಮಡಿ ಚಿಕ್ಕಪ್ಪಗೌಡನು ತನ್ನ ಹಿರಿಯ ಮಗ ತೋಂಟದರಾಯನ ಜೊತೆಗೆ ಬಸವೇಂದ್ರ, ಶೇಖೆಂದ್ರ, ಅಳಿಯ ಸೋಮೇಂದ್ರ, ಬೋಳ ವೀರೇಂದ್ರ, ಅಳಿಯ ಲಕ್ಕಣ್ಣ, ಅಳಿಯ ಕಲ್ಲೇಂದ್ರ, ಅಳಿಯ ವೀರೇಂದ್ರ, ಅಳಿಯ ಮುದ್ದೇಂದ್ರ, ಅಳಿಯಲಿಂಗೇಂದ್ರ, ಮಿಡಿಗೇಶಿಯ ಚೆನ್ನಪ್ಪನಾಯಕ, ದಿವ್ಯಲಿಂಗ, ಕೊಡಗಿಹಳ್ಳಿಯ ಬಸವ, ದೊಡ್ಡೇರಿಯ ಕೆಂಪ, ಗರಣಿಯ ತೋಟೇಂದ್ರ, ಬುಕ್ಕಪಟ್ಟಣದ ಕೆಂಪನಗೌಡ ಮುಂತಾದವರ ಜೊತೆಗೂಡಿ ಯುದ್ಧಕ್ಕೆ ಹೊರಟನು. ಈ ಕೋಟೆಯ ಮುತ್ತಿಗೆಯಲ್ಲಿ ತೋಂಟೇಂದ್ರನು ತೋರಿದ ಸಾಹಸಕ್ಕೆ ಶತ್ರುಗಳು ಹಿಮ್ಮೆಟ್ಟಿದರು. ಹರವೆ ಕೋಟೆಯನ್ನು ಮುತ್ತಿ ವಶಪಡಿಸಿಕೊಂಡರು. ಸೋಲನರಿತ ಭೈರೇಗೌಡನು ಸಂಧಿ ಬಯಸಿದನು. ಆದರೆ ಚಿಕ್ಕಪ್ಪಗೌಡನು "ಪೆನುಗೊಂಡೆಯನ್ನು ಬಿಡಬೇಕು, ಮಿಡಿಗೇಶಿಯನು ಕೊಡಬೇಕು" ಎಂದು ಹೇಳುವ ಮೂಲಕ ಸಂಧಿಯನ್ನು ನಿರಾಕರಿಸಿದನು. ಮರುದಿನ ಯುದ್ಧ

ಮುಂದುವರೆದು, ಭೈರೇಗೌಡನು ಮದ್ದಾನೆಯನ್ನು ಸೆರೆಹಿಡಿದರು. ಇದರಿಂದ ಅವಮಾನಗೊಂಡ ಭೈರೇಗೌಡನ ಸೇನಾಪತಿ ಬೈಚೇಂದ್ರನು ಮತ್ತಷ್ಟು ಸೇನೆಯೊಂದಿಗೆ ಮರುದಾಳಿ ಮಾಡಿದ. ಈ ಸೇನೆಯನ್ನು ಎದುರಿಸುತ್ತಾ ಇಮ್ಮಡಿ ಚಿಕ್ಕಪ್ಪಗೌಡನ ಹಿರಿಯ ಮಗ ತೋಟಂದರಾಯನು ವೀರಮರಣವನ್ನು ಅಪ್ಪಿದನು. ಇವನ ಮಡದಿ ಚೆನ್ನಬಸವಮ್ಮ ಕೂಡ ಮಹಾಸತಿಯಾದಳು. ಹಿರಿಯ ಮಗನ ಸಾವಿನ ದುಃಖದಲ್ಲಿಯೇ ಇಮ್ಮಡಿ ಚಿಕ್ಕಪ್ಪಗೌಡನೂ ಮರಣ ಹೊಂದಿದನು. ಆತನ ಮಡದಿಯೂ 'ಮಹಾಸತಿ'ಯಾದಳು.

ನಂತರ ಗುರು ಬೋಳಬಸವೇಶ್ವರರು ಇಮ್ಮಡಿ ಚಿಕ್ಕಪ್ಪಗೌಡನ ಕಿರಿಯ ಮಗ ಸಿಪ್ಪೇಂದ್ರನಿಗೆ ರಾಜ್ಯಪಟ್ಟವನ್ನು ಕಟ್ಟಿದರು. ಈತನು ಮುಮ್ಮಡಿ ಚಿಕ್ಕಪ್ಪಗೌಡನೆಂದು ಪ್ರಸಿದ್ಧಿಗೆ ಬಂದನು. ಈತನು ರಾಜಧಾನಿಯನ್ನು ಬಿಜ್ಜಾವರದಿಂದ ಮಧುಗಿರಿಗೆ ವರ್ಗಾಯಿಸಿದನು. ಸ್ವತಃ ಕವಿಯಾಗಿದ್ದ ಈತನು **ಅಭಿನವ ಭರತಸಾರಸಂಗ್ರಹ** ಎಂಬ ಗ್ರಂಥವನ್ನು ರಚಿಸಿದನು.

ಶಿರಾವನ್ನು ರಣದುಲ್ಲಾಖಾನನು ಮುತ್ತಿದಾಗ ಅಲ್ಲಿನ ದೊರೆಯಾಗಿದ್ದ ರಂಗಪ್ಪರಾಜು ಯುದ್ಧದಲ್ಲಿ ಮಡಿದನು. ಅವನ ಸಂತತಿಯ ರಾಮಪ್ಪರಾಜು ಮತ್ತು ಸರ್ಜಪ್ಪರಾಜು ಎಂಬ ಮಕ್ಕಳನ್ನು ಅಗಸನೊಬ್ಬ ಗೌಪ್ಯವಾಗಿ ಮಧುಗಿರಿಗೆ ಕರೆತಂದು ಮುಮ್ಮಡಿ ಚಿಕ್ಕಪ್ಪಗೌಡನ ಸುಪರ್ದಿಗೆ ಬಿಟ್ಟನು. ಈ ಮಕ್ಕಳನ್ನು ರಕ್ಷಿಸಿ, ಬೆಳೆಸಿದ ಚಿಕ್ಕಪ್ಪಗೌಡನು ಈ ಮಕ್ಕಳಿಗೆ 5000 ಸೀಮೆಯನ್ನು ಕೊಟ್ಟು, ರತ್ನಗಿರಿಯಲ್ಲಿ ನೆಲೆನಿಲ್ಲಿಸಿದನು.

ಸಪ್ಪೇಗೌಡ ಅಥವಾ ಮುಮ್ಮಡಿ ಚಿಕ್ಕಪ್ಪಗೌಡನ ನಂತರ ಸಂಗಪ್ಪಗೌಡ, ಹಿರೇತೋಂಟಪ್ಪಗೌಡ, ಕಾಳಚಿಕ್ಕಪ್ಪಗೌಡರು ಮಧುಗಿರಿ, ಚನ್ನರಾಯನದುರ್ಗ ಮತ್ತು ಮಿಡಗೇಶಿಗಳನ್ನು ಆಳುತ್ತಿದ್ದರು. ಈ ನಡುವೆ ಕೆಳದಿಯ ಶಿವಪ್ಪನಾಯಕನು ವಿಜಯನಗರದ ಅರಸ ಶ್ರೀರಂಗರಾಯನ ಸ್ಥಿತಿಗೆ ಮರುಗಿ, ಅವನಿಗೆ ಶ್ರೀರಂಗಪಟ್ಟಣ ರಾಜ್ಯವನ್ನು ಕೊಡಿಸಿ, ನೆಲೆಗೊಳಿಸಲು ಮುತ್ತಿಗೆ ಹಾಕಿದಾಗ, ಕಾಳಚಿಕ್ಕಪ್ಪಗೌಡನೂ ಸೇನಾಸಮೇತನಾಗಿ ಹೋಗಿ ಮುತ್ತಿಗೆಯಲ್ಲಿ ಪಾಲ್ಗೊಂಡನು. ಮುತ್ತಿಗೆ ವಿಫಲವಾಯಿತು. ಮೈಸೂರು ಒಡೆಯರ್ ಚಿಕ್ಕದೇವರಾನ ಬೃಹತ್ ಸೈನ್ಯವು ಸಕ್ಕರೆ ಪಟ್ಟಣದ ಬಳಿ ಶತ್ರುಸೇನೆಯನ್ನು ಸೋಲಿಸುವುದರೊಂದಿಗೆ ವಿಜಯನಗರದ ಅರಸನ ಅಂತ್ಯವೂ ಆಯಿತು. ಇತ್ತ ಸೋತು ಮಧುಗಿರಿಗೆ ಕಾಳಚಿಕ್ಕಪ್ಪಗೌಡನು ಹಿಂತಿರುಗಿದ ನಂತರ ಅವನ ಇಬ್ಬರು ಮಕ್ಕಳಾದ ರಾಮೇಗೌಡ ಮತ್ತು ತಿಮ್ಮೇಗೌಡರ ನಡುವೆ ರಾಜ್ಯಕ್ಕಾಗಿ ಕಲಹ ಹುಟ್ಟಿತು. ಕೊನೆಗೆ ಮಧುಗಿರಿ ರಾಮೇಗೌಡನಿಗೂ, ಚನ್ನರಾಯದುರ್ಗ ತಿಮ್ಮೇಗೌಡನಿಗೂ ಹಂಚಿಕೆಯಾಯಿತು. ಇದನ್ನು ಸಹಿಸದ ತಿಮ್ಮೇಗೌಡನು ಚಿಕ್ಕದೇವರಾಜ

ಒಡೆಯರ ಬಳಿಗೆ ಹೋಗಿ ಸಹಾಯ ಕೇಳಿದನು. ಮುಮ್ಮಡಿ ಚಿಕ್ಕಪ್ಪಗೌಡನ ಮೇಲಿನ ಪ್ರತಿಕಾರಕ್ಕಾಗಿ ಕಾಯುತ್ತಿದ್ದ ಚಿಕ್ಕದೇವರಾಜ ಒಡೆಯರ್ ಈ ಸಮಯವನ್ನು ಸದುಪಯೋಗಪಡಿಸಿಕೊಂಡನು. ದಳವಾಯಿ ದೇವರಾಜಯ್ಯನ ನೇತೃತ್ವದ ಮೈಸೂರು ಸೈನ್ಯವು ಮಧುಗಿರಿ, ಚನ್ನರಾಯನದುರ್ಗ, ಮಿಡಿಗೇಶಿಗಳನ್ನು ವಶಪಡಿಸಿಕೊಂಡಿತು. ರಾಮೇಗೌಡ ಮತ್ತು ತಿಮ್ಮೇಗೌಡರನ್ನು ಬಂಧಿಸಿ, ಪರಿವಾರ ಸಮೇತವಾಗಿ ಶ್ರೀರಂಗಪಟ್ಟಣಕ್ಕೆ ಸಾಗಿಸಿ, ಬಂಧನದಲ್ಲಿಟ್ಟನು. ಅಲ್ಲಿಗೆ ಮಧುಗಿರಿ ಮಹಾನಾಡಪ್ರಭುಗಳ ಮನೆತನ ಅಂತ್ಯವಾಯಿತು.

ಹೀಗೆ ಸೋದರರ ಐಕ್ಯತೆಯಿಂದ ಕಟ್ಟಿದ 'ಮಹಾನಾಡು', ಸೋದರರ ಕಲಹದೊಂದಿಗೆ ಸುಡುಗಾಡು ಆಗಿದ್ದು ಮಾತ್ರ ದುರಂತ.

### 2.2.7 ಚನ್ನಪಟ್ಟಣದ ಪಾಳೆಯಗಾರರು

ದಕ್ಷಿಣ ಕರ್ನಾಟಕದ ನಾಡಪ್ರಭುಗಳಲ್ಲಿ ಮತ್ತೊಂದು ಪ್ರಮುಖವಾದ ಮನೆತನ ಎಂದರೆ ಚನ್ನಪಟ್ಟಣದ ಪಾಳೆಯಗಾರರು. ಇವರು ರಾಣಾ ವಂಶದವರು. ಈ ವಂಶದ ಮೂಲ ಪುರುಷ ರಾಣೋಜಿರಾವ್ ಚತುರ್ಥ ಕುಲಕ್ಕೆ ಸೇರಿದವನು. ಈ ವಂಶದವರು ತೆಲುಗು ಬಣಜಿಗ ಕುಲದವರು. ತಿಮ್ಮನಾಯಕ ಅವನ ಮಗ ತಿಮ್ಮಣ್ಣ ನಾಯಕ ಅಥವಾ ಜಗದೇವರಾಯ ವಿಜಯನಗರದ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದನು.[62] ಇವನಿಗೆ ವಿಜಯನಗರದ ಅರಸರ ಜೊತೆಗೆ ಸಂಬಂಧವಿದ್ದಂತೆ ತೋರುತ್ತದೆ.

ಕ್ರಿ.ಶ. 1530ರ ಕೂಟಗಲ್ ಶಾಸನದಲ್ಲಿ "ರಾಜ್ಯಾಧಿಪತಿ ತಿಂಮಪ್ಪ ನಾಯಕ" ಎಂದಿದೆ.[63] ಕ್ರಿ.ಶ. 1534ರ ಕೋಡಂಬಳ್ಳಿ ಗ್ರಾಮದ ಶಾಸನದಲ್ಲಿ "ಭಂಡಾರದ ತಿಮ್ಮಪ್ಪಯ್ಯನವರ ನಾಯಕತನಕ್ಕೆ ಸಲ್ಲುವ ಚನ್ನಪಟ್ಟಣ ರಾಜ್ಯ" ಎಂದು ಉಕ್ತವಾಗಿದೆ.[64] 1534ರ ಚನ್ನಪಟ್ಟಣ ತಾಲ್ಲೂಕಿನ ಮಳೂರುಪಟ್ಟಣದ ಶಾಸನದಲ್ಲಿ "ಅಚ್ಯುತದೇವ ಮಹಾರಾಯ ಭಂಡಾರಕ್ಕೆ ಕರ್ತರಾದ ತಿಂಮಪ್ಪಯ್ಯ" ಎಂದು ಉಲ್ಲೇಖಿಸಿದರೆ[65] ಇದೇ ಕಾಲದ ಚಕ್ಕರೆಯ ಶಾಸನವು "ರಾಯಭಂಡಾರದ ತಿಮ್ಮಪ್ಪಯ್ಯನವರ ನಿರೂಪದಿಂದ ಚಕ್ಕೆರೆಯ ತಿರುಮಲ ದೇವರನ್ನು ಪ್ರತಿಷ್ಠಾಪಿಸಿ ತೆರಿಗೆಗಳನ್ನು ಸರ್ವಮಾನ್ಯವಾಗಿ ಬಿಟ್ಟ ವಿವರಗಳನ್ನು ತಿಳಿಸುತ್ತದೆ",[66] ಕ್ರಿ.ಶ. 1535ರ ಮಾಗೇನಹಳ್ಳಿಯ ಶಾಸನದಲ್ಲಿ "ಗ್ರಾಮದಲ್ಲಿ ಪೂರ್ವ ಮೊದಲಾಗಿ ದೇವರಿಗೆ ಸಂದು ಬಹ ಸುಂಕವನು ಭಂಡಾರಕ್ಕೆ ಹಿರಿಯ ತಿಮ್ಮಪ್ಪಯ್ಯನವರು ಅತಿಕಾರವಿರಲು..." ಎಂದಿದೆ.[67] ಇದರಿಂದ ರಾಯ ಭಂಡಾರದ ತಿಮ್ಮಪ್ಪಯ್ಯನಿಗೆ ಚನ್ನಪಟ್ಟಣದ ನಾಯಕತನವನ್ನು ಕೊಟ್ಟಿರುವುದು ಸ್ಪಷ್ಟವಾಗುತ್ತದೆ. ಎಂ.ಕೆ. ಮಂಜುನಾಥ ಅವರು "ಶಾಸನಗಳ ಆಧಾರದಿಂದ ಈ ಮನೆತನದವರು

ಕ್ರಿ.ಶ. 1570ರಲ್ಲಿ ಅಧಿಕೃತವಾಗಿ ವಿಶಾಲವಾದ ಚನ್ನಪಟ್ಟಣ ರಾಜ್ಯದ ದೊರೆಗಳಾದರೂ ಕೂಡ, ಕ್ರಿ.ಶ. 1530ಕ್ಕಿಂತ ಪೂರ್ವದಿಂದಲೂ ಇವರು ಚನ್ನಪಟ್ಟಣ ಪ್ರದೇಶದ ಒಡೆತನವನ್ನು ಹೊಂದಿದ್ದರು" ಎಂದು ಅಭಿಪ್ರಾಯ ಪಡುತ್ತಾರೆ.[68] ತಿಮ್ಮಪ್ಪನಾಯಕನ ಮಗನಾದ ಒಂದನೇ ಜಗದೇವರಾಯನು ವಿಜಯನಗರದ ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ (1563) ನಾಗಮಂಗಲ ಪ್ರದೇಶದ ಅಧಿಕಾರಿಯಾಗಿ ನಿಯೋಜಿತನಾಗಿದ್ದನು. ಇದೇ ಕಾಲದ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನ ಅಂಬಳೆ ಗ್ರಾಮದ ಶಾಸನದಲ್ಲಿ ಜಗದೇವರಾಯನು ಈ ಪ್ರದೇಶದ ಒಡೆಯನಾಗಿದ್ದನು ಎಂಬುದನ್ನು ಎಂ.ಕೆ. ಮಂಜುನಾಥ ಅವರು ಗುರುತಿಸಿದ್ದು, ಹೀಗೆ ಏಕಕಾಲದಲ್ಲಿ ನಾಗಮಂಗಲ ಮತ್ತು ಯಳಂದೂರು ಪರಿಸರವನ್ನು ನೋಡಿಕೊಳ್ಳುತ್ತಿದ್ದ ಎಂದಿದ್ದಾರೆ. ಮುಂದುವರೆದು ಕ್ರಿ.ಶ. 1564ರ ಯಳಂದೂರು ತಾಲ್ಲೂಕಿನ ಗಣಿಗನೂರು ಶಾಸನವು ಸದಾಶಿವರಾಯನ ಆಳ್ವಿಕೆಯ ಕಾಲದಲ್ಲಿ ಜಗದೇವರಾಯನು ಹದಿನಾಡ ಸೀಮೆಯನ್ನು ಪಾಲಿಸುತ್ತಿದ್ದ ಎಂಬ ಅಂಶವನ್ನು ಗುರುತಿಸಿದ್ದಾರೆ.[69] ಆದರೆ, ಯಳಂದೂರಿನ ಶಾಸನಗಳಲ್ಲಿ ಉಕ್ತವಾಗಿರುವ ಜಗದೇವರಾಯನಿಗೂ ಚನ್ನಪಟ್ಟಣವನ್ನು ಆಳುತ್ತಿದ್ದ ತಿಮ್ಮಪ್ಪ ನಾಯಕನಿಗೂ ಇದ್ದ ಸಂಬಂಧದ ಬಗೆಗೆ ಸ್ಪಷ್ಟತೆ ಇಲ್ಲ. ಬಹುಶಃ ಯಳಂದೂರನ್ನು ಆಳುತ್ತಿದ್ದ ಜಗದೇವರಾಯನು ಬೇರೆಯೇ ಇರಬಹುದು.

ಕ್ರಿ.ಶ. 1570ರಲ್ಲಿ ರಾಣಾಪೆದ್ದ ಜಗದೇವರಾಯನು ಚನ್ನಪಟ್ಟಣ ಪರಿಸರದ ಅಧಿಕಾರಿಯಾಗಿ ನೇಮಕವಾದನು. ಮಂಡ್ಯ ತಾಲ್ಲೂಕಿನ ಕ್ರಿ.ಶ. 1573ರ ತೆಲುಗು ತಾಮ್ರ ಶಾಸನದಲ್ಲಿ ವಿಜಯನಗರದ ಅರಸ ರಾಮದೇವರಾಯನು ಹೊಯ್ಸಳನಾಡ ನಾಗಮಂಗಲ ಸ್ಥಳವನ್ನು ರಾಣಾಪೆದ್ದ ಜಗದೇವರಾಯನ ಅಮರನಾಯಕತನಕ್ಕೆ ಕೊಟ್ಟ ಬಗ್ಗೆ ತಿಳಿಸುತ್ತದೆ.[70] ರಾಣಪೆದ್ದ ಜಗದೇವರಾಯನ ನಂತರ ಅವನ ತಮ್ಮ ಇಮ್ಮಡಿ ಜಗದೇವರಾಯನು ಕ್ರಿ.ಶ. 1577ರಲ್ಲಿ ಅಧಿಕಾರಕ್ಕೆ ಬರುತ್ತಾನೆ.

### 2.2.7.1 ಇಮ್ಮಡಿ ಜಗದೇವರಾಯ

ಚನ್ನಪಟ್ಟಣದ ಪಾಳೆಯಗಾರರಲ್ಲಿ ಪ್ರಸಿದ್ಧನಾದ ಅರಸನೆಂದು ಈತನನ್ನು ವಿದ್ವಾಂಸರು ಒಪ್ಪಿದ್ದಾರೆ. ವಿಜಯನಗರದ ಪ್ರತಿನಿಧಿಯಾಗಿ ಪೆನುಗೊಂಡೆಯಲ್ಲಿ ಆಳುತ್ತಿದ್ದ ಶ್ರೀರಂಗರಾಯನ ಅಳಿಯನಾದ ಜಗದೇವರಾಯನು ಚನ್ನಪಟ್ಟಣದಲ್ಲಿ ಕ್ರಿ.ಶ. 1577ರ ಸಮಯದಲ್ಲಿ ಆಳುತ್ತಿದ್ದನೆಂದು ತಿಳಿದು ಬರುತ್ತದೆ.[71] ಇವನು ತನ್ನ ಅಣ್ಣನ ಕಾಲದಲ್ಲಿ ಮಂತ್ರಿಯಾಗಿ ಅನುಭವ ಪಡೆದಿದ್ದನಲ್ಲದೆ, ರಾಜಪ್ರತಿನಿಧಿಯೂ ಆಗಿದ್ದನೆಂದು ತಿಳಿದುಬರುತ್ತದೆ.

ವಿಜಯಪುರ ಮತ್ತು ಅಹಮದ್ ನಗರದ ಸುಲ್ತಾನರ ಸೇನೆಯು ಪೆನುಗೊಂಡೆಯ ಮೇಲೆ ದಾಳಿ ನಡೆಸಿದಾಗ, ಮಧುಗಿರಿ ಮಹಾನಾಡಪ್ರಭು ಚಿಕ್ಕಪ್ಪಗೌಡ ಸೇರಿದಂತೆ ಹಲವು ಪಾಳೆಯಗಾರರ ಒಡಗೂಡಿ, ಕುತುಬ್‌ಷಾಹಿ ಸೈನ್ಯದ ಮುತುರ್ಜಾಖಾನ್, ನೂರ್ ಖಾನ್, ಖಾನ್ ಖಾನ್ ಮೊದಲಾದ ದಳಪತಿಗಳನ್ನು  ಸೋಲಿಸಿ ಓಡಿಸಿದನು. ಇವನ ಶೌರ್ಯವನ್ನು ಮೆಚ್ಚಿ ವಿಜಯನಗರದ ದೊರೆಯು **"ಘನಪೂರಿ ರಕ್ಷಕ"** ಎಂಬ ಬಿರುದನ್ನು ನೀಡಿ, ಒಂಬತ್ತು ಲಕ್ಷ ಪಗೋಡಗಳ ವರಮಾನವಿದ್ದ ಜಿಲ್ಲೆಯೊಂದನ್ನು ಜಗದೇವರಾಯನಿಗೆ ನೀಡಿದನು. ಈ ಪ್ರದೇಶವು ಬಾರಾಮಹಲಿನಿಂದ ಪಶ್ಚಿಮ ಘಟ್ಟಗಳವರೆಗೆ ವ್ಯಾಪಿಸಿದ್ದು, ಮುಳುಬಾಗಿಲು, ಕಾನಕಾನಹಳ್ಳಿ, ಬೂದಿಹಾಳು, ಪಿರಿಯಾಪಟ್ಟಣ ಮೊದಲಾದ ಪ್ರದೇಶಗಳನ್ನು ಒಳಗೊಂಡಿದ್ದಿತು. 1580ರಲ್ಲಿ ಚನ್ನಪಟ್ಟಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಕೋಟೆಯೊಂದನ್ನು ಕಟ್ಟಿಸಿದನು.[72]

ಇಮ್ಮಡಿ ಜಗದೇವರಾಯನು ಚನ್ನಪಟ್ಟಣವನ್ನು ಆಳುವ ಕಾಲದಲ್ಲಿಯೇ ಯಲಹಂಕನಾಡನ್ನು ಹಿರಿಯ ಕೆಂಪೇಗೌಡನು ಆಳುತ್ತಿದ್ದನು. ಕೆಲವು ಇತಿಹಾಸಕಾರರ ಪ್ರಕಾರ ಕೆಂಪೇಗೌಡನು ಬೆಂಗಳೂರು ಕೋಟೆಯನ್ನು ಕಟ್ಟಿ, ಭೈರವ ನಾಣ್ಯವನ್ನು ಹೊರಡಿಸುವ ಮೂಲಕ ಪ್ರವರ್ಧಮಾನಕ್ಕೆ ಬರುತ್ತಿದ್ದನು. ಅವನ ಏಳಿಗೆಯನ್ನು ಸಹಿಸದ ಜಗದೇವರಾಯನು ವಿಜಯನಗರದ ದೊರೆಗೆ ಕೆಂಪೇಗೌಡನ ವಿರುದ್ಧ ಚಾಡಿ ಹೇಳಿದನು. ವಿಜಯನಗರದ ಅರಸರು ಕೆಂಪೇಗೌಡನನ್ನು ಹಂಪಿಗೆ ಕರೆಸಿ, ಬಂಧಿಸಿ ಸೆರೆಮನೆಯಲ್ಲಿಟ್ಟರು. ಕೆಂಪೇಗೌಡನ ಬಿಡುಗಡೆಯ ವರೆಗೂ ಯಲಹಂಕ ನಾಡನ್ನು ಜಗದೇವರಾಯನೇ ಆಳುತ್ತಿದ್ದನು ಎಂಬ ಆರೋಪಗಳಿವೆ.[73] ಆದರೆ ಈ ಅಭಿಪ್ರಾಯವನ್ನು ಸಮರ್ಥಿಸುವ ಚಾರಿತ್ರಿಕ ಆಧಾರಗಳ ಕೊರತೆ ಇದೆ ಎಂದು ಎಂ.ವಿ. ಶ್ರೀನಿವಾಸ್ ಮತ್ತು ಎಂ.ಜಿ. ಮಂಜುನಾಥ ಅವರು ಈ ಪ್ರಕರಣವನ್ನು ಅಲ್ಲಗಳೆದಿದ್ದಾರೆ.[74] ಈ ಪ್ರಕರಣ ನಡೆಯಿತೆಂದು ಹೇಳುವ ಕಾಲಕ್ಕೂ, ಇಮ್ಮಡಿ ಜಗದೇವರಾಯನ ಕಾಲಕ್ಕೂ ಯಾವುದೇ ಸಂಬಂಧವಿಲ್ಲ ಈ ಕುರಿತು ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

ಇಮ್ಮಡಿ ಜಗದೇವರಾಯನು ವೀರಯೋಧನೂ, ಸಾಹಿತ್ಯ ಪೋಷಕನೂ ಆಗಿದ್ದನು. ಸಂಗೀತ ಮತ್ತು ಸಾಹಿತ್ಯದಲ್ಲಿ ಪ್ರವೀಣನಾಗಿದ್ದನು. ಈತ ಸಂಸ್ಕೃತದಲ್ಲಿ **ಉತ್ತರ ನಿಷಾಧ** ಎಂಬ ಕೃತಿಯನ್ನು **ಗೀತ ಪ್ರಬಂಧಮು** ಎಂಬ ಸಂಗೀತ ಗ್ರಂಥವನ್ನೂ, ಚಂಡಿಕಾ ನವರತ್ನಮು ಎಂಬ ತೆಲುಗು ಗ್ರಂಥವನ್ನು ಮತ್ತು ತೆಲುಗಿನಲ್ಲಿ **ಆಧ್ಯಾತ್ಮ ರಾಮಾಯಣ**ವನ್ನೂ ಬರೆದಿದ್ದಾನೆ. ಈತನ ಆಸ್ಥಾನದಲ್ಲಿದ್ದ ಪೊನ್ನತೋಟ ಓಬಳಕವಿಯು ತೆಲುಗಿನಲ್ಲಿ **ವಾಮನ ಪುರಾಣಮು** ಎಂಬ

ಕೃತಿಯನ್ನು ಬರೆದಿದ್ದಾನೆ. ಈ ಕೃತಿಯ ಉಪೋದ್ಘಾತದಲ್ಲಿ ಈ ಅರಸು ಮನೆನತನದ ಬಗ್ಗೆ ಸಾಕಷ್ಟು ಮಾಹಿತಿ ದೊರಕುತ್ತದೆ.[75]

ಇಮ್ಮಡಿ ಜಗದೇವರಾಯನ ನಂತರ ಪೆದ್ದಜಗದೇವರಾಯನ ತಮ್ಮ ಅಂಕುಶರಾಯ ಕ್ರಿ.ಶ. 1600ರಲ್ಲಿ ಅಧಿಕಾರಕ್ಕೆ ಬಂದನು. ಈ ಹೊತ್ತಿಗೆ ವಿಜಯನಗರ ಸಾಮ್ರಾಟರು ದುರ್ಬಲರಾದ್ದರಿಂದ ಎಲ್ಲಾ ಪಾಳೆಯಗಾರರಂತೆ ಇವರೂ ಕೂಡ ಸ್ವತಂತ್ರರಾಗ ಬಯಸಿದರು. ಅಂಕುಶರಾಯನು 1617ರ ಶಾಸನದಲ್ಲಿ ತನ್ನನ್ನು 'ರಾಜಾಧಿರಾಜ ಮಹಾರಾಜ' ಎಂದು ಕರೆದುಕೊಂಡಿದ್ದಾನೆ. ಈ ಹೊತ್ತಿಗೆ ಸ್ವತಂತ್ರ ಘೋಷಿಸಿಕೊಂಡಿದ್ದನೆಂದು ಇದರಿಂದ ಅರ್ಥವಾಗುತ್ತದೆ. 1618ರಕ್ಕು ಇಮ್ಮಡಿ ಜಗದೇವರಾಯನ ಮಗ ಕುಮಾರ ಜಗದೇವರಾಯನು ಅಧಿಕಾರಕ್ಕೆ ಬಂದನು. ಇವನಿಗೆ ರಾಜಶ್ರೀ ಎಂಬ ಬಿರುದಿತ್ತು.[76]

ಈ ಮನೆತನದ ಕೊನೆಯ ದೊರೆಯಾದ ಅಂಕುಶ ಜಗದೇವರಾಯ (ಅಂಕುಶ ವೆಂಕಟಪತಿ) 1625ರಲ್ಲ ಅಧಿಕಾರಕ್ಕೆ ಬಂದನು. ಈತನು ಸಾಹಿತ್ಯ ಪೋಷಕನಾಗಿದ್ದು, ಏಕಾಂಬರನಾಥ ಎಂಬ ಪ್ರಸಿದ್ಧ ಸಂಸ್ಕೃತ ಕವಿಗೆ ಆಶ್ರಯದಾತನಾಗಿದ್ದನು. ಮೈಸೂರಿನ ಚಾಮರಾಜ ಒಡೆಯರ್ ದಳವಾಯಿ ವಿಕ್ರಮರಾಯನು ಕ್ರಿ.ಶ. 1630ರಲ್ಲಿ ಆಕ್ರಮಿಸಿಕೊಳ್ಳುವ ಮೂಲಕ ಚನ್ನಪಟ್ಟಣ ರಾಜ್ಯವು ಮೈಸೂರು ರಾಜ್ಯದಲ್ಲಿ ಸೇರಿತು. ದಕ್ಷಿಣ ಕರ್ನಾಟಕದ ಚರಿತ್ರೆಯಲ್ಲಿ ಮಿಂಚಿದ ಪಾಳೆಯಗಾರ ಮನೆತನವೊಂದು ಕೇವಲ ಒಂದು ಶತಮಾನದ ಅವಧಿಯಲ್ಲಿಯೇ ಮರೆಯಾಗಿ ಹೋಯಿತು. ಈ ಮನೆತನದ ಅರಸರು ಉತ್ತಮ ಯೋಧರು, ಒಳ್ಳೆಯ ಆಡಳಿತಗಾರರು ಆಗಿದ್ದರೂ ರಾಜ್ಯವನ್ನು ದೀರ್ಘಕಾಲ ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಬಿ.ಎಲ್.ರೈಸ್ ಅವರು ಹೇಳುವಂತೆ ಈ ರಾಜ್ಯವು ಸ್ಥಿರತೆಗಿಂತಲೂ ವಿಸ್ತೀರ್ಣವಾಗಿದ್ದುದು ಅವನತಿಗೆ ಕಾರಣವಾಗಿರಬಹುದು ಎಂದಿದ್ದಾರೆ. ಎಂ.ವಿ. ಶ್ರೀನಿವಾಸ್ ಅವರು ಅವನತಿಗೆ ಕೆಲವು ಕಾರಣಗಳನ್ನು ಪಟ್ಟಿ ಮಾಡುತ್ತಾರೆ. ಅವುಗಳಲ್ಲಿ ಮುಖ್ಯವಾದ ಅಂಶಗಳೆಂದರೆ: ವಿಸ್ತಾರವಾದ ಜಗದೇವರಾಯನ ರಾಜ್ಯ ಅನೇಕ ಪಾಳೆಯಗಾರರ ನಡುವೆ ಹಂಚಿ ಹೋಗಿದ್ದು, ಮೈಸೂರು ರಾಜ್ಯದ ಏಳಿಗೆ ಮತ್ತು ರಾಜ್ಯವು ಬಹು ವಿಸ್ತಾರವಾಗಿದ್ದರಿಂದ ಅದರಲ್ಲಿ ಪರಿಣಾಮಕಾರಿಯಾಗಿ ಆಡಳಿತ ನಡೆಸುವ ವ್ಯವಸ್ಥೆ ಮಾಡದಿರುವುದು ಹಾಗೂ ವಿಜಯನಗರ ಸಾಮ್ರಾಟರ ಸಂಬಂಧವನ್ನು ಹೊಂದಿದ್ದ ಈ ಅರಸರು ಸಾಮಾನ್ಯ ಜನರೊಂದಿಗೆ ನಿಕಟ ಸಂಪರ್ಕ ಸ್ಥಾಪಿಸಿಕೊಳ್ಳದಿರುವುದು ಅವನತಿಗೆ ಕಾರಣವೆಂದು ಗುರುತಿಸುತ್ತಾರೆ.[77]

## 2.3 ಉಪಸಂಹಾರ

ಈವರೆಗಿನ ಅಧ್ಯಯನಗಳ ಹಿನ್ನೆಲೆಯಲ್ಲಿ ಮುಖ್ಯವಾಗಿ ಎರಡು–ಮೂರು ಅಂಶಗಳನ್ನು ಚರ್ಚೆಯ ಕೇಂದ್ರವಾಗಿಸಿಕೊಂಡಿದ್ದೇನೆ. ಒಂದು ಅಂಶವೆಂದರೆ– ವಿಜಯನಗರೋತ್ತರ ಕಾಲದ ದಕ್ಷಿಣ ಕರ್ನಾಟಕದಲ್ಲಿ ಪ್ರವರ್ಧಮಾನಕ್ಕೆ ಬಂದ ಬಹುತೇಕ ಎಲ್ಲಾ ಸ್ಥಳೀಯ ಪ್ರಭುತ್ವಗಳು ಮೂಲತಃ ಹೊರಗಿನಿಂದ ಬಂದು ನೆಲಸಿದವರಿಂದಲೇ ಆರಂಭವಾಗಿವೆ. ಮೇಲಿನ ಸ್ಥಳೀಯ ಪ್ರಭುತ್ವಗಳ ಮನೆತನದಲ್ಲಿ ಕೆಳದಿಯ ನಾಯಕರನ್ನು ಹೊರತುಪಡಿಸಿದರೆ, ಉಳಿದೆಲ್ಲ ಮನೆತನದವರು ಹೊರಗಿನಿಂದ ಬಂದವರೆಂಬ ಐತಿಹ್ಯಗಳಿವೆ. ಮೈಸೂರು ಅರಸರು ದ್ವಾರಕೆಯಿಂದ, ಚಿತ್ರದುರ್ಗದ ನಾಯಕರು ತಿರುಪತಿ ಸಮೀಪದಿಂದ, ಆವತಿ ನಾಡಪ್ರಭುಗಳು ಕಂಚಿ ಕಡೆಯಿಂದ, ಮಧುಗಿರಿ ನಾಡಪ್ರಭುಗಳು ಸೊಲ್ಲಾಪುರದಿಂದ ಹೀಗೆ ಹೊರಗಿನ ಮೂಲವನ್ನು ತಿಳಿಸುತ್ತವೆ. ಆದರೆ ಸ್ಥಳೀಯ ಮೂಲನಿವಾಸಿಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಥಳೀಯ ಪ್ರಭುಗಳಾಗಿ ಏಳಿಗೆಗೆ ಬಾರಲಿಲ್ಲ ಏಕೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಸಾಮಾನ್ಯವಾಗಿ ಸ್ಥಳೀಯ ಮೂಲ ನಿವಾಸಿಗಳಿಗಿಂತ ಹೊರಗಿನಿಂದ ಬಂದವರು ಹೆಚ್ಚು ಕ್ರಿಯಾಶೀಲರೂ ಮತ್ತು ಸೃಜನಶೀಲರೂ ಆಗಿರುತ್ತಾರೆ. ಗ್ರಾಮೀಣ ಪರಿಸರದಲ್ಲಿ ಕ್ರಿಯಾಶೀಲ ಮತ್ತು ಸೃಜನಶೀಲ ಚುರುಕು ಬುದ್ದಿಯ ವ್ಯಕ್ತಿಗಳನ್ನು ಕುರಿತು ಕೇಳಿಬರುವ ಮಾತು ಎಂದರೆ "ಎಷ್ಟು ಕೆರೆ ನೀರು ಕುಡಿದು ಬಂದವನೊ, ಅವನ ಹತ್ರ ನಿನ್ನ ಆಟ ನಡೆಯಲ್ಲ!", "ಎಷ್ಟು ಊರು ನೀರು ಕುಡಿದವನೊ, ಅವನಿಗೆ ಹೇಳಲಾಗುತ್ತಾ", "ದೇಶಸುತ್ತು, ಇಲ್ಲ ಕೋಶ ಓದು" ಇತ್ಯಾದಿ. ಇವು ಏನನ್ನು ಸೂಚಿಸುತ್ತವೆ ಎಂದರೆ ದೇಶತಿರುಗಿ ಬಂದವನು ಹೊರ ಜಗತ್ತಿನ ಪರಿಚಯವೇ ಇಲ್ಲದವನಿಗಿಂತ ಹೆಚ್ಚು ಕ್ರಿಯಾಶೀಲನೂ, ದಕ್ಷನೂ, ಸೂಕ್ಷ್ಮಮತಿಯೂ, ಸಾಹಸಿಯೂ ಆಗಿರುತ್ತಾನೆ. ಅದೇರೀತಿ ವಲಸೆ ಬಂದು ಏಳಿಗೆ ಹೊಂದಿದವರನ್ನು ಗ್ರಾಮೀಣ ಜನರು ತಮ್ಮ ಲೋಕದೃಷ್ಟಿಯಲ್ಲಿ ಇನ್ನೊಂದು ಬಗೆಯಲ್ಲಿ ಅರ್ಥೈಸುತ್ತಾರೆ. "ಒಟ್ಲು ಹಾಕಿದ ಪೈರಿಗಿಂತಲೂ ನಾಟಿ ಮಾಡಿದ ಪೈರು ಸೊಗಸಾಗಿ ಬೆಳೆಯುತ್ತದೆ" ಎಂಬ ಮಾತು ಹೆಚ್ಚು ಅರ್ಥಗರ್ಭಿತವಾಗಿದೆ. ರಾಗಿ ಅಥವಾ ಭತ್ತವನ್ನು ಒಂದುಕಡೆ ದಟ್ಟವಾಗಿ ಚೆಲ್ಲಿ ಬೆಳೆಯುವ ಪೈರಿನ ಸಮೂಹಕ್ಕೆ 'ಒಟ್ಲು' ಎಂದು ಕರೆಯುತ್ತಾರೆ. 'ಒಟ್ಲು' ಪೈರನ್ನು ಸಸಿದು (ಕಿತ್ತು) ಮತ್ತೊಂದು ಕಡೆ ಅಂತರ – ಅಂತರದಲ್ಲಿ ನಾಟಿ ಮಾಡಿದರೆ ಹುಲುಸಾಗಿ ಬೆಳೆಯುತ್ತವೆ. ಏಕೆಂದರೆ ಆ ಪೈರು ತನಗೆ ಬೇಕಾಗುವಷ್ಟು ಪೋಷಕಾಂಶವನ್ನು ಹೀರಿಕೊಳ್ಳಲು, ಬೇರುಬಿಡಲು ಅನುಕೂಲವಾಗುವಷ್ಟು ಸ್ಥಳಾವಕಾಶವಿರುತ್ತದೆ. ಇಲ್ಲವಾದರೆ ದಟ್ಟವಾಗಿರುವ ಕಡೆಗಳಲ್ಲಿ ಪೋಷಕಾಂಶದ ಕೊರತೆ ಉಂಟಾಗಿ ಎಲ್ಲಾ ಪೈರುಗಳು ಸೊರಗುತ್ತವೆ.

ಹೀಗೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬಂದು ನೆಲೆಸುವವರು ಸಹಜವಾಗಿ ಲೋಕಾನುಭವವನ್ನು ಹೆಚ್ಚು ಉಳ್ಳವರಾಗಿರುತ್ತಾರೆ. ಅವರಿಗೆ ಅಳಿವು ಉಳಿವಿನ ಪ್ರಶ್ನೆಯಾಗಿರುತ್ತದೆ. ಆದ್ದರಿಂದ ಸಹಜವಾಗಿಯೇ ಧೈರ್ಯ ಮತ್ತು ಸಾಹಸವನ್ನು ಮೈಗೂಡಿಸಿಕೊಂಡಿರುತ್ತಾರೆ. ಈ ರೀತಿಯಲ್ಲಿ ಸ್ಥಳೀಯ ಮೂಲನಿವಾಸಿಗಳಲ್ಲಿ ಯಾರು ಅನುಭವ, ಧೈರ್ಯ ಮತ್ತು ಸಾಹಸವನ್ನು ಮೈಗೂಡಿಸಿಕೊಂಡಿರುತ್ತಾರೆಯೋ ಅಂಥವರು ಮಾತ್ರ ಏಳಿಗೆಯನ್ನು ಹೊಂದಲು ಸಾಧ್ಯವಾಗುತ್ತದೆ. ಹೀಗಾಗಿ ಐತಿಹಾಸಿಕವಾಗಿ ಯಾವುದೇ ಮನೆತನವನ್ನು ತೆಗೆದುಕೊಂಡರೂ ಕೂಡ ಮೂಲನಿವಾಸಿಗಳಿಗಿಂತ ಹೊರಗಿನಿಂದ ಬಂದವರೇ ಹೆಚ್ಚಿನ ಸಂಖ್ಯೆಯಲ್ಲಿ ಸಾಹಸ ಮೆರೆದು ಮನೆತನದ ಸ್ಥಾಪನೆಗೆ ಕಾರಣಕರ್ತರಾಗಿದ್ದಾರೆ.

ಎರಡನೆಯದಾಗಿ– ಹೀಗೆ ವಲಸೆ ಬಂದು ರಾಜ್ಯ/ನಾಡು ಕಟ್ಟಿದವರು ತಮ್ಮ ಮೂಲವನ್ನು ಯಾವುದಾದರೂ ಪ್ರಸಿದ್ಧ ಧಾರ್ಮಿಕ ಕ್ಷೇತ್ರದ ಮೂಲದಿಂದ ಗುರುತಿಸಿಕೊಂಡಿರುವುದನ್ನು ಗಮನಿಸಬಹುದು. ಉದಾ.:ಗೆ ಮೈಸೂರು ಅರಸರು ದ್ವಾರಕೆಯಿಂದ ಬಂದರು, ಚಿತ್ರದುರ್ಗದ ಪಾಳೆಯಗಾರರು ತಿರುಪತಿ ಸಮೀಪದಿಂದ ಬಂದರು. ಆವತಿ ನಾಡಪ್ರಭುಗಳು ಕಂಚಿಯಿಂದ ಬಂದರು. ಮಧುಗಿರಿಯ ಮಹಾನಾಡಪ್ರಭುಗಳ ಮನೆತನದವರು ಸೊಲ್ಲಾಪುರದಿಂದ ಬಂದರು ಹೀಗೆ ಒಂದೊಂದು ಮನೆತನವೂ ಒಂದೊಂದು ಧಾರ್ಮಿಕ ನೆಲೆಯಿಂದ ಬಂದುದಾಗಿ ಗುರುತಿಸಿಕೊಳ್ಳುವುದು ಅವರ ಅಸ್ಮಿತೆಯ ಪ್ರಶ್ನೆಯಾಗಿರುತ್ತದೆ. ಮಿಗಿಲಾಗಿ ಇವರ ಬಗೆಗೆ ಜನಸಾಮಾನ್ಯರಲ್ಲಿ ವಿಶೇಷ ಗೌರವ ಮತ್ತು ಭಕ್ತಿ ಭಾವ ಬೆಳೆಯುತ್ತದೆ. ಉದಾ.ಗೆ ಗ್ರಾಮೀಣ ಪ್ರದೇಶದಲ್ಲಿ ತಿರುಪತಿಗೆ ಹೋಗುವ ಭಕ್ತನ ಕಾಲನ್ನು ತೊಳೆದು ನಮಸ್ಕರಿಸಿ, ತಮ್ಮ ಕೈಲಾದ ಆರ್ಥಿಕ ನೆರವನ್ನು ನೀಡುತ್ತಿದ್ದರು. ಇದರ ಅರ್ಥ ನಾನು ಮಾಡಿದ ನಮಸ್ಕಾರವನ್ನು ದೇವರಿಗೆ ತಲುಪಿಸಿಬಿಡು, ನಾನು ಕೊಟ್ಟ ಕಾಣಿಕೆಯನ್ನು ದೇವರಿಗೆ ಸಲ್ಲಿಸಿಬಿಡು ಎಂಬುದಾಗಿರುತ್ತಿತ್ತು. ಒಟ್ಟಾರೆ, ವ್ಯಕ್ತಿಯೊಬ್ಬ ಒಂದು ಧಾರ್ಮಿಕ ಕ್ಷೇತ್ರದಿಂದ ಬಂದನೆಂದರೆ ಆ ಧಾರ್ಮಿಕ ಕ್ಷೇತ್ರದ ದೈವಿಕ ಶಕ್ತಿ ಅವನಿಗಿದೆ ಎಂದು ಭಾವಿಸುತ್ತಿದ್ದರು.

ಮೂರನೆಯದಾಗಿ– ದಕ್ಷಿಣ ಭಾರತದ ಚರಿತ್ರೆಯಲ್ಲಿ 17ನೆಯ ಶತಮಾನ ಒಂದು ರೀತಿಯ ಆಕ್ರಮಣ ಮತ್ತು ಸಂಕ್ರಮಣದ ಕಾಲ. ಇದರಿಂದ ವಲಸೆ ಪ್ರಕ್ರಿಯೆ ಪ್ರಾರಂಭವಾದ ಪರಿಣಾಮ ಹೊಸ ಹೊಸ ನೆಲೆಗಳು ಸೃಷ್ಟಿಯಾದವು. ರಾಜಕೀಯ ಮತ್ತು ಆರ್ಥಿಕ ವಲಯದಲ್ಲಿ ಉಂಟಾದ ಪಲ್ಲಟದ ಪರಿಣಾಮವಾಗಿ ದಕ್ಷಿಣ ಕರ್ನಾಟಕದ ಇಂದಿನ ಬಹುತೇಕ ಪಟ್ಟಣಗಳು ಪಾಳೆಯಗಾರರು ಮತ್ತು ನಾಡಪ್ರಭುಗಳ ಕಾಲದಲ್ಲಿ ಅಸ್ತಿತ್ವಕ್ಕೆ ಬಂದವುಗಳಾಗಿವೆ. ಕುತೂಹಲಕ್ಕೆ

ಪಟ್ಟಿ ಮಾಡುವುದಾದರೆ: ಬೆಂಗಳೂರು, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ, ಆನೇಕಲ್ಲು, ಮಾಗಡಿ, ಹುಲಿಯೂರುದುರ್ಗ, ಕುದೂರು, ಸೋಲೂರು, ಚನ್ನಪಟ್ಟಣ, ಕನಕಪುರ, ನಾಗಮಂಗಲ, ಮಾಯಸಂದ್ರ, ಕಡಬ, ಕಲ್ಲೂರು, ಹೊಳವನಹಳ್ಳಿ, ಕೊರಟಗೆರೆ, ಮಧುಗಿರಿ, ಮಿಡಿಗೇಶಿ ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಈ ನಗರಗಳು ಸಹಜವಾಗಿ ಕೋಟೆಗಳನ್ನು ಹೊಂದಿರುತ್ತಿದ್ದವು. ಕೋಟೆಗಳಿಗೆ ಹೊಂದಿಕೊಂಡಂತೆ ಪೇಟೆಗಳು ಕೂಡ ನಿರ್ಮಾಣವಾಗಿರುತ್ತಿದ್ದವು. ಅದಕ್ಕೆ ಪೂರಕವೆಂಬಂತೆ ಈ ಎಲ್ಲಾ ನಗರ ಪಟ್ಟಣಗಳು ಸಾಮಾನ್ಯವಾಗಿ ಬೃಹತ್ ಅಥವಾ ಸಾಧಾರಣ ಕೆರೆಗಳಿಗೆ ಹೊಂದಿಕೊಂಡಂತೆಯೇ ನಿರ್ಮಾಣವಾಗಿರುವುದನ್ನು ಗುರುತಿಸಬಹುದು. ಸಾಮಾನ್ಯವಾಗಿ ಈ ಕೆರೆಗಳು ಕೂಡ ಪಾಳೆಯಗಾರರ ಕಾಲದ ನಿರ್ಮಾಣಗಳೇ ಆಗಿರುವುದನ್ನು ಗುರುತಿಸಬಹುದು. ಇದು ನೀರಾವರಿ ಮತ್ತು ಕೃಷಿ ವಿಸ್ತರಣೆಗೆ ಪೂರಕವಾಗಿದ್ದವು. ಇದರಿಂದ ಸ್ಥಳೀಯವಾಗಿ ನಿರ್ಮಾಣವಾದ ಪೇಟೆಗಳು ಸಂತೆಮಾಳಗಳಾಗಿ ಅಥವಾ ಮಾರುಕಟ್ಟೆಯ ಕೇಂದ್ರಗಳಾಗಿ ಪ್ರವರ್ಧಮಾನ ಹೊಂದುವ ಮೂಲಕ ಪಟ್ಟಣಗಳು ವಿಕಾಸವಾಗಿರುವುದನ್ನು ಗುರುತಿಸಬಹುದು. ಪರಿಣಾಮವಾಗಿ ಜನಸಂಖ್ಯಾಶಾಸ್ತ್ರೀಯ ಸ್ಥಿತ್ಯಂತರಗಳು (Demographical Changes) ಸಂಭವಿಸುತ್ತಾ ಹೋಗಿರುವುದನ್ನು ಕಾಣಬಹುದು. ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಆಗುತ್ತಿರುವ ಬೆಳವಣಿಗೆಗಳೇ ಬಹುಮುಖ್ಯ ಪ್ರೇರಣೆಯಾಗಿತ್ತು. ವಸಾಹತುಪೂರ್ವ ಕಾಲೀನ ಕರ್ನಾಟಕದಲ್ಲಿ ಅನೇಕ ವರ್ತಕರು ಹಾಗೂ ವರ್ತಕ ಸಂಘಗಳು ಅಸ್ತಿತ್ವದಲ್ಲಿದ್ದವು. ಕರ್ನಾಟಕದಲ್ಲಿ ಉತ್ಪಾದಿಸಲಾಗುತ್ತಿದ್ದ ವಿವಿಧ ಬಗೆಯ ಬೆಳೆಗಳನ್ನು ರಫ್ತು ಮಾಡಲಾಗುತ್ತಿತ್ತು. ಮೋಹನ್‌ಕೃಷ್ಣ ರೈ ಅವರು ದಾಖಲಿಸುವಂತೆ ಕ್ರಿ.ಶ. 14 ರಿಂದ 18ನೆಯ ಶತಮಾನದವರೆಗೆ ಕರ್ನಾಟಕದಲ್ಲಿ ರಫ್ತು ಮಾಡಲಾಗುತಿದ್ದ ಪ್ರಮುಖ ವಸ್ತುಗಳೆಂದರೆ, ಅಕ್ಕಿ, ಕರಿಮೆಣಸು, ಸಾಂಬಾರ ಪದಾರ್ಥಗಳು, ಶುಂಠಿ, ಸಕ್ಕರೆ, ಬಟ್ಟೆ, ಶ್ರೀಗಂಧ, ತೇಗ, ಕೇಸರಿ, ನೀಲಿ, ವೈದ್ಯಕೀಯ ಗಿಡಮೂಲಕೆಗಳು ಮುಂತಾದವು. ಆಂತರಿಕ ವ್ಯಾಪಾರದ ಮುಖ್ಯವಸ್ತುಗಳೆಂದರೆ: ಅಕ್ಕಿ, ರಾಗಿ, ಗೋಧಿ, ಜೋಳ, ಬಾರ್ಲಿ, ಸಾವೆ, ಕಡಲೆ, ಎಳ್ಳು, ಕುಸುಬೆ, ಹೆಸರು, ಉದ್ದು, ತೊಗರಿ, ಸಕ್ಕರೆ, ತುಪ್ಪ, ಉಪ್ಪು, ಬೆಲ್ಲ, ಅಡಕೆ, ತೆಂಗು, ವೀಳ್ಯದೆಲೆ, ಮೆಣಸು, ಅರಶಿನ, ಈರುಳ್ಳಿ, ಸಾಸಿವೆ, ಜೀರಿಗೆ, ಮೆಂತ್ಯ, ಕಬ್ಬು, ಹತ್ತಿ, ಹತ್ತಿನೂಲು, ಹತ್ತಿಬಟ್ಟೆ, ಗೋಣಿಚೀಲಗಳು, ಕಬ್ಬಿಣ, ಸೀಸ, ತವರ ಮುಂತಾದವು. ಅದೇರೀತಿ ವ್ಯಾಪಾರ–ವಾಣಿಜ್ಯದಲ್ಲಿ ತೊಡಗಿದ್ದ ವರ್ತಕರಲ್ಲಿ ಸೆಟ್ಟಿಗಳು, ಬಣಜಿಗರು, ಪರ್ಷಿಯನ್ನರು, ಅರೇಬಿಯನ್ನರು, ಮಾಪಿಳ್ಳೆಗಳು, ದಖನಿಗಳು, ನವಾಯರು, ಪೋರ್ಚುಗೀಸರು, ಡಚ್ಚರು, ಫ್ರೆಂಚರು, ಬ್ರಿಟಿಷರು, ಕೊಂಕಣಿಗಳು ಮತ್ತು ಗುಜರಾತಿಗಳು ಪ್ರಮುಖರು. ವರ್ತಕ ಸಂಘಗಳಲ್ಲಿ ಬಣಜಿಗರು, ವೀರ

ಬಣಜಿಗರು, ಸಾಲುಮೂಲೆ ಬಣಜಿಗರು, ನಾನಾದೇಶಿಗಳು, ಉಭಯ–ನಾನಾದೇಶಿಗರು, ನಖರರು, ಸೆಟ್ಟಿಗಳು, ಸೆಟ್ಟಿಗುಟ್ಟರು, ನಗರ ಹಂಜಮಾನರು ಮುಂತಾದವು ಮುಖ್ಯವಾಗಿದ್ದವು.[78]

ಗರಿಗೆದರಿದ ಆರ್ಥಿಕತೆಯನ್ನು ಹಿನ್ನೆಲೆಯಲ್ಲಿಟ್ಟುಕೊಂಡು 16–17ನೆಯ ಶತಮಾನದಲ್ಲಿ ಸ್ಥಳೀಯ ಪ್ರಭುತ್ವಗಳು ಆರ್ಥಿಕತೆಯನ್ನು ಹೇಗೆ ನಿಯಂತ್ರಿಸುತ್ತಿವೆ ಎಂಬುದನ್ನು ನೋಡಬಹುದು. ಆನೇಕಲ್ಲಿನ ಒಂದು ಉದಾಹರಣೆಯನ್ನೆ ತೆಗೆದುಕೊಳ್ಳುವುದಾದರೆ, ತೋಟಗಾರರು (ತಿಗಳ ಸಮುದಾಯ) ಪಾರಂಪರಿಕವಾಗಿ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಕೃಷಿಕ ಸಮುದಾಯವಾಗಿದ್ದು, ಆ ಪರಿಸರದಲ್ಲಿ 17ನೇ ಶತಮಾನದ ಆರಂಭದ ಹೊತ್ತಿಗೆ ಕಾಡುಕಡಿದು ತೋಟಗಾರಿಕೆಯನ್ನು ಅಭಿವೃದ್ಧಿಪಡಿಸಿರುವ ಸಾಧ್ಯತೆಗಳಿವೆ. ಆ ಪ್ರದೇಶದ ಮೇಲೆ ಸುಗಟೂರು ಅರಸ ತಮ್ಮೇಗೌಡನ ಕಣ್ಣು ಬಿದ್ದಿತು. ಆನೇಕಲ್ಲಿನಲ್ಲಿ ಹೊಸ ನೆಲೆಯೊಂದನ್ನು ಆರಂಭಿಸುವ ಮೂಲಕ ಆ ಪ್ರದೇಶದಲ್ಲಿರುವ ತೋಟಗಾರರನ್ನು ಸೇನೆಯ ಮೂಲಕ ನಿಯಂತ್ರಿಸಿದನು. ಹೀಗೆ ವಿಜಯನಗರೋತ್ತರ ಕಾಲದಲ್ಲಿ ಅಭಿವೃದ್ಧಿ ಹೊಂದಿದ ಕೃಷಿಕ ಪ್ರದೇಶಗಳನ್ನು ತಮ್ಮ ವಸಾಹತುಗಳನ್ನಾಗಿ ಪಾಳೆಯಗಾರರು ಆಕ್ರಮಿಸುತ್ತಾ ಅಥವಾ ಹೊಸದಾಗಿ ರೂಪಿಸುತ್ತಾ ಹೋಗಿರುವುದನ್ನು ಕಾಣಬಹುದು. ನಿಧಾನವಾಗಿ ಸಶಕ್ತ ಆರ್ಥಿಕ ಚಟುವಟಿಕೆಯ ಕೇಂದ್ರಗಳಾಗಿ ಬೆಳೆದ ನಾಡಪ್ರಭುಗಳ ಕಾಲದ ಪಟ್ಟಣಗಳು ಸಹಜವಾಗಿ ಸಂಪತ್ತಿನ ಕೇಂದ್ರಗಳಾಗಿ ಬೆಳೆದವು. ಅವುಗಳನ್ನು ಆದಿಲ್‌ಷಾಹಿಗಳು, ಮೊಘಲರು ಮೊದಲಾದ ಪ್ರಬಲ ರಾಜಪ್ರಭುತ್ವಗಳು ತಮ್ಮ ನಿಯಂತ್ರಣಕ್ಕೆ ಒಳಪಡಿಸಿಕೊಳ್ಳಲು ಪ್ರಯತ್ನಿಸಿದವು. ಐರೋಪ್ಯರ ಆಗಮನವು ಒಳನಾಡಿನಲ್ಲಿ ವಾಣಿಜ್ಯ ಚಟುವಟಿಕೆಗಳನ್ನು ಚುರುಕುಗೊಳಸಿತು. ಒಳನಾಡಿನ ವ್ಯಾಪಾರ ಮಾರ್ಗಗಳ ಮೇಲೆ ನಿಯಂತ್ರಣ ಸಾಧಿಸಲು ಪೈಪೋಟಿಗಳು ಹೆಚ್ಚಿದವು. ಯೂರೋಪಿಯನ್ನರ ಆಗಮನದ ನಂತರ ಒಳನಾಡಿನಲ್ಲಿಯೂ ಕೃಷಿಪ್ರಧಾನ ಆರ್ಥಿಕತೆಯು ಗರಿಗೆದರಿತು. ಗೋಡಂಬಿ, ಮುಸುಕಿನಜೋಳ, ಕಡಲೇಕಾಯಿ (ನೆಲಗಡೆಲೆ), ತಂಬಾಕು ಮುಂತಾದ ಹೊಸಬೆಳೆಗಳು ನಿಧಾನವಾಗಿ ಒಳನಾಡಿಗೆ ಪರಿಚಯವಾಗತೊಡಗಿದವು. ಅವುಗಳ ಭಾಗವಾಗಿಯೇ ಕೃಷಿ ವಿಸ್ತರಣೆ ಮತ್ತು ಕೃಷಿ ಅಭಿವೃದ್ಧಿ ಪ್ರದೇಶಗಳ ಮೇಲಿನ ಅಧಿಪತ್ಯಕ್ಕಾಗಿ ಸಂಘರ್ಷಗಳು ತಲೆ ಎತ್ತಿದವು. ಇದರ ಕುರುಹುಗಳಾಗಿಯೇ ದಕ್ಷಿಣ ಕರ್ನಾಟಕದಲ್ಲಿ ಅಪಾರ ಪ್ರಮಾಣದ ವೀರಗಲ್ಲುಗಳು 16–17ನೇ ಶತಮಾನದಲ್ಲಿ ಕಂಡುಬರುತ್ತವೆ. ಗುಂಪು ಗುಂಪಾದ ವೀರಗಲ್ಲುಗಳು ಗ್ರಾಮದ ಹೊರಗೆ ಬಯಲುಗಳಲ್ಲಿ ಮತ್ತು ದೇವಾಲಯಗಳ ಆವರಣಗಳಲ್ಲಿ ಬೆಂಗಳೂರು ಪರಿಸರದಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ಇದರ ಭಾಗವಾಗಿಯೇ ವೀರಗಾರರ ಗುಡಿಗಳ ನಿರ್ಮಾಣವಾಗುತ್ತಾ ಹೋಗುವುದನ್ನು ಕಾಣಬಹುದು.

ಮುಂದಿನ ಅಧ್ಯಾಯದಲ್ಲಿ ಈ ಎಲ್ಲಾ ಸ್ಥಳೀಯ ಪ್ರಭುತ್ವಗಳ ಸಮಕಾಲೀನ ಮನೆತನಗಳಲ್ಲಿ ಒಂದಾದ ಯಲಹಂಕ ನಾಡಪ್ರಭುಗಳ ಮೂಲ ಮತ್ತು ರಾಜಕೀಯ ಚರಿತ್ರೆಯನ್ನು ಹಲವು ಆಯಾಮಗಳಿಂದ ಚರ್ಚೆಗೆ ಎತ್ತಿಕೊಳ್ಳಲಾಗುವುದು. ಐತಿಹ್ಯಗಳು, ದಂತಕಥೆಗಳು, ಜಾನಪದ ನಂಬಿಕೆಗಳು ಮುಂತಾದವುಗಳನ್ನು ಸಮಕಾಲೀನ ಚಾರಿತ್ರಿಕ ಪರಿಪ್ರೇಕ್ಷೆಯೊಳಗೆ ಪರಿಶೀಲಿಸುವ ಪ್ರಯತ್ನ ನಡೆಸಲಾಗುವುದು.

* * * * *

## ಅಡಿ ಟಿಪ್ಪಣಿಗಳು

1. ಶೆಟ್ಟರ್ ಷ., **ಹಳಗನ್ನಡ ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ,** 2014: 413–450.
2. **ಎಪಿಗ್ರಾಫಿಯ ಕರ್ನಾಟಿಕ (ರೈಸ್) ಸಂಪುಟ–7,** ಶಿಕಾರಿಪುರ–225; ಕೃಷ್ಣರಾವ್ ಎಂ.ವಿ. ಮತ್ತಿತರರು, **ಕರ್ನಾಟಕ ಇತಿಹಾಸ ದರ್ಶನ,** 1970: 11–12.
3. ಶೇಷಾದ್ರಿ ಎಂ., "ಚಾರಿತ್ರಿಕ ಯುಗ", **ಕರ್ನಾಟಕ ಪರಂಪರೆ ಸಂಪುಟ–1,** 2014 (1970): 116.
4. ಕೃಷ್ಣರಾವ್ ಎಂ.ವಿ. ಮತ್ತಿತರರು, **ಪೂರ್ವೋಕ್ತ:** 14–16.
5. ವೆಂಕಟೇಶ್ ಎಸ್., **ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ**, ದೊಡ್ಡಬಳ್ಳಾಪುರ, 2016: 29–40.
6. ಶೇಷಾದ್ರಿ ಎಂ., **ಪೂರ್ವೋಕ್ತ:** 119.
7. ಅರುಣಿ ಎಸ್.ಕೆ., **ಬೆಂಗಳೂರು ಪರಂಪರೆ**, 2019: 28.
8. ಸೂರ್ಯನಾಥ ಕಾಮತ್, **ಕರ್ನಾಟಕದ ಸಂಕ್ಷಿಪ್ತ ಇತಿಹಾಸ,** 1999(1973): 28.
9. **ಕವಿರಾಜಮಾರ್ಗಂ**, ಪರಿಚ್ಛೇದ–1, ಪದ್ಯ– 29.
10. ರಾಜೇಶ್ ಹಂ.ಗು., "ಮೊದಲ ಸಹಸ್ರಮಾನದ ಕೆರೆ ನೀರಾವರಿ ಹಿನ್ನೆಲೆಯಲ್ಲಿ ಆರ್ಥಿಕ ಮತ್ತು ಸಾಮಾಜಿಕ ಇತಿಹಾಸ", 2016: 177.
11. ಶೆಟ್ಟರ್ ಷ., **ಪೂರ್ವೋಕ್ತ**: 215–216.
12. ಕೃಷ್ಣಮೂರ್ತಿ ಪಿ.ವಿ., **ಶಾಸನ ಮಂಥನ,** 2011ಎ: 15–21.
13. ರಾಜೇಶ್ ಹಂ.ಗು., "ಬದಲಾವಣೆಯತ್ತ ಆರಂಭಿಕ ಮಧ್ಯಕಾಲೀನ ಬೆಂಗಳೂರು ಪರಿಸರ (950–1350): ಹೊಸ ಪರಿವೀಕ್ಷಣೆಗಳ ವಿಶ್ಲೇಷಣೆ", 2013: 11–42.
14. **ಅದೇ.**: 18.
15. ಅರುಣಿ ಎಸ್.ಕೆ., **ಪೂರ್ವೋಕ್ತ,** 2019: 133.
16. ಬೆಂಗಳೂರಿನ ನಗರ್ತಪೇಟೆಯಲ್ಲಿರುವ ನಗರೇಶ್ವರ ದೇವಾಲಯದ ಮುಂಭಾಗದ ಮೇಲಿರುವ ಕ್ರಿ.ಶ. 1884ರ ಶಾಸನದಲ್ಲಿ ಬೆಂಗಳೂರನ್ನು 'ಕಲ್ಯಾಣನಗರಿ' ಎಂಬ ಉಲ್ಲೇಖವಿದೆ. ಬೆಂಗಳೂರಿನ ತುಳಸಿತೋಟದ ಪ್ರಸನ್ನ ಕೃಷ್ಣಸ್ವಾಮಿ ದೇವಸ್ಥಾನದ ಮುಂಭಾಗದಲ್ಲಿ ಪ್ರದರ್ಶಿಸಿರುವ ದೇವಾಲಯದ ಇತಿಹಾಸದಲ್ಲಿ 1844ರಲ್ಲಿ 'ಕಲ್ಯಾಣಪುರಿ' ಎಂದು ಪ್ರಸಿದ್ಧವಾದ ಕೃಷ್ಣಸ್ವಾಮಿ ದೇವಸ್ಥಾನ ಎಂದಿದೆ.
17. ನರಸಿಂಹನ್ ಕೆ.ಆರ್., "ಕಲ್ಲೂರು ಹಾಗೂ ಮುದುವತ್ತಿಯ ಅಪ್ರಕಟಿತ ಶಾಸನ ಹಾಗೂ ವೀರಗಲ್ಲು ಸ್ಮಾರಕಗಳು", 2020: 96–102.
18. ಸರಿತಾ ಟಿ.ಎಚ್. "ಕೃಷ್ಣದೇವರಾಯನ ಕಾಲದ ನಾಯಕತನ (ಕ್ರಿ.ಶ. 1509–1529)" 2018: 25–28.

19. ವಿವೇಕ ರೈ ಬಿ.ವಿ., ಅವರು ಸಂಪಾದಿಸಿರುವ **'ಪ್ರವಾಸಿ ಕಂಡ ವಿಜಯನಗರ'** ಕೃತಿಯನ್ನು ಗಮನಿಸಿ.

20. ಕನ್ನಡಕ್ಕೆ **'ಮರೆತು ಹೋದ ಮಹಾಸಾಮ್ರಾಜ್ಯ'** ಶೀರ್ಷಿಕೆಯಲ್ಲಿ ಅನುವಾದಗೊಂಡು ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡಿದೆ.

21. ವಿವೇಕ ರೈ ಬಿ.ವಿ., ಅವರು ಸಂಪಾದಿಸಿರುವ **'ಪ್ರವಾಸಿ ಕಂಡ ವಿಜಯನಗರ',** ಪು.113–116.

22. ಕೃಷ್ಣರಾವ್ ಎಂ.ವಿ. ಮತ್ತಿತರರು, **ಪೂರ್ವೋಕ್ತ:** 432–433.

23. ಹನುಮಂತಪ್ಪ ಬಳ್ಳೆಕೆರೆ, **"ಕೆಳದಿಯ ಐತಿಹ್ಯಗಳು",** 2017: 34.

**24. ಅದೇ.**

25. ಪುಟ್ಟಣ್ಣ ಎಂ.ಎಸ್. **ಚಿತ್ರದುರ್ಗದ ಪಾಳಯಗಾರರು,** 1924: 14.

26. **ಅದೇ:** 14.

27. **ಅದೇ:** 19.

28. **ಅದೇ:** 22.

29. **ಅದೇ:** 29.

30. **ಶ್ರೀಮನ್ಮಹಾರಾಜರವರ ವಂಶಾವಳಿ, ಭಾಗ–1,** ಮೈಸೂರು, 1916:4–5.

31. **ಅದೇ:** 4–17.

32. **ಅದೇ:** 29–30.

33. **ಅದೇ:** 45–47.

34. ಷೇಕ್ ಅಲಿ ಬಿ. **ಕರ್ನಾಟಕ ಚರಿತ್ರೆ ಸಂಪುಟ–4,** ಹಂಪಿ, 1997: 114.

35. ಭಾನುಮತಿ ವೈ. ಸಿ.(ಸಂ.), **ಅರಸರ ಚರಿತ್ರೆಗಳು,** 2011: 190.

36. ಕೃಷ್ಣಮೂರ್ತಿ ಪಿ.ವಿ., **ಶಾಸನ, ಇತಿಹಾಸ ಮಂಥನ,** ತುಮಕೂರು, 2011: 152–162.

37. ಕೃಷ್ಣಮೂರ್ತಿ ಪಿ.ವಿ., **"**ಆವತಿನಾಡ ಪ್ರಭುಗಳು**",** 2001: 323.

38. ಗೋಪಾಲಗೌಡ ಕಲ್ವಮಂಜಲಿ, **ಕೋಲಾರ ಚಿಕ್ಕಬಳ್ಳಾಪುರ ಪ್ರಾಂತ ಅವತಿ ನಾಡಪ್ರಭುಗಳ ಇತಿಹಾಸ, ಚಿಕ್ಕಬಳ್ಳಾಪುರ,** 2012: ಅನುಬಂಧ–3 ಪು.: 163–171.

39. **ಎ.ಕ.(ರೈ)ಸಂ.10**, ಚಿಕ್ಕಬಳ್ಳಾಪುರ–40.

40. ವೆಂಕಟೇಶ್ ಎಸ್., **ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ,** ದೊಡ್ಡಬಳ್ಳಾಪುರ, 2016: 151

41. **ಅದೇ:** 152.

42. ಕಾವಲಮ್ಮ ಆರ್., **ಮಧುಗಿರಿ ಮಹಾನಾಡು ಪ್ರಭುಗಳು,** ಬೆಂಗಳೂರು, 2005: 54.

43. ಕಲಬುರ್ಗಿ ಎಂ.ಎಂ. ಮತ್ತಿತರರು (ಸಂ.), **ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ,** 2013: ಸಂಧಿ– 12, ಪದ್ಯ–64.

44. **ಅದೇ.:** ಸಂಧಿ– 13, ಪದ್ಯ– 27, 28 & 29.

45. ಕೃಷ್ಣಮೂರ್ತಿ ಪಿ.ವಿ. 2001: 327.

46. ಕೃಷ್ಣಮೂರ್ತಿ ಪಿ.ವಿ. 1994: 7.

47. ಗಂಗಾಂಬಿಕೆ ಎಸ್. 2013: 153.

48. **ಅದೇ.:** 155–156.

49. **ಎ.ಕ. (ಅ) 17**: ಮಾಲೂರು–188.

50. ಕೃಷ್ಣಮೂರ್ತಿ ಪಿ.ವಿ., 1994:18.

51. ಶ್ರೀಕಂಠಯ್ಯ ಕರ್ಲಮಂಗಲ, **ಪೂರ್ವೋಕ್ತ,** 1961: ಮುನ್ನಡಿ ಪು.38.

52. ಗಂಗಾಂಬಿಕೆ ಎಸ್., 2020: 73–74.

53. ಕೃಷ್ಣಮೂರ್ತಿ ಪಿ.ವಿ., 1994:20.

54. ಗಂಗಾಂಬಿಕೆ ಎಸ್., 2020: 76.

55. ನಾರಾಯಣಾಚಾರ್ಯ ಕೆ., **ಮಧುಗಿರಿ ಚರಿತ್ರೆ,** 1945: 5.

56. ನಂಜುಂಡಸ್ವಾಮಿ ಬಿ. **"ಮುತ್ತಿನ ಮುಮ್ಮಡಿ ಏಳು ನಾಡ ಪ್ರಭುಗಳು, ಕೋರಾ ಇವರಲ್ಲಿರುವ 'ಜಯರೇಖೆ'",** 1995: 243–251.

57. ನಾರಾಯಣಾಚಾರ್ಯ ಕೆ., **ಪೂರ್ವೋಕ್ತ,** 1945: 8.

58. ಹನುಮಂತೇಗೌಡ ಕೆಂಕೆರೆ, **ದೇವಗುಂದ ಮಹಾನಾಡ ಪ್ರಭುಗಳು,** 2015: 17–23

59. ನಾರಾಯಣಾಚಾರ್ಯ ಕೆ. **ಪೂರ್ವೋಕ್ತ,** 1945: 13–14

60. ಕಲಬುರ್ಗಿ ಎಂ.ಎಂ. ಮತ್ತಿತರರು, **ಪೂರ್ವೋಕ್ತ:** ಸಂಧಿ–4, ಪದ್ಯ: 2, 3, 4

61. **ಅದೇ.:** ಪ್ರಸ್ತಾವನೆಯ ಪುಟ 19–20 ನೋಡಿ.

62. ಶ್ರೀನಿವಾಸ್ ಎಂ.ವಿ., **"ಚನ್ನಪಟ್ಟಣದ ಪಾಳೆಯಗಾರರು",** 2001: 306.

63. **ಎ.ಕ.(ರೈ)9**: ಚನ್ನಪಟ್ಟಣ–181.

64. **ಎ.ಕ.(ರೈ)9**: ಚನ್ನಪಟ್ಟಣ–53.

65. **ಎ.ಕ.(ರೈ)9:** ಚನ್ನಪಟ್ಟಣ–152.

66. **ಎ.ಕ.(ರೈ)9:** ಚನ್ನಪಟ್ಟಣ–155.

67. **ಎ.ಕ.(ರೈ)9:** ಚನ್ನಪಟ್ಟಣ–74.

68. ಮಂಜುನಾಥ ಎಂ.ಕೆ., **ಚನ್ನಪಟ್ಟಣ ತಾಲ್ಲೂಕಿನ ಸಾಂಸ್ಕೃತಿಕ ಪರಂಪರೆ,** ಬೆಂಗಳೂರು, 2017: 91.

69. **ಅದೇ.:** 91–92.

70. ಎ.ಕ. (ಪ)7, ಮಂಡ್ಯ–28.

71. ನಾರಾಯಣಾಚಾರ್ಯ ಕೆ., **ಪೂರ್ವೋಕ್ತ,** 1945: 15.

72. ರಂಗಸ್ವಾಮಿ ಅಯ್ಯಂಗಾರ್, **"ಪಾಳೆಯಗಾರರು", ಕರ್ನಾಟಕ ಪರಂಪರೆ ಸಂಪುಟ–2,** 2014 (1970): 209–210; ಶ್ರೀನಿವಾಸ್ ಎಂ.ವಿ. 2001: 307.

73. ನರಸಿಂಹಯ್ಯ ಎಸ್.ಕೆ., **ಮಾಗಡಿ ಕೆಂಪೇಗೌಡ,** 1924:26; ಕೃಷ್ಣರಾವ್ ಎಂ.ವಿ., **ಬೆಂಗಳೂರು ಕೆಂಪೇಗೌಡ,** 1964: 63–69; ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ., ಕರ್ನಾಟಕ ಇತಿಹಾಸ ದರ್ಶನ, 1970: 507; ಸೂರ್ಯನಾಥ ಕಾಮತ್, **ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಬೆಂಗಳೂರು ಗ್ರಾಮಾಂತರ ಜಿಲ್ಲೆ,** 1990: 70. ಮೊದಲಾದ ಇತಿಹಾಸಕಾರರು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

74. ಶ್ರೀನಿವಾಸ್ ಎಂ.ವಿ., 2001: 308; ಮಂಜುನಾಥ ಎಂ.ಜಿ. 2006: ಪ್ರಸ್ತಾವನೆ ಪುಟ.42–43.

75. **ಅದೇ:** 308.

76. **ಅದೇ:** 309.

77. **ಅದೇ:** 310.

78. ಮೋಹನ್‌ಕೃಷ್ಣ ರೈ, **ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ,** 2006: 46.

# ಅಧ್ಯಾಯ–3

# ಯಲಹಂಕ ನಾಡಪ್ರಭುಗಳು–ರಾಜಕೀಯ ಚರಿತ್ರೆ

ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ನಾಡಪ್ರಭುಗಳಲ್ಲಿ ಯಲಹಂಕ ನಾಡಪ್ರಭುಗಳಿಗೆ ವಿಶೇಷ ಸ್ಥಾನವಿದೆ. ದಕ್ಷಿಣ ಕರ್ನಾಟಕದಲ್ಲಿ ಏಳಿಗೆಗೆ ಬಂದ ಈ ಮನೆತನದ ಇತಿಹಾಸವನ್ನು ಕುರಿತು 19ನೆಯ ಶತಮಾನದ ಆರಂಭದಿಂದ 21ನೆಯ ಶತಮಾನದ ಆರಂಭದವರೆಗೂ ಹತ್ತಾರು ಮಂದಿ ವಿದ್ವಾಂಸರು ಸಂಶೋಧನೆ ನಡೆಸಿ, ದಾಖಲಿಸಿದ್ದಾರೆ.[1] ಸಾಮಾನ್ಯವಾಗಿ, ಇವರೆಲ್ಲರ ಬರವಣಿಗೆಗಳಲ್ಲಿ ಯಲಹಂಕ ನಾಡಪ್ರಭುಗಳ ಆಳ್ವಿಕೆಯ ಆರಂಭ ಕಾಲದ ಬಗೆಗೆ ಗೊಂದಲಗಳಿವೆ. ಅಲ್ಲದೆ, ಆಳಿದ ಆರಂಭಿಕ ನಾಡಪ್ರಭುಗಳ ಬಗೆಗೂ ಕೂಡ ಖಚಿತ ನಿಲುವುಗಳಿಲ್ಲ. ಕಾರಣ, ಈ ಬಗೆಗೆ ಯಾವುದೇ ಸಮಕಾಲೀನ ಶಾಸನಗಳ ಮತ್ತು ಸಾಹಿತ್ಯ ಕೃತಿಗಳ ಆಧಾರಗಳಿಲ್ಲ. ಇರುವ ಆಧಾರಗಳು ಐತಿಹ್ಯಗಳು, ಬಖೈರುಗಳು ಮತ್ತು ಕೆಲವು ಜಾನಪದ ಸಾಹಿತ್ಯಗಳಾಗಿವೆ. ಈ ನಕಾರಾತ್ಮಕ ಆಕರ(ನೆಗೆಟಿವ್ ಸೋರ್ಸ್)ಗಳನ್ನು ಪುಷ್ಟೀಕರಿಸುವಂತಹ ಸಕಾರಾತ್ಮಕ ಆಕರ(ಪಾಸಿಟಿವ್ ಸೋರ್ಸ್)ಗಳ ಕೊರತೆಗಳಿವೆ. ಅಂದರೆ, ಘಟನೆ ಅಥವಾ ವ್ಯಕ್ತಿಯ ಸಮಕಾಲೀನವಾದ ಶಾಸನ ಅಥವಾ ಲಿಖಿತ ದಾಖಲೆ ಮೊದಲಾದ ವಿಶ್ವಾಸಾರ್ಹ ಆಕರಗಳ ಕೊರತೆಗಳಿವೆ. ಇತಿಹಾಸ ಸಂಶೋಧನಾ ವಿಧಾನದಲ್ಲಿ ತೀರ್ಮಾನಗಳನ್ನು ಕೈಕೊಳ್ಳಲು ಸಕಾರಾತ್ಮಕ ಆಕರಗಳ ಪಾತ್ರ ಬಹುಮುಖ್ಯವಾಗುತ್ತದೆ.

ಪ್ರಸ್ತುತ ಉಪಲಬ್ಧ ಆಕರಗಳ ಹಿನ್ನೆಲೆಯಲ್ಲಿ ಯಲಹಂಕ ನಾಡಪ್ರಭುಗಳ ಮೂಲ, ಆರಂಭಿಕ ಯಲಹಂಕ ನಾಡಪ್ರಭುಗಳ ಐತಿಹಾಸಿಕ ಸಂಗತಿಗಳನ್ನು ಚರ್ಚಿಸಲಾಗಿದೆ. ಈ ವಿಷಯಗಳ ಪ್ರವೇಶಕ್ಕೆ ಮೊದಲು ಅಧ್ಯಯನಕ್ಕೆ ಒಳಪಡಿಸಲಾಗುತ್ತಿರುವ ಯಲಹಂಕ ನಾಡಿನ ಚಾರಿತ್ರಿಕ ಹಿನ್ನೆಲೆಯನ್ನು ಪರಿಚಯಿಸಿಕೊಳ್ಳುವುದು ಸಂದರ್ಭೋಚಿತವಾಗಿದೆ. ಯಲಹಂಕ ನಾಡಪ್ರಭುಗಳು ಸ್ಥಳೀಯ ಮೂಲ ನಿವಾಸಿಗಳೇ ಅಥವಾ ಹೊರಗಿನಿಂದ ವಲಸೆ ಬಂದು ನೆಲೆಸಿದವರೇ ಎಂಬ ಬಗೆಗೂ ಹಲವು ಜಿಜ್ಞಾಸೆಗಳು ಮುಂದುವರೆದಿದ್ದು, ಇವರು ತೆಲುಗು ಮೂಲದವರಾ? ತಮಿಳು ಮೂಲದವರಾ? ಅಥವಾ ಕನ್ನಡ ಮೂಲದವರಾ? ಎಂಬ ಬಗ್ಗೆ ಯಾವುದೇ ಖಚಿತ ತೀರ್ಮಾನಗಳಿಲ್ಲ. ಆದ್ದರಿಂದ ಈ ಎಲ್ಲಾ ಆಯಾಮಗಳನ್ನು ಕೂಡ ಅಧ್ಯಯನಕ್ಕೆ ಒಳಪಡಿಸಿ, ಉತ್ತರ ಶೋಧಿಸಲು ಪ್ರಯತ್ನಿಸಲಾಗಿದೆ.

ಮುಂದುವರೆದು, ಯಲಹಂಕ ನಾಡಪ್ರಭುಗಳನ್ನು ಕುರಿತು ಅಧ್ಯಯನ ನಡೆಸಿರುವ ಈವರೆಗಿನ ವಿದ್ವಾಂಸರು ನಾಡಪ್ರಭುಗಳ ಕಾಲವನ್ನು ನಿಷ್ಕರ್ಷೆ ಮಾಡಿರುವಲ್ಲಿ ಏಕರೂಪತೆ ಇಲ್ಲದಿರುವುದು ಹಲವು ಗೊಂದಲಗಳಿಗೆ ಕಾರಣವಾಗಿದೆ. ಈ ಮನೆತನದಲ್ಲಿ ಎಂಟು ಮಂದಿ ಪ್ರಭುಗಳ ಹೆಸರಿನಲ್ಲಿ 'ಕೆಂಪ' ಎಂಬ ಪ್ರಯೋಗವಿರುವುದರಿಂದ ಅವರ ಸಾಧನೆಗಳ ಬಗೆಗೂ ಒಮ್ಮತ ಅಭಿಪ್ರಾಯಗಳಿಲ್ಲ. ಜೊತೆಗೆ ಅನೇಕ ಐತಿಹ್ಯಗಳು, ಜಾನಪದ ಕಥನಗಳು ಈ ಮನೆತನದ ಚರಿತ್ರೆಯಲ್ಲಿ ಹೆಣೆದುಕೊಂಡಿರುವುದರಿಂದ ಗೊಂದಲಗಳು ಮೂಡಿವೆ. ಇಂತಹ ಹಲವು ಪ್ರಶ್ನೆಗಳಿಗೆ ಉತ್ತರ ಹುಡುಕಲು ಪ್ರಸ್ತುತ ಅಧ್ಯಾಯದಲ್ಲಿ ಪ್ರಯತ್ನಿಸಲಾಗಿದೆ.

ಈ ಅಧ್ಯಾಯದಲ್ಲಿ ಯಲಹಂಕ ನಾಡಪ್ರಭುಗಳ ರಾಜಕೀಯ ಚರಿತ್ರೆಯನ್ನು ಚರ್ಚಿಸಲಾಗಿದೆ. ಅಧ್ಯಯನದ ದೃಷ್ಠಿಯಿಂದ ಆಳಿದ ಯಲಹಂಕ ನಾಡಪ್ರಭುಗಳನ್ನು ಮೂರು ವಿಭಾಗಗಳಲ್ಲಿ ವರ್ಗೀಕರಣ ಮಾಡಿಕೊಳ್ಳಲಾಗಿದೆ.

1) ಆರಂಭಕಾಲದ ಯಲಹಂಕ ನಾಡಪ್ರಭುಗಳು
2) ಉಚ್ಛ್ರಾಯಕಾಲದ ಯಲಹಂಕ ನಾಡಪ್ರಭುಗಳು
3) ಕೊನೆಗಾಲದ ಯಲಹಂಕ ನಾಡಪ್ರಭುಗಳು

ನಮಗೆ ಉಚ್ಛ್ರಾಯ ಕಾಲದ ಯಲಹಂಕ ನಾಡಪ್ರಭುಗಳಿಂದ ಚಾರಿತ್ರಿಕ ಅಧ್ಯಯನಕ್ಕೆ ವಿಶ್ವಾಸಾರ್ಹ ಆಧಾರಗಳು ಲಭ್ಯವಾಗುತ್ತವೆ. ಅದಕ್ಕೆ ಮೊದಲಿನ ಅರಸರ ಬಗೆಗೆ ಯಾವುದೇ ಸಮಕಾಲೀನ ಆಧಾರಗಳು ಕಂಡುಬರುವುದಿಲ್ಲ. ಈ ಬಗ್ಗೆಯೂ ಇಲ್ಲಿ ಚರ್ಚಿಸಲಾಗಿದೆ. ಇದಕ್ಕೆ ಮೊದಲು ಯಲಹಂಕ ನಾಡಿನ ಚಾರಿತ್ರಿಕ ಹಿನ್ನೆಲೆ ಮತ್ತು ಯಲಹಂಕ ನಾಡಪ್ರಭುಗಳ ಮೂಲವನ್ನು ಕುರಿತು ಚರ್ಚಿಸಲಾಗಿದೆ. ಈ ಅಧ್ಯಾಯದ ಕೊನೆಯ ಭಾಗದಲ್ಲಿ ಯಲಹಂಕ ನಾಡಪ್ರಭುಗಳ ಇತರ ಮನೆತನಗಳಾದ ಕುಣಿಗಲ್ ಮನೆತನ, ಹುಲಿಕಲ್ಲು ಮನೆತನ ಮತ್ತು ಜುಟ್ಟನಹಳ್ಳಿ ಮನೆತನಗಳ ಬಗೆಗೂ ಬೆಳಕು ಚೆಲ್ಲುವ ಪ್ರಯತ್ನ ನಡೆಸಲಾಗಿದೆ.

## 3.1 ಯಲಹಂಕ ನಾಡು ಚಾರಿತ್ರಿಕ ಹಿನ್ನೆಲೆ

ಬೆಂಗಳೂರಿನ ಉತ್ತರಕ್ಕೆ ಸುಮಾರು 15 ಕಿ.ಮೀ. ದೂರದಲ್ಲಿರುವ ಯಲಹಂಕವನ್ನು ಕೇಂದ್ರವಾಗಿರಿಸಿಕೊಂಡು 11ನೆಯ ಶತಮಾನದಲ್ಲಿ ರಚನೆಯಾದ ನಾಡೇ ಪ್ರಾಚೀನ ಯಲಹಂಕ ನಾಡು. ಇದು ಇಂದಿನ ಬಹುತೇಕ ಬೆಂಗಳೂರು ನಗರವೂ ಸೇರಿದಂತೆ ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ ತಾಲ್ಲೂಕುಗಳ ಕೆಲವು ಪ್ರದೇಶಗಳನ್ನು

ಒಳಗೊಂಡಿತೆಂದು ಶಾಸನಗಳ ಉಲ್ಲೇಖಗಳ ಆಧಾರದ ಮೇಲೆ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[2] ಆ ಹೊತ್ತಿಗೆ ಇದ್ದ ಹಲವು ನಾಡುಗಳ ಭಾಗಗಳನ್ನು ಕತ್ತರಿಸಿ, ಯಲಹಂಕ ನಾಡನ್ನು ರಚಿಸಲಾಗಿದೆ. ಯಾವೆಲ್ಲ ನಾಡುಗಳ ಭಾಗಗಳು ಸೇರಿ ಯಲಹಂಕ ನಾಡನ್ನು ರೂಪಿಸಲಾಗಿದೆ ಎಂಬುದರ ಬಗ್ಗೆ ಎಚ್.ಎಂ. ಬೋರಯ್ಯನವರು ಶಾಸನಗಳ ಉಲ್ಲೇಖಗಳ ಹಿನ್ನೆಲೆಯಲ್ಲಿ ಗುರುತಿಸಿದ್ದಾರೆ. ಅವರ ಪ್ರಕಾರ: "ವಿಕ್ರಮಚೋಳ ಮಂಡಲದಲ್ಲಿನ ನಾಡುಗಳಾದ ನಾಗವಾರನಾಡು, ನಲ್ಲೂರುನಾಡು, ಮೊರಸುನಾಡು, ಕೈವಾರನಾಡು, ಕುರುವಂಜಿನಾಡು, ಸಣ್ಣೆನಾಡು, ಪುಲಿಯೂರುನಾಡು, ಕುಂಜಿನಾಡು, ಕುವಲಾಳನಾಡು, ಕಲುಕಣಿನಾಡು, ವೆಪ್ಪೂರುನಾಡು, ತೊರವಳಿನಾಡು, ವಿರವಿನಾಡು, ಪೆರಿಯನಾಡು, ಕರಿಕನಾಡು, ಕುಕ್ಕಲನಾಡು ಮತ್ತು ಮಾಶಂದಿನಾಡುಗಳ ಕೆಲವು ಭಾಗಗಳನ್ನು ಸೇರಿಸಿ, ಚೋಳರ ಆಳ್ವಿಕೆಯ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ನಾಡೆ 'ಇಳೈಪಾಕ್ಕನಾಡು'."[3] ಯಲಹಂಕ ನಾಡನ್ನು 'ಎಲಹಕ', 'ಎಲವಕ', 'ಎಲಹಕ್ಕ', 'ಯಲಹಕ್ಕ', ಯೆಲಹಕ', 'ಯೆಲಹಕ್ಕ', 'ಎಲಹ್ಕ', 'ಎಲಹಂಕ', 'ಯಲಹಂಕ', 'ಯಲವಂಕ' ಎಂದು ಕನ್ನಡ ಶಾಸನಗಳಲ್ಲಿಯೂ; 'ಇಳೈಪಾಕ್ಕ' ಎಂದು ತಮಿಳು ಶಾಸನದಲ್ಲಿಯೂ ಕರೆದಿರುವುದನ್ನು ನೋಡಬಹುದು. ಕ್ರಿ.ಶ. 1200 ರಿಂದ 1386ರವರೆಗಿನ ಕಾಲಾವಧಿಯ 20 ಶಾಸನಗಳಲ್ಲಿ ಯಲಹಂಕ ನಾಡಿನ ಉಲ್ಲೇಖಗಳಿದ್ದು, ಅವುಗಳಲ್ಲಿ 9 ಶಾಸನಗಳಲ್ಲಿ 'ಇಳೈಪಾಕ್ಕನಾಟ್ಟು / ಇಳೈಪಾಕ್ಕನಾಡು' ಪ್ರಯೋಗವಿದ್ದರೆ, ಉಳಿದ ಕನ್ನಡ ಶಾಸನಗಳಲ್ಲಿ ಏಕಪ್ರಕಾರದ ಪ್ರಯೋಗವಿಲ್ಲದಿರುವುದನ್ನು ಗಮನಿಸಬಹುದು.[4]

ಪಿ.ವಿ. ಕೃಷ್ಣಮೂರ್ತಿ ಅವರು 'ಯಲಹಂಕ' ನಾಮ ನಿಷ್ಪತ್ತಿಯ ಬಗೆಗೂ ವಿವೇಚಿಸಿದ್ದು, ಶಾಸನಗಳಲ್ಲಿ ಎಲಹಕ್ಕ, ಎಲವಕ, ಮುಂತಾದ ಪ್ರಯೋಗಗಳಿರುವುದರಿಂದ ಎಲವ+ಹಕ್ಕೆ ಅಥವಾ ಎಲವ+ಹಕ್ಕ ಎಂಬ ಪದಗಳು ಕೂಡಿ ಎಲವಹಕ್ಕೆ ಅಥವಾ ಎಲವಹಕ್ಕ ಎಂದಾಗಿ ಮುಂದೆ ಎಲವ್ಹಕ್ಕ > ಎಲಹ್ವಕ್ಕ > ಎಲವ್ಹಂಕ > ಎಲಹಂಕ > ಯಲಹಂಕ ಎಂದು ರೂಪಾಂತರಗೊಂಡಿರಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಎಲವ ಎಂದರೆ ಬೂರುಗದ ಮರ (ಶಾಲ್ಮಲೀ ವೃಕ್ಷ), ಹಕ್ಕೆ ಎಂದರೆ ವಿಶ್ರಾಂತಿ ಸ್ಥಾನ, ಹಟ್ಟಿ, ಆಶ್ರಯ ಎಂಬ ಅರ್ಥಗಳಿವೆ. ಒಟ್ಟಾರೆ, ಬೂರುಗದ ಮರದ ಸಾಮಿಪ್ಯದ ಹಿನ್ನೆಲೆಯಲ್ಲಿ ಈ ಊರಿನ ಹೆಸರು ಹುಟ್ಟಿರಬೇಕೆಂದು ಹೇಳಬಹುದಾಗಿದೆ.[5]

ಯಲಹಂಕದ ಪ್ರಾಚೀನ ಉಲ್ಲೇಖವು ಕ್ರಿ.ಶ. 1046ರ ದೇವನಹಳ್ಳಿ ತಾಲ್ಲೂಕಿನ ಗಂಗವಾರ ಗ್ರಾಮದ ಶಾಸನದಲ್ಲಿದೆ.[6] ಆದರೆ ನಾಡಿನ ಹೆಸರಿನಲ್ಲಿ ಕ್ರಿ.ಶ. 1200ರ ಶಾಸನದಲ್ಲಿ

'ಇಲೈಪಾಕ್ಕನಾಟ್ಟು' ಎಂಬುದಾಗಿ ಮೊದಲ ಉಲ್ಲೇಖವು ಕಂಡುಬರುತ್ತದೆ.[7] ಕ್ರಿ.ಶ. 1348ರ ಶಾಸನದಲ್ಲಿ ಯಲಹಂಕ ನಾಡನ್ನು 'ಮಹಾ ಎಲಕ್ಕನಾಡು' ಎಂದು ಕರೆಯಲಾಗಿದೆ.[8] ಅಂದರೆ, 14ನೆಯ ಶತಮಾನದಲ್ಲಿ ಯಲಹಂಕ ಮಹಾನಾಡಾಗಿತ್ತೇ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಕ್ರಿ.ಶ. 1532ರ ನೆಲಮಂಗಲ ತಾಲೂಕಿನ ಹೆಸರುಘಟ್ಟ ಗ್ರಾಮದ ಶಾಸನವೊಂದರಲ್ಲಿ "ಚೇಲೂರು ಚಾವಡಿಗೆ ಸಲುವ ಎಲಹಂಕ ನಾಡ ಸಿವನಸಮುದ್ರ ಸೀಮೆಯೊಳಗಣ ಕಾಕೋಳಸ್ಥಳ" ಎಂದು ಉಲ್ಲೇಖಿಸಿದೆ.[9] ಆನಂತರದ ಶಾಸನಗಳಲ್ಲಿ ಮನೆತನವು 18ನೆಯ ಶತಮಾನದವರೆಗೂ ಅಸ್ತಿತ್ವದಲ್ಲಿದ್ದ ಬಗ್ಗೆ ಆಧಾರಗಳಿವೆ. ಹೊಯ್ಸಳರ ವೀರನರಸಿಂಹನ ಕಾಲದಲ್ಲಿ ಶ್ರೀಮನ್ಮಹಾಮಂಡಲೇಶ್ವರ ತ್ರಿಭುವನಮಲ್ಲ ನಂದಗಿರಿನಾಥ ಮೊದಲಾದ ಬಿರುದಾಂಕಿತನಾದ ದೇ(ಬೇ)ಚಿದೇವರಸ ಎಲಹಂಕವನ್ನು ನೆಲೆವೀಡು ಮಾಡಿಕೊಂಡು ಆಳುತ್ತಿದ್ದನೆಂದು ದೊಡ್ಡಬಳ್ಳಾಪುರದ ಕೋಟೆಯೊಳಗಿನ ಕ್ರಿ.ಶ. 1267ರ ಶಾಸನವು ತಿಳಿಸುತ್ತದೆ.[10] ಯಲಹಂಕ ನಾಡು ರಾಜೇಂದ್ರಚೋಳ ವಳನಾಡಿನಲ್ಲಿ ಅಂತರ್ಗತವಾಗಿತ್ತು. ರಾಜೇಂದ್ರಚೋಳ ವಳನಾಡು ನಿಗರಿಲಿಚೋಳಮಂಡಲದ ಭಾಗವಾಗಿತ್ತು. ಕ್ರಿ.ಶ. 1348ರ ದೇವನಹಳ್ಳಿ ತಾಲೂಕಿನ ಕಟಿಗೇನಹಳ್ಳಿಯ ಶಾಸನದ ಕಾಲದಿಂದ ಯಲಹಂಕನಾಡು ವಿಜಯನಗರ ಅರಸರ ಆಡಳಿತಕ್ಕೆ ಸೇರಿತ್ತು.[11] "ಹರಿಹರ, ಬುಕ್ಕಣ್ಣ, ಕಂಪ ಒಡೆಯ (ಬುಕ್ಕಣ್ಣನ ಒಬ್ಬ ಮಗ), ಕಾಮೆಯನಾಯಕ (ಬುಕ್ಕಣ್ಣನ ಮತ್ತೊಬ್ಬ ಮಗ), ಹರಿಯಪ್ಪ ಒಡೆಯ, ದೇವರಾಯ, ಅಚ್ಯುತರಾಯ ಮುಂತಾದವರು ಈ ನಾಡನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದರು" ಎಂದು ಪಿ.ವಿ. ಕೃಷ್ಣಮೂರ್ತಿ ಅವರು ತೋರಿಸಿಕೊಟ್ಟಿದ್ದಾರೆ.[12] ಮುಂದುವರೆದು "ವಿಶೇಷವಾಗಿ ಪ್ರಭುಗೌಡುಗಳೆಂದು ಖ್ಯಾತರಾಗಿದ್ದ ಗೌಡಕುಲದವರು ಹೊಯ್ಸಳರ ಕಾಲದಿಂದಲೂ ಈ ನಾಡಿನ ಸ್ಥಳೀಯ ಆಡಳಿತಗಾರರಾಗಿದ್ದ ಅಂಶವು ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ ಈ ನಾಡಗೌಡುಗಳ ಆಳ್ವಿಕೆಯು ಈ ನಾಡಿನ ಮೇಲೆ ಅತ್ಯಂತ ಪ್ರಭಾವಶಾಲಿಯಾಗಿದ್ದಿತು. ಈ ನಾಡಗೌಡುಗಳ ಅಧಿಕಾರದ ವ್ಯಾಪ್ತಿ ಕೇವಲ ಎಲಹಂಕ ನಾಡಿನ ಮೇಲಷ್ಟೇ ಅಲ್ಲದೆ, ನೆರೆಹೊರೆಯ ನಾಡುಗಳ ಮನ್ನೆಯರ ಮೇಲೆಲ್ಲ ಇದ್ದಿತೆಂಬ ಅಂಶವು ಶಿಷ್ಟ ಹಾಗೂ ಜಾನಪದ ಸಾಹಿತ್ಯಾಧಾರಗಳಿಂದ ದೃಢಪಡುತ್ತದೆ. ಶಾಸನಗಳು ಮಾತ್ರ ಈ ವಿಷಯದಲ್ಲಿ ಮೌನತಾಳಿವೆ" ಎಂದಿದ್ದಾರೆ.[13] ಯಲಹಂಕ ನಾಡನ್ನು ಆಳಿದ ನಾಡಪ್ರಭುಗಳ ಮನೆತನದ ಆರಂಭಿಕ ವ್ಯಕ್ತಿಗಳ ನೈಜತೆಯನ್ನು ಪರಿಶೀಲಿಸುವ ಅಗತ್ಯವಿದ್ದು, ಮುಂದಿನ ಭಾಗಗಳಲ್ಲಿ ಈ ಕುರಿತು ಚರ್ಚಿಸಲಾಗಿದೆ.

### 3.1.1 ಯಲಹಂಕ ನಾಡಿನ ವ್ಯಾಪ್ತಿ

ಯಲಹಂಕ ನಾಡಿನ ವ್ಯಾಪ್ತಿಯು ಎಲ್ಲಾ ಕಾಲದಲ್ಲಿಯೂ ಏಕರೂಪದಲ್ಲಿ ಇಲ್ಲದಿರುವುದನ್ನು ಗಮನಿಸಬಹುದು. ಯಲಹಂಕ ಊರನ್ನು ಕೇಂದ್ರವಾಗಿ ಮಾಡಿಕೊಂಡು ಆರಂಭವಾದ ಯಲಹಂಕನಾಡಿನಲ್ಲಿ ಒಂದು ಹಂತದಲ್ಲಿ ಯಲಹಂಕವೇ ಕೈಬಿಟ್ಟು ಹೋಗಿತ್ತು ಎಂಬುದು ಗಮನಿಸಬೇಕಾದ ಅಂಶವಾಗಿದೆ. ಆದ್ದರಿಂದ ಬೇರೆ ಬೇರೆ ಕಾಲಘಟ್ಟದಲ್ಲಿ ತನ್ನ ವ್ಯಾಪ್ತಿಯ ಸ್ವರೂಪದಲ್ಲಿ ವ್ಯತ್ಯಾಸಗಳನ್ನು ಹೊಂದುತ್ತಾ ಹೋಗಿರುವುದನ್ನು ಕಾಣಬಹುದು. ಆರಂಭಕಾಲದ ಎಲಹಂಕ ನಾಡಿನಲ್ಲಿ ಇಂದಿನ ಬೆಂಗಳೂರು ನಗರದ ಬಹುಭಾಗವು ಸೇರಿದಂತೆ, ಬೆಂಗಳೂರು ಉತ್ತರ ತಾಲ್ಲೂಕು, ಹೊಸಕೋಟೆ, ದೇವನಹಳ್ಳಿ, ದೊಡ್ಡಬಳ್ಳಾಪುರ, ನೆಲಮಂಗಲ ತಾಲ್ಲೂಕುಗಳ ಅನೇಕ ಗ್ರಾಮಗಳನ್ನು ಒಳಗೊಂಡಿತ್ತೆಂದು ಆರಂಭದಲ್ಲಿಯೇ ಗಮನಿಸಲಾಗಿದೆ. ಆದರೆ, ಎಚ್.ಎಂ. ಬೋರಯ್ಯನವರು ಯಲಹಂಕ ಮಹಾನಾಡಿನ ವ್ಯಾಪ್ತಿಯನ್ನು ಬಹು ವಿಸ್ತಾರವಾಗಿ ಗುರುತಿಸಿದ್ದಾರೆ. ಅವರ ಹೇಳುವಂತೆ: "ಯಲಹಂಕ ಮಹಾನಾಡು ಬೆಂಗಳೂರ ನಗರ ಜಿಲ್ಲೆ, ಧರ್ಮಪುರಿ ಜಿಲ್ಲೆಯ ಪಶ್ಚಿಮ ಭಾಗ, ನೆಲಮಂಗಲ ತಾಲ್ಲೂಕು, ದೊಡ್ಡಬಳ್ಳಾಪುರ ತಾಲ್ಲೂಕು, ದೇವನಹಳ್ಳಿ ತಾಲ್ಲೂಕು, ಮಾಗಡಿ ತಾಲ್ಲೂಕು, ಚನ್ನಪಟ್ಟಣ ತಾಲ್ಲೂಕು ಮತ್ತು ಈಗಿನ ರಾಮನಗರ ತಾಲ್ಲೂಕಿನ ಬಹುತೇಕ ಭಾಗಗಳು ಸೇರಿಕೊಂಡು ವಿಸ್ತಾರಗೊಂಡ ನಾಡಾಗಿದ್ದಂತೆ ತಿಳಿದುಬರುತ್ತದೆ" ಎಂದಿದ್ದಾರೆ.[14]

ಯಲಹಂಕ ನಾಡಪ್ರಭುಗಳಲ್ಲಿ ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ನಾಡು ತನ್ನ ವಿಸ್ತಾರತೆಯನ್ನು ಪಡೆದುಕೊಂಡಿತ್ತು. ಇಮ್ಮಡಿ ಕೆಂಪೇಗೌಡನ ಆಳ್ವಿಕೆಯ ಕಾಲವಾದ ಕ್ರಿ.ಶ. 1634ರ ಸಂದರ್ಭದಲ್ಲಿ ಯಲಹಂಕ ನಾಡಿನ ವಿಸ್ತಾರವನ್ನು ಸಮಕಾಲೀನ ಶಾಸನಗಳು ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಹೀಗೆ ಗುರುತಿಸಬಹುದಾಗಿದೆ. ದಕ್ಷಿಣದಲ್ಲಿ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಡೆಂಕಣಿಕೋಟೆ ಮತ್ತು ಕೃಷ್ಣಗಿರಿ ತಾಲ್ಲೂಕುಗಳ ಹೊಸೂರು, ಗುಮ್ಮಳಾಪುರ ಹಾಗೂ ರಾಮನಗರ, ಚನ್ನಪಟ್ಟಣದಿಂದ, ಉತ್ತರದಲ್ಲಿ ದೊಡ್ಡಬಳ್ಳಾಪುರ, ದೇವನಹಳ್ಳಿಯವರೆಗೆ; ಪೂರ್ವದಲ್ಲಿ ಹೊಸಕೋಟೆ ಸೇರಿದಂತೆ, ಪಶ್ಚಿಮದಲ್ಲಿ ಕುಣಿಗಲ್ ತಾಲ್ಲೂಕಿನ ಗಡಿ ಶಿಂಷಾ ನದಿಯ ಅಂಚಿನವರೆಗೆ ವ್ಯಾಪಿಸಿತ್ತೆಂದು ಹೇಳಬಹುದು. ಸಾಮಾನ್ಯವಾಗಿ ನದಿ ತೊರೆಗಳು, ದಟ್ಟವಾದ ಕಾಡುಗಳು, ಬೆಟ್ಟಸಾಲುಗಳು ನಾಡುಗಳ ಗಡಿಗಳಾಗಿರುತ್ತವೆ. ಪಶ್ಚಿಮದಲ್ಲಿ ಶಿಂಷಾನದಿಯು ಎಡೆಯೂರಿಗೆ ಉತ್ತರದಲ್ಲಿ ಪ್ರಾರಂಭವಾಗಿ ಹುಲಿಯೂರುದುರ್ಗವನ್ನು ಬಳಸಿ, ಮದ್ದೂರು ಸಮೀಪದವರೆಗೆ ಸಾಗಿ ಚನ್ನಪಟ್ಟಣದ ದಕ್ಷಿಣದಿಂದ ಕಬ್ಬಾಳುದುರ್ಗವನ್ನು

ಒಳಗೊಂಡಂತೆ ಕನಕಪುರ ಬಳಸಿ, ಪೂರ್ವದಲ್ಲಿ ದೊಡ್ಡಮರಳವಾಡಿ ಮತ್ತು ದಟ್ಟ ಅರಣ್ಯದ ಅಂಚಿನಿಂದ ಗುಮ್ಮಳಪುರದವರೆಗೂ, ಅಲ್ಲಿಂದ ಮುಂದೆ ಹೊಸೂರು, ಆನೇಕಲ್ ಸೇರಿದಂತೆ ಬೆಂಗಳೂರು ದಕ್ಷಿಣ ಭಾಗ, ಪೂರ್ವದಲ್ಲಿ ಹೊಸಕೋಟೆಯೂ ಸೇರಿದಂತೆ ಪಿನಾಕಿನಿ ನದಿಯ ಬಲಪಾರ್ಶ್ವದಲ್ಲಿ ಸಾಗಿ, ಉತ್ತರದಲ್ಲಿ ದೇವನಹಳ್ಳಿ, ದೊಡ್ಡಬಳ್ಳಾಪುರ ಬಳಸಿ, ಶಿವಗಂಗೆ, ಹೆಬ್ಬೂರು ಸೇರಿಸಿಕೊಂಡಂತೆ ಪಶ್ಚಿಮ ಅಂಚಿನಲ್ಲಿ ಶಿಂಷಾ ನದಿಯನ್ನು ಸೇರಿದರೆ ಬಹುಶಃ ಇಮ್ಮಡಿ ಕೆಂಪೇಗೌಡನ ಆಳ್ವಿಕೆಗೆ ಅಥವಾ ಅಧೀನಕ್ಕೆ ಒಳಪಟ್ಟಿದ್ದ ಪ್ರದೇಶದ ವ್ಯಾಪ್ತಿಯಾಗುತ್ತಿತ್ತೆಂದು ತೋರುತ್ತದೆ (ನಕ್ಷೆ–3). ಇದು ಯಲಹಂಕ ನಾಡಪ್ರಭುಗಳ ಆಳ್ವಿಕೆಯ ಕಾಲದಲ್ಲಿದ್ದ ಅತಿ ದೊಡ್ಡ ಆಳ್ವಿಕೆಯ ಪ್ರದೇಶವೆಂದು ಭಾವಿಸಬಹುದು. 1634ರ ಹೊತ್ತಿಗೆ ಚನ್ನಪಟ್ಟಣದ ಪಾಳೆಯಗಾರರನ್ನು ಮೈಸೂರು ಒಡೆಯರು ಸೋಲಿಸಿ, ಅವನತಿಗೆ ಕಾರಣರಾಗಿದ್ದರು. ಕಾನಕಾನಹಳ್ಳಿಯ ಪಾಳೆಯಗಾರರು ಕನಕಪುರ ಪ್ರದೇಶ ಬಿಟ್ಟು ಚನ್ನರಾಯಪಟ್ಟಣದ ಪರಿಸರದಲ್ಲಿ ಆಳುತ್ತಿದ್ದರು. ಹೊಸಕೋಟೆ ಅಥವಾ ಸುಗುಟೂರು ಅರಸರು ದುರ್ಬಲರಾಗಿದ್ದು, ಇಮ್ಮಡಿ ಕೆಂಪೇಗೌಡನೇ ಅಯಮಗೌಡನನ್ನು ಸೋಲಿಸಿ, ಸುಗುಟೂರು ನಾಡನ್ನು ಮತ್ತೆ ದೊರಕಿಸಿಕೊಟ್ಟು ಆಶ್ರಯ ನೀಡಿದ್ದನು. 1633ರ ಸುಮಾರಿಗೆ ದೊಡ್ಡಬಳ್ಳಾಪುರದ ಪಾಳೆಯಗಾರರನ್ನು ಮೈಸೂರು ಒಡೆಯರು ಸೋಲಿಸಿದ್ದರಿಂದ ಅಳಿವಿನ ಅಂಚಿಗೆ ಸರಿದಿದ್ದರು. ಈ ಕಾಲಘಟ್ಟದಲ್ಲಿ ಮೈಸೂರು ಒಡೆಯರನ್ನು ಹಲವು ಯುದ್ಧಗಳಲ್ಲಿ ಇಮ್ಮಡಿ ಕೆಂಪೇಗೌಡ ಸೋಲಿಸಿದ್ದ ಸಂಗತಿಯು ಸಾಹಿತ್ಯ ಕೃತಿಗಳಿಂದ ತಿಳಿದು ಬರುತ್ತದೆ. ಇದೇ ಕಾಲಘಟ್ಟದ ಆಸುಪಾಸಿನಲ್ಲಿಯೇ ಮುನಿನಗರ ಶಾಸನದಲ್ಲಿ ಮಠವೊಂದಕ್ಕೆ ದಾನ ಕೊಟ್ಟ ವಿವರಗಳಿವೆ.[15] ಇದಕ್ಕೂ ಪೂರ್ವದ ಗುಮ್ಮಳಾಪುರದ ಗೌರಮ್ಮನ ಗುಡಿ ಶಾಸನದಲ್ಲಿ ಇಮ್ಮಡಿ ಕೆಂಪೇಗೌಡನು ಗುಮ್ಮಳಾಪುರವನ್ನು ದಾನ ನೀಡಿದ ವಿವರವಿದೆ.[16] ಈ ಎಲ್ಲಾ ಕಾರಣಗಳಿಂದ ಮೇಲೆ ಹೇಳಿದ ಬಹುತೇಕ ಪ್ರದೇಶವು ಇಮ್ಮಡಿ ಕೆಂಪೇಗೌಡನ ನಿಯಂತ್ರಣದಲ್ಲಿತ್ತೆಂದರೆ ತಪ್ಪಾಗಲಾರದು.

## 3.2 ಯಲಹಂಕ ನಾಡಪ್ರಭುಗಳ ಮೂಲ

ಯಾವುದೇ ಮನೆತನದ ಮೂಲವನ್ನು ಶೋಧಿಸುವುದು ಸಾಧಾರಣ ಕೆಲಸವಲ್ಲ. ಏಕೆಂದರೆ, ಮೂಲ ಎಂಬುದಕ್ಕೆ ಕೊನೆ ಮೊದಲಿಲ್ಲ. ಆದ್ದರಿಂದ ಅಧ್ಯಯನಕಾರನೇ ಒಂದು ಮಿತಿ ಅಥವಾ ಚೌಕಟ್ಟನ್ನು ಹಾಕಿಕೊಂಡೇ ಅಧ್ಯಯನದ ಆಳಕ್ಕೆ ಇಳಿಯಬೇಕಾಗುತ್ತದೆ. ಯಲಹಂಕ ನಾಡಪ್ರಭುಗಳ ಮೂಲದ ಬಗೆಗೂ ಇಂತಹದ್ದೇ ಸಮಸ್ಯೆ ನಮ್ಮನ್ನು ಕಾಡುತ್ತದೆ. ಆದ್ದರಿಂದ ಇವರು ಎಲ್ಲಿಂದ ಇಲ್ಲಿಗೆ ಬಂದರು ಎಂಬುದರಿಂದ ಮೂಲವನ್ನು ಹುಡುಕುವುದೇ ಸೂಕ್ತ. ಆದರೆ

ಈ ಬಗ್ಗೆ ಅಧ್ಯಯನ ನಡೆಸಲು ನಮಗೆ ನಿಖರ ಆಕರಗಳ ಕೊರತೆ ಇವೆ. ಈ ದಿಸೆಯಲ್ಲಿ ಆರ್. ರಾಮಕೃಷ್ಣನ್ ಅವರ ಮಾತುಗಳನ್ನು ಪರಿಶೀಲಿಸುವುದು ಅವಶ್ಯವಾಗಿ ತೋರುತ್ತದೆ. ಅವರು ಹೇಳುವಂತೆ: "ಯಲಹಂಕ ಪ್ರಭುಗಳ ಉಗಮದ ಕಥೆಯನ್ನು ಮೌಖಿಕ ಸಂಪ್ರದಾಯದ ಲಾವಣಿಗಳಲ್ಲಿ ಮಾತ್ರ ಕಾಣಬಹುದು. ಲಾವಣಿಗಳಲ್ಲಿ ಸಿಗುವ ಕಥೆಗೆ ಇನ್ಯಾವುದೇ ಆಧಾರವೂ ಇಲ್ಲ. ಆದರೆ ಈವರೆಗೆ ಇತಿಹಾಸಕಾರರು ದೃಢೀಕರಿಸಲು ಯಾವುದೇ ಆಧಾರವೂ ಇಲ್ಲದಂಥ ಲಾವಣಿಯ ಕಥೆಯ ವಿವರಗಳನ್ನು ಚರ್ಚಿಸಿ ಐತಿಹಾಸಿಕವಾಗಿ ವಂಶದ ಮೂಲ ಸ್ಥಳವನ್ನು ಮತ್ತಿತರ ವಿಷಯಗಳನ್ನು ನಿಗದಿಸಲು ಪ್ರಯತ್ನಿಸಿದ್ದಾರೆ. ಈ ಪ್ರಯತ್ನಗಳು ಸ್ಪಷ್ಟವಾಗಿ ಇತಿಹಾಸ ರಚನಾ ವಿಧಾನಕ್ಕೆ ವಿರೋಧವಾದುವು".[17]

ಯಲಹಂಕ ನಾಡಪ್ರಭುಗಳ ಮೂಲದ ಬಗೆಗೆ ಇರುವ ಕಥನಗಳಲ್ಲಿ ಸ್ವಲ್ಪ ವ್ಯತ್ಯಾಸಗಳೊಂದಿಗೆ ಹೆಚ್ಚು ಕಡಿಮೆ ಒಂದೇ ಬಗೆಯ ಕಥನಗಳು ನಿರೂಪಣೆಗೊಂಡಿರುವುದನ್ನು ಕಾಣಬಹುದು.

**1. ಬೆಂಗಳೂರಿನ ಐತಿಹಾಸಿಕ ಬಖೈರಿನಲ್ಲಿ ದಾಖಲಾಗಿರುವ ಪ್ರಕಾರ:**[18] ...ಕ್ರಿ.ಶ. 1418ರ ಸುಮಾರಿನಲ್ಲಿ ಪಾಲಾರ್ ನದಿಯನ್ನು ದಾಟಿ ಉತ್ತರ ದೇಶದಿಂದ ಬಂಡಿಕೊಪ್ಪಲು ಎಂದು ಕರೆಸಿಕೊಳ್ಳುತ್ತಿದ್ದ ಏಳು ಕುಟುಂಬಗಳು ಏಳು ಬಂಡಿಗಳಲ್ಲಿ ಈ ಪ್ರದೇಶಕ್ಕೆ ಬಂದವು. ಭೀಕರವಾದ ಕ್ಷಾಮದಿಂದ ಅವರು ತಮ್ಮ ಪ್ರದೇಶದಿಂದ ವಲಸೆ ಬರುವಂತಾಯಿತು. ಅವರು ತಮ್ಮೊಂದಿಗೆ ಅನೇಕ ಬೆಲೆಬಾಳುವ ಒಡವೆ ವಸ್ತುಗಳನ್ನು ತಂದಿದ್ದರು. ಅವರೊಡನೆ ಅವರ ನೆಂಟರಿಷ್ಟರೂ ಬಂದರು. ಅವರು ಮೊದಲು ಬಂದು ಇಳಿದಿದ್ದ ಬಳ್ಳಾಪುರ ಜಿಲ್ಲೆಯ ಆವತಿ ಗ್ರಾಮಕ್ಕೆ ತಮ್ಮಲ್ಲಿದ್ದ ಬೆಲೆಬಾಳುವ ವಸ್ತುಗಳನ್ನೆಲ್ಲಾ ಈ ಏಳು ಕುಟುಂಬದವರೂ ಹಂಚಿಕೊಂಡು ಈ ಕೆಳಕಂಡ ಸ್ಥಳಗಳಲ್ಲಿ ನೆಲೆಸಿದರು.

1) ರಣಭೈರೇಗೌಡನ ಕುಟುಂಬವು ದೇವನಹಳ್ಳಿಯ ಆವತಿಯಲ್ಲಿ ನೆಲೆ ನಿಂತಿತು.

2) ಸಣ್ಣಭೈರೇಗೌಡನ ಕುಟುಂಬವು ಹುಲಿಕಲ್ಲು ಮತ್ತು ಕೊರಟಗೆರೆ ಜಿಲ್ಲೆಯಲ್ಲಿ ನೆಲೆ ನಿಂತಿತು.

3) ಜಂಗಮಕೋಟೆ ಜಿಲ್ಲೆಯ ಸುಗಟೂರು ಎಂಬ ಗ್ರಾಮದಲ್ಲಿ ತಮ್ಮೇಗೌಡನ ಕುಟುಂಬ ನೆಲೆ ನಿಂತಿತು. ಅವನು ಆಳಿದ ಹೊಸಕೋಟೆ, ಕೋಲಾರ ಮತ್ತು ಜಂಗಮಕೋಟೆ ಪ್ರದೇಶಕ್ಕೆ ಸುಗಟೂರು ಸಂಸ್ಥಾನವೆನ್ನುತ್ತಾರೆ.

ಆನೆಗೊಂದಿ ಸಂಸ್ಥಾನದ ರಾಜನ ಕೈಕೆಳಗೆ ಯಲಹಂಕ ನಾಡಪ್ರಭುವೆಂದು ಜಯಗೌಡನು ತನ್ನ ಕುಟುಂಬದೊಂದಿಗೆ ಯಲಹಂಕ ನಾಡಿನಲ್ಲಿ ನಾಡಪ್ರಭುವಿನ ಸ್ಥಾನದೊಂದಿಗೆ ಅಧಿಕಾರ ನಡೆಸಿದನು... ಈ ಬಂಡಿಕೊಪ್ಪಲಿನವರು ಕನ್ನಡ ದೇಶಕ್ಕೆ ಬಂದಾಗ ತೆಲುಗು ಭಾಷೆಯಲ್ಲೇ ಮಾತನಾಡುತ್ತಿದ್ದರೂ ಕಾಲಾಂತರದಲ್ಲಿ ತೆಲುಗು ಕನ್ನಡವೆರಡೂ ಬೆರಕೆಯಾಗಿ 'ಮೊರಸು ಒಕ್ಕಲಿಗರು' ಅಥವಾ 'ಬೆರಸು ಭಾಷೆಯನ್ನಾಡುವವರು' ಎಂದು ಇವರನ್ನು ಕರೆಯಲಾಯಿತು. ಈ ಏಳೂ ಕುಟುಂಬಗಳು ಈ ಪ್ರದೇಶದ ಅಧಿಪತಿಗಳಾಗಿ ಸ್ಥಾಪಿತವಾದದ್ದರಿಂದ ತೆಲುಗು ಭಾಷೆಯ ಸಂಖ್ಯೆ ಮತ್ತು ಪ್ರಭಾವ ವೃದ್ಧಿಯಾಗಿ ವಿಜೃಂಭಿಸಿತು ಎಂದಿದೆ.

**2. ಬಾರಾಮಹಲ್ ದಾಖಲೆಗಳ ಪ್ರಕಾರ:**[19] ಕಾಂಜೀವರಂ ಸಾಮ್ರಾಜ್ಯದಲ್ಲಿ ಪಲುರು (ಪುತ್ತೂರು?) ಎಂಬ ಗ್ರಾಮದಲ್ಲಿ ನೆಲೆಸಿದ್ದ ಮುಖ್ಯಸ್ಥನೊಬ್ಬ ಮೊರಸು ವೆಲ್ಲಲ್ಲುಗಳು ನೆಲೆಸಿದ್ದ ಚಿಕ್ಕ ಜಿಲ್ಲೆಯೊಂದನ್ನು ಆಳುತ್ತಿದ್ದನು. ಅವರಲ್ಲಿ ಒಬ್ಬನಿಗೆ ಬಹು ಚೆಲುವೆಯಾದ ಮಗಳಿದ್ದು ಆ ಮುಖ್ಯಸ್ಥನು ಮೋಹಿತನಾಗಿ ಅವಳ ಪೋಷಕರಿಗೆ ಮದುವೆ ಮಾಡಿಕೊಡುವಂತೆ ಒತ್ತಾಯಿಸಿದನು. ಆದರೆ ಅವರಿಗೆ ಸಮ್ಮತಿಯಾಗದೆ, ಭಿನ್ನಜಾತಿಯವನೆಂಬ ಕಾರಣ ನೀಡಿ ನಿರಾಕರಿಸುತ್ತಾರೆ. ಇದರಿಂದ ಸಿಟ್ಟಿಗೆದ್ದ ಪ್ರೇಮಿಯು ತನ್ನ ಅಪೇಕ್ಷೆ ಈಡೇರಿಸಿಕೊಳ್ಳಲು ಬಲ ಪ್ರಯೋಗಕ್ಕೆ ನಿರ್ಧರಿಸುತ್ತಾನೆ. ಹುಡುಗಿಯ ಪೋಷಕರಿಗೆ ಆ ನಿರ್ಣಯ ತಿಳಿದು ಅವರು ತಮ್ಮ ಪಂಗಡದ ಇತರರೊಂದಿಗೆ ಚರ್ಚಿಸಿ ತಕ್ಷಣಕ್ಕೆ ಮುಖ್ಯಸ್ಥನ ಆದೇಶಕ್ಕೆ ಮನ್ನಣೆ ನೀಡಿದಂತೆ ನಟಿಸಿ ನಂತರ ಸೂಕ್ತ ಅವಕಾಶ ದೊರೆತ ಕೂಡಲೇ ದೇಶ ತ್ಯಜಿಸಿ ಹೋಗುವುದೆಂದು ನಿರ್ಧರಿಸಿಕೊಳ್ಳುತ್ತಾರೆ. ಅದರಂತೆ ಅವರು ಮುಖ್ಯಸ್ಥನಿಗೆ ತಮ್ಮ ಸಮ್ಮತಿಯನ್ನು ಸೂಚಿಸಿ ಪ್ರಸ್ತದ ದಿನ ನಿಗದಿಪಡಿಸಿ ತಮ್ಮ ಮನೆಯ ಎದುರಿಗೆ ಮದುವೆಯ ಕಾರ್ಯಗಳಿಗಾಗಿ ಚಪ್ಪರ ಅಥವಾ ತಾತ್ಕಾಲಿಕ ನಿರ್ಮಾಣಗಳನ್ನು ಎಬ್ಬಿಸುತ್ತಾರೆ. ಪ್ರೇಯಸಿಯ ಮನಸೆಳೆಯಲು ಹೆಚ್ಚಿನ ಕಾತರದಿಂದಿದ್ದ ನಾಯಕನು ಸೂಕ್ತ ಸಮಯದಲ್ಲಿ ಗಣನೀಯ ಮೌಲ್ಯದ ಮದುವೆಯ ಆಭರಣಗಳು ಹಾಗೂ ವಸ್ತುಗಳನ್ನು ಜೊತೆಗೆ ಧಾನ್ಯಗಳು, ಅತಿಥಿಗಳ ರಂಜನೆಗೆ ಬೇಕಾದ ರಸಭಕ್ಷ್ಯಗಳನ್ನು ಕಳುಹಿಸಿದನು. ಪಂಗಡದ ಇತರ ಜನರೊಂದಿಗೆ ಗೋಷ್ಠಿ ನಡೆಸಿ ಪೋಷಕರು ಪಾರಾಗುವ ಎಲ್ಲಾ ಸಿದ್ಧತೆ ನಡೆಸಿದರು. ಅವರು ನಾಯಿಯೊಂದರ ದೇಹದ ಮೇಲೆ ಆಭರಣಗಳನ್ನು ಹಾಗೂ ವಸ್ತ್ರಗಳನ್ನು ಹಾಕಿ ಅದನ್ನು ಚಪ್ಪರದ ನಡುವಿನ ಕಂಬಕ್ಕೆ ಕಟ್ಟಿದರು. ಅದರೆದುರು ಎಲ್ಲಾ ಭಕ್ಷ್ಯಭೋಜ್ಯಗಳನ್ನು ಎಸೆದು ಮಗಳನ್ನು ಕರೆದುಕೊಂಡು ತಪ್ಪಿಸಿಕೊಂಡು ಹೋದರು. ಅವರ ಪರಾರಿಯ ಸುದ್ದಿ ಬೇಗನೆ ನಾಯಕನ ಕಿವಿಗೆ ಮುಟ್ಟಿತು. ಅವರು ಮಾಡಿದ ಉಪಾಯದಿಂದ ತೊಂದರೆಯಾಗಿ ಹಾಗೂ ಗರ್ವಭಂಗವಾದಂತಾಗಿ ನಾಯಕನು ಕೆರಳಿದ

ಸಿಂಹವು ತನ್ನ ಬೇಟೆಗಾಗಿ ಹುಡುಕುವಂತೆ ತನ್ನ ಸಹಾಯಕರೊಂದಿಗೆ ಹೊರಟನು. ಅಪರಾಧಿಗಳು ತುಂಗಭದ್ರಾ ನದಿ ತೀರದ ಬಳಿಗೆ ಬಂದಾಗ ಅದು ತುಂಬಿ ಹರಿಯುತ್ತಿದ್ದು ದಾಟುವುದು ಅಸಾಧ್ಯವಾಗಿತ್ತು. ಅವರನ್ನು ಬೆನ್ನಟ್ಟಿದ್ದ ಕ್ರೂರಿಯ ಕೈಯಳತೆಯಷ್ಟು ಸಮೀಪದಲ್ಲೇ ಇದ್ದ. ಆ ಸಂದಿಗ್ದ ಪರಿಸ್ಥಿತಿಯಲ್ಲಿ ಅವರು ವಿಷ್ಣು ದೇವರನ್ನು ಕುರಿತು ಪ್ರಾರ್ಥಿಸಿದರು. ಸಂಪ್ರೀತನಾದ ವಿಷ್ಣುವಿನ ಆದೇಶದಂತೆ ನೀರು ಇಬ್ಭಾಗವಾಗಿ ನಡುವೆ ಒಂದು ಖಾಲಿ ಜಾಗ ಉಳಿಯಲಾಗಿ ಅದರ ಮೂಲಕ ಇವರು ಹಾದು ಹೋದರು. ಅವರು ಇನ್ನೊಂದು ದಡಕ್ಕೆ ತಲುಪಿದ ಕೂಡಲೇ ನೀರು ಮತ್ತೆ ಆವರಿಸಿಕೊಂಡು ಬೆನ್ನಟ್ಟಿ ಬಂದವರು ನದಿದಾಟದಂತಾಯಿತು.

ಅವನು ತನ್ನ ದೇಶಕ್ಕೆ ಹಿಂತಿರುಗಿದನು. ಈ ಪಂಗಡವು ತುಂಗಭದ್ರಾ ಪ್ರಾಂತ್ಯದ ಸಮೀಪದಲ್ಲಿ ನಲೆಸಿತು ಹಾಗೂ ಕಾಲಾಂತರದಲ್ಲಿ ಈಗಿನ ಮೈಸೂರು ರಾಜ್ಯದ ಆಗ ಮೊರ್ಸು ಎಂಬ ಹೆಸರಿದ್ದ ಪೂರ್ವ ಭಾಗದಲ್ಲಿ ನೆಲೆಸಿ ಅದೇ ಹೆಸರನ್ನು ತನ್ನ ಜಾತಿನಾಮವನ್ನಾಗಿ ಪಡೆದುಕೊಂಡಿತು ಎಂಬುದಾಗಿ ದಾಖಲಿಸಿದೆ.

ಈ ಮೇಲಿನ ಎರಡೂ ಕಥನಗಳಲ್ಲಿನ ಮೂಲ ಸ್ಥಳದ ಬಗೆಗೆ ಭಿನ್ನತೆಗಳಿವೆ. ಬಖೈರಿನಲ್ಲಿ ಕ್ಷಾಮದ ಕಾರಣಕ್ಕಾಗಿ ಉತ್ತರ ದೇಶದಿಂದ ಪಾಲಾರ್ ನದಿ ದಾಟಿ ಬಂದು ಆವತಿ ಬಳಿ ನೆಲೆಸಿದರೆಂದು ಹೇಳಿದೆ. ಪ್ರಾಯಶಃ ಉತ್ತರ ದೇಶದಿಂದ ಎನ್ನುವ ಬದಲು ಉತ್ತರ ದೇಶದತ್ತ ಎಂದಿರಬಹುದು. ಬಾರಾ ಮಹಲ್ ದಾಖಲೆಯಲ್ಲಿ ಕಂಚಿ ಬಳಿಯ ಸ್ಥಳೀಯ ಮುಖ್ಯಸ್ಥನೊಬ್ಬ ಕುಟುಂಬದ ಹೆಣ್ಣು ಮಗಳನ್ನು ಮದುವೆಯಾಗಲು ಬಯಸಿದಾಗ ನಾಟಕೀಯ ರೀತಿಯಲ್ಲಿ ತುಂಗಾ ನದಿಯನ್ನು ದಾಟಿ ಕಾಲಾನಂತರದಲ್ಲಿ ಮೊರಸು ಪ್ರದೇಶದಲ್ಲಿ ನೆಲೆಸಿದರು. ಇಲ್ಲಿ ಉದ್ಭವವಾಗುವ ಪ್ರಶ್ನೆ ಏನೆಂದರೆ– ಕಂಚಿಯಿಂದ ಹೊರಟವರು ಹೇಗೆ ತುಂಗಾನದಿಯನ್ನು ದಾಟಿ ಮೊರಸು ನಾಡಿಗೆ ಬಂದು ನೆಲೆಸಿದರು? ಕಂಚಿಯು ಆವತಿಯ ದಕ್ಷಿಣಕ್ಕಿರುವಾಗ ಅವರು ಹೇಗೆ ಉತ್ತರದಲ್ಲಿರುವ ತುಂಗಾ ನದಿಯನ್ನು ದಾಟಿ ಬಂದರಲು ಸಾಧ್ಯ? ಎಂಬುದಕ್ಕೆ ಉತ್ತರ ನಿಲುಕದಾಗಿದೆ.

**3. ಎಸ್.ಕೆ. ನರಸಿಂಹಯ್ಯ ಅವರು ದಾಖಲಿಸುವಂತೆ:**[20] ಕಾಂಚಿಪುರದ ಬಳಿ ಯಣಮಂಜಿ ಪುತ್ತೂರು ಗ್ರಾಮದಲ್ಲಿ, ಮೂಲಪುರುಷನಾದ ರಣಭೈರೇಗೌಡನಿಗೆ ದೊಡ್ಡಮ್ಮ ಎಂಬ ಒಬ್ಬಳು ಸೋದರಿ ಮತ್ತು ಏಳುಮಂದಿ ಸೋದರರು ಇದ್ದರು. ದೊಡ್ಡಮ್ಮಳ ಸೌಂದರ್ಯಕ್ಕೆ ಮಾರುಹೋದ ಆ ಪ್ರಾಂತ್ಯದ ಕಿರಾತಕ ಪಾಳೆಯಗಾರನು ತನ್ನ ಕಡೆಯ ಜನರನ್ನು ರಣಭೈರೇಗೌಡನಲ್ಲಿಗೆ ಕಳುಹಿಸಿ, ದೊಡ್ಡಮ್ಮನನ್ನು ಮದುವೆ ಮಾಡಿಕೊಡಲು ಕೇಳಿದರು.

“ಹೀನಕುಲದಲ್ಲಿ ಹುಟ್ಟಿದವನಿಗೆ ಮಗಳನ್ನು ಕೊಟ್ಟು ನನ್ನ ಉತ್ತಮವಾದ ವಂಶವನ್ನು ಕಳಂಕಮಾಡಿಕೊಳ್ಳಲಾರೆನು.” ಮುಂತಾಗಿ ಹೇಳಿ ಅವರನ್ನು ಕಳಿಸಿಬಿಟ್ಟನು. ಇದರಿಂದ ಕೋಪಿತನಾದ ಪಾಳೆಯಗಾರನು ಯುದ್ಧಸನ್ನದ್ಧನಾಗಿ ರಣಭೈರೇಗೌಡನನ್ನು ಸಂಸಾರಸಮೇತನಾಗಿ ಹಿಡಿದು ತಂದು ಸೆರೆಯಲ್ಲಿಟ್ಟು ಅವನ ಮಗಳನ್ನು ಬಲವಂತದಿಂದ ಮದುವೆಯಾಗಲು ಹೊರಟನು. ಈ ವಿಷಯ ತಿಳಿದ ರಣಭೈರೇಗೌಡನು ಶತ್ರುವು ಪ್ರಬಲನಾದ್ದರಿಂದ ಒಂದು ರಾತ್ರಿ ಏಳುಮಂದಿ ಸಹೋದರರು ಅವರವರ ಪತ್ನಿಪುತ್ರ ಸಮೇತನಾಗಿ ಊರನ್ನು ಬಿಟ್ಟು ಉತ್ತರದಿಕ್ಕಿಗೆ ಹೊರಟರು. ಅವರ ದಾರಿಗೆ ಕ್ಷೀರನದಿ (ಪಾಲ ಹೊಳೆ) ಪ್ರವಾಹದಿಂದ ಉಕ್ಕಿಹರಿಯುತ್ತಿತ್ತು. ಅವರನ್ನು ಬೆನ್ನಟ್ಟಿ ಪಾಳೆಯಗಾರನ ಕಡೆಯವರು ಬರುತ್ತಿದ್ದರು. ಈ ಸಂಕಷ್ಟದ ಸಂದರ್ಭದಲ್ಲಿ ದೊಡ್ಡಮ್ಮಳು ಪ್ರವಾಹಕ್ಕೆ ನಮಸ್ಕರಿಸಿ, ಕಿವಿಯಲ್ಲಿದ್ದ ಬಂಗಾರದ ಓಲೆಗಳನ್ನು ನದಿಗೆ ಅರ್ಪಿಸಿ, “ಪ್ರವಾಹವು ನಿಂತು ನಮ್ಮನ್ನು ಆಚೆಯ ದಡಕ್ಕೆ ಸೇರಿಸಿ ಕಾಪಿಡಬೇಕು” ಎಂದು ಬೇಡಿಕೊಂಡಳು. ನದಿಯ ಪ್ರವಾಹ ತಗ್ಗಿ, ಬಂಡಿಗಳು, ಜನರು ನದಿಯನ್ನು ದಾಟಿದರು. ಬೆನ್ನಟ್ಟಿ ಬರುತ್ತಿದ್ದ ಪಾಳೆಯಗಾರನ ಕಡೆಯವರು ನದಿಯ ಬಳಿಗೆ ಬರುತ್ತಿದ್ದಂತೆ ನದಿಯಲ್ಲಿ ಮತ್ತೆ ಪ್ರವಾಹ ಉಕ್ಕಿತು. ನದಿಯನ್ನು ದಾಟಲಾಗದೆ ಪಾಳೆಯಗಾರ ಮತ್ತು ಅವನ ಜನರು ಹಿಂತಿರುಗಿದನು. ಹೀಗೆ ಅಪಾಯದಿಂದ ಪಾರಾಗಿ ಬಂದು ರಣಭೈರೇಗೌಡ ಮತ್ತು ಸೋದರರು ಶ್ರೀಗೌತಮಗಿರಿ (ಯಂಬರಹಳ್ಳಿ ತಿಮ್ಮರಾಯಸ್ವಾಮಿ ಬೆಟ್ಟ) ಬಳಿ ಈಗಿನ ಆವತಿ ಗ್ರಾಮದ ಪ್ರದೇಶದಲ್ಲಿ ನೆಲೆಸಿದರು.

ಮೇಲಿನ ಕಥನಗಳಲ್ಲಿ ಎರಡು ಅಂಶಗಳನ್ನು ಚರ್ಚೆಗೆ ತೆಗೆದುಕೊಳ್ಳಬಹುದು. ಒಂದು– ಹಿಂದಿನ ಅಧ್ಯಾಯದಲ್ಲಿ ಅವಲೋಕಿಸಿರುವಂತೆ, ಸಾಮಾನ್ಯವಾಗಿ ವಿಜಯನಗರೋತ್ತರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ಮನೆತನಗಳಲ್ಲಿ ಬಹುತೇಕ ಮನೆತನಗಳ ಪೂರ್ವಿಕರು ಮೂಲ ನಿವಾಸಿಗಳಾಗಿರದೇ, ಹೊರಗಿನಿಂದ ಬಂದು ರಾಜ್ಯ ಕಟ್ಟಿದವರಾಗಿರುತ್ತಾರೆ. ಏಕೆ ಸ್ಥಳೀಯ ಜನರಿಗೆ ನಾಡು / ರಾಜ್ಯ ಕಟ್ಟಲು ಸಾಧ್ಯವಾಗಲಿಲ್ಲ? ಎರಡನೆಯದಾಗಿ– ಏಳು ಮಂದಿ ಸೋದರರು ವಲಸೆ ಬಂದ ರಾಜ್ಯ ಕಟ್ಟಿದ ಕಥನಗಳೇ ಹೆಚ್ಚಿವೆ. ‘ಏಳು’ ಪದದ ಆಶಯ ಮತ್ತು ಮಹತ್ವವೇನು? ಈ ಕುರಿತು ಚರ್ಚೆಗಳಾಗಬೇಕಿದೆ.

1) ವಿಜಯನಗರೋತ್ತರ ಕಾಲದ ಸಾಮಂತ ಮನೆತನಗಳ ಪೂರ್ವಿಕರು ಬೇರೆ ಬೇರೆ ಸ್ಥಳಗಳಿಂದ ವಲಸೆ ಬಂದವರು. ಇವರು ತಮ್ಮ ಶಕ್ತಿ, ಸಾಮರ್ಥ್ಯಗಳಿಂದ ಮೇಲೆ ಮೇಲೆ ಬಂದವರು. ಸ್ಥಳೀಯವಾಗಿ ಏಳಿಗೆಗೆ ಬಂದಂತಹ ಮನೆತನಗಳು ಇಲ್ಲವೇ ಇಲ್ಲ

ಎನ್ನುವಷ್ಟು ವಿರಳ. ಬೇರೊಂದು ಸ್ಥಳಗಳಿಂದ ವಲಸೆ ಬಂದು ರಾಜ್ಯಕಟ್ಟಿ ಆಳಿದವರೇ ಹೆಚ್ಚು. ಇದು ಏಕೆ ಸ್ಥಳೀಯರಿಗೆ ಸಾಧ್ಯವಾಗಲಿಲ್ಲ ಎಂಬುದು ಬಹುಮುಖ್ಯವಾದ ಪ್ರಶ್ನೆ.

ಇದಕ್ಕೆ ಸ್ಥಳೀಯರ ನಿಷ್ಕ್ರಿಯತೆ ಮತ್ತು ಜಡತ್ವವೇ ಕಾರಣ. ಅದಕ್ಕಾಗಿ ಅವರನ್ನು "ತಟಸ್ಥ ಬಣ" (Neutral Force) ಎಂದು ಗುರುತಿಸಬಹುದು. ಇದಕ್ಕೆ ವ್ಯತಿರಿಕ್ತವಾಗಿ ವಲಸಿಗರ ಕ್ರಿಯಾಶೀಲತೆ, ಸೃಜನಶೀಲತೆ, ಧೈರ್ಯ ಮತ್ತು ಸಾಹಸವಂತಿಕೆಯು ಸ್ಥಳೀಯ ಪ್ರಭುಗಳಾಗಿ ಏಳಿಗೆ ಹೊಂದಲು ಕಾರಣವಾಗಿದೆ. ಇವರನ್ನು "ಸಕ್ರಿಯ ಬಣ" (Active Force) ಎಂದು ಗುರುತಿಸಬಹುದು. 'ತಟಸ್ಥ ಬಣ' ಕೂಡ 'ಸಕ್ರಿಯ ಬಣ'ವಾಗಿ ಪರಿವರ್ತನೆಯಾದಾಗ ಸ್ಥಳೀಯ ಮೂಲನಿವಾಸಿಗಳಿಂದಲೂ ರಾಜ್ಯ ಸ್ಥಾಪನೆಯು ಸಾಧ್ಯವಾಗುತ್ತದೆ. ಅದಕ್ಕೆ ಕೆಳದಿಯ ನಾಯಕರು ಉದಾಹರಣೆಯಾಗಿದ್ದಾರೆ.

ಸಕ್ರಿಯ ಬಣಗಳು ಸದಾ ಅನಿಶ್ಚಿತತೆಯ ಬದುಕಿನಲ್ಲಿ ಸಂಘರ್ಷವನ್ನೆ ಎದುರಿಸುತ್ತಾ ಬಂದಿರುತ್ತಾರೆ. ಅವರಲ್ಲಿ ಸಹಜವಾಗಿ ಸಾಹಸಿ ಮನೋಭಾವ ಮತ್ತು ಪ್ರವೃತ್ತಿಗಳು ಮನೆಮಾಡಿರುತ್ತವೆ. ಸದಾ ಸವಾಲುಗಳಿಗೆ ಉತ್ತರಗಳನ್ನು ಹುಡುಕುತ್ತಲೇ ಕ್ರಿಯಾಶೀಲತೆ ಮತ್ತು ಸೃಜನಶೀಲತೆಯನ್ನು ಮೈಗೂಡಿಸಿಕೊಂಡಿರುತ್ತಾರೆ. ಸದಾ ನೆಲೆಗಾಗಿ ಅಲೆಯುತ್ತಲಿದ್ದ ಆ ಜನರಿಗೆ ಲೋಕಾನುಭವ ಮತ್ತು ಯುದ್ಧಕೌಶಲ್ಯಗಳು ಮೈಗೂಡಿರುತ್ತವೆ. ಅವರ ಬದುಕಿನ ಮುಂದೆ ಸದಾ ಅಳಿವು ಉಳಿವಿನ ಪ್ರಶ್ನೆ ಇರುತ್ತದೆ. ಆದ್ದರಿಂದ ಅಂಥವರು ಸಹಜವಾಗಿ 'ತಟಸ್ಥ ಬಣ'ಗಳ ಮೇಲೆ ಎಲ್ಲಾ ವಿಧದಲ್ಲಿಯೂ ಮೇಲುಗೈ ಸಾಧಿಸಬಲ್ಲವರಾಗಿರುತ್ತಾರೆ. ಹೀಗೆ ಮುನ್ನೆಲೆಗೆ ಬರುವ 'ಸಕ್ರಿಯ ಬಣ'ಗಳು ತಮ್ಮ ಶೌರ್ಯ, ಪರಾಕ್ರಮ ಮತ್ತು ಸಾಹಸಗಳ ಮೂಲಕ ಸ್ಥಳೀಯ ಪ್ರಭುತ್ವವನ್ನು ತಮ್ಮ ಕೈವಶ ಮಾಡಿಕೊಳ್ಳುವುದನ್ನು ಕಾಣಬಹುದು. ತಮ್ಮ ವಿಶೇಷ ಶಕ್ತಿ, ಸಾಮರ್ಥ್ಯವನ್ನೇ ದೈವೀಕರಿಸಿಕೊಂಡು, ಅವರಂತೆಯೇ ಅಲೆಮಾರಿಗಳಾದ ದೊಂಬಿದಾಸರು, ನೀಲಗಾರರು ಮೊದಲಾದವರ ಮೂಲಕ ತಮ್ಮ ಕಥನಗಳನ್ನು ಕಟ್ಟಿಸಿ ಜನಪ್ರಿಯಗೊಳಿಸುತ್ತಾ ಬಂದಂತೆ ಕಾಣುತ್ತದೆ. ಈ ಸಮುದಾಯಗಳನ್ನು 'ಚಾರಿತ್ರಿಕ ಕಥನ ಕೋಶ'ಗಳೆಂದು ಕರೆಯಬಹುದು. ಇಂತಹ ಸಮುದಾಯಗಳ ಪೋಷಣೆಯನ್ನು 'ಸಕ್ರಿಯ ಬಣ'ಗಳು ಮಾಡುವ ಮೂಲಕ ಅವರ ವಿಶ್ವಾಸವನ್ನು ಗಳಿಸಿರುತ್ತವೆ. ಆದ್ದರಿಂದ ಸುತ್ತಮುತ್ತಲು ನಡೆಯುವ ಅನೇಕ ವಿದ್ಯಮಾನಗಳನ್ನು ಹೊತ್ತು ತರುವ ಗೂಡಾಚಾರರಾಗಿಯೂ ದೊಂಬಿದಾಸರೇ ಮೊದಲಾದ ಸಮುದಾಯಗಳು ಕಾರ್ಯನಿರ್ವಹಿಸುತ್ತಿರುತ್ತಾರೆ. ಹೀಗೆ

‘ಸಕ್ರಿಯ ಬಣ’ಗಳ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಮತ್ತು ಜೀವಂತಗೊಳಿಸುವಲ್ಲಿ ಜಾನಪದ ಕಥನ ಕೋಶಗಳ ಪಾತ್ರ ಕೂಡ ಮುಖ್ಯವಾಗಿರುತ್ತದೆ.

2) ಆವತಿಯ ರಣಭೈರೇಗೌಡ ಮತ್ತು ಅವನ ಏಳು ಮಂದಿ ಸೋದರರುಏಳು ಬಂಡಿಯಲ್ಲಿ ಬಂದರು. ಏಳು ಮನೆತನಗಳನ್ನು ಸ್ಥಾಪಿಸಿದರು. ಏಳು ಕೊಪ್ಪರಿಕೆ ಹೊನ್ನು ಸಿಕ್ಕಿತು. ಹೀಗೆ ‘ಏಳು’ ಎಂಬ ಸಂಕೇತವು ಜಾನಪದ ಕಥನಗಳಲ್ಲಿ ಪದೇ ಪದೇ ಬಳಕೆಯಾಗಿರುವುದನ್ನು ಕಾಣಬಹುದು. ಈ ‘ಏಳು’ ಸೋದರರ ಹೆಸರುಗಳಲ್ಲಿ ಏಕರೂಪತೆ ಇಲ್ಲ. ಇಲ್ಲಿ ಏಳು ಎಂಬುದು ಕೇವಲ ಆಶಯ ರೂಪಕವಾಗಿ ಬಳಸಲಾಗಿದೆಯೇ ವಿನಃ ಆ ಸಂಖ್ಯೆ ವಾಸ್ತವವಲ್ಲ. ಮಧುಗರಿ, ಮಿಡಿಗೇಶಿಯ ಪಾಳೆಯಗಾರರ ವಂಶಸ್ಥರೂ ಕೂಡ ಏಳು ಮಂದಿ ಸೋದರರು. ಸೊನ್ನಲಿಗೆಯ ಸಿದ್ಧರಾಮಸ್ವಾಮಿಗಳ ಶಿಷ್ಯರಾದ ಇವರು ಅವನ ಆದೇಶದಂತೆ ದಕ್ಷಿಣಕ್ಕೆ ಬಂದರೆಂದು ಹೇಳಲಾಗುತ್ತದೆ. ಇದೇ ರೀತಿ 77 ಪಾಳೆಯಗಾರರು ಎಂಬ ಸಂಕೇತ ರೂಪಗಳೂ ಇವೆ.

ಹಾಗಾದರೆ, ಏಳು ಎಂಬುದು ಏನನ್ನು ಸೂಚಿಸಬಹುದು? ಏಳು ಎಂಬುದು ಬಹುಶಃ ಏಳಿಗೆಯ ಸೂಚಕವಾಗಿ, ಬಳಕೆಗೆ ಬಂದಿರುವಂತೆಯೂ, ವಲಸೆ ಬಂದವರ ಏಳಿಗೆಗೆ ಆಶಯ ರೂಪಕವಾಗಿಯೂ ತೋರುತ್ತದೆ. ಏಳು ಎಂಬುದು ಸಮೃದ್ಧಿಯ ಸೂಚಕ ಶಬ್ದವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಧಾನ್ಯಗಳನ್ನು ಸೇರು ಅಥವಾ ಕೊಳಗದಲ್ಲಿ ಅಳೆಯುವಾಗ ಏಳನೇ ಸೇರು / ಕೊಳಗವನ್ನು ಅಳೆದು ಸುರಿಯುವಾಗ ‘ಏಳು’ ಎನ್ನುವ ಬದಲು ‘ಹೆಚ್ಚು ಅಥವಾ ಹೆಚ್ಚೆಚ್ಚು’ ಎಂದು ಹೇಳುವ ರೂಢಿ ಇದೆ. ಇದರ ಅರ್ಥ ವೃದ್ಧಿಸು, ಸಮೃದ್ಧವಾಗು ಎಂಬ ಪರಿಕಲ್ಪನೆಯ ಹಿನ್ನೆಲೆಯಲ್ಲಿಯೇ ಬಳಸುತ್ತಿದ್ದರೆಂದು ತಿಳಿಯಬಹುದು. ಏಳು ಜನ ಸೋದರರು, ಏಳು ಕೊಪ್ಪರಿಗೆ ಹೊನ್ನು, ಏಳು ಮಲೆ, ಏಳೂರು ಇತ್ಯಾದಿ ಪ್ರಯೋಗದಲ್ಲಿ ಏಳು ಎಂಬುದು ಸಮೃದ್ಧಿಯ ಸದಾಶಯದ ಪ್ರಯೋಗವಾಗಿದೆ. **ದ್ರಾವಿಡ ಭಾಷೆಯ ಜ್ಞಾತಿಪದಕೋಶ**ದಲ್ಲಿ ಕೂಡ ಮೇಲೇಳು, ಮೇಲಕ್ಕೆ ಬರು, ಅಭಿವೃದ್ಧಿ ಹೊಂದು ಮುಂತಾದ ಸಂವಾದಿ ಅರ್ಥಗಳನ್ನೆ ನೀಡಲಾಗಿದೆ. ಆದ್ದರಿಂದ ಏಳು ಎಂಬುದು ಸಮೃದ್ಧಿಯ ಸೂಚಕವಾಗಿದೆ ಎಂದು ಅರಿಯಬಹುದಾಗಿದೆ.

### 3.2.1 ತಮಿಳರೊ, ತೆಲುಗರೋ, ಕನ್ನಡಿಗರೋ...!?

ಬಹುಶಃ ಇಂತಹ ಪ್ರಶ್ನೆಯೇ ಚಾರಿತ್ರಿಕ ಅಧ್ಯಯನದ ಸಂದರ್ಭದಲ್ಲಿ ಅಪ್ರಸ್ತುತವಾಗಿ ಕಾಣುತ್ತದೆ. ಕಾರಣವಿಷ್ಟೇ, ಏಕೀಕರಣೋತ್ತರ ಕಾಲಘಟ್ಟದ ಆಧುನಿಕ ರಾಜಕೀಯ ಗಡಿರೇಖೆಗಳನ್ನು ಇಟ್ಟುಕೊಂಡು 14–15ನೇ ಶತಮಾನದ ವಿದ್ಯಮಾನವನ್ನು ಚರ್ಚಿಸುತ್ತಾ, ಇವತ್ತಿನ ರಾಜ್ಯಗಳ ಗಡಿರೇಖೆಯನ್ನೇ ಅವತ್ತಿಗೂ ಆರೋಪಿಸಿ, ಕರ್ನಾಟಕದವರೋ, ತಮಿಳುನಾಡಿನವರೋ ಎಂಬ ಪ್ರಶ್ನೆಗೆ ಯಾವುದೇ ಅರ್ಥವಿಲ್ಲ. ಆದರೆ, ಇವತ್ತಿನ ಐಡೆಂಟಿಟಿ ರಾಜಕಾರಣದ ಸಂದರ್ಭದಲ್ಲಿ ಇಂತಹ ಅಪ್ರಸ್ತುತ ವಾದಗಳು ಹೆಚ್ಚು ಹೆಚ್ಚು ಮುನ್ನೆಲೆಗೆ ಬರುತ್ತಿವೆ. ಈ ರೀತಿಯ ವಾದಗಳೇ ಹೆಚ್ಚು ಜನಪ್ರಿಯವಾಗುತ್ತಿವೆ. ದಕ್ಷಿಣ ಭಾರತದ ರಾಜ್ಯಗಳು ಏಕೀಕರಣಗೊಂಡ ಸಂದರ್ಭದಲ್ಲಿಯೇ ಯಲಹಂಕ ನಾಡಪ್ರಭುಗಳಲ್ಲಿ ಜನಪ್ರಿಯ ಅರಸನಾದ ಹಿರಿಯ ಕೆಂಪೇಗೌಡನು ತೆಲುಗು ಮೂಲದವನು ಎಂಬ ಬರವಣಿಗೆಗಳು ಪ್ರಕಟವಾಗತೊಡಗಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ.[21] ಇದನ್ನು ಏಕೀಕರಣ ಸಂದರ್ಭದ ಭಾಷಾ ಅಸ್ಮಿತೆಯ ಹಿನ್ನೆಲೆಯಲ್ಲಿ ಅವಲೋಕಿಸಬೇಕು. ಯಾವಾಗಲೂ ಚಾರಿತ್ರಿಕ ಸಂಗತಿಗಳನ್ನು ಚಾರಿತ್ರಿಕ ಸಂದರ್ಭದಲ್ಲಿಯೇ ನಿಂತು ನೋಡಬೇಕೇ ವಿನಃ ಇವತ್ತಿನ ಸಂದರ್ಭದಲ್ಲಿ ಅಲ್ಲ. ಆದ್ದರಿಂದ ಇಂದಿನ ಭಾಷೆ ಮತ್ತು ಭಾಷಾ ರಾಜ್ಯಗಳ ಅಸ್ಮಿತೆಯ ಹಿನ್ನೆಲೆಯಲ್ಲಿ ಮೂಲವನ್ನು ಶೋಧಿಸದೆ, ಆ ಕಾಲಘಟ್ಟದ ಸಂಕೀರ್ಣವಾದ ಚಾರಿತ್ರಿಕ ಸಂದರ್ಭದಲ್ಲಿಯೇ ಇಟ್ಟು ನೋಡುವುದು ಸರಿಯಾದುದಾಗಿದೆ.

ಮೇಲಿನ ಮೂರೂ ಕಥನಗಳ ಸ್ವರೂಪದಲ್ಲಿ ತುಸು ಭಿನ್ನತೆಗಳಿದ್ದರೂ, ರಣಭೈರೇಗೌಡನ ಮೂಲದ ಬಗೆಗೆ ಇರುವ ಸಾಂಪ್ರದಾಯಿಕ ಕಥನಗಳು ತಮಿಳುನಾಡಿನ ಕಂಚಿ ಸಮೀಪದ ಯಣಮಂಜಿ ಪುತ್ತೂರಿನಿಂದ ಬಂದರೆಂದು ಹೇಳುತ್ತವೆ. ಯಲಹಂಕ ನಾಡಪ್ರಭುಗಳು ಮೊರಸು ಒಕ್ಕಲಿಗ ಸಮುದಾಯಕ್ಕೆ ಸೇರಿದವರು ಎಂಬುದರಲ್ಲಿ ಯಾವುದೇ ಅನುಮಾನಗಳಿಲ್ಲ. ಕುಲಶಾಸ್ತ್ರೀಯ ಅಧ್ಯಯನಗಳು ಮತ್ತು ಸಾಹಿತ್ಯಗಳು ಕೂಡ ಈ ಅಭಿಪ್ರಾಯವನ್ನು ಬೆಂಬಲಿಸುತ್ತವೆ.

ಎಂ.ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ ಅವರು ಆವತಿ ನಾಡಪ್ರಭುಗಳನ್ನು ಕುರಿತು ಹೀಗೆ ದಾಖಲಿಸಿದ್ದಾರೆ:[22] "ಸುಮಾರು ಹದಿನಾಲ್ಕನೆಯ ಶತಮಾನದಲ್ಲಿ, ಮದ್ರಾಸು ಪ್ರಾಂತದ ಕಾಂಚಿಯ ಸಮೀಪದ ಯಣಮಂಜಿ ಪುತ್ತೂರು ಎಂಬ ಊರಿನಿಂದ ಏಳು ಜನ ರೈತರು ಕುಟುಂಬ ಸಮೇತರಾಗಿ ನಂದಿದುರ್ಗದ ಬಳಿಯ ರಾಮಸ್ವಾಮಿ ಬೆಟ್ಟದ ಬಳಿ ಬಂದು ತಂಗಿದರು.

ಅವರು ಮೂಲತಃ ತೆಲುಗರು. ಅವರಿದ್ದ ಯಣಮಂಜಿಗೆ ಮೊರಸು ನಾಡೆಂದು ಹೆಸರು. ಮೊರಸು ನಾಡಿನಿಂದ ಬಂದವರಾದ ಕಾರಣ, ಮೈಸೂರು ಪ್ರಾಂತದ ಪೂರ್ವ ಭಾಗಕ್ಕೆ ಬಂದ ಈ ನೆಲಸಿಗರಿಗೆ 'ಮೊರಸು ಒಕ್ಕಲಿಗ' ರೆಂದು ಹೆಸರು" ಎಂದಿದ್ದಾರೆ.

ಜಾನಪದ ಐತಿಹ್ಯಗಳನ್ನು ಆಧರಿಸಿರುವ ಮೇಲಿನ ವಿದ್ವಾಂಸರ ಅಭಿಪ್ರಾಯದ ಪ್ರಕಾರ ಮೊರಸು ಒಕ್ಕಲಿಗರು ತಮಿಳುನಾಡಿನ ಕಂಚಿಯ ಸಮೀಪದ ಯಣಮಂಜಿ ಪುತ್ತೂರಿನವರು ಎಂಬುದಾಗಿದೆ. ಆದರೆ ಈ ವಾದಕ್ಕೆ ಭಿನ್ನವಾದ ಕನ್ನಡ ಮೂಲದವರು ಎಂಬ ಮತ್ತೊಂದು ವಾದವು ಹೆಚ್ಚು ವಾಸ್ತವಕ್ಕೆ ಸಮೀಪವಾಗಿದೆ.

ಆವತಿ ನಾಡಪ್ರಭುಗಳ ಮನೆತನದ ಸ್ಥಾಪಕರಾದ ಏಳು ಸದಸ್ಯರ ಕುಟುಂಬದ ಸಂಪೂರ್ಣ ಕಥನವು ಏಳು ಪ್ರತ್ಯೇಕ ಮನೆತನಗಳನ್ನು ಸೂಚಿಸುವುದನ್ನು ಐತಿಹಾಸಿಕ ಸತ್ಯವಾಗಿ ಒಪ್ಪಲಾಗದು. ಅವರು ಮೊರಸು ಒಕ್ಕಲು ಸಮುದಾಯಕ್ಕೆ ಸೇರಿದವರು. ಮೊರಸು ನಾಡು ಪ್ರಸ್ತುತ ಬೆಂಗಳೂರು ಜಿಲ್ಲೆಯ ದಕ್ಷಿಣ, ಹೊಸಕೋಟೆ ಮತ್ತು ಅನೇಕಲ್ ತಾಲ್ಲೂಕು ಪ್ರದೇಶ, ಈ ತಾಲ್ಲೂಕುಗಳಿಗೆ ಹೊಂದಿಕೊಂಡಂತಿರುವ ಕೋಲಾರ ಜಿಲ್ಲೆಯ ಪಶ್ಚಿಮ ಭಾಗ ಮತ್ತು ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಹೊಸೂರು ಹಾಗೂ ಡೆಂಕಣಿಕೋಟೆ ತಾಲ್ಲೂಕಿನ ಭಾಗಗಳನ್ನು ಒಳಗೊಂಡಿತ್ತು. ಯಣಮಂಜಿ ನಾಡಿನ ಉತ್ತೂರು ಪ್ರಸ್ತುತ ಮುಳಬಾಗಲು ತಾಲ್ಲೂಕಿನ ಉತ್ತೂರು ಆಗಿದ್ದು, ಇದೇ ಯಲಹಂಕ ನಾಡಪ್ರಭುಗಳ ಮೂಲ ನೆಲೆ. ವಿಜಯನಗರ ಕಾಲದಲ್ಲಿ ತೆಲುಗು ಜನಪ್ರಿಯವಾದ ಸಾಹಿತ್ಯ ಭಾಷೆಯಾಗಿದ್ದರಿಂದ ಆ ಕುಟುಂಬಗಳು ಕೂಡ ತೆಲುಗು ಮಾತನಾಡುತ್ತಿದ್ದವು. ಆದರೆ ಎಲ್ಲ ಮೊರಸು ಒಕ್ಕಲಿಗರು ಕನ್ನಡ ಮಾತನಾಡುತ್ತಾರೆ. ಮೊರಸು ಒಕ್ಕಲಿಗರು ಕೋಲಾರ ಜಿಲ್ಲೆಯ ಸೀತಿ ಭೈರವನಿಗೆ ಅತಿಯಾಗಿ ನಡೆದುಕೊಳ್ಳುತ್ತಾರೆ. ಸೀತಿಯು ಉತ್ತೂರಿನಿಂದ ದೂರವಿಲ್ಲ ಎಂದು ಬೆಂಗಳೂರು ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ದಾಖಲಿಸಲಾಗಿದೆ.[23]

ಈ ವಾದಕ್ಕೆ ಪೂರಕವಾದ ಅಭಿಪ್ರಾಯಗಳನ್ನು ಗಮನಿಸಬಹುದು.

**ಪಿ.ವಿ. ಕೃಷ್ಣಮೂರ್ತಿ ಅವರ ಪ್ರಕಾರ:**[24] **"**ಚೋಳರು ಗಂಗರ ಕಾಲದಲ್ಲಿ ಇದ್ದ ನಾಡುಗಳ ಜೊತೆಗೆ ಇನ್ನಷ್ಟು ನಾಡುಗಳನ್ನು ಹುಟ್ಟುಹಾಕಿ ಸ್ಥಳೀಯ ಆಡಳಿತವನ್ನು ಬಲಪಡಿಸಿ ರಾಜಾದಾಯವನ್ನು ಉತ್ತಮಪಡಿಸಿಕೊಂಡರೆಂದು ತೋರುತ್ತದೆ. ಈ ರೀತಿ ಉಂಟಾದ ಅನೇಕ ಹೊಸ ನಾಡುಗಳಲ್ಲಿ ಇಳವಂಜಿ ನಾಡು ಕೂಡ ಒಂದಾಗಿದೆ." ಈ ನಾಡು ಇಂದಿನ

ಬಂಗಾರುಪೇಟೆ ತಾಲೂಕು ಮತ್ತು ಮುಳಬಾಗಲು ತಾಲ್ಲೂಕಿನ ಮುಕ್ಕಾಲು ಭಾಗ ಪ್ರದೇಶವನ್ನು ಒಳಗೊಂಡಿತ್ತು. 14ನೆಯ ಶತಮಾನದ ಕೊನೆಯವರೆಗೂ ಇಳವಂಜಿನಾಡು, ನಿಗಿರಿಲಿಚೋಳಮಂಡಲದ ಭಾಗವಾಗಿತ್ತು. ವಿಜಯನಗರ ಅರಸರ ಕಾಲದಲ್ಲಿ ಮುಳವಾಯಿ ರಾಜ್ಯದ ಯೆಲವಂಜಿನಾಡೆಂದು ಗುರುತಿಸಲ್ಪಟ್ಟಿತು.

"ಪ್ರಸಿದ್ಧ ಬೆಂಗಳೂರು ಪಟ್ಟಣದ ನಿರ್ಮಾತೃ ಈ ನಾಡಿನಿಂದ ವಲಸೆ ಬಂದವನೆಂಬುದು ಸರಿಯಷ್ಟೆ. ಈ ನಾಡನ್ನು ವಿದ್ವಾಂಸರು ತಪ್ಪಾಗಿ, ತಮಿಳುನಾಡಿನ ಕಂಚಿಯ ಸಮೀಪದ್ದೆಂದು ವ್ಯಾಖ್ಯಾನಿಸಿರುತ್ತಾರೆ. ವಾಸ್ತವವಾಗಿ ಮೇಲೆ ನಿರೂಪಿಸಿದಂತೆ ಅದು ಕೋಲಾರ ಜಿಲ್ಲೆಯ ಪೂರ್ವ ಮತ್ತು ದಕ್ಷಿಣ ಪ್ರದೇಶಗಳಾಗಿವೆ. ಅಲ್ಲದೆ ಅದರ ಆಚಿನ ಪ್ರದೇಶಗಳು 10ನೆಯ ಶತಮಾನಕ್ಕಿಂತ ಹಿಂದೆ ಸಹಜ ಕನ್ನಡ ಪ್ರದೇಶಗಳಾಗಿದ್ದು, ಆ ಪ್ರದೇಶ ಕಂಚಿಯವರೆಗೂ ಸ್ಥಾಪಿಸಿದ್ದಿತು. ಕಂಚಿಯ ಕಡೆಗಿನ ವಾಣಿಜ್ಯ ಮಾರ್ಗವು ಈ ನಾಡಿನ ಮೂಲಕವೇ ಹಾದು ಹೋಗುತ್ತಿತ್ತು. ಹಾಗಾಗಿ ಅವರನ್ನು ಕಂಚಿಯ ಮೂಲದವರೆಂದು ಪ್ರಾಯಶಃ ತಪ್ಪಾಗಿ ಗ್ರಹಿಸಲು ಕಾರಣವಾಯಿತೆಂದು ತೋರುತ್ತದೆ" ಎಂದು ಪಿ.ವಿ. ಕೃಷ್ಣಮೂರ್ತಿ ಅವರು ಅಭಿಪ್ರಾಯ ಪಟ್ಟಿದ್ದಾರೆ.[25]

ದೇವರಕೊಂಡಾರೆಡ್ಡಿ ಅವರು ಎಂ.ವಿ. ಕೃಷ್ಣರಾವ್ ಅವರ ವಾದವನ್ನು ಅಲ್ಲಗಳೆಯುತ್ತಾರಲ್ಲದೆ, ಪಿ.ವಿ. ಕೃಷ್ಣಮೂರ್ತಿ ಅವರ ಅಭಿಪ್ರಾಯವನ್ನು ಸಮರ್ಥಿಸುತ್ತಾರೆ:[26] "ಯಣಮಂಜಿ ಪುತ್ತೂರಿಗೂ ಕಂಚಿಗೂ ಸಂಬಂಧವಿಲ್ಲ. ಯಣಮಂಜಿ ಎಂಬುದು ಇಳವಂಜಿ ಎಂಬ ಹೆಸರಿನ ರೂಪ. ಈ ಯಣವಂಜಿನಾಡು ಮುಳಬಾಗಿಲು, ಬೌರಿಂಗ್‌ಪೇಟೆ, ಚಿತ್ತೂರು ಜಿಲ್ಲೆಯ ಸ್ವಲ್ಪಭಾಗಕ್ಕೆ ಸೇರಿದ ಪ್ರದೇಶ. ಈ ಯಣಮಂಜಿಯನ್ನು ಮೊರಸುನಾಡೆಂದು ಅಪ್ಪಿತಪ್ಪಿಯೂ ಕರೆದಿರುವ ಉಲ್ಲೇಖಗಳಿಲ್ಲ. ಜೊತೆಗೆ ಮೊರಸುನಾಡ ಎಂಬ ಪದ ಆವುತಿ ಪ್ರಭುಗಳಿಗಿಂತ ಮುಂಚೆಯೇ ಬೆಂಗಳೂರು ಜಿಲ್ಲೆಯಲ್ಲಿ ಕಂಡುಬರುತ್ತದೆ. ಇನ್ನು ಆವುತಿಪ್ರಭುಗಳ ಪೂರ್ವಿಕರು ತೆಲುಗರಲ್ಲ ಎಂಬುದಕ್ಕೆ ಅವರ ಹೆಸರುಗಳೇ ಹೇಳುತ್ತವೆ" ಎಂದಿದ್ದಾರೆ.

ಕರ್ಲಮಂಗಲಂ ಶ್ರೀಕಂಠಯ್ಯನವರು **'ಕೆಂಪೇಗೌಡ ಜಯಪ್ರಶಸ್ತಿ'**ಯ ಮುನ್ನುಡಿಯಲ್ಲಿ "... ಕನ್ನಡನಾಡಿನಲ್ಲಿ ಮೊರಸುನಾಡೆಂಬ ವಿಭಾಗದಲ್ಲಿ ಹೇರಳವಾಗಿ ವಾಸಿಸುತ್ತಿದ್ದ ಇವರನ್ನು ಮೊರಸು ಒಕ್ಕಲಿಗರೆಂದು ಕರೆದುದೇ ಅಲ್ಲದೆ ಗಂಗಡಿಕಾರರಿಗೂ ಇವರಿಗೂ ಯಾವ ಅಂತರ್ಭೇವೂ ಇರುವುದಿಲ್ಲ..." ಎಂದಿದ್ದಾರೆ.[27]

ಈ ಮೇಲಿನ ಚರ್ಚೆಯಿಂದ ಸ್ಪಷ್ಟವಾಗುವುದೇನೆಂದರೆ, ಯಲಹಂಕ ನಾಡಪ್ರಭುಗಳು ಕಂಚಿ ಕಡೆಯ ದಾರಿಯಲ್ಲಿ ಬಂದವರೇ ಹೊರತು; ಕಂಚಿಯಿಂದ ಬಂದವರಲ್ಲ. ಪ್ರಾಚೀನ ಮೊರಸು ನಾಡಿನಲ್ಲಿ ಇಂದಿನ ಕೋಲಾರ ಜಿಲ್ಲೆಯ ಬಹುಭಾಗವನ್ನು ಒಳಗೊಂಡಿತ್ತು. ಮುಂದೆ ಮೊರಸು ನಾಡಿನ ಕೆಲವು ಭಾಗಗಳು ಇಳವಂಜಿ ನಾಡಿನಲ್ಲಿ ಸೇರಿಕೊಂಡವು. ಆ ಸಂದರ್ಭದಲ್ಲಿ 'ಬೆಂಗಳೂರು ಬಖೈರು' ದಾಖಲಿಸುವಂತೆ ಕ್ಷಾಮವೋ ಅಥವಾ ಸ್ಥಳೀಯ ಮುಖಂಡನ ಕಿರುಕುಳವೊ ಹೆಚ್ಚಲಾಗಿ ಅವರು ಉತ್ತರದ ಕಡೆಗೆ ಪಾಲಾರ್ ನದಿಯನ್ನು ದಾಟಿ ಬಂದು ಆವತಿ ಪ್ರದೇಶದಲ್ಲಿ ನೆಲೆಸಿದರೆಂದು ಹೇಳಬಹುದು.

ಹಿರಿಯ ವಿದ್ವಾಂಸರಾದ ಪಿ.ವಿ. ಕೃಷ್ಣಮೂರ್ತಿ ಮತ್ತು ದೇವರಕೊಂಡಾರೆಡ್ಡಿ ಅವರ ಅಭಿಪ್ರಾಯಗಳನ್ನು ಒಪ್ಪಲು ಅವಕಾಶಗಳಿವೆ. ಏಕೆಂದರೆ, ಮೊರಸು ನಾಡಿನ ಒಕ್ಕಲಿಗರೇ 'ಮೊರಸು ಒಕ್ಕಲಿಗರು' ಎಂಬುದು ಒಪ್ಪಬಹುದಾದ ಅಭಿಪ್ರಾಯವಾಗಿದೆ. ಏಕೆಂದರೆ, 'ಮೊರಸು ಹೊಲೆಯರು', 'ಮೊರಸು ಶ್ರೀವೈಷ್ಣವರು' ಇರುವಂತೆ ಮೊರಸು ಒಕ್ಕಲಿಗರು ಇದ್ದಾರೆ. ಈ ಜಾತಿಯು ಪ್ರಾದೇಶಿಕ ಹಿನ್ನೆಲೆಯಲ್ಲಿ ಗುರುತಿಸಲ್ಪಟ್ಟಿದೆಯೇ ವಿನಃ ಬೇರೆ ಅಲ್ಲ. ಗಂಗವಾಡಿ ಪ್ರದೇಶದಲ್ಲಿದ್ದ ಒಕ್ಕಲಿಗರು ತಮ್ಮನ್ನು ಗಂಗಡಿಕಾರರೆಂದು ಕರೆದುಕೊಂಡರು. ಅದೇರೀತಿ ಮೊರಸು ನಾಡಿನಲ್ಲಿದ್ದ ಒಕ್ಕಲಿಗರು ತಮ್ಮನ್ನು ಮೊರಸು ಒಕ್ಕಲಿಗರೆಂದು ಗುರುತಿಸಿಕೊಂಡಿರುವ ಸಾಧ್ಯತೆಗಳಿವೆ. ಆದ್ದರಿಂದ ತಮಿಳುನಾಡಿನ ಕಂಚಿಗೂ ಮೊರಸು ಒಕ್ಕಲಿಗರಾದ ಯಲಹಂಕ ನಾಡಪ್ರಭುಗಳಿಗೂ ಯಾವುದೇ ಸಂಬಂಧವಿಲ್ಲ. ಆದರೆ, ಮೊರಸು ಎಂಬುದಕ್ಕೆ ಮಿಶ್ರ ಎಂಬ ಒಂದು ಅರ್ಥವೂ ಇದೆ. ಇವರು ಮಿಶ್ರಭಾಷೆಯನ್ನಾಡುವ ಜನ. ಆದ್ದರಿಂದ ಮೊರಸು ಎಂಬ ಹೆಸರು ಬಂದಿದೆ ಎಂಬ ವಾದವೂ ಇದೆ. ಪ್ರಾಚೀನ ಕಾಲದಿಂದಲೂ ಈ ಪ್ರದೇಶ ಒಂದು ರೀತಿಯ ಮಿಶ್ರ ಸಂಸ್ಕೃತಿ ಮತ್ತು ಭಾಷೆಯ ಪ್ರದೇಶವಾಗಿದೆ. ತೆಲುಗು, ತಮಿಳು ಮತ್ತು ಕನ್ನಡ ಹೀಗೆ ಮೂರು ಭಾಷೆಗಳು ಈ ಪ್ರದೇಶದಲ್ಲಿ ಮೇಳೈಸಿವೆ. ಆದ್ದರಿಂದ ಮಿಶ್ರಭಾಷೆ ಎಂಬ ಕಾರಣದಿಂದ ಮೊರಸು ಎಂಬ ಹೆಸರು ರೂಢಿಗೆ ಬಂದಿರಬಹುದು. ಈ ಪ್ರದೇಶದ ಜನತೆ ಈಗಲೂ ಕೂಡ ಮಿಶ್ರ ಭಾಷೆ ಮತ್ತು ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡಿರುವುದನ್ನು ಕಾಣಬಹುದು.

### 3.2.2 ತೆಲುಗು ಭಾಷಿಕರೋ, ಕನ್ನಡ ಭಾಷಿಕರೋ

ಯಲಹಂಕ ನಾಡಪ್ರಭುಗಳ ಹಿನ್ನೆಲೆಯನ್ನು ಪ್ರಾದೇಶಿಕವಾಗಿ ನೋಡುವಂತೆಯೇ ಭಾಷಿಕವಾಗಿಯೂ ನೋಡುವುದು ಒಂದು ಥರದ ಸಮಸ್ಯೆ ಇದೆ. ಒಂದು ಬಹು ಭಾಷಿಕ

ಸಮಾಜದಲ್ಲಿ ಅವರು ಯಾವ ಭಾಷಿಕರು ಎಂದು ಗುರುತಿಸುವುದೇ ಕಠಿಣವಾದ ಸವಾಲಾಗಿದೆ. ಆದರೂ ಕೂಡ ಪ್ರಾಚೀನ ಕಾಲದಿಂದಲೂ 'ತಿರುಳುಗನ್ನಡ ಸೀಮೆ', 'ಕನ್ನಡ ಜನಪದ' ಈ ರೀತಿಯ ಅಸ್ಮಿತೆಯನ್ನು ಗುರುತಿಸುವ ಪ್ರಯತ್ನ ಸಾಹಿತ್ಯದಲ್ಲಿ ನಡೆದಿರುವುದನ್ನು ಕಾಣಬಹುದು. ಈ ಅಸ್ಮಿತೆಯ ಪ್ರಶ್ನೆಯು 20ನೆಯ ಶತಮಾನದ ಬಹುಮುಖ್ಯ ಪ್ರಶ್ನೆಯಾಗಿತ್ತು. ಹಾಗೆ ನೋಡಿದರೆ ಯಲಹಂಕ ನಾಡಪ್ರಭುಗಳು ಮೂಲತಃ ತೆಲುಗಿನವರು ಎಂಬ ವಿಚಾರವನ್ನು ಬಿ.ಎಲ್. ರೈಸ್ ಮತ್ತು ಸಿ. ಹಯವದನರಾವ್ ಅವರು ಮೊದಲು ಪ್ರಸ್ತಾಪಿಸಿದ್ದರು. ಆದರೆ, 1956ರ ನಂತರ ಭಾಷಾವಾರು ಪ್ರಾಂತ ರಚನೆಯ ನಂತರದಲ್ಲಿ ಭಾಷಿಕ ಹಿನ್ನೆಲೆಯಲ್ಲಿ ಗುರುತಿಕೊಳ್ಳುವ ಪ್ರಕ್ರಿಯೆಗಳು ತೀವ್ರಗೊಂಡವು. ಇದೇ ಸಂದರ್ಭದಲ್ಲಿಯೇ ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನ ನಿರ್ಮಾಪಕನಾದ ಕೆಂಪೇಗೌಡ ಯಾವ ಭಾಷೆಯವರು ಎಂಬ ಪ್ರಶ್ನೆಯು ಮುನ್ನೆಲೆಗೆ ಬಂದಿದ್ದು ಆಶ್ಚರ್ಯವಾಗದು.

ಆ ಸಂದರ್ಭದಲ್ಲಿ ಇಂಥ ಒಂದು ಪ್ರಶ್ನೆಯನ್ನು ಹುಟ್ಟುಹಾಕಿದವರು ಕೆ. ಸುಬ್ಬರಾಮಪ್ಪ ಅವರು. ಕರ್ನಾಟಕ ಏಕೀಕರಣಗೊಂಡ ಮಾಸದ (1956 ನವೆಂಬರ್) **'ಮೈಸೂರು ವೈಶ್ಯ ಪತ್ರಿಕೆ'**ಯ ಸಂಚಿಕೆಯಲ್ಲಿ ಮತ್ತು 17 ಮಾರ್ಚ್ 1957ರ **'ಪ್ರಜಾವಾಣಿ'** ದಿನಪತ್ರಿಕೆಯಲ್ಲಿ **"**ಬೆಂಗಳೂರು ನಿರ್ಮಾಪಕ ಕೆಂಪೇಗೌಡರು ತೆಲುಗಿನವರು – ತೆಲುಗು ಕವಿ**"** ಎಂಬ ಲೇಖನವನ್ನು ಬರೆದರು. ಈ ನಡುವೆ ಎಂ.ಆರ್. ಗೋಪಾಲಕೃಷ್ಣಸ್ವಾಮಿ ಎಂಬುವವರು 1957ರ ಜನವರಿ 27ರಂದು ತೆಲುಗು ದಿನಪತ್ರಿಕೆ **'ಪ್ರಜಾಮತ'**ದಲ್ಲಿ **"**ಬೆಂಗಳೂರು ಸ ನಾ ಪಿಂಚಿನ ಕೆಂಪೇಗೌಡ ತೆಲುಗು ಕವಿ**"** ಎಂಬ ಲೇಖನವೊಂದನ್ನು ಬರೆದರು. ಇವರ ಬರಹದಲ್ಲಿನ ಪ್ರಮುಖ ವಾದಗಳನ್ನು ಹೀಗೆ ಕ್ರೋಢೀಕರಿಸಬಹುದು.[28]

1) ಕೆಂಪೇಗೌಡರ ನಿಜವಾದ ಹೆಸರು ಪೆದ್ದಕೆಂಪರಾಯಲು (ದೊಡ್ಡಕೆಂಪರಾಯ) **'ಗೌಡ'** ಎಂಬ ಪದ ಈ ವಂಶೀಯರಿಗೆಲ್ಲಾ ಬಂದಿರುವ ಒಂದು ನಾಯಕತ್ವಪದ.

2) ದೊಡ್ಡ ಕೆಂಪರಾಯನ (ಗೌಡನ) ಮಗನಾದ ಇಮ್ಮಡಿ ಕೆಂಪರಾಯನ ಬೆಂಗಳೂರಿನಲ್ಲಿ ಬಳ್ಳಾಪುರ ಪೇಟೆಯಲ್ಲಿರುವ ರಂಗನಾಥ ದೇವಾಲಯದಲ್ಲಿ ಹಾಕಿಸಿರುವ ತೆಲುಗು ಶಾಸನದಿಂದ ಇವರೆಲ್ಲರೂ ತೆಲುಗಿನವರೆಂದೂ ತಿಳಿಯುತ್ತದೆ.

3) ಆತ **"**ಗಂಗಾಗೌರಿ ವಿಲಾಸಮು**"** ಎಂಬ ಯಕ್ಷಗಾನ ತೆಲುಗು ಕೃತಿಯನ್ನೂ ಬರೆದಿದ್ದಾನೆ.

ಈ ಮೇಲಿನ ಅಂಶಗಳನ್ನು ಪ್ರಧಾನವಾಗಿ ಮಂಡಿಸುತ್ತಾ ಕೆ. ಸುಬ್ಬರಾಮಪ್ಪ ಮತ್ತು ಎಂ.ಆರ್. ಗೋಪಾಲಕೃಷ್ಣ ಅವರುಗಳು ಕೆಂಪೇಗೌಡ ತೆಲುಗು ಭಾಷಿಕ ಎಂದು ಹೇಳಿದರು.

ಈ ವಿದ್ವಾಂಸರ ಅಭಿಪ್ರಾಯಕ್ಕೆ ಪ್ರತಿಕ್ರಿಯಾತ್ಮಕವಾಗಿ ಕೆ. ನಾಗರಾಜ ಅವರು ದಿನಾಂಕ: 19, 20, 21, 22 ಮೇ 1957ರಂದು 'ಪ್ರಜಾವಾಣಿ' ದಿನಪತ್ರಿಕೆಯಲ್ಲಿ ಸುದೀರ್ಘವಾದ ಮತ್ತು ವಿದ್ವತ್ಪೂರ್ಣ ಲೇಖನವನ್ನು ಬರೆದರು. ನಾಗರಾಜ ಅವರ ವಾದವನ್ನು ಸಂಗ್ರಹಿಸಿ ಹೇಳುವುದಾದರೆ:

1) ಸಾಮಾನ್ಯವಾಗಿ ಭಾಷಾಂತರಕಾರರೂ ಅನುವಾದಕಾರರೂ ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಭಾಷಾಂತರಿಸುವಂತೆ 'ಹಿರಿಯ ಕೆಂಪೇಗೌಡ' ಎಂಬುದನ್ನು ತೆಲುಗಿಗೆ ಹಿರಿಯ = ಪೆದ್ದ; ಕೆಂಪೇ = ಕೆಂಪ; ಗೌಡ = ರಾಯ ಎಂಬುದಾಗಿ ಭಾಷಾಂತರಿಸಿದಂತಿದೆ.[29]

2) ಗೌಡ ಎಂಬ ಪದ ಗೌರವಯುತವಾದ ಅಧಿಕಾರಪದ. ಕನ್ನಡ ನಾಡಿನಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿರುವ ಗೌಡ ಎಂಬ ಗ್ರಾಮಾಧಿಕಾರಿಯ ಗೌರವ ಬಿರುದು ವಿಶೇಷ ರೀತಿಯ ಅದಿಕಾರ ಗೌರವದಿಂದೊಡಗೂಡಿದೆ. ತೆಲುಗು, ತಮಿಳು ನಿಘಂಟುಕಾರರ ಕಲ್ಪನೆಯಲ್ಲಿ ಬಂದಿರುವಂತೆ ಗೌಡರೆಂದರೆ ಹೆಂಡಮಾರುವವರೂ, ಮಾದಿಗರೂ ಅಲ್ಲ. ಕೊಲೆಪಾತಕರೂ ನೀಚರೂ ಅಲ್ಲವೇ ಅಲ್ಲ. ಗೌಡ ಎಂಬ ಗೌರವ ಪದವನ್ನು ಬಿರುದಾಗಿ ಹೊಂದಿದ್ದ ಈ ಕರ್ನಾಟಕದ ಒಕ್ಕಲಿಗ ವಂಶದವರನ್ನು ಯಾವ ಆಧಾರದ ಮೇಲೆ ತೆಲುಗು ದೇಶದವರೆಂದು ಹೇಳಬಹುದು? ಈ ಕೆಂಪೇಗೌಡರ (ಸಾಂಪ್ರದಾಯಿಕ ಕತೆಯಂತೆ) ಮೂಲ ಪುರುಷರಾದ ಮೊರಸು ಒಕ್ಕಲಿಗರೇ ಆಗಲಿ, ಬಂಡಿಕಾಪುಲು ವಂಶದವರೇ ಆಗಲಿ, ಪ್ರಾಚೀನ ಕಾಲದಿಂದಲೂ ಕರ್ನಾಟಕದ ಭೂ ಪ್ರದೇಶದಲ್ಲಿದ್ದು ಬಾಳಿ ಬದುಕಿದರು, ಬದುಕಿದವರು.[30]

3) ಇಮ್ಮಡಿ ಕೆಂಪೇಗೌಡನೂ ಬೆಂಗಳೂರಿನ ಬಳ್ಳಾಪುರ ಪೇಟೆಯಲ್ಲಿರುವ ರಂಗನಾಥ ದೇವಾಲಯದಲ್ಲಿ ಹಾಕಿಸಿರುವ ತೆಲುಗು ಶಾಸನದಿಂದ ಇವರೆಲ್ಲರೂ ತೆಲುಗಿನವರೆಂದು ತಿಳಿಯುತ್ತದೆ ಎಂಬುದು ಅವರ 2ನೆಯ ವಾದ. ಆದರೆ ಈ ಶಾಸನವನ್ನು ಸಂಪೂರ್ಣವಾಗಿ ಓದಿ. ಆ ಶಾಸನವನ್ನು ಸಂಪಾದಿಸಿ, ಪ್ರಕಟಿಸಿರುವ ಬಿ.ಎಲ್.ರೈಸ್‌ರ ಟಿಪ್ಪಣಿಯನ್ನೂ ನೋಡಿದರೆ ಮೇಲ್ಕಂಡ ವಾದವನ್ನೂ ನೋಡಿದರೆ ಆಶ್ಚರ್ಯವಾಗುತ್ತದೆ.

ಶಾಸನವನ್ನು ಬರೆಸಿದವನು ಇಮ್ಮಡಿ ಕೆಂಪೇಗೌಡನಲ್ಲ. ಅವನ ಕಾಲದಲ್ಲಿ ಬೆಂಗಳೂರಿಗೆ ವ್ಯಾಪಾರಕ್ಕಾಗಿ ಬೇರೆ ಬೇರೆ ಊರಿಂದ ಬಂದ ನಾಲ್ಕು ಜನ ಶೆಟ್ಟರು ರಂಗನಾಥಸ್ವಾಮಿಯ, ತಿರುನಾಳ್, ನೈವೇದ್ಯ ಮೊದಲಾದ ಧರ್ಮ ಕಾರ್ಯಗಳಿಗಾಗಿ, ಸೇವೆಗಾಗಿ ಸಾಮಾನುಗಳನ್ನು ಕೊಡಲೊಪ್ಪಿ ಬರೆಸಿದ ಶಾಸನವಾಗಿದೆ.[31]

4) ವ್ಯಾಪಾರಕ್ಕಾಗಿ ಹೊರನಾಡಿನಿಂದ ಬರುತ್ತಿದ್ದ ಸೆಟ್ಟರು, ಅವರ ಭಾಷೆಯಾದ ತೆಲುಗಿನಲ್ಲಿ ಶಾಸನ ಬರೆಸಿದ್ದೇನೂ ಆಶ್ಚರ್ಯವಲ್ಲ. ಇನ್ನು ಈ ವಂಶಸ್ಥರಿತ್ತಿರುವ ಅನೇಕ ಶಾಸನಗಳಲ್ಲಿ ತೆಲುಗಿನಗಳಿವೆಯೊ? ಬಿ.ಎಲ್. ರೈಸರು ಈ ಬಗೆಯೂ ತಮ್ಮ ಅಭಿಪ್ರಾಯವನ್ನು– "ಆವತಿ ವಂಶದ ಒಂದು ಶಾಖೆಯಾದ ಬೆಂಗಳೂರನ್ನು ನಿರ್ಮಿಸಿದ ಕೆಂಪೇಗೌಡ ನಾಯಕರಿಗೆ ಸಂಬಂಧಿಸಿದಂತೆ 1367–1713ರ ತನಕದ ಹಲವಾರು ಶಾಸನಗಳಿವೆ. ಇವುಗಳಲ್ಲಿ 2–3 ಮಾತ್ರ ತೆಲುಗಿನಲ್ಲಿದೆ" ಎಂಬುದಾಗಿ ಹೇಳಿರುವುದನ್ನು ಉಲ್ಲೇಖಿಸುತ್ತಾರೆ. ಮುಂದುವರೆದು ಕೆ. ಸುಬ್ಬರಾಮಪ್ಪ ಮತ್ತು ಎಂ.ಆರ್. ಗೋಪಾಲಕೃಷ್ಣಸ್ವಾಮಿ ಅವರುಗಳ ಅಭಿಪ್ರಾಯದಂತೆ ಈ ವಂಶಸ್ಥರು ತೆಲುಗು ಮಾತನಾಡುವವರೂ, ತೆಲುಗು ದೇಶಸ್ಥರೂ ಆಗಿದ್ದರೆ, 350 ವರ್ಷಗಳ ತಮ್ಮ ಆಳ್ವಿಕೆಯ ಕಾಲದಲ್ಲಿ ಕೇವಲ 2–3 ಮಾತ್ರ ತೆಲುಗು ಶಾಸನ ಬರೆಸುತ್ತಿದ್ದರೆ? ಎಂದು ಪ್ರಶ್ನಿಸುತ್ತಾರೆ.[32]

5) **'ಗಂಗಾಗೌರಿ ವಿಲಾಸಮು'** ಈ ಗ್ರಂಥದ ನಿರ್ದಿಷ್ಟವಾದ ಕಾಲ, ಮೂಲಪ್ರತಿ ಅದನ್ನು ಪ್ರತಿಲಿಪಿ ಮಾಡಿದವರಾರು ಮೊದಲಾದ ವಿಷಯಗಳು ಸಂಪೂರ್ಣವಾಗಿ ಹೊರಬರುವವರೆಗೂ ಅದರ ಸತ್ಯಾಸತ್ಯತೆ ಬಗ್ಗೆ, ಕೇವಲ ಪ್ರಶಸ್ತಿ ಪಠ್ಯಗಳ ಮೇಲವಲಂಬಿಸಿದ ಏನನ್ನೂ ಹೇಳಲು ಬರುವಂತಿಲ್ಲ. ಪದ್ಯಗಳನ್ನೇ ನೋಡಿದರೂ ಈ ಗ್ರಂಥ ಕೆಂಪೇಗೌಡನೇ ಬರೆದನೆಂದು ಹೇಳಲೂ ಬರುವಂತಿಲ್ಲ... ಅವರು ನೀಡಿರುವ ಮೂರೂ ಪದ್ಯಗಳಲ್ಲಿ ಶಬ್ದಸ್ಖಾಲಿತ್ಯಗಳಿವೆ. ಮೊದಲನೇ ಪದ್ಯದಲ್ಲಿ "ಕೆಂಪನೃಪತಿಯನ್ನು ರಕ್ಷಿಸು ಸೋಮೇಶ್ವರಾ" ಎಂದು ಕೇಳಿದ್ದಾನೆ. 2ನೆಯ ಪದ್ಯದಲ್ಲಿ ಪೆದ್ದಕೆಂಪಪ್ರಭುವು ಸುಕವಿಗಳಿಗೆ ಸಾರವೂ ಕುಕವಿಗಳಿಗೆ ಶೂಲವೂ ಆದ ವಿವಿಧ ವಾದ್ಯಗಳ ಸಮೇತ ಸತ್ಕವಿತೆಗಳಿಂದ ಸಂತೋಷಿಸುತ್ತಾನೆ. ಅಲ್ಲವೇ ಅಲಂಕರಿಸಿದ್ದಾನೆ. 3ನೆಯ ಪದ್ಯದ ಅರ್ಥ ಹೀಗೆ ಎಂದು ಹೇಳುವಂತಿಲ್ಲ. "ಗಂಗಾಗೌರಿ ವಿಲಾಸಮು ಎಂಬ ಸಂಗತಿಗೆ (ಯಕ್ಷಗಾನಕ್ಕೆ?) ಪದ್ಯಗಳಿಗೆ ಸರಸವಾದ ವಿವರವನ್ನು ಪೆದ್ದಕೆಂಪರಾಯನು ಉಸುರಿದನು". ಶುದ್ಧವಾದ ಪಾಠವಿದ್ದರೆ ಸರಿಯಾಗಿ ಅರ್ಥ ಹೊರಡಬಹುದು.

ಯಾವನೊಬ್ಬ ಇತ್ತೀಚಿನ ಕವಿಯು ಹೀಗೆ (1864) ಯಾಕೆ ಬರೆದಿರಬಾರದು. ಹಿರಿಯ ಕೆಂಪೇಗೌಡನ 350 ವರ್ಷಗಳ ನಂತರದ ಈ ಕಾಗದದ ಪ್ರತಿಯ ಆಧಾರದ ಮೇಲೆ ನಾವೂ ಏನೂ ಹೇಳಬರುವಂತಿಲ್ಲ. ಅದೂ ಅಲ್ಲದೆ, ನೇರವಾಗಿ ಕೆಂಪವಿಭು ಎಂಬುವನೇ ತಾನೇ ಬರೆದಿರುವುದಾಗಿ ಹೇಳಿಕೊಂಡಂತೆ ಕಂಡುಬರುವುದಿಲ್ಲ. ಇದು ಪ್ರಕ್ಷಿಪ್ತ ಭಾಗ ಯಾಕಾಗಿರಬಾರದು. ಕಾಲ ನಿರ್ದಿಷ್ಟವಾಗಿಲ್ಲ. ಕೃತಿಯು ಪೂರ್ತಿ ಪ್ರಕಟವಾಗಿಲ್ಲ. ಹೀಗಿರುವಾಗ ಇದರ ಕರ್ತ ಹಿರಿಯ ಕೆಂಪೇಗೌಡನೇ ಎಂದು ಹೇಳುವುದು ಹೇಗೆ? ಈ ಕೃತಿಯನ್ನು ಹಿರಿಯ ಕೆಂಪೇಗೌಡನೇ ಬರೆದನೆಂದು ಹೇಳಬರುವಂತಿಲ್ಲ. ಹೀಗಿರುವಾಗ ಹಿರಿ ಕೆಂಪೇಗೌಡ ತೆಲುಗು ಕವಿ ಹೇಗಾದಾನು? ಎಂದು ಪ್ರಶ್ನಿಸಿದ್ದಾರೆ. [33]

ಪ್ರತಿವಾದವನ್ನು ಮಂಡಿಸಿರುವ ಕೆ. ನಾಗರಾಜ ಅವರ ಸಂಶೋಧನಾ ದೃಷ್ಟಿಕೋನ ಮತ್ತು ಎತ್ತಿರುವ ಪ್ರಶ್ನೆಗಳು ಎಲ್ಲವೂ ಸಮಂಜಸವಾಗಿದೆ. ತೀರ್ಮಾನಕ್ಕೆ ಬರುಲು ಇರುವ ಆಧಾರಗಳ ಕೊರತೆಯ ಬಗೆಗೂ ಅವರು ಬೆಳಕು ಚೆಲ್ಲಿದ್ದಾರೆ. ಒಟ್ಟಾರೆ, 'ಗಂಗಾಗೌರಿ ವಿಲಾಸಂ' ಕೃತಿಯು ಹಿರಿಯ ಕೆಂಪೇಗೌಡನ ರಚನೆ ಅಲ್ಲ ಎಂಬುದು ಸರಿಯಾದ ತೀರ್ಮಾನವಾಗಿದೆ. ಅವರು ಒಂದು ಕಡೆ ದಾಖಲಿಸುರುವಂತೆ ಸುಗುಟೂರು ಮನೆತನದ ಮುಮ್ಮಡಿ ತಮ್ಮೇಗೌಡನು ತೆಲುಗು, ಸಂಸ್ಕೃತ, ಕನ್ನಡ ಭಾಷಾ ಪರಿಚಯಸ್ಥನೂ ಸ್ವಯಂ ಕವಿಯೂ ಆಗಿದ್ದನೆಂದು ತಿಳಿದುಬರುತ್ತದೆ. ಈತನು ಮಗುವಾಗಿದ್ದಾಗಲೇ 'ರಾಜೇಂದ್ರ ಚೋಳ ಚರಿತ' ಎಂಬುದನ್ನೂ, ಪ್ರಬುದ್ಧನಗುತ್ತಲೂ, 'ಕುಮಾರಾರ್ಜುನೀಯ', 'ಸೌಂದರೇಶ ಚರಿತ್ರೆ' ಕೃತಿಗಳನ್ನು ತೆಲುಗಿನಲ್ಲಿ ಬರೆದನು. ಅದೇ ರೀತಿ ಕನ್ನಡದಲ್ಲಿ ಯಕ್ಷಗಾನ ಕೃತಿಯೊಂದನ್ನು, ಸಂಸ್ಕೃತದಲ್ಲಿ 'ಕೌಮುದಿ ವ್ಯಾಖ್ಯಾನ', ಹಾಗೂ 'ರಸಿಕ ಮನೋರಂಜನಿ' ಎಂಬ ಗ್ರಂಥಗಳನ್ನು ಬರೆದನು ಎಂದು ಉಲ್ಲೇಖಿಸಿದ್ದಾರೆ.[34] ಬಹುಶಃ ನಾಗರಾಜ ಅವರು ಏಕಾಮ್ರ ದೀಕ್ಷಿತನ 'ವೀರಭದ್ರ ವಿಜಯ' ಕೃತಿಯಲ್ಲಿನ ಸಂಗತಿಗಳನ್ನು ಗಮನಿಸಿದಂತೆ ಕಾಣುವುದಿಲ್ಲ. ಈ ಸಂಸ್ಕೃತ ಗ್ರಂಥದಲ್ಲಿ ಹಿರಿಯ ಕೆಂಪೇಗೌಡನ ಮೊಮ್ಮಗ ಮತ್ತು ಇಮ್ಮಡಿ ಕೆಂಪೇಗೌಡನ ಮಗನಾದ ಇಮ್ಮಡಿ ಹಿರಿಯ ಕೆಂಪೇಗೌಡನು ಬಹುಭಾಷಾ ಪಂಡಿತನೂ, ಗ್ರಂಥ ರಚನಾಕಾರನೂ ಆಗಿದ್ದು, "ಕವಿತಾ ಗುಂಬಪುಂಬವಾಣಿ" ಎಂಬ ಬಿರುದನ್ನು ಧರಿಸಿದ್ದನೆಂದು ವರ್ಣಿಸಿದೆ. ಬಹುಶಃ 'ಗಂಗಾಗೌರಿ ವಿಲಾಸಂ' ಕೃತಿಯ ಕರ್ತೃ ಇಮ್ಮಡಿ ಹಿರಿಯ ಕೆಂಪೇಗೌಡನೇ ಆಗಿರಬಹುದಾದ ಸಾಧ್ಯತೆ ಇದ್ದು, ಈ ಬಗ್ಗೆ ಸಾಹಿತ್ಯಕ್ಕೆ ಸಂಬಂಧಪಟ್ಟ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

ಇನ್ನೊಂದು ಮುಖ್ಯ ಸಂಗತಿಯೆಂದರೆ ಈ ಕೃತಿಯನ್ನು ಬರೆದವವರು ಯಾರೇ ಆಗಿರಲಿ ಅವರು ತೆಲಗು ಪರಿಸರದವರಲ್ಲ. ಕಾರಣ ಅವರು ಸ್ವೀಕರಿಸಿರುವ ಕಾವ್ಯಶಿಲ್ಪವು ಯಕ್ಷಗಾನ ಬಂಧದಲ್ಲಿರುವುದು. ತೆಲಗು ಭಾಷಿಕರಿಗೆ ದೂರವಾದ ಯಕ್ಷಗಾನ ಶೈಲಿಯಲ್ಲಿ ಕೃತಿಯನ್ನು ಬರೆದಿರುವುದರಿಂದ ಕನ್ನಡ ಭಾಷಿಕ ವಲಯದವರೇ ಈ ಕೃತಿಯನ್ನು ಬರೆದಿದ್ದಾರೆ ಎನ್ನಬಹುದು. ಬಹುಶಃ 16ನೇ ಶತಮಾನದ ನಂತರ ಯಕ್ಷಗಾನ ಪ್ರಯೋಗಗಳು ಬೆಂಗಳೂರು ಪರಿಸರದಲ್ಲಿ ಹೆಚ್ಚಾಗಿ ನಡೆಯುತ್ತಿದ್ದಿರಬಹುದು. ಅದರ ಪ್ರಭಾವದಿಂದ ವೀರರಸದ ಈ ಭಾಷೆಯನ್ನು ತನ್ನ ಕೃತಿಯ ಪ್ರಧಾನವಾದ ಭೂಮಿಕೆಯನ್ನಾಗಿ ಉಪಯೋಗಿಸಿಕೊಂಡಿದ್ದಾನೆ ಎಂದು ಊಹಿಸಲು ಅವಕಾಶವಿದೆ.

ಒಟ್ಟಾರೇ, ಈ ಮೇಲಿನ ಚರ್ಚೆಗಳ ಹಿನ್ನೆಲೆಯಲ್ಲಿ ಯಲಹಂಕ ನಾಡಪ್ರಭುಗಳ ತೆಲುಗು ಭಾಷಿಕರಾಗಿರುವ ಸಾಧ್ಯತೆಗಳಿಲ್ಲ. ಬದಲಿಗೆ ಅವರು ಕನ್ನಡ ಪ್ರದೇಶವೇ ಆಗಿರುವ ಮೊರಸು ನಾಡಿಗೆ ಸೇರಿದವರು. ಅಂದರೆ ಇಂದಿನ ಮುಳಬಾಗಲು ಪರಿಸರದವರು. ಅದು ಬಹುಭಾಷಿಕ ಪ್ರದೇಶವಾದರೂ ಅವರು ಕನ್ನಡ ಭಾಷೆಯ ಮೂಲದವರೇ ಆಗಿದ್ದಾರೆ. ಐತಿಹ್ಯಗಳಲ್ಲಿ ಬರುವ ಮನೆತನದ ಮಗಳ ಹೆಸರು ದೊಡ್ಡಮ್ಮ ಎಂಬುದು ಅಪ್ಪಟ ಕನ್ನಡದ ಹೆಸರಾಗಿದೆ. ಹೆಸರಿನ ಜೊತೆಗೆ ಇರುವ ಅಧಿಕಾರ ಸೂಚಕವಾದ 'ಗೌಡ' ಎಂಬುದು ಕೂಡ ಕನ್ನಡದ ಪ್ರಯೋಗವೇ ಆಗಿದೆ ಎಂಬುದನ್ನು ಇಲ್ಲಿ ಸ್ಮರಿಸಬಹುದು.

## 3.3 ಆರಂಭಕಾಲದ ಯಲಹಂಕ ನಾಡಪ್ರಭುಗಳು

ಯಾವುದೇ ಮನೆತನದ ಚರಿತ್ರೆಯನ್ನು ನೋಡುವಾಗ ಮೂಲಪುರುಷನನ್ನು ಶೋಧಿಸುವ ಪ್ರಯತ್ನಗಳನ್ನು ವಿದ್ವಾಂಸರು ನಡೆಸಿರುವುದನ್ನು ಕಾಣುತ್ತೇವೆ. ಯಲಹಂಕ ನಾಡಪ್ರಭುಗಳ ಮೂಲವನ್ನು ಕುರಿತಾದ ಐತಿಹ್ಯಗಳ ಕಥನಗಳನ್ನು ಮೇಲೆ ನೋಡಲಾಗಿದೆ. ಅವುಗಳ ಪ್ರಕಾರ ರಣಭೈರೇಗೌಡನನ್ನು ಈ ವಂಶದ ಮೂಲಪುರುಷ ಎಂದು ಹೇಳಲಾಗುತ್ತದೆ. ರಣಭೈರೇಗೌಡನಿಂದ ಕೆಂಪನಾಚೇಗೌಡನವರೆಗಿನ ಅರಸರನ್ನು ಆರಂಭಕಾಲದ ಯಲಹಂಕ ನಾಡಪ್ರಭುಗಳೆಂದು ಇಲ್ಲಿ ಪರಿಭಾವಿಸಲಾಗಿದೆ. ಇವರ ಬಗೆಗೆ ಯಾವುದೇ ವಿಶ್ವಾಸಾರ್ಹ ಆಧಾರಗಳು ಕಂಡುಬರುವುದಿಲ್ಲ. ಸಾಕಷ್ಟು ಗೊಂದಲಗಳಿಂದ ಕೂಡಿರುವ ಆರಂಭಿಕ ಅರಸರ ಬಗೆಗೆ ಮೌಖಿಕ ಆಕರಗಳು ಇವೆಯೇ ವಿನಃ ಸಮಕಾಲೀನ ಯಾವ ಶಾಸನಗಳೂ ಕಂಡುಬರುವುದಿಲ್ಲ. ಬಹುತೇಕ ಊಹೆಯ ಮೇಲೆ ಕೆಲವೊಂದು ಶಾಸನಗಳನ್ನು

ರಣಭೈರೇಗೌಡನಿಗೆ ಸಂಬಂಧಿಸಿದ್ದೆಂದು ಹೇಳಲಾಗುತ್ತದೆ. ಆನಂತರ ಕಾಲದ ಒಂದೆರಡು ಶಾಸನಗಳಲ್ಲಿ ಮಾತ್ರ ಆರಂಭಕಾಲದ ಅರಸರ ಉಲ್ಲೇಖಗಳು ಪ್ರಾಸಂಗಿಕವಾಗಿ ಬಂದಿವೆ.

"ಬೆಂಗಳೂರಿನ ಐತಿಹಾಸಿಕ ಬಖೈರು" ದಾಖಲೆಯಲ್ಲಿ ಯಲಹಂಕ ನಾಡಪ್ರಭುಗಳ ಮನೆತನದ ಮೊದಲ ಅರಸನೆಂದು ಹೇಳಲಾಗುವ ರಣಭೈರೇಗೌಡನ ಉಲ್ಲೇಖವೇ ಇರುವುದಿಲ್ಲ. ಇಲ್ಲಿ ಜಯಗೌಡನನ್ನು ಈ ಮನೆತನದ ಮೊದಲ ವ್ಯಕ್ತಿ ಎಂದು ಗುರುತಿಸಲಾಗಿದೆ. ಬಖೈರಿನ ಪ್ರಕಾರ ಯಲಹಂಕ ನಾಡಪ್ರಭುಗಳ ವಂಶಾವಳಿ ಹೀಗಿದೆ:[35]

**ಜಯಗೌಡ (ಕ್ರಿ.ಶ. 1418–1433)**

|

**ಗಿಡ್ಡೇಗೌಡ (ಕ್ರಿ.ಶ. 1433–1443)**

|

**ಕೆಂಪನಾಚೇಗೌಡ (ಕ್ರಿ.ಶ. 1443–1513)**

|

**ಕೆಂಪೇಗೌಡ (ಕ್ರಿ.ಶ. 1513–?)**

|

**ಇಮ್ಮಡಿ ಕೆಂಪೇಗೌಡ (ಕ್ರಿ.ಶ. 1647–1701)**

ಕುಕ್ಕೆ ಸುಬ್ರಹ್ಮಣ್ಯದ ಶಾಸನದಲ್ಲಿ ಕೂಡ ರಣಭೈರೇಗೌಡ ಬರುವುದಿಲ್ಲ. ಅಲ್ಲಿಯೂ ಜಿಯ್ಯಪ್ಪ (ಜಯಗೌಡ)ನಿಂದ ಯಲಹಂಕ ನಾಡಪ್ರಭುಗಳ ವಂಶಾವಳಿಯನ್ನು ಹೇಳಲಾಗಿದೆ. ಆದರೆ ಈ ಶಾಸನದಲ್ಲಿ ಶಕವರ್ಷಂಗಳು 1631ರ ಬಹುಧಾನ್ಯ ಸಂವತ್ಸರ ಎಂದು ಉಲ್ಲೇಖವಾಗಿದೆ. ಆದರೆ ಬಹುಧಾನ್ಯ ಸಂವತ್ಸರವು 1620ನೇ ಶಕವರ್ಷಕ್ಕೆ ಸರಿ ಹೊಂದುವುದರಿಂದ ಈ ಶಾಸನದ ಕಾಲವನ್ನು ಕ್ರಿ.ಶ. 1698 ಎಂದು **ಎಂ.ಎ.ಆರ್**.ನಲ್ಲಿ ಗುರುತಿಸಿದ್ದಾರೆ. ಈ ಶಾಸನವು ಮುಮ್ಮಡಿ ದೊಡ್ಡವೀರಪ್ಪಗೌಡನಿಗೆ ಸೇರಿರುವುದರಿಂದ ಕ್ರಿ.ಶ. 1698 ಸರಿಯಾದುದೆಂದು ಒಪ್ಪಬಹುದು. ಈ ಶಾಸನದ ಪ್ರಕಾರ ಯಲಹಂಕ ನಾಡಪ್ರಭುಗಳ ವಂಶಾವಳಿಯು ಈ ರೀತಿ ಇದೆ.[36]

**ಜಿಯ್ಯಪ್ಪ**

**|**

**ಗಿಡ್ಡಪ್ಪ**

**|**

**ನಾಚಪ**

**|**

**ಕೆಂಪನಾಚಪ**

**|**

**ಹಿರಿಯ ಕೆಂಪಮಹೀಪಾಲ**

**|**

**ಇಮ್ಮಡಿ ಕೆಂಪಭೂವರ**

**|**

**ಮುಮ್ಮಡಿ ಕೆಂಪ**

**|**

**ವೀರಭೂಪಾಲ**

**|**

**ಕೆಂಪವೀರಮಹಿಪಾಲ**

ಯಲಹಂಕ ನಾಡಪ್ರಭುಗಳ ಬಗೆಗೆ ಮೊದಲು ಕೃತಿಯನ್ನು ರಚಿಸಿದ ಎಸ್.ಕೆ. ನರಸಿಂಹಯ್ಯ ಅವರ ಪ್ರಕಾರ ಯಲಹಂಕ ನಾಡಪ್ರಭುಗಳ ವಂಶಾವಳಿಯಲ್ಲಿ ರಣಭೈರೇಗೌಡನೇ ಈ ವಂಶಾವಳಿಯ ಮೊದಲ ವ್ಯಕ್ತಿ (ಅನುಬಂಧ–3 ನೋಡಿ). ಆದರೆ ಕರ್ಲಮಂಗಲ ಶ್ರೀಕಂಠಯ್ಯನವರು ಹೊಯ್ಸಳ ದೊರೆ ನರಸಿಂಹನು ಆಳುವಾಗ 'ದೇಚಿದೇವರಸ'ನು ಯಲಹಂಕದ ನೆಲೆವೀಡಿನಲ್ಲಿ ಆಳುತ್ತಿದ್ದನೆಂದು ದೊಡ್ಡಬಳ್ಳಾಪುರದ ಕೋಟೆಯ ಸು.ಕ್ರಿ.ಶ. 1267ರ ಶಿಲಾಶಾಸನದಲ್ಲಿ ಹೇಳಿದ್ದು, ಈತನನ್ನು ಈ ಮನೆತನದ ಹಿರಿಯನೆಂದು ಊಹಿಸಬಹುದೆಂದು ಹೇಳಿದ್ದಾರೆ.[37] ಆದರೆ, ದೇಚಿದೇವರಸನು ಕೆಂಪೇಗೌಡನ ವಂಶಕ್ಕೆ ಸೇರಿದ ಹಿರಿಯನೆಂಬುದು ಕೇವಲ ಊಹೆಯೇ ಹೊರತು, ಹಾಗೆ ಹೇಳಲು ಯಾವುದೇ ಪೂರಕ ಆಧಾರಗಳಿಲ್ಲ.

ಹಿರಿಯ ವಿದ್ವಾಂಸರಾದ ಹ.ಕ. ರಾಜೇಗೌಡ ಅವರು ಯಲಹಂಕ ನಾಡಪ್ರಭುಗಳು ಹೊಯ್ಸಳ ವಂಶದ ಪ್ರಸಿದ್ಧ ರಾಜನಾದ ವಿಷ್ಣುವರ್ಧನ ಮತ್ತು ಶಾಂತಲೆಯರ ಮಗಳಾದ ಹರಿಯಾಲದೇವಿಯ ಸಾಕು ಮಗನಾದ ದೇವರಸೇಗೌಡನ ವಂಶಸ್ಥರು ಎಂದು ಹೇಳುತ್ತಾರೆ. ಅವರ ಪ್ರಕಾರ ವಿಷ್ಣುವರ್ಧನ ಶಾಂತಲೆಯರ ಮಗಳಾದ ಹರಿಯಾಲದೇವಿಯನ್ನು ಹೊಯ್ಸಳರ

ಪ್ರಸಿದ್ಧ ಪ್ರಧಾನಿ ಗಂಗರಾಜನ ತಂಗಿ ಮತ್ತು ಮರಿಯಣ್ಣ ದಂಡನಾಯಕನ ಹಿರಿಯ ಮಗ ಭರತ ದಂಡನಾಯಕನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಈ ಭರತ ದಂಡನಾಯಕ ಶಿವಗಂಗೆ ಪ್ರಾಂತ್ಯದ ಸಾಮಂತನಾಗಿದ್ದನು. ಈತನು ಹೊಯ್ಸಳ ರಾಜ್ಯದ ಅಂತಃಕಲಹದಲ್ಲಿ ಮರಣಿಸಿದ ನಂತರ ಹರಿಯಾಲದೇವಿಯು ತನ್ನ ಗಂಡನ ತಮ್ಮನಾದ ಮೈದುನ ದೇವರಸನನ್ನು ದತ್ತು ತೆಗೆದುಕೊಂಡಳು. ಈ ದೇವರಸನೇ ಮುಂದೆ ದೇವರಸೇಗೌಡ ಎಂಬ ಹೆಸರಿನಲ್ಲಿ ಶಿವಗಂಗೆ ಪ್ರಾಂತ್ಯದ ಕುರುವಗೆರೆ ನಾಡನ್ನು ಆಳುತ್ತಿದ್ದನು. ಈತನೇ ಕೆಂಪೇಗೌಡನ ವಂಶದ ಮೊದಲನೆಯ ದೊರೆ. ದೇವರಸಗೌಡನ ಮಗ ಜಯಗೌಡನೆಂದು ಹೇಳುತ್ತಾರೆ. ಆದರೆ, ಈ ವಾದ ಒಂದು ಊಹಾತ್ಮಕ ವಾದವಾಗಿದ್ದು, ಇದರಲ್ಲಿ ಯಾವುದೇ ಹುರುಳಿಲ್ಲ. ಈ ವಾದವನ್ನು ಎಂ.ಜಿ. ಮಂಜುನಾಥ ಅವರು ಸಮರ್ಥವಾಗಿ ಅಲ್ಲಗಳೆದಿದ್ದಾರೆ.[38]

### 3.3.1 ರಣಭೈರೇಗೌಡ

ರಣಭೈರೇಗೌಡನೇ ಆವತಿ ನಾಡಪ್ರಭುಗಳ ಮನೆತನದ ಮೂಲಪುರುಷ. ಅವನಿಗೆ ಮಲ್ಲಭೈರೇಗೌಡ, ಸಣ್ಣಭೈರೇಗೌಡ, ವೀರೇಗೌಡ, ಮರೀಗೌಡ, ಗಿಡ್ಡೇಗೌಡ, ತಮ್ಮೇಗೌಡ, ಗಿಡ್ಡಪ್ಪಗೌಡ ಎಂಬ ಏಳು ಮಂದಿ ಸೋದರರು ಮತ್ತು ಜಯಗೌಡ, ಸಣ್ಣಭೈರೇಗೌಡ, ಹಾವಳಿ ಭೈರೇಗೌಡ, ಮಲ್ಲಭೈರೇಗೌಡ ಎಂಬ ನಾಲ್ಕು ಮಂದಿ ಮಕ್ಕಳು ಇದ್ದರೆಂದು ಎಸ್.ಕೆ. ನರಸಿಂಹಯ್ಯನವರು ದಾಖಲಿಸುತ್ತಾರೆ.[39] ಎಂ.ಜಿ. ಮಂಜುನಾಥ ಅವರು "ರಣಭೈರೇಗೌಡನ ಕಾಲದಲ್ಲಿ ಆವತಿಯು ಅವರ ಆಡಳಿತ ಕೇಂದ್ರವಾಗಿತ್ತು. ಆನಂತರದ ಕಾಲದಲ್ಲಿ ಈ ವಂಶದ ಅರಸರು ತಮ್ಮ ಪಾಳೆಯಪಟ್ಟನ್ನು ವಿಸ್ತರಿಸಿ ಯಲಹಂಕ್ಕಾಗೆ ರಾಜಧಾನಿಯನ್ನು ವರ್ಗಾಯಿಸಿದರೆಂದು ನಂಬಲಾಗಿದೆ. ಆದರೆ ಆವತಿ ನಾಡಪ್ರಭುಗಳಿಗೂ ಯಲಹಂಕ ನಾಡಪ್ರಭುಗಳಿಗೂ ಯಾವ ಸಂಬಂಧವೂ ಇರಲಿಲ್ಲವೆಂದು ಶಾಸನಗಳ ಪರಿಶೀಲನೆಯಿಂದು ತಿಳಿದುಬರುತ್ತದೆ. ಆವತಿನಾಡು ಕ್ರಿ.ಶ. 17ನೆಯ ಶತಮಾನದಲ್ಲಿ ಅಸ್ತಿತ್ವಕ್ಕೆ ಬಂದರೆ ಯಲಹಂಕ ನಾಡಪ್ರಭುಗಳ ವಂಶವು 17ನೆಯ ಶತಮಾನಕ್ಕಿಂತಲೂ ನೂರಾರು ವರ್ಷಗಳಷ್ಟು ಮೊದಲೇ ಅಸ್ತಿತ್ವದಲ್ಲಿತ್ತು" ಎಂದು ಅಭಿಪ್ರಾಯ ಪಟ್ಟಿದ್ದಾರೆ.[40] ಆದರೆ ಇವರ ಅಭಿಪ್ರಾಯವನ್ನು ಒಪ್ಪಲಾಗದು. ಆವತಿನಾಡಪ್ರಭುಗಳು ಕೂಡ 15ನೆಯ ಶತಮಾನದಲ್ಲಿಯೇ ಆಳ್ವಿಕೆಯನ್ನು ಆರಂಭಿಸಿದ ಬಗೆಗೆ ಪಿ.ವಿ. ಕೃಷ್ಣಮೂರ್ತಿ, ಎಚ್.ಎಂ. ಬೋರಯ್ಯ ಅವರು ಶಾಸನಾಧಾರಗಳನ್ನು ನೀಡಿದ್ದಾರೆ.[41] ಜೊತೆಗೆ ಆವತಿ ನಾಡಪ್ರಭುಗಳಿಗೂ ಯಲಹಂಕ ನಾಡಪ್ರಭುಗಳಿಗೂ ಯಾವ ಸಂಬಂಧವೂ ಇರಲಿಲ್ಲವೆಂದು ವಾದಿಸುವುದಕ್ಕೆ ಬಲವಾದ ಆಧಾರಗಳ ಅಗತ್ಯವಿದೆ. ಏಕೆಂದರೆ, ಆವತಿ

ನಾಡಪ್ರಭುಗಳ ಮತ್ತು ಯಲಹಂಕ ನಾಡಪ್ರಭುಗಳ ಮೂಲದ ಬಗೆಗೆ ಇರುವ ಕಥನಗಳಲ್ಲಿ ಮತ್ತು ಮೂಲ ಪುರುಷರೆಂದು ಹೇಳಲಾಗುವ ವ್ಯಕ್ತಿಗಳ ಹೆಸರಿನಲ್ಲಿ ಸಾಮ್ಯತೆಗಳಿವೆ. ಜೊತೆಗೆ ಎರಡೂ ಮನೆತನಗಳು ಸಮಕಾಲೀನವಾದ ಮನೆತನಗಳೇ ಆಗಿವೆ. ಆದ್ದರಿಂದ ಅಷ್ಟು ಸುಲಭವಾಗಿ ಎರಡೂ ಮನೆತನಗಳ ನಡುವೆ ಸಂಬಂಧವಿರಲಿಲ್ಲ ಎಂದು ತಳ್ಳಿ ಹಾಕಲು ಸಾಧ್ಯವಿಲ್ಲ.

ಎಂ.ಜಿ. ಮಂಜುನಾಥ ಅವರು **'ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ'**ದ ಪ್ರಸ್ತಾವನೆಯಲ್ಲಿ ಈ ವಂಶದ ಮೂಲ ಪುರುಷರನ್ನು ಕುರಿತು ಹೀಗೆ ದಾಖಲಿಸುತ್ತಾರೆ:[42] **"**ಈ ಸಂಪುಟದಲ್ಲಿ ಈ ವಂಶದ ಮೂಲಪುರುಷರ ಬಗ್ಗೆ ಅಮೂಲ್ಯ ಮಾಹಿತಿ ನೀಡುವ ಹಲವು ಶಾಸನಗಳನ್ನು ಸೇರಿಸಲಾಗಿದೆ. ಕ್ರಿ.ಶ. 1341ರ ನಾಗಶೆಟ್ಟಿಹಳ್ಳಿ ಶಾಸನದ ಪ್ರಕಾರ ಹೊಯ್ಸಳ ಚಕ್ರವರ್ತಿ 3ನೇ ವೀರಬಲ್ಲಾಳನು ತಿರುವಣ್ಣಾಮಲೈಯಿಂದ ರಾಜ್ಯಭಾರ ಮಾಡುತ್ತಿದ್ದಾಗ ಅವರ ಅರಮನೆಯ ಯಕ್ಕಟಿಗನಾದ (ಏಕಾಂತದ ಆಪ್ತಸಮಾಲೋಚಕ) ಶ್ರೀಮನ್ಮಹಾಸಾಮಂತಾಧಿಪತಿ ಮೀಸೆಯರ ಗಂಡ ಚಿಕ್ಕ ಭೈರೆಯನಾಯಕ ರಾಜ್ಯಭಾರ ಮಾಡುತ್ತಿದ್ದನು. ಅವನ ಆರು ಮಂದಿ ಸೋದರರ ಹೆಸರುಗಳು ಸಹಾ ಈ ಶಾಸನದಲ್ಲಿ ದೊರೆಯುತ್ತದೆ. ಭೈರಿದೇವ (ಭೈರೇಗೌಡ), ತಾಮಿಯಪ್ಪ (ಗೋಪಾಲಕೃಷ್ಣ ಸ್ವಾಮಿಯಪ್ಪ), ಕನ್ನಗೌಡ, ಮಾರೇಗೌಡ ಮುಂತಾದವರು. ಇವರಲ್ಲಿ ಮಾರೇಗೌಡ ಮರಣಿಸಿದಾಗ ಮಾರೇಗೌಡನ ಮಗ ಮಾರಪ್ಪ ಎಂಬುವರಿಗೆ ನಾಗಶೆಟ್ಟಿಹಳ್ಳಿ ಹಾಗೂ ಅದಕ್ಕೆ ಸೇರಿದ ಹಿರಿಯ ಕೆರೆಯಲ್ಲಿ ಅರ್ಧಭಾಗವನ್ನು ಹಾಗೂ ಜಾಲ ಮತ್ತು ಮಾಚಹಳ್ಳಿಗೆ ಸೇರಿದ ಭೂಮಿಯನ್ನು ದಾನವಾಗಿ ಕೊಟ್ಟ ವಿವರಗಳಿವೆ. ಹೊಯ್ಸಳ ಚಕ್ರವರ್ತಿ 3ನೇ ವೀರಬಲ್ಲಾಳನು ಮಲ್ಲಿಕಾಫರನ ದಂಡಯಾತ್ರೆಯಿಂದ ಬೇಸತ್ತು ತಿರುವಣಾಮಲೈಗೆ ಹೋಗುವ ಸಂದರ್ಭದಲ್ಲಿ ತನಗೆ ತೀರಾ ಆಪ್ತನಾಗಿದ್ದ ತನ್ನ (ಯಕ್ಕಟಿಗ) ಆಪ್ತಸಮಾಲೋಚಕನಾಗಿದ್ದ ಭೈರಿದೇವ ಅಥವಾ ಭೈರೇಗೌಡನನ್ನು ತನ್ನ ಮಹಾಸಾಮಂತನನ್ನಾಗಿ ನೇಮಿಸಿರಬಹುದೆಂದು ತೋರುತ್ತದೆ**"** ಎಂದಿದ್ದಾರೆ.

ಮೊದಲನೆಯದಾಗಿ, ಮಂಜುನಾಥ ಅವರು ಹೇಳುವಂತೆ ಈ ಶಾಸನದಲ್ಲಿ ಆರು ಮಂದಿ ಸೋದರರ ಹೆಸರು ಕಂಡುಬರುವುದಿಲ್ಲ. ಅವರು ಹೇಳುವ ಮಾರೇಗೌಡನ ಬದಲಿಗೆ ಮಾಚೀದೇವನ ಹೆಸರು ಇದೆ. ಈ ಶಾಸನಗಳಲ್ಲಿ ಬರುವ ಹೆಸರುಗಳಿಗೂ ಐತಿಹ್ಯದಲ್ಲಿ ಹೇಳಲಾಗುವ ಏಳುಮಂದಿ ಸೋದರರ ಹೆಸರುಗಳಿಗೂ ತಾಳೆಯಾಗುವುದಿಲ್ಲ.

ಎರಡನೆಯದಾಗಿ, ಮಲ್ಲಿಕಾಫರನ ದಂಡಯಾತ್ರೆಗೂ, ವೀರಬಲ್ಲಾಳನು ತಿರುವಣಾಮಲೈಗೆ ಹೋಗುವುದಕ್ಕೂ ಸಂಬಂಧವಿಲ್ಲ. ಏಕೆಂದರೆ, ಮಲ್ಲಿಕಾಫರನು ದಂಡಯಾತ್ರೆ ಕೈಗೊಂಡಿದ್ದು,

1310ರ ಸುಮಾರಿನಲ್ಲಿ. ಆದರೆ ಬಲ್ಲಾಳನು 1339ರಲ್ಲಿಯೂ ಹಳೆಬೀಡಿನಲ್ಲಿಯೇ ಇದ್ದನು. ಜೊತೆಗೆ ತಮಿಳುನಾಡಿನ ಭಾಗಗಳೇನೂ ಮಲ್ಲಿಕಾಫರನ ದಾಳಿಯಿಂದ ಮುಕ್ತವಾಗಿರಲಿಲ್ಲ. ಆದ್ದರಿಂದ ಈ ಅಭಿಪ್ರಾಯವನ್ನು ಒಪ್ಪುವುದು ಕಷ್ಟವಾಗುತ್ತದೆ.

ಯಲಹಂಕದಲ್ಲಿ 'ಏಳು ಮಂದಿ ವೀರಣ್ಣ'ರ ಗುಡಿ ಇದೆ. ಅದರಲ್ಲಿ ಏಳು ಸಹೋದರರ ಅಥವಾ ಹಿರಿಯರ ವಿಗ್ರಹಳಿವೆ. ಐತಿಹ್ಯಗಳ ಪ್ರಕಾರ ಇವುಗಳನ್ನು ಯಲಹಂಕ ನಾಡಪ್ರಭುಗಳ ಮನೆತನದ ಏಳು ಸಹೋದರರ ವಿಗ್ರಹಳೆಂದು ಗುರುತಿಸುತ್ತಾರೆ ಎಂದು ಎಸ್.ಕೆ. ಅರುಣಿ ಅವರು ದಾಖಲಿಸಿದ್ದಾರೆ.[43] ಎಂ.ಜಿ. ನಾಗರಾಜ್ ಅವರು ಸಹ ಏಳು ಮಂದಿ ವೀರಣ್ಣರು ರಣಭೈರೇಗೌಡ ಮತ್ತು ಸೋದರರರೆಂದು ಜನ ಹೇಳುವುದಾಗಿ ಒಂದು ಕಡೆ ಉಲ್ಲೇಖಿಸಿದ್ದಾರೆ. ಆದರೆ, ಎಸ್.ಕೆ. ನರಸಿಂಹಯ್ಯನವರು ರಣಭೈರೇಗೌಡನಿಗೆ ಏಳುಮಂದಿ ಸೋದರರಿದ್ದರೆಂದು ಅವರ ಹೆಸರುಗಳನ್ನು ನೀಡಿದ್ದಾರೆ. ಅದನ್ನು ಈ ಮೊದಲು ನೋಡಿದ್ದೀರಿ. ಅಂದರೆ, ರಣಭೈರೇಗೌಡನೂ ಸೇರಿದರೆ ಎಂಟು ಮಂದಿಯಾಗುತ್ತಾರಾದ್ದರಿಂದ ಈ ಏಳು ಮಂದಿ ವೀರಣ್ಣರಿಗೂ, ರಣಭೈರೇಗೌಡನ ಸೋದರರಿಗೂ ಸಂಬಂಧವಿರಲಾರದು. ಈ ವಿಗ್ರಹಗಳನ್ನು ಕುರಿತು ಅರುಣಿ ಅವರು "ಸಪ್ತ ಸಹೋದರರ ವಿಗ್ರಹ ರಚಿಸುವುದು ಹಾಗೂ ಅವುಗಳನ್ನು ಪೂಜಿಸುವ ಸಂಪ್ರದಾಯ ವಿಶಿಷ್ಟವಾಗಿದ್ದು, ಪ್ರಾಚೀನ ಕಾಲದ ಸಪ್ತಮಾತೃಕೆಯರನ್ನು ಆರಾಧಿಸುವ ಸಂಪ್ರದಾಯದ ಅನುಕರಣೆಯಾಗಿದೆ ಎಂದು ಭಾವಿಸಬಹುದು" ಎಂದು ಟಿಪ್ಪಣಿ ಮಾಡುತ್ತಾರೆ.[44]

ರಣಭೈರೇಗೌಡನನ್ನು ಉಲ್ಲೇಖಿಸುವ ಶಾಸನಗಳೆಂದು ಹೇಳಲಾಗುವ 14ನೆಯ ಶತಮಾನದ ಕೆಲವು ಶಾಸನಗಳಲ್ಲಿ ಭೈರಿದೇವ ಅಥವಾ ಭೈರೇಗೌಡ ಎಂಬಾತನು ಯಲಹಂಕ ನಾಡಗೌಡನಾಗಿದ್ದ ಬಗೆಗೆ ತಿಳಿದು ಬರುತ್ತದೆ.[45] ಆದರೆ ಆತನೇ ರಣಭೈರೇಗೌಡನೆಂದು ಊಹೆ ಮಾಡಬಹುದೇ ಹೊರತು ಖಚಿತವಾಗಿ ಹೇಳಲು ಆಧಾರಗಳ ಕೊರತೆ ಇವೆ.

### 3.3.2 ಜಯಪ್ಪಗೌಡ

ಕ್ರಿ.ಶ. 1698ರ ಕುಕ್ಕೆ ಸುಬ್ರಹ್ಮಣ್ಯ ತಾಮ್ರಶಾಸನದಲ್ಲಿ ಜಿಯ್ಯಪ್ಪ (ಜಯಪ್ಪಗೌಡ)ನನ್ನು ಮೊದಲ ಅರಸ ಎನ್ನಲಾಗಿದೆ.[46] ಜಯಗೌಡನ ಬಗೆಗೆ ಒಂದು ಜಾನಪದ ಐತಿಹ್ಯವಿದೆ. ಆವತಿ ಪ್ರದೇಶದಲ್ಲಿ ರಣಭೈರೇಗೌಡ ಮತ್ತು ಅವನ ಸೋದರರು ನೆಲೆಸಿದ್ದಾಗ ಜಯಗೌಡ ಜನಿಸಿದ್ದ. ಮಗುವನ್ನು ಸಮೀಪದ ಹತ್ತಿಯ ಮರಕ್ಕೆ ಕಟ್ಟಿದ ತೊಟ್ಟಿಲಲ್ಲಿ ಮಲಗಿಸಿದ್ದಾಗ ಸೂರ್ಯನ ಬಿಸಿಲು ಮಗುವಿನ ಮುಖದ ಮೇಲೆ ಬೀಳುತ್ತಿತ್ತು. ಆಗ ಹತ್ತಿ ಮರದ ಪೊಟರೆಯಲ್ಲಿದ್ದ ಸರ್ಪವೊಂದು ಮಗುವಿನ ಮುಖಕ್ಕೆ ಅಡ್ಡಲಾಗಿ ಹೆಡೆಬಿಚ್ಚಿ ಮರೆಮಾಡಿತು. ದಾರಿಯಲ್ಲಿ ಹೋಗುತ್ತಿದ್ದ

ಜೋಯಿಸನೊಬ್ಬ ಈ ವಿಸ್ಮಯವನ್ನು ನೋಡಿ ಅಚ್ಚರಿಪಟ್ಟು ಈ ಮಗುವಿಗೆ ರಾಜಯೋಗವಿದೆ ಎಂದು ಹೇಳಿದನು. ಹಾವು, ಹತ್ತಿ ಸೇರಿ ಆವುತಿ> ಆವತಿ ಎಂದು ಆ ಸ್ಥಳವನ್ನು ಕರೆಯಲಾಯಿತು. ಮುಂದೆ ಜಯಗೌಡನು ಉಳುಮೆ ಮಾಡುವಾಗ ಕೊಪ್ಪರಿಗೆ ಹೊನ್ನು ಸಿಗಲು, ಆತ ರಾಜ್ಯಕಟ್ಟಿ ಯಲಹಂಕವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಲಾರಂಭಿಸಿದನು ಎಂದು ಹೇಳಲಾಗುತ್ತದೆ. ಇಂತಹ ಐತಿಹ್ಯಗಳು ಅನೇಕ ರಾಜಮನೆತನಗಳ ರಾಜರ ಬಗೆಗೆ ಇವೆ. ಕೆಳದಿಯ ನಾಯಕರಲ್ಲಿ ಭದ್ರಪ್ಪನ ಬಗೆಗೂ ಇಂತಹ ಐತಿಹ್ಯ ಇರುವುದನ್ನು ಅಧ್ಯಾಯ ಎರಡರಲ್ಲಿ ನೋಡಿದ್ದೇವೆ. ಹಿರಿಯ ಕೆಂಪೇಗೌಡನ ಬಗೆಗೂ ಕೂಡ ಇಂತಹ ಐತಿಹ್ಯಗಳನ್ನು ಹೇಳುವುದುಂಟು. ಇಂತಹ ಕಥನಗಳು ಆ ನಂತರದ ಕಾಲದಲ್ಲಿ ಹುಟ್ಟಿಕೊಂಡವುಗಳಾಗಿದ್ದು, ಈ ಮನೆತನದ ಸ್ಥಾಪಕ ದೈವಾಂಶ ಸಂಭೂತ ಎಂಬುದನ್ನು ಸಾರುವ ಉದ್ದೇಶಗಳು ಈ ಐತಿಹ್ಯಗಳ ಹಿಂದಿರುವ ಸಾಧ್ಯತೆಗಳಿವೆ.

ಜಯಗೌಡನ ಬಗೆಗೂ ಕೂಡ ಸಮಕಾಲೀನ ಯಾವುದೇ ವಿಶ್ವಾಸಾರ್ಹ ಆಕರಗಳಿಲ್ಲ. ಎಂ.ಜಿ. ಮಂಜುನಾಥ್ ಅವರು ಸಂಪಾದಿಸಿರುವ **'ಬೆಂಗಳೂರಿನ ಬಖೈರುಗಳು'** ಕೃತಿಯಲ್ಲಿ ಜೇಯಗೌಡನು ಯಲಹಂಕ ನಾಡಪ್ರಭುಗಳ ಮೂಲ ಪುರುಷ ಎಂಬುದಾಗಿ "ಬೆಂಗಳೂರು ಬಖೈರು"ನಲ್ಲಿ ದಾಖಲಾಗಿದೆ. ಜಯಗೌಡನ ತಂದೆ ರಣಭೈರೇಗೌಡನ ಬಗೆಗೆ "ಬೆಂಗಳೂರಿನ ಐತಿಹಾಸಿಕ ಬಖೈರು"ನಲ್ಲಿ ಹೇಳುತ್ತದೆ.[47] ಜಯಗೌಡನು ಬೆಂಗಳೂರಿನ ಒಂದು ಹೋಬಳಿಯಾದ ಯಲಹಂಕ ತಾಲ್ಲೂಕನ್ನು ಪೆನುಗೊಂಡೆಯ ಅರಸನಿಂದ ಪಡೆದು ಆಳಲಾರಂಭಿಸಿದನೆಂದೂ, ಅವನ ಆಳ್ವಿಕೆಯ ಕಾಲ ಕ್ರಿ.ಶ. 1418–1433 ಎಂದೂ, "ಬೆಂಗಳೂರಿನ ಬಖೈರು" ದಾಖಲಿಸುತ್ತದೆ.[48] ಆದರೆ ಈ ಬಖೈರುಗಳು ರಚನೆಯಾಗಿದ್ದು 19ನೆಯ ಶತಮಾನದ ಮೊದಲ ದಶಕದಲ್ಲಿ. ಆದ್ದರಿಂದ ಇವುಗಳು ಅಂದು ಜನಜನಿತವಾದ ಐತಿಹ್ಯಗಳಿಂದ ಅಥವಾ ಹೇಳಿಕೆಗಳಿಂದ ರೂಪುಗೊಂಡಿರುತ್ತವೆ.

### 3.3.3 ಗಿಡ್ಡೇಗೌಡ (1433–1443)

ಜಯಗೌಡನ ನಂತರ ಅವನ ಮಗನಾದ ಗಿಡ್ಡೇಗೌಡನು ಆನೆಗೊಂದಿಯ ನರಪತಿ ಸಂಸ್ಥಾನಕ್ಕೆ ಅಧೀನವಾಗಿ ಯಲಹಂಕ ನಾಡನ್ನು ನಾಡಪ್ರಭುವಾಗಿ ಹತ್ತು ವರ್ಷಗಳ (ಕ್ರಿ.ಶ. 1433–1443)ರವರೆಗೆ ಆಳಿದನೆಂದು ಬಖೈರು ಹೇಳುತ್ತದೆ.[49] ಈತನನ್ನು ಜಯಗೌಡನ ನಂತರ ಅಧಿಕಾರಕ್ಕೆ ಬಂದವನೆಂದು ಈ ಮೊದಲು ನೋಡಿದ ಕುಕ್ಕೆ ಸುಬ್ರಹ್ಮಣ್ಯದ ಶಾಸನ ಕೂಡ ದಾಖಲಿಸಿದೆ.

ಗಿಡ್ಡೇಗೌಡನಿಗೆ ಕೆಲವು ವರ್ಷಗಳವರೆಗೆ ಮಕ್ಕಳಿರಲಿಲ್ಲ. ಆ ಸಂದರ್ಭದಲ್ಲಿ ಭೈರವ ದೇವರನ್ನು ಪತ್ನಿಯಾದ ಕೆಂಪಮ್ಮಳಿಗೆ ಗಂಡು ಸಂತಾನವಾದರೆ ತನ್ನ ವಂಶದಲ್ಲಿ ಹುಟ್ಟುವ ಮಕ್ಕಳಿಗೆ ತನ್ನ ಹೆಸರನ್ನು ಇಡುವುದಾಗಿ ಹರಕೆ ಹೊತ್ತನಂತೆ. ಕೆಲಕಾಲದ ನಂತರ ಕೆಂಪಮ್ಮದೇವಿಯ ಕೃಪೆಯಿಂದ ಗಂಡು ಮಗುವಿನ ಜನನವಾಯಿತು. ಆ ಮಗುವಿಗೆ ದೇವಿಯ ಹೆಸರಾಗಿ 'ಕೆಂಪ' ಎಂದೂ, ರೂಪವಂತನಾಗಿದ್ದನೆಂದು 'ನಾಚ' ಎಂತಲೂ, ಗ್ರಾಮದ ಮುಖ್ಯಸ್ಥ ಎಂಬ ಅರ್ಥದಲ್ಲಿ 'ಗೌಡ' ಎಂದೂ, ಇಷ್ಟನ್ನೂ ಒಟ್ಟಾಗಿಸಿ ಕೆಂಪನಾಚಯಗೌಡ ಎಂಬ ಹೆಸರನ್ನು ಇಟ್ಟನೆಂದು ಬಖೈರಿನಲ್ಲಿ ದಾಖಲಿಸಿದೆ.[50] ಬಹುಶಃ ಅಂದಿನಿಂದ 'ಕೆಂಪ' ಹೆಸರಿನ 8 ಮಂದಿ ಈ ಮನೆತನದಲ್ಲಿ ಆಳಿದರು.

ಎಂ.ಜಿ. ನಾಗರಾಜ್ ಅವರು 1740ರ ಸುಮಾರಿಗೆ ರಚನೆಯಾಗಿರಬಹುದಾದ **'ಹಾಲಾಸ್ಯ ಮಹಾತ್ಮೆ'**ಯಲ್ಲಿ ಯಲಹಂಕ ನಾಡಪ್ರಭುಗಳ ಉಲ್ಲೇಖವಾಗಿರುವುದನ್ನು ಗುರುತಿಸಿದ್ದಾರೆ. ಈ ಕೃತಿಯ ಕರ್ತೃವಾದ ಗುಮ್ಮಳಾಪುರ ವೆಂಕಟೇಶನು ಕಳಲೆ ನಂಜರಾಜನ ಆಶ್ರಯದಲ್ಲಿದ್ದನು. ಈ ಕೃತಿಯಲ್ಲಿ ಪ್ರಾಸಂಗಿಕವಾಗಿ ಯಲಹಂಕ ನಾಡಪ್ರಭುಗಳ ವಂಶದ ಅರಸರ ಹೆಸರುಗಳನ್ನು ಉಲ್ಲೇಖಿಸಲಾಗಿದ್ದು, ಆ ಹೆಸರುಗಳಲ್ಲಿ ಗಿಡ್ಡಪ್ಪನ ಹೆಸರು ಇರುವುದನ್ನು ಗುರುತಿಸಿದ್ದಾರೆ.[51]

### 3.3.4 ನಾಚಪ್ಪಗೌಡ / ನಂಜೇಗೌಡ (?)

ಬಖೈರುಗಳಲ್ಲಿ ನಾಚಪ್ಪಗೌಡನನ್ನು ಉಲ್ಲೇಖಿಸಿಲ್ಲ. ಆದರೆ, 1578ರ ಮಾಸ್ತಿಯ ಶಾಸನ[52] ಮತ್ತು 1698ರ ಕುಕ್ಕೆ ಸುಬ್ರಹ್ಮಣ್ಯದ ಶಾಸನ[53] ಉಲ್ಲೇಖಿಸುತ್ತವೆ. ಈತನ ಕಾಲವನ್ನು ಎಂ.ಎಚ್. ಬೋರಯ್ಯನವರು ಕ್ರಿ.ಶ. 1443–1512ವರೆಗೆ ಎಂದು ಗುರುತಿಸಿದ್ದಾರೆ.[54] ಆದರೆ ಅವರು ಯಾವುದೇ ಸ್ಪಷ್ಟ ಆಧಾರಗಳನ್ನು ನೀಡಿರುವುದಿಲ್ಲ.

### 3.3.5 ಕೆಂಪನಾಚೇಗೌಡ (?)

ಗಿಡ್ಡೇಗೌಡನ ನಂತರ ಅಧಿಕಾರಕ್ಕೆ ಬಂದ ಕೆಂಪನಾಚೇಗೌಡನು ರಾಜ್ಯವನ್ನು ಧರ್ಮದಿಂದಲೂ ನ್ಯಾಯದಿಂದಲೂ 70 ವರ್ಷಗಳ ಕಾಲ ಆಳಿದನೆಂದೂ, ಕ್ರಿ.ಶ. 1450ರಲ್ಲಿ ಕಬಕೆರೆ(?) ಎಂಬ ಗ್ರಾಮನ್ನು ಅಗ್ರಹಾರವನ್ನಾಗಿ ಪರಿವರ್ತಿಸಿ ಹಲವು ಗೋತ್ರಗಳು, ಸೂತ್ರಗಳಿಗೆ ಸೇರಿದ ಬ್ರಾಹ್ಮಣ ಶ್ರೇಷ್ಠರಿಗೆ ದಾನಮಾಡಿದನೆಂದು ಬಖೈರು ಉಲ್ಲೇಖಿಸುತ್ತದೆ.[55] ಆದರೆ ಕ್ರಿ.ಶ. 1578ರ ಮಾಸ್ತಿ ಶಾಸನದಲ್ಲಿ ಈತನನ್ನು ನಂಜೇಗೌಡನ ಮಗನೆಂದು ಹೇಳಿದೆ.[56] ಇವನ ಕಾಲದ ಕೆಲವು ಶಾಸನಗಳಲ್ಲಿ ಕೆಂಪನಾಚೇಗೌಡನ ಹೆಸರು ಪ್ರಸ್ತಾಪವಾಗಿದೆ. ಅವುಗಳಲ್ಲಿ ಒಂದು ಅವನನ್ನು

ಬೆಂಗಳೂರು ಕೆಂಪನಾಚೇಗೌಡನೆಂದು ಕರೆದಿರುವುದು ವಿಶೇಷ.[57] ಕೆಂಪನಾಚೇಗೌಡನ ಕಾಲದ ಬಗೆಗೆ ಸ್ಪಷ್ಟತೆ ಇಲ್ಲ. ಎಚ್.ಎಂ. ಬೋರಯ್ಯನವರು ಇವನ ಕಾಲವನ್ನು ಕ್ರಿ.ಶ. 1512–1532 ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇದಕ್ಕೆ ಅವರು ಆಧಾರವಾಗಿ **ಯ.ನಾ.ಶಾ.ಸಂಪುಟ**ದ ಪರಿಷ್ಕೃತ ಎನ್ನಲಾದ ಪಾಠವನ್ನು ಬಳಸಿಕೊಂಡಿದ್ದಾರೆ.

**ಯ.ನಾ.ಶಾ.ಸಂಪುಟ**ದಲ್ಲಿರುವ ಕ್ರಿ.ಶ. 1512ರ ಕಲ್ಯ ಮತ್ತು 1515ರ ಕೆಂಪೋಹಳ್ಳಿಯ ಪರಿಷ್ಕೃತ ಶಿಲಾಶಾಸನಗಳು ವಿಜಯನಗರ ಸಾಮ್ರಾಟ ಕೃಷ್ಣದೇವರಾಯನ ಕಾಲದಲ್ಲಿ ಕೆಂಪನಂಜೇಗೌಡನು ಯಲಹಂಕನಾಡಿನ ಅಮರನಾಯಕನಾಗಿ, ನಾಡಪ್ರಭುವಾಗಿ ಆಳುತ್ತಿದ್ದ ಬಗ್ಗೆ ತಿಳಿಸುತ್ತವೆ. ಆದರೆ ಈ ಪರಿಷ್ಕೃತ ಪಾಠದ ವಿಶ್ವಾಸಾರ್ಹತೆಯ ಬಗೆಗೆ ಅನುಮಾನಗಳಿವೆ.[58] ಕೆಂಪನಂಜೇಗೌಡನನ್ನು ಉಲ್ಲೇಖಿಸುವ ಮತ್ತೊಂದು ಶಾಸನವೆಂದರೆ 1578ಕ್ಕೆ ಸೇರಿದ ಮಾಸ್ತಿ ಶಾಸನ.[59] ಇದರಲ್ಲಿಯೂ ಕೆಂಪನಾಚೇ(ನಂಜೇ)ಗೌಡನ ಉಲ್ಲೇಖವಿದೆ. ಆದರೆ ಇದೊಂದು ಕೂಟ ಶಾಸನವೆಂಬ ಅನುಮಾನಗಳಿವೆ. ಆನಂತರದ ಶಾಸನ ಕ್ರಿ.ಶ. 1588ರ ಶಿವಗಂಗೆಯ ಗಂಟೆ ಮೇಲಿನ ಶಾಸನ.[60] ನಂತರದ ಕಾಲಕ್ಕೆ ಸೇರಿದ ಇಮ್ಮಡಿ ಕೆಂಪೇಗೌಡನ ಶಿವಗಂಗೆಯ ಒಂದನೆಯ ಶಿಲಾಶಾಸನ,[61] ಕ್ರಿ.ಶ. 1597ಕ್ಕೆ ಸೇರಿದ ಬೆಂಗಳೂರು ಪೌರೋಹಿತ್ಯದ ಕಾಗದದ ದಾನ ಶಾಸನ[62] ಮತ್ತು ಕ್ರಿ.ಶ. 1605ರ ಐಗಂಡಪುರ ಶಾಸನ[63] ಹಾಗೂ ಕ್ರಿ.ಶ. 1605ರ ಕೆಂಪಾಪುರ ಅಗ್ರಹಾರ ಶಾಸನಗಳಲ್ಲಿಯೂ (ಶಾ.ಸಂ.–50) ಕೆಂಪನಾಚೇ(ನಂಜೇ)ಗೌಡನ ಉಲ್ಲೇಖಗಳಿವೆ. ಆದರೆ ಇವುಗಳಲ್ಲಿ ಶಿವಗಂಗೆಯ ಶಾಸನವು **ಯ.ನಾ.ಶಾ.ಸಂ.** ಸಂಪಾದಕರ ತೀವ್ರ ಊಹಾಪಾಠದಿಂದ ಕೂಡಿದೆ. ಕಾಗದದ ದಾನ ಶಾಸನ, ಐಗಂಡಪುರದ ಶಾಸನ ಹಾಗೂ ಕೆಂಪಾಪುರ ಅಗ್ರಹಾರದ ಶಾಸನಗಳು ಕೂಟ ಶಾಸನಗಳೆಂಬ ಶಂಕೆ ಇದೆ. ಇವುಗಳನ್ನು ಹೊರತುಪಡಿಸಿದರೆ, ಕ್ರಿ.ಶ. 1606ರ ಗುಮ್ಮಳಾಪುರದ ಶಾಸನದಲ್ಲಿ (ಶಾ.ಸಂ–51) ಹಾಗೂ ಶಿವಗಂಗೆಯ ಗಂಗಾಧರೇಶ್ವರ ದೇವಾಲಯದಲ್ಲಿರುವ ಕೆಂಪೇಗೌಡನ ಕಂಚಿನ ಪ್ರತಿಮೆಯ ಪೀಠದ ಮೇಲಿನ (ಕ್ರಿ.ಶ. 1608) ಶಾಸನದಲ್ಲಿ[64] ಕೆಂಪೇಗೌಡನ ತಂದೆಯನ್ನು **'ಕೆಂಪನಾಚಯಗೌಡ'** ಎಂದು ಉಲ್ಲೇಖಿಸಿವೆ. ಬಹುತೇಕ ಕೂಟಶಾಸನಗಳ ನಡುವೆಯೂ ಕೆಲವಾದರು ಶಾಸನಗಳಲ್ಲಿ ಕೆಂಪನಾಚೇಗೌಡನ ಉಲ್ಲೇಖಗಳಿವೆ. ಆದ್ದರಿಂದ ಕೆಂಪನಾಚೇಗೌಡನನ್ನು ಯಲಹಂಕ ನಾಡಪ್ರಭುಗಳ ಮನೆತನದ ಮೊದಲ ಐತಿಹಾಸಿಕ ವ್ಯಕ್ತಿ ಎಂದು ಒಪ್ಪಬಹುದು.

ಕಲ್ಯ ಶಾಸನವನ್ನು (ಕ್ರಿ.ಶ. 1512) **ಯ.ನಾ.ಶಾ.ಸಂ.** ಸಂಪಾದಕರು ಪರಿಷ್ಕರಿಸಿರುವ ಪಾಠದ ಪ್ರಕಾರ ಕೆಂಪನಾಚೇಗೌಡನು ಕೃಷ್ಣದೇವರಾಯನ ಅಧೀನದಲ್ಲಿ ಅಮರನಾಯಕನಾಗಿ ಯಲಹಂಕ

ನಾಡನ್ನು ಆಳುತ್ತಿದ್ದನು. ಈ ಅಮರನಾಯಕ ಎಂಬ ರಾಜಕೀಯ ವರ್ಗವು 16ನೆಯ ಶತಮಾನದ ಆರಂಭ ಕಾಲ ಅಂದರೆ ಕೃಷ್ಣದೇವರಾಯನ ಆಳ್ವಿಕೆಯ ಕಾಲ (ಕ್ರಿ.ಶ. 1509–1529)ದಲ್ಲಿ ಮಹತ್ವವನ್ನು ಪಡೆದುದಾಗಿ ಡಿ.ಎನ್. ಯೋಗೀಶ್ವರಪ್ಪ ಅವರು ತಮ್ಮ ಇತ್ತೀಚಿನ ಕೃತಿ **ನಾಯಕತನ ಪದ್ಧತಿ**ಯಲ್ಲಿ ತಿಳಿಸಿದ್ದಾರೆ. ಮುಂದುವರೆದು ನಾಯಕತನವನ್ನು ವ್ಯಕ್ತಿಯ ಅರ್ಹತೆ ಮತ್ತು ಚಾರಿತ್ರ್ಯವನ್ನು ಅಳತೆಗೋಲಾಗಿಟ್ಟುಕೊಂಡು ನೀಡಲಾಗುತ್ತಿತ್ತು. ಅವನ ಧೈರ್ಯ ಸಾಹಸಗಳು ಮುಖ್ಯವಾಗಿದ್ದವು ಎಂದಿದ್ದಾರೆ.[65] ಅದೇ ರೀತಿ ವಿಜಯನಗರ ಸಾಮ್ರಾಜ್ಯದಲ್ಲಿ ನಾಯಕರ ಆಯ್ಕೆ ಅರ್ಹತೆಯ ಆಧಾರದ ಮೇಲೆ ನಡೆದಿದ್ದರೂ ಸ್ಥಳೀಯ ವೀರರನ್ನು ಅವರ ಸ್ವಂತ ಪ್ರದೇಶದಲ್ಲಿ ನಾಯಕರನ್ನಾಗಿ ಮಾಡಿರುವುದು ಅಪರೂಪ ಎಂಬ ಜಪಾನಿನ ಇತಿಹಾಸಕಾರ ಖರಾಷಿಮಾ ಅವರ ಅಭಿಪ್ರಾಯವನ್ನು ಉಲ್ಲೇಖಿಸಿದ್ದಾರೆ. ತಮಿಳುನಾಡಿನ ಶಾಸನಗಳಲ್ಲಿ ಕಂಡುಬರುವ ನಾಯಕರು ಬಹುಪಾಲು ಕನ್ನಡಿಗರು ಇಲ್ಲವೆ ತೆಲುಗರು. ಅದೇ ರೀತಿ ಕರ್ನಾಟಕದಲ್ಲಿ ಕಂಡುಬರುವ ನಾಯಕರು ತೆಲುಗು ಇಲ್ಲವೆ ತಮಿಳುನಾಡಿನಿಂದ ಬಂದವರಾಗಿದ್ದಾರೆ ಎಂದು ದೀರ್ಘವಾದ ಪಟ್ಟಿಯನ್ನೆ ನೀಡಿದ್ದಾರೆ.[66] ಉದಾ.: ಹಾಗಲವಾಡಿ (ತೆಲುಗು), ಚಿತ್ರದುರ್ಗ (ತಮಿಳುನಾಡು), ಬೇಲೂರು (ತೆಲುಗು), ಯಲಹಂಕ (ತಮಿಳುನಾಡು), ನಾಯಕನಹಟ್ಟಿ (ತೆಲುಗು), ಪಾವಗಡ (ತೆಲುಗು), ಬೂದಿಹಾಳು (ತೆಲುಗು), ಚನ್ನಪಟ್ಟಣ (ತೆಲುಗು), ಆವತಿ (ತಮಿಳುನಾಡು), ಗುಮ್ಮನಾಯಕನಪಾಳ್ಯ (ತೆಲುಗು), ಮಾಸ್ತಿ (ತಮಿಳುನಾಡು) ಇತ್ಯಾದಿ. ಈ ಹಿನ್ನೆಲೆಯಲ್ಲಿ ಸ್ಪಷ್ಟವಾಗುವುದೇನೆಂದರೆ, ಯಲಹಂಕ ನಾಡಪ್ರಭುಗಳ ಮನೆತನದ ಮೊದಲ ಮತ್ತು ಐತಿಹಾಸಿಕ ವ್ಯಕ್ತಿ ಕೆಂಪನಾಚೇ(ನಂಜೇ)ಗೌಡನೇ ಆಗಿದ್ದಾನೆ. ಬಹುಶಃ ವಿಜಯನಗರದ ಸೇನೆಯಲ್ಲಿದ್ದುಕೊಂಡು ಅಥವಾ ಸ್ಥಳೀಯವಾಗಿ ತನ್ನ ಶೌರ್ಯ ಮತ್ತು ಪರಾಕ್ರಮಗಳಿಂದ ವಿಜಯನಗರದ ಅರಸ ಕೃಷ್ಣದೇವರಾಯನ ಗಮನ ಸೆಳೆದ ಕೆಂಪನಾಚೇ(ನಂಜೇ)ಗೌಡನನ್ನು ತಮಿಳು ಪ್ರದೇಶದಿಂದ ಬೆಂಗಳೂರು ಪರಿಸರದ ಯಲಹಂಕ ನಾಡಿಗೆ ಅಮರನಾಯಕನಾಗಿ ನೇಮಿಸಿರಬೇಕು. ಆದ್ದರಿಂದ ಯಲಹಂಕ ನಾಡಪ್ರಭುಗಳನ್ನು ಕಂಚಿ ಕಡೆಯಿಂದ ಬಂದವರು ಎಂಬ ಪ್ರತೀತಿ ರೂಢಿಯಲ್ಲಿ ಬಂದಿರುವಂತೆ ತೋರುತ್ತದೆ. ಇದರಿಂದ ಸ್ಪಷ್ಟವಾಗುವ ಮತ್ತೊಂದು ಅಂಶವೆಂದರೆ ಕೆಂಪನಾಚೇಗೌಡನು ಕೃಷ್ಣದೇವರಾಯನ ಸಮಕಾಲೀನನಾಗಿದ್ದು, ಅಮರನಾಯಕತನವನ್ನು ಪಡೆದನಾದ್ದರಿಂದ ಇವನೇ ಯಲಹಂಕ ನಾಡಪ್ರಭುಗಳ ಮೂಲಪುರುಷ. ಬಹುತೇಕ ವಿದ್ವಾಂಸರು ಐತಿಹ್ಯ ಮತ್ತು ಮೌಖಿಕ ಕಥನಗಳನ್ನು ಆಧರಿಸಿ ಈವರೆಗೆ ವ್ಯಕ್ತಿಪಡಿಸಿರುವ ಈ ಮನೆತನದ ಯಾವೊಬ್ಬ ಆರಂಭಿಕ ವ್ಯಕ್ತಿಯೂ ಐತಿಹಾಸಿಕ ವ್ಯಕ್ತಿ ಎಂದು ಒಪ್ಪಲು ಸಮರ್ಥ ಆಧಾರಗಳಿಲ್ಲ. ಅಲ್ಲದೆ, 14ನೇ ಶತಮಾನದ

ಶಾಸನಗಳಲ್ಲಿ ಕಂಡುಬರುವ ಸಮಸ್ತ ಗೌಡ ಪ್ರಜೆಗಳ ಪಟ್ಟಿಯಲ್ಲಿರುವ ಮಯಿಲೇಗೌಡ, ಮಾರೇಗೌಡ, ಮಲ್ಲಯ್ಯಗೌಡ, ತಾಮಿಯಪ್ಪ ಮೊದಲಾದವರಿಗೂ ಮತ್ತು ಐತಿಹ್ಯಗಳಲ್ಲಿ ಕೇಳಿ ಬರುವ ಯಲಹಂಕ ನಾಡಪ್ರಭುಗಳ ಮೂಲಪುರುಷ ಎನ್ನುವ ಭೈರೇಗೌಡ ಮತ್ತು ಸೋದರರಿಗೂ ಯಾವುದೇ ಸಂಬಂಧವಿರಲಾರದು. ಏಕೆಂದರೆ, ಐತಿಹ್ಯಗಳಲ್ಲಿ ಬರುವ ತಲೆಮಾರುಗಳಿಗೂ ಮತ್ತು 14ನೇ ಶತಮಾನದಿಂದ ಕೆಂಪೇಗೌಡನ ಅವಧಿವರೆಗೂ ಒಂದು ವೈಜ್ಞಾನಿಕ ಕಾಲಾನ್ವಯವನ್ನು ಮಾಡಲು ಸಾಧ್ಯವಿಲ್ಲ. ಸಮಸ್ತ ಗೌಡ ಪ್ರಜೆಗಳನ್ನು ಉಲ್ಲೇಖಿಸುವ ಮೊದಲ ಶಾಸನದ ಕಾಲವಾದ ಕ್ರಿ.ಶ. 1327 ರಿಂದ ಕೆಂಪನಾಚೇ(ನಂಜೇ)ಗೌಡನ ಮೊದಲ ಶಾಸನ ಎನ್ನಲಾಗುವ ಕ್ರಿ.ಶ. 1512ರವರೆಗಿನ ಸುಮಾರು 185 ವರ್ಷಗಳ ಅವಧಿಯನ್ನು ರಣಭೈರೇಗೌಡ, ಅವನ ಮಗ ಜಯಗೌಡ ನಂತರದ ಗಿಡ್ಡೆಗೌಡ ಆಳಿದರೆಂದು ಹೇಳುವುದು ಅವೈಜ್ಞಾನಿಕವಾಗುತ್ತದೆ. ಮೂರು ತಲೆಮಾರುಗಳ ಆಳ್ವಿಕೆಯು ಗರಿಷ್ಠ 120–130 ವರ್ಷಗಳನ್ನು ದಾಟಲಾರದು.[67]

ಆರಂಭಿಕ ಯಲಹಂಕ ನಾಡಪ್ರಭುಗಳ ಬಗೆಗೆ ನಿಖರವಾದ ಆಧಾರಗಳು ಇಲ್ಲದೇ ಇದ್ದರೂ, ಈವರೆಗೆ ಅನೇಕ ವಿದ್ವಾಂಸರು ಇತಿಹಾಸವನ್ನು ಶೋಧಿಸುವ ಪ್ರಯತ್ನವನ್ನು ನಡೆಸಿದ್ದಾರೆ. ಈ ಪ್ರಯತ್ನಗಳು ಒಂದು ವಿಧದಲ್ಲಿ ಕುರುಡರು ಆನೆಯನ್ನು ಮುಟ್ಟಿ ವರ್ಣಿಸಿದಂತಿದೆ ಎಂದರೆ ತಪ್ಪಾಗದು. ಏಕೆಂದರೆ, ಮೌಖಿಕ ಆಕರಗಳ ಸಹಾಯದಿಂದ ಊಹೆಯ ಬೆನ್ನೇರಿ ಹೊರಟವರೇ ಹೆಚ್ಚು. ಅದರ ಬದಲಿಗೆ ಸಮಕಾಲೀನ ಶಾಸನಗಳನ್ನು ಸಮಗ್ರವಾಗಿ ಪರಿಶೀಲಿಸಿದ್ದರೆ ಸರಿಯಾದ ಚಿತ್ರಣ ಲಭ್ಯವಾಗುತ್ತಿತ್ತು. ಆದರೆ ಈ ನಿಟ್ಟಿನಲ್ಲಿ ಸುಂಕಂ ಗೋವರ್ಧನ ಹಾಗೂ ಗಂಗಾಂಬಿಕೆ ಎಸ್ ಅವರ ಪ್ರಯತ್ನ ಮುಖ್ಯವಾದುದು.[68]

ಗೋವರ್ಧನ ಅವರು ಹೊಯ್ಸಳೋತ್ತರ ಕಾಲದಿಂದ ಕೆಂಪೇಗೌಡನ ಕಾಲಘಟ್ಟದವರೆಗಿನ ಬೆಂಗಳೂರು ಪರಿಸರವನ್ನು ಕುರಿತು ನಡೆಸಿರುವ ಗಂಭೀರ ಅಧ್ಯಯನದಲ್ಲಿ ಹಲವು ಮಹತ್ತರವಾದ ಫಲಿತಗಳನ್ನು ಕಂಡುಕೊಂಡಿದ್ದಾರೆ. ಮುಖ್ಯವಾಗಿ ಅವರು ಗುರುತಿಸಿರುವ ಅಂಶಗಳನ್ನು ಹೀಗೆ ಪಟ್ಟಿ ಮಾಡಬಹುದು.[69]

1) ಈ ಅವಧಿಯ ಬೆಂಗಳೂರು ಪರಿಸರದಲ್ಲಿ ಯಾವುದೇ ಒಬ್ಬ ಹಾಗೂ ಒಂದು ಕುಟುಂಬದ ನಿರಂಕುಶ ಪ್ರಭುತ್ವವು ಇರಲಿಲ್ಲ.
2) ಬೆಂಗಳೂರು ಪರಿಸರದ ರಾಜಕೀಯ ಇತಿಹಾಸದಲ್ಲಿ ಕುಕ್ಕಲನಾಡು ಹಾಗೂ ಕುಕ್ಕಲನಾಡಿನ ಪ್ರಭುಗಳು ಮುನ್ನಲೆಯಲ್ಲಿದ್ದರು. ಕುಕ್ಕಲನಾಡನ್ನೂ ಒಳಗೊಂಡು ಅದರ

ಸುತ್ತಮುತ್ತಲಿನ ಪ್ರಾಂತ್ಯವನ್ನು ಈ ಅರಸರ ಪ್ರಭಾವಶಾಲಿಯ ಪ್ರಭಾವಳಿಯೇ ನೋಡಿಕೊಳ್ಳುತ್ತಿತ್ತು. ಹೀಗಿರುವಲ್ಲಿ ಯಲಹಂಕ ನಾಡಿಗೆ ವಿಶೇಷವಾದ ಪ್ರಾಶಸ್ತ್ಯವಿದ್ದು ಯಲಹಂಕ ನಾಡಪ್ರಭುಗಳಾದ ಕೆಂಪೇಗೌಡನ ಪೂರ್ವಿಕರು ಅತ್ಯಂತ ಪ್ರಾಚೀನ ಕಾಲದಿಂದಲೂ ಯಲಹಂಕ ನಾಡಿನ ಆಳರಸರಾಗಿದ್ದರು ಎಂಬ ವಿದ್ವಾಂಸರ ಅಭಿಪ್ರಾಯಗಳಲ್ಲಿ ಯಾವುದೇ ಹುರುಳಿಲ್ಲ.

3) ಈ ನಾಡಿನ ಆಡಳಿತವನ್ನು ಅನೇಕ ಗೌಡಪ್ರಜೆಗಳು ನೋಡಿಕೊಂಡಿರುವುದರಲ್ಲೂ ಯಾವುದೇ ಅನುಮಾನಗಳಿಲ್ಲ. ಆದರೆ ಬಹಳ ಮುಖ್ಯವಾಗಿ ಗಮನಿಸಬೇಕಾಗಿರುವುದು ಯಲಹಂಕ ನಾಡಿನ ಆಳರಸರಿಗೂ ಹಾಗೂ ಹಿರಿಯ ಕೆಂಪೇಗೌಡರಿಗೂ ಯಾವುದೇ ರೀತಿಯ ಸಂಬಂಧವಿರುವುದು ಖಚಿತವಾದ ಆಧಾರಗಳಿಂದ ದೃಡೀಕರಿಸಲಾಗುವುದಿಲ್ಲ. ಆಳರಸ ಎನ್ನುವ ಪರಿಕಲ್ಪನೆಯೇ ಈ ಕಾಲಕ್ಕೆ ಇರಲಿಲ್ಲ. ಮಹಾಸಾಮಂತಾಧಿಪತಿಯು ಸಾಮ್ರಾಜ್ಯಕ್ಕೆ ಉತ್ತರದಾಯಿಯಾಗಿದ್ದನು. ಎಲ್ಲಾ ನಾಡಿನ ಸುಂಕವನ್ನು ಸಂಗ್ರಹಿಸಿ ಈ ಮಹಾಸಾಮಂತಾಧಿಪತಿಗೆ ವರ್ಗಾವಣೆ ಮಾಡಲು ಈ ನಾಡಗೌಡರು ಪ್ರಮುಖ ಕಾರಣಕರ್ತರಾಗಿದ್ದರು.

4) ಕೆಂಪೇಗೌಡರಿಗೆ ಸಂಬಂಧಿಸಿದಂತೆ ಯಾವ ದಾಖಲೆಗಳೂ ಅವರ ಪೂರ್ವಿಕರು ಯಲಹಂಕ ನಾಡನ್ನು ಆಳಿರುವುದಕ್ಕೆ ಸ್ಪಷ್ಟವಾದ ಪುರಾವೆಗಳನ್ನು ಒದಗಿಸುವುದಿಲ್ಲ.

5) ಇದುವರೆಗೂ ಗಮನಿಸಿರುವ ಹಾಗೆ ಯಲಹಂಕ ನಾಡಿನ ಆಡಳಿತವು ಬೇರೆಬೇರೆ ದರ್ಜೆಯ ಅಧಿಕಾರಿಗಳದ್ದಾಗಿತ್ತು. ಒಂದು ವೇಳೆ ಯಲಹಂಕ ನಾಡಿನ ಆಡಳಿತವು ಒಂದು ಸ್ಥಿರ ಆಡಳಿತ ಘಟಕವಾಗಿದ್ದಿದ್ದರೆ ಅದನ್ನು ಕೆಂಪೇಗೌಡರ ವಂಶೀಯರೇ ಆಳ್ವಿಕೆ ನಡೆಸಿದ್ದರೆ ಅದರ ಖಚಿತವಾದ ದಾಖಲೆಗಳು ಸಣ್ಣಪ್ರಮಾಣದಲ್ಲಾದರೂ ಸಿಗಬೇಕಾಗಿತ್ತಲ್ಲವೇ? ಕೇವಲ ಹೆಸರುಗಳ ಬಗ್ಗೆ ಇರುವ ಸಮೀಕರಣದಿಂದ ಕೆಂಪೇಗೌಡನ ಪೂರ್ವಿಕರಿಗೂ ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ ಗೌಡಪ್ರಜೆಗಳಿಗೂ ಸಂಬಂಧವನ್ನು ಕಲ್ಪಿಸುವುದು ಸೂಕ್ತವಾಗುವುದಿಲ್ಲ ಎಂದಿದ್ದಾರೆ.

ಇಲ್ಲಿ ಗೋವರ್ಧನ ಅವರು ಹಲವು ಮೌಲಿಕ ಪ್ರಶ್ನೆಗಳನ್ನು ಎತ್ತುವುದರ ಜೊತೆಗೆ ಕಾರಣಗಳನ್ನೂ ಗುರುತಿಸಲು ಪ್ರಯತ್ನಿಸಿದ್ದಾರೆ.

ಒಟ್ಟಾರೆ, ನಮಗೆ ಆರಂಭ ಕಾಲದ ಯಲಹಂಕ ನಾಡಪ್ರಭುಗಳ ಬಗೆಗೆ ಮೌಖಿಕ ಸಾಹಿತ್ಯಗಳು ಮತ್ತು ಆನಂತರದ ಸಾಹಿತ್ಯಗಳಲ್ಲಿ ಉಲ್ಲೇಖಗಳು ದೊರಕುತ್ತವೆಯೇ ಹೊರತು ಸಮಕಾಲೀನ ದಾಖಲೆಗಳು ದೊರಕುವುದಿಲ್ಲ. ಆನಂತರದ ಕಾಲದಲ್ಲಿನ ಆಕರಗಳು ಹೇಳುವಂತೆ ರಣಭೈರೇಗೌಡನಿಂದ ಆರಂಭಿಸಿ ಕೆಂಪನಾಚೇಗೌಡನವರೆಗೆ ಬರುವ ಈ ಮನೆತನದ ಅರಸರಿಗೆ ಚಾರಿತ್ರಿಕ ಕಾಲಘಟ್ಟದಲ್ಲಿ ಯಾವುದೇ ಸ್ಥಾನವನ್ನು ಗುರುತಿಸಲು ಸಾಧ್ಯವಿಲ್ಲ. ಕೆಂಪನಂಜೇಗೌಡನಿಗೆ ಕೃಷ್ಣದೇವರಾಯ ನಾಯಕತನವನ್ನು ಕೊಟ್ಟನೆಂಬ ಶಾಸನ ಕೂಡ ವಿಶ್ವಾಸಾರ್ಹವಲ್ಲ ಎಂಬುದನ್ನು ಅಡಿಟಿಪ್ಪಣಿಯಲ್ಲಿ ಚರ್ಚಿಸಲಾಗಿದೆ. ಕೆಂಪೇಗೌಡನ ಮನೆತನದವರಿಗೆ ಈ ಮೊದಲೇ ನಾಯಕತನ ದೊರೆತ್ತಿದ್ದರೆ, ಕ್ರಿ.ಶ. 1532ರ ದಾಸರಹಳ್ಳಿಯ ಶಾಸನವು ಉಲ್ಲೇಖಿಸುವಂತೆ ಕೆಂಪದೇವರಸನು ಅಚ್ಯುತರಾಯನಿಂದ ನಾಯಕತನವನ್ನು ಪಡೆಯುವ ಅಗತ್ಯವಿರುತ್ತಿರಲಿಲ್ಲ ಎಂಬ ಗೋವರ್ಧನ ಅವರ ಪ್ರಶ್ನೆ ಮುಖ್ಯವಾದುದು. ಏಕೆಂದರೆ, ನಾಯಕತನವು ವಂಶಪಾರಂಪರ್ಯ ವಾದ್ದರಿಂದ ಪದೇ ಪದೇ ಕೊಡುವ ಪ್ರಮೇಯ ಕೂಡ ಬರುತ್ತಿರಲಿಲ್ಲ. ಆದರೆ ಗೋವರ್ಧನ ಅವರು ಹೇಳುವಂತೆ "ಅಮರನಾಯಕರು ಯಾರೂ ಹೊರಗಿನಿಂದ ಬಂದಂತೆ ತೋರುವುದಿಲ್ಲ. ಬದಲಿಗೆ ಅವರೆಲ್ಲರೂ ಸ್ಥಳೀಯರೇ ಆಗಿದ್ದರು"[70] ಎಂಬ ಅಭಿಪ್ರಾಯ ಸೂಕ್ತವಾಗಿ ತೋರುವುದಿಲ್ಲ. ಏಕೆಂದರೆ, ದಕ್ಷಿಣ ಕರ್ನಾಟಕದ ನಾಡಪ್ರಭುಗಳಲ್ಲಿ ಬಹುತೇಕರು ಬೇರೆ ಬೇರೆ ಪ್ರದೇಶದಿಂದ ವಲಸೆ ಬಂದವರೇ ಆಗಿದ್ದಾರೆ. ಹೀಗೆ ಬಂದವರು ತಮ್ಮ ಪರಾಕ್ರಮ ಮೆರೆದು ನಾಯಕತನವನ್ನು ಪಡೆದುಕೊಂಡವರೇ ಆಗಿದ್ದಾರೆ.

ಇದೇನೆ ಇರಲಿ, ಈ ರೀತಿಯ ಮನೆತನದ ಪೂರ್ವವೃತ್ತಾಂತವನ್ನು ನಂತರದ ಕಾಲದಲ್ಲಿ ಸೃಷ್ಟಿಸಿಕೊಳ್ಳುತ್ತಿರುವುದರ ಹಿಂದಿನ ಉದ್ದೇಶವನ್ನು ಶೋಧಿಸುವ ಅಧ್ಯಯನಗಳು ಜನಪದದ ಹಿನ್ನೆಲೆಯಲ್ಲಿ ಆಗಬೇಕಿದೆ.

## 3.4 ಉಚ್ಛ್ರಾಯ ಕಾಲದ ಯಲಹಂಕ ನಾಡಪ್ರಭುಗಳು

ಯಲಹಂಕ ನಾಡಪ್ರಭುಗಳ ಅಧ್ಯಯನದ ಸಂದರ್ಭದಲ್ಲಿ ಹಿರಿಯ ಕೆಂಪೇಗೌಡನ ಕಾಲಾವಧಿಯಿಂದ ಖಚಿತ ಶಾಸನಾಧಾರಗಳು ದೊರಕುತ್ತವೆ. ಈ ಕಾಲಾವಧಿಯಲ್ಲಿ ಬರುವ ಅರಸರಾದ ಹಿರಿಯ ಕೆಂಪೇಗೌಡ ಅಥವಾ ಒಂದನೆಯ ಕೆಂಪೇಗೌಡ, ನಂತರ ಅವನ ಮಗ ಇಮ್ಮಡಿ ಕೆಂಪೇಗೌಡ, ಆನಂತರ ಮುಮ್ಮಡಿ ಕೆಂಪೇಗೌಡ ಮತ್ತು ಇಮ್ಮಡಿ ಹಿರಿಯ ಕೆಂಪೇಗೌಡ ಮುಖ್ಯವಾದವರು. ಈ ಕಾಲಾವಧಿಯಲ್ಲಿ ಯಲಹಂಕ ನಾಡು ತನ್ನ ಗರಿಷ್ಠ ವ್ಯಾಪ್ತಿಯನ್ನು ಕಂಡಿತು. ಯಲಹಂಕ ನಾಡಿನಲ್ಲಿ ನಗರ–ಪಟ್ಟಣಗಳು, ದೇವಾಲಯಗಳು, ಕೆರೆ, ಕೋಟೆಗಳು

ಹೆಚ್ಚಿನ ಸಂಖ್ಯೆಯಲ್ಲಿ ಈ ಕಾಲಾವಧಿಯಲ್ಲಿಯೇ ರಚನೆಯಾದವು. ರಾಜಕೀಯವಾಗಿ, ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಒಂದು ವಿಧದಲ್ಲಿ ಉತ್ಕರ್ಷದ ಕಾಲ ಇದಾಗಿತ್ತು. ಇದನ್ನು ಮುಂದೆ ಅವಲೋಕಿಸಲಾಗಿದೆ.

### 3.4.1 ಹಿರಿಯ ಕೆಂಪೇಗೌಡ (1532–1597)

ಯಲಹಂಕ ನಾಡಪ್ರಭುಗಳ ಮನೆತನದಲ್ಲಿ ಅತ್ಯಂತ ಪ್ರಸಿದ್ಧನಾದ ಅರಸ ಎಂದರೆ ಹಿರಿಯ ಕೆಂಪೇಗೌಡ. ಈತನನ್ನು ಒಂದನೆಯ ಕೆಂಪೇಗೌಡ ಎಂದು ಕೂಡ ಗುರುತಿಸಲಾಗುತ್ತದೆ. ಈತನು ಆಧುನಿಕ ಬೆಂಗಳೂರು ನಗರವನ್ನು ನಿರ್ಮಾಣ ಮಾಡಿಸಿದ ಕಾರಣಕ್ಕಾಗಿ ಬೆಂಗಳೂರು ಕೆಂಪೇಗೌಡ ಎಂದೂ ಪ್ರಸಿದ್ಧನಾಗಿದ್ದಾನೆ. ಹಿರಿಯ ಕೆಂಪೇಗೌಡನ ಸಮಕಾಲೀನ ಮೈಸೂರಿನ ಒಡೆಯರ್‌ಗಳಾದ ಮುಮ್ಮಡಿ ಚಾಮರಾಜ ಒಡೆಯರ್ (1513–1553), ಇಮ್ಮಡಿ ತಿಮ್ಮರಜ ಒಡೆಯರ್ (1553–1572), ನಾಲ್ವಡಿ ಚಾಮರಾಜ ಒಡೆಯರ್ (1572–1576), ಐದನೆಯ ಚಾಮರಾಜ ಒಡೆಯರ್ (1576–1578) ಮತ್ತು ರಾಜ ಒಡೆಯರ್ (1578–1617). ಇತರ ಅರಸರುಗಳೆಂದರೆ– ನಂಜರಾಯ, ಕೆಂಚಸೋಮಣ್ಣ, ಯಳಂದೂರಿನ ದೊರೆ ಚೆನ್ನೊಡೆಯ, ಬರಗಿರಿಯ ದೇವೀನಾಯಕ, ಬುಕ್ಕಣ್ಣೊಡೆಯ, ಸಿದ್ಧಮಲ್ಲಿನಾಯಕ, ಶಿವಶರಣ ಸಂಕಣ್ಣ ನಾಯಕ, ಜಂಬೂರ ದಾನಿವಾಸಿ ದೊರೆಗಳು, ಬಿಜ್ಜಾವರದ ಪ್ರಭು ಚಿಕ್ಕಣ್ಣಗೌಡ, ಸುಗಟೂರಿನ ತಮ್ಮಣ್ಣಗೌಡ, ತಲಕಾಡಿನ ಚಂದ್ರಶೇಖರ, ಭೋಗವಾಡಿಯ ಲಿಂಗರಾಯ, ಸೋಲೂರಿನ ಬಸವಪ್ಪ, ಬಾಣಾವರದ ಸಿದ್ಧಪ್ಪ, ಹೊಸದುರ್ಗದ ಕಲ್ಲಪ್ಪ ಮೊದಲಾದವರು ಪ್ರಮುಖರಾದವರು.

#### 3.4.1.1 ಕಾಲ ನಿಷ್ಕರ್ಶೆ

ಇವನ ಆಳ್ವಿಕೆಯ ಕಾಲದ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.[71] ಬಹುತೇಕ ವಿದ್ವಾಂಸರ ಪ್ರಕಾರ ಕೆಂಪೇಗೌಡನ ಆಳ್ವಿಕೆಯು ಕೃಷ್ಣದೇವರಾಯನ ಕಾಲದಿಂದ ಆರಂಭವಾದಂತಾಗುತ್ತದೆ. ಬೆಂಗಳೂರಿನ ದಾಸರಹಳ್ಳಿಯ ಕ್ರಿ.ಶ. 1532ರ ಕಾಲಕ್ಕೆ ಸೇರಿದ ಶಾಸನದ ಪ್ರಕಾರ, ಕೆಂಪೇಗೌಡ (ಕೆಂಪದೇವರಸಗೌಡ)ನಿಗೆ ವಿಜಯನಗರದ ದೊರೆ ಅಚ್ಯುತರಾಯನು ನಾಯಕತನಕ್ಕೆ ವಹಿಸಿಕೊಟ್ಟ ಪ್ರದೇಶವನ್ನು ಯಲಹಂಕರಾಜ್ಯ ಎಂದು ಕರೆಯಲಾಗಿದೆ. ಅಂದರೆ ಹಿರಿಯ ಕೆಂಪೇಗೌಡ 1532ರ ವೇಳೆಗೆ ಸಾಮಂತ ರಾಜ್ಯವೊಂದರ ಅರಸರಾಗಿದ್ದನು. 1540ರ ವೇಳೆಗೆ ಕೆಂಪೇಗೌಡ ವಿಜಯನಗರ ಸಾಮ್ರಾಜ್ಯದ ಗಣ್ಯ ಸಾಮಂತನಾಗಿದ್ದನೆಂದು ಬಿಸ್ಸನಹಳ್ಳಿ ಶಾಸನ ತಿಳಿಸುತ್ತದೆ. ಹಿರಿಯ ಕೆಂಪೇಗೌಡನ ಕಟ್ಟಕಡೆಯ ಶಾಸನ ಎಂದರೆ ಕ್ರಿ.ಶ. 1608 ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ಒಳಗಿರುವ

ಕೆಂಪೇಗೌಡನ ಕಂಚಿನ ವಿಗ್ರಹ (ಚಿತ್ರ–1) ಪೀಠದ ಮೇಲಿರುವ ಶಾಸನ.[72] ಅಂದರೆ ಹಿರಿಯ ಕೆಂಪೇಗೌಡನು 1608ರವರೆಗೂ ಬದುಕಿದ್ದನೆಂದು ತಿಳಿಯಬಹುದು. ಕರ್ಲಮಂಗಲಂ ಶ್ರೀಕಂಠಯ್ಯನವರು ಶಾಸನಗಳನ್ನು ಆಧರಿಸಿಯೇ ಅಧ್ಯಯನ ನಡೆಸಿ, ಹಿರಿಯ ಕೆಂಪೇಗೌಡನ ಕಾಲವನ್ನು ಕ್ರಿ.ಶ. ಕ್ರಿ.ಶ. 1531–1608 ಎಂದು ಗುರುತಿಸಿದ್ದಾರೆ.[73] ಆದರೆ ಇವನ ಆಳ್ವಿಕೆಯ ಕಾಲಾವಧಿಯನ್ನು ಕುರಿತು ಇತ್ತೀಚೆಗೆ ಅಧ್ಯಯನ ನಡೆಸಿರುವವರಲ್ಲಿ ಗಂಗಾಂಬಿಕೆ ಎಸ್. ಮತ್ತು ಹಂ.ಗು. ರಾಜೇಶ್ ಮುಖ್ಯರಾಗಿದ್ದಾರೆ. ಗಂಗಾಂಬಿಕೆ ಅವರು ಹಿರಿಯ ಕೆಂಪೇಗೌಡನ ಆಳ್ವಿಕೆಯ ಕಾಲವನ್ನು ಕ್ರಿ.ಶ. 1532–1591 ಎಂದು ಅಂದಾಜಿಸಿದ್ದಾರೆ.[74] ಹಂ.ಗು. ರಾಜೇಶ್ ಅವರು ಮತ್ತಷ್ಟು ನಿಖರವಾಗಿ ಗುರುತಿಸಲು ಪ್ರಯತ್ನಪಟ್ಟಂತಿದೆ. ಅವರ ಪ್ರಕಾರ ಇವನ ಕಾಲ ಕ್ರಿ.ಶ. 1532–1597.[75] ಏಕೆಂದರೆ, 1532ರ ದಾಸರಹಳ್ಳಿ ಶಾಸನದಲ್ಲಿ ಕೆಂಪೇಗೌಡನಿಗೆ ಅಚ್ಯುತರಾಯ ನಾಯಕತನವನ್ನು ಕೊಟ್ಟ ಬಗ್ಗೆ ತಿಳಿಸುತ್ತದೆ. ಅದೇ ರೀತಿ 'ಕೆಂಪೇಗೌಡ ಜಯಪ್ರಶಸ್ತಿ'ಯ ಮುನ್ನುಡಿಯಲ್ಲಿ ಶ್ರೀಕಂಠಯ್ಯನವರು ಇಮ್ಮಡಿ ಕೆಂಪೇಗೌಡನು ಅಯಿಮಗೌಡನನ್ನು ಸೋಲಿಸಿದ ಘಟನೆಯು ಇವನಾಳಿಕೆಯ ಹದಿನೈದನೆಯ ವರ್ಷವಾದ ಶಕ 1534ನೆಯ ಪರಿಧಾವಿ ವರ್ಷದೊಳಗಾಗಿ ಆದದ್ದೆಂದು ಈ ಪ್ರಶಸ್ತಿಯು ತಿಳಿಸಿದೆ. ಇಮ್ಮಡಿ ಕೆಂಪೇಗೌಡನು ಶಕ 1534ರಲ್ಲಿ ಅಂದರೆ ಕ್ರಿ.ಶ. 1612ರಲ್ಲಿ ನಡೆದ ಅಯಿಮಗೌಡನ ಮೇಲಿನ ಯುದ್ಧದಲ್ಲಿ ಜಯಶಾಲಿಯಾದನು. ಇದು ಅವನು ಅಧಿಕಾರಕ್ಕೆ ಬಂದ 15ನೆಯ ವರ್ಷದಲ್ಲಿ ನಡೆದ ಘಟನೆಯಾಗಿದೆ. ಅಂದರೆ (ಕ್ರಿ.ಶ. 1612ರಲ್ಲಿ 15 ವರ್ಷ ಕಳೆದರೆ) ಕ್ರಿ.ಶ. 1597 ಇಮ್ಮಡಿ ಕೆಂಪೇಗೌಡ ಅಧಿಕಾರಕ್ಕೆ ಬಂದ ಕಾಲವಾಗಿದೆ. ಅಲ್ಲಿಯವರೆಗೂ ಆಳ್ವಿಕೆ ನಡೆಸುತ್ತಿದ್ದವನು ಅವನ ತಂದೆ ಹಿರಿಯ ಕೆಂಪೇಗೌಡನೇ ಆದ್ದರಿಂದ ಹಿರಿಯ ಕೆಂಪೇಗೌಡ ಆಳ್ವಿಕೆಯ ಕಾಲ ಕ್ರಿ.ಶ. 1532–1597 ಎಂದು ಖಚಿತವಾಗಿ ಗುರುತಿಸಬಹುದಾಗಿದೆ.

### 3.4.1.2 ಹೊಸ ಬೆಂಗಳೂರು ನಿರ್ಮಾಣ

ಹೊಸ ಬೆಂಗಳೂರು ಎಂದು ಏಕೆ ಪ್ರಯೋಗಿಸಲಾಗುತ್ತಿದೆ ಎಂದರೆ ಕೆಂಪೇಗೌಡನಿಗೂ ಪೂರ್ವದಲ್ಲಿ ಹಳೆಯ ಬೆಂಗಳೂರು ಇತ್ತು. ಕ್ರಿ.ಶ.ಸು. 900ರ ಬೇಗೂರು ಶಾಸನದಲ್ಲಿಯೇ ಬೆಂಗಳೂರಿನ ಉಲ್ಲೇಖವಿದೆ.[76] ಆದರೆ ಹಿರಿಯ ಕೆಂಪೇಗೌಡನು ಇಂದಿನ ಬೆಂಗಳೂರು ನಿರ್ಮಾಣಕ್ಕೆ ಕಾರಣನಾದ್ದರಿಂದ ಹೊಸ ಬೆಂಗಳೂರು ಎನ್ನಲಾಗಿದೆ. ಹಿರಿಯ ಕೆಂಪೇಗೌಡನು 1537ರಲ್ಲಿ ಆಧುನಿಕ ಬೆಂಗಳೂರಿನ ಕೋಟೆ ಮತ್ತು ಪೇಟೆಗಳನ್ನು ನಿರ್ಮಾಣ ಮಾಡಿಸಿದನೆಂದು ಈವರೆಗಿನ ಎಲ್ಲ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ "ಬೆಂಗಳೂರಿನ ಐತಿಹಾಸಿಕ

ಬಖೈರು" ಪ್ರಕಾರ: "ತನ್ನ ರಾಜಧಾನಿಯನ್ನು ಸ್ಥಾಪಿಸುವ ಉದ್ದೇಶದಿಂದ ಶಾಲಿವಾಹನ ಶಕ 1459ರ ಹೇವಿಳಂಬಿ ಸಂವತ್ಸರದ ಮಾಘ ಶುದ್ಧ ತ್ರಯೋದಶಿಯ ಶುಕ್ರವಾರದಂದು ಕಾಡನ್ನು ಕಡಿದು ಮಣ್ಣಿನ ಕೋಟೆಯ ತಳಪಾಯವನ್ನು ಶುಭಮುಹೂರ್ತದಲ್ಲಿ ಪ್ರಾರಂಭಿಸಿ 4 ಬತೇರಿಗಳುಳ್ಳ ಕೋಟೆಯ ನಿರ್ಮಾಣವನ್ನು ಪೂರ್ಣಗೊಳಿಸಿದನು" ಎಂದಿದೆ. ಇಲ್ಲಿ ಉಲ್ಲೇಖಿತವಾಗಿರುವ ಕಾಲವು ಬಖೈರಿನ ಸಂಪಾದಕರು ನೀಡಿರುವಂತೆ 1538 ಜನವರಿ 14ಕ್ಕೆ ಸರಿಹೊಂದುತ್ತದೆ. [77] ಬಹುಶಃ ಆ ದಿವಸ ಮಕರ ಸಂಕ್ರಾಂತಿಯ ದಿವಸವಾಗಿರಬಹುದು.

ಕೆಂಪೇಗೌಡರು ಆಧುನಿಕ ಬೆಂಗಳೂರನ್ನು ಸ್ಥಾಪಿಸುವ ಸಂಬಂಧ ಒಂದು ಜನಜನಿತವಾದ ಜಾನಪದ ಕಥೆ ಇದೆ. ಅದರ ಪ್ರಕಾರ: ಈಗಿನ ಬೆಂಗಳೂರು ಪೇಟೆ ಪ್ರದೇಶದಲ್ಲಿ ದಟ್ಟವಾದ ಕಾಡಿತ್ತು. ಈ ಕಾಡಿನಲ್ಲಿ ಕೆಂಪೇಗೌಡ ಬೇಟೆ ನಾಯಿಗಳ ಜೊತೆಗೆ ಬೇಟೆಯಾಡುತ್ತಿರುವಾಗ ಮೊಲವೊಂದು ನಾಯಿಗಳ ಮೇಲೆಯೇ ಪ್ರತಿದಾಳಿ ಮಾಡಿದ್ದನ್ನು ಕಣ್ಣಾರೆ ಕಂಡ ಕೆಂಪೇಗೌಡನು ಇದು ಗಂಡುಮೆಟ್ಟಿನ ನೆಲ. ಇಲ್ಲಿಯೇ ರಾಜಧಾನಿಯನ್ನು ಸ್ಥಾಪಿಸಬೇಕೆಂದು ನಿಶ್ಚಯಿಸಿದನೆಂದು ಹೇಳಲಾಗುತ್ತದೆ. ಆದರೆ ಇಂತಹ ಕಥೆಗಳು ಎಲ್ಲಾ ನಗರಗಳ ಸ್ಥಾಪನೆಯ ಹಿನ್ನೆಲೆಯಲ್ಲಿ ಸಾಮಾನ್ಯವಾಗಿ ಕೇಳಿಬರುತ್ತದೆ. ಆದರೆ ವಾಸ್ತವವಾಗಿ ಒಂದು ರಾಜಧಾನಿಯನ್ನು ನಿರ್ಮಿಸುವ ಮೊದಲು ಭೌಗೋಳಿಕ ಮತ್ತು ಪ್ರಾಕೃತಿಕ ಮಹತ್ವವನ್ನು ಗುರುತಿಸುವುದೇ ಮುಖ್ಯವಾಗಿರುತ್ತದೆ.

ಕೆಂಪೇಗೌಡನಿಗೆ ನಗರ ಯೋಜನೆಯ ದೂರದೃಷ್ಟಿ ಇದ್ದಂತೆ ಕಾಣುತ್ತದೆ. ಏಕೆಂದರೆ ನಗರ ಕಟ್ಟಲು ಆಯ್ದುಕೊಂಡ ಪ್ರದೇಶ ಭೌಗೋಳಿಕವಾಗಿ ಅತ್ಯಂತ ಎತ್ತರವಾದ, ಉತ್ತಮ ಮಳೆ ಮತ್ತು ಜಲಸಮೃದ್ಧಿಯಿಂದ ಕೂಡಿರುವ ಪ್ರದೇಶವಾಗಿತ್ತು. ಜೊತೆಗೆ ಸುರಕ್ಷತೆ, ನೀರಿನ ಆಸರೆ, ಆಹಾರ ಉತ್ಪಾದನೆಗೆ ಯೋಗ್ಯವಾದ ಮತ್ತು ಆಯಕಟ್ಟಿನ ನೆಲೆಯನ್ನು ಪರಿಶೀಲಿಸಿ ಈ ನೆಲೆಯನ್ನು ಪ್ರಜ್ಞಾಪೂರ್ವಕವಾಗಿ ಆಯ್ಕೆ ಮಾಡಿಕೊಂಡಿರುವಂತೆ ಕಾಣುತ್ತದೆಯೇ ವಿನಃ ಆಕಸ್ಮಿಕವಲ್ಲ. ಜನಜನಿತ ನಾಯಿ ಮೊಲದ ಕಥೆಗೂ ಬೆಂಗಳೂರಿನ ನೆಲೆಯ ಆಯ್ಕೆಗೂ ಯಾವ ಸಂಬಂಧ ಇರಲಾರದು. ಈ ರೀತಿಯ ಸ್ಥಳ ಮಹಿಮೆಯನ್ನು ಅನೇಕ ಪಟ್ಟಣ, ನಗರ ಮತ್ತು ಕೋಟೆಗಳ ಸ್ಥಾಪನೆಯ ಹಿಂದೆ ಕಾಣಬಹುದು. ಈ ರೀತಿಯ ಸ್ಥಳಮಹಿಮೆಗಳನ್ನು ಬಿತ್ತುವ ಮೂಲಕ ಶತೃಗಳ ಮೇಲೆ ಮಾನಸಿಕ ಗೆಲುವನ್ನು ಸಾಧಿಸುವ ಉದ್ದೇಶವಿರಬಹುದು. ಆದರೆ, ಆಧುನಿಕ ಬೆಂಗಳೂರಿನ ನೆಲೆಯನ್ನು ಗುರುತಿಸುವುದರ ಹಿಂದೆ ಕೆಂಪೇಗೌಡರಿಗೊಂದು ತಿಳುವಳಿಕೆ

ಮತ್ತು ದೂರದರ್ಶಿತ್ವವಿತ್ತು ಎಂಬುದನ್ನು ನಿರಾಕರಿಸಲಾಗದು.[78] ಈ ಕುರಿತು ವಿಸ್ತೃತವಾಗಿ ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗುವುದು.

ಹೀಗೆ ಹೊಸದಾಗಿ ನಿರ್ಮಿಸಿದ ಕೋಟೆಗೆ ಹೊಂದಿಕೊಂಡಂತೆ ವ್ಯಾಪಾರಕ್ಕಾಗಿ ದೊಡ್ಡಪೇಟೆ, ಚಿಕ್ಕಪೇಟೆ, ನಗರ್ತಪೇಟೆ, ಅಕ್ಕಿಪೇಟೆ, ರಾಗಿಪೇಟೆ, ಬಳೇಪೇಟೆ, ಮುತ್ಯಾಲಪೇಟೆ, ಅರಳೆಪೇಟೆ ಮೊದಲಾದ ಪೇಟೆಗಳನ್ನು ನಿರ್ಮಾಣ ಮಾಡಿಸಿ ವರ್ತಕರು ಬಂದು ನೆಲೆಸಲು ಅವಕಾಶ ಕಲ್ಪಿಸಿದರು. (ನೋಡಿ: ನಕ್ಷೆ–1). ಅಲ್ಲದೆ ತಮಿಳುನಾಡಿನಿಂದ ತೋಟಗಾರರಾದ ತಿಗಳರನ್ನು ಕರೆತಂದು ನೆಲೆಗೊಳಿಸಿ ತಿಗಳರ ಪೇಟೆಯನ್ನು ನಿರ್ಮಿಸಿದರು. ಅದೇ ರೀತಿ ವೃತ್ತಿಗಳಿಗನುಗುಣವಾದ ಕುಂಬಾರಪೇಟೆ, ಸುಣಕಲ್ ಪೇಟೆ, ಉಪ್ಪಾರಪೇಟೆ, ಗಾಣಿಗರಪೇಟೆ, ಮೊದಲಾದವುಗಳು ಕಾಲನಂತರದಲ್ಲಿ ಬೆಳೆದು 90ಕ್ಕೂ ಹೆಚ್ಚು ವೃತ್ತಿಯವರ ಬೀದಿಗಳು ವಿಕಾಸಹೊಂದಿದವು.

### 3.4.1.3 ಲಕ್ಷ್ಮೀದೇವಿಯ ಆತ್ಮಬಲಿದಾನದ ಕಥನ

ಹಿರಿಯ ಕೆಂಪೇಗೌಡನು ಆರಂಭದಲ್ಲಿ ಕಟ್ಟಿಸಿದ್ದು ಅಂಡಾಕಾರದ ಮಣ್ಣಿನ ಕೋಟೆಯನ್ನು. ಇಂದು ನಾವು ಕಾಣುವ ವಿಕ್ಟೋರಿಯ ಆಸ್ಪತ್ರೆ ಮುಂಭಾಗದ ಕೋಟೆಯು ಕಾಲಾನಂತರದಲ್ಲಿ ಕಲ್ಲಿನ ಕೋಟೆಯಾಗಿ ಮರುನಿರ್ಮಾಣಗೊಂಡಿತು. ಈ ಕೋಟೆಯನ್ನು ನಿರ್ಮಿಸುವ ಸಂದರ್ಭದಲ್ಲಿ ಕಟ್ಟಿದ ಕೋಟೆಯ ದ್ವಾರಗಳು ಇರುಳಿನಲ್ಲಿ ಉರುಳಿಬೀಳುತ್ತಿದ್ದರಿಂದ ಅದಕ್ಕೆ ಗರ್ಭಿಣಿಯ ಬಲಿಯಾದರೆ ನಿಲ್ಲುವುದೆಂದು ಜ್ಯೋತಿಷಿಗಳು ಕೆಂಪೇಗೌಡರಿಗೆ ತಿಳಿಸಿದರು. ಈ ಸಂಗತಿ ತಿಳಿದ ಕೆಂಪೇಗೌಡರ ಗರ್ಭಿಣಿ ಸೊಸೆ ಲಕ್ಷ್ಮಿದೇವಿ ಆತ್ಮಾರ್ಪಣೆ ಮಾಡಿಕೊಂಡಳೆಂದು ಐತಿಹ್ಯವಿದೆ. ಆಕೆಯ ಸಮಾಧಿ ಸ್ಮಾರಕ ಕೋರಮಂಗಲದಲ್ಲಿದೆ (ಚಿತ್ರ–5). ಆದರೆ ಯಾವುದೇ ಸಮಕಾಲೀನ ಆಧಾರಗಳು ಇದನ್ನು ಪುಷ್ಟೀಕರಿಸುವುದಿಲ್ಲ (ಈ ಕುರಿತು ಮುಂದಿನ ಅಧ್ಯಾಯಗಳಲ್ಲಿ ಹೆಚ್ಚಿನ ಚರ್ಚೆ ನಡೆಸಲಾಗುವುದು). ಇದರ ಬಗ್ಗೆ ಅಧ್ಯಯನ ನಡೆಸಿರುವ ಸಂಶೋಧಕರೊಬ್ಬರು ಈ ಕಥನವು 19ನೆಯ ಶತಮಾನದಲ್ಲಿ ಹುಟ್ಟಿಕೊಂಡಿರುವುದಾಗಿ ಅಭಿಪ್ರಾಯ ಪಟ್ಟಿದ್ದಾರೆ.[79]

ಅಂದು ಗುರುತಿಸಿದ ಕೋಟೆ ಮತ್ತು ಕಂದಕದ ಕುರುಹುಗಳು 1850ರ ದಶಕದಲ್ಲಿ ತೆಗೆದ ಛಾಯಾಚಿತ್ರಗಳಲ್ಲಿ ಗೋಚರಿಸುತ್ತವೆ (ಚಿತ್ರ–10). ಮೈಸೂರು ಬ್ಯಾಂಕ್ ಪ್ರಧಾನ ಕಛೇರಿಯ ಬಳಿ ಇರುವ ಆಂಜನೇಯ ಗುಡಿ ಅಂದು ಕಟ್ಟಿದ ಕೋಟೆಯ ಯಲಹಂಕ ದ್ವಾರವಾಗಿತ್ತು. ಅದೇ ರೀತಿ ಇಂದಿನ ಹಲಸೂರು ಗೇಟ್ ಪೋಲಿಸ್ ಠಾಣೆಯ ಸಮೀಪ ಮತ್ತೊಂದು ಹೆಬ್ಬಾಗಿಲು ಇತ್ತು.

ಇದನ್ನು ಹಲಸೂರು ಬಾಗಿಲು ಎಂದು ಕರೆಯುತ್ತಿದ್ದರು. ಅಲ್ಲದೆ, ಕಾಟನ್ ಪೇಟೆ ಪೋಲಿಸ್ ಠಾಣೆ ಬಳಿ ಕೆಂಗೇರಿ ಬಾಗಿಲು ಇತ್ತು. ಒಕ್ಕಲಿಗರ ಸಂಘ ಇರುವ ಮಕ್ಕಳಕೂಟ ವೃತ್ತಕ್ಕೆ ಹೊಂದಿಕೊಂಡಂತೆ ಕಾನಕಾನಹಳ್ಳಿ ಬಾಗಿಲು ಇತ್ತು. ಆದರೆ ಇಂದು ಅವೆಲ್ಲ ನಾಮಾವಶೇಷವಾಗಿವೆ.

ನಗರ ನಿರ್ಮಾಣದ ವಿಷಯ ಕೇಳಿದ ಅಚ್ಯುತರಾಯನು ಸಂತೋಷದಿಂದ 30,000 ಪಗೋಡಗಳ 12 ಹೋಬಳಿಗಳನ್ನು ಹಿರಿಯ ಕೆಂಪೇಗೌಡನಿಗೆ ನೀಡಿದನು. ಅವುಗಳೆಂದರೆ:[80]

1) ಕಸಬಾ ಹಳೆ ಬೆಂಗಳೂರು
2) ವರ್ತೂರು ಹೋಬಳಿ
3) ಯಲಹಂಕನಾಡು
4) ಬೇವೂರು ಹೋಬಳಿ
5) ಹಲಸೂರು ಹೋಬಳಿ
6) ಕೆಂಗೇರಿ ಹೋಬಳಿ
7) ತಗಘಟ್ಟಪುರ ಹೋಬಳಿ
8) ಜಿಗಣಿ ಹೋಬಳಿ
9) ಕುಂಬಳಗೋಡು ಹೋಬಳಿ
10) ಕನ್ನೇಲಿ ಹೋಬಳಿ
11) ಬಾಣಾವರ ಹೋಬಳಿ
12) ಹೆಸರುಘಟ್ಟ ಹೋಬಳಿ

ಹೀಗೆ ಕೆಂಪೇಗೌಡನು ತಾನು ಹೊಸದಾಗಿ ನಿರ್ಮಿಸಿದ ಹೊಸ ಪಟ್ಟಣಕ್ಕೆ ಹಳೆಯ ಹೆಸರಾದ ಬೆಂಗಳೂರು ಎಂದೇ ನಾಮಕರಣ ಮಾಡಿ, ಬಹುಸಂಖ್ಯೆಯ ಜನರು ಇಲ್ಲಿ ನೆಲೆಸಲು ಪ್ರೋತ್ಸಾಸಿ ಈ ಪಟ್ಟಣವನ್ನು ತನ್ನ ರಾಜ್ಯದ ರಾಜಧಾನಿಯನ್ನಾಗಿಯೂ, ತನ್ನ ವಾಸಸ್ಥಳವನ್ನಾಗಿಯೂ ಮಾಡಿಕೊಂಡನು.[81]

### 3.4.1.4 ದೇವಾಲಯಗಳ ನಿರ್ಮಾಣ

ಹಿರಿಯ ಕೆಂಪೇಗೌಡನು ಬೆಂಗಳೂರು ಪರಿಸರದಲ್ಲಿ ಹಲವು ದೇವಾಲಯಗಳನ್ನು ನಿರ್ಮಿಸಿದನು. ಅಲ್ಲದೆ ಬ್ರಾಹ್ಮಣರಿಗೆ ಅಗ್ರಹಾರಗಳನ್ನು ದಾನ, ದತ್ತಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ

ನೀಡಿದನು. ಬೆಂಗಳೂರಿನ ಪ್ರಸಿದ್ಧ ದೇವಾಲಯಗಳಾದ ಗವಿಗಂಗಾಧರೇಶ್ವರ ದೇವಾಲಯ ಮತ್ತು ಅದರ ಆವರಣದಲ್ಲಿರುವ ಕಲ್ಲಿನಲ್ಲಿ ಮಾಡಿಸಿದ ತ್ರಿಶೂಲ, ಢಮರು, ಸೂರ್ಯಪಾನ, ಚಂದ್ರಪಾನ ಹರಿಹರ ಗುಡ್ಡದಲ್ಲಿರುವ ಕಲ್ಲಿನ ಛತ್ರಿಗಳನ್ನು ಮಾಡಿಸಿದನೆಂದು ತಿಳಿದು ಬರುತ್ತದೆ (ಚಿತ್ರ– 11, 12, 13). ದೊಡ್ಡ ಬಸವಣ್ಣ (ಚಿತ್ರ– 14), ದೊಡ್ಡ ಗಣೇಶನ (ಚಿತ್ರ– 16) ಬೃಹತ್ ಶಿಲ್ಪಗಳನ್ನು ಕೆತ್ತಿಸಿ, ಗುಡಿಗಳನ್ನು ಕಟ್ಟಿಸಿದನು. ಕೋಟೆಯ ಒಳಗೆ ಚನ್ನಿಗರಾಯಸ್ವಾಮಿ ಮತ್ತು ಜಲಕಂಠೇಶ್ವರ ದೇವಾಲಯಗಳನ್ನು ಕಟ್ಟಿಸಿದನೆಂದು ಹೇಳಲಾಗುತ್ತದೆ. ಈ ದೇವಾಲಯಗಳ ವಾರ್ಷಿಕೋತ್ಸವಗಳಿಗೆ ಹಾಗೂ ಉತ್ಸವಗಳಿಗೆ ದಾನ, ದತ್ತಿಗಳನ್ನು ಬಿಟ್ಟನು. ಅಲ್ಲದೆ, ಬ್ರಾಹ್ಮಣರಿಗಾಗಿ ಕರಿಅಮ್ಮ ಅಗ್ರಹಾರ, ಕೆಂಪಸಮುದ್ರ ಅಗ್ರಹಾರ ಮತ್ತು ಜಡೆಯಹಳ್ಳಿ ಅಗ್ರಹಾರಗಳನ್ನು ಸ್ಥಾಪಿಸಿ, ಬ್ರಾಹ್ಮಣರಿಗೆ ಹಂಚಿದನೆಂದು ತಿಳಿದುಬರುತ್ತದೆ.[82] ಹಿರಿಯ ಕೆಂಪೇಗೌಡನು ತನಗೆ ನಾಯಕತನವನ್ನು ದಯಪಾಲಿಸಿದ ವಿಜಯನಗರದ ದೊರೆ ಅಚ್ಯುತರಾಯನಿಗೆ ಪುಣ್ಯವಾಗಲೆಂದು ಭೈರವನ ದೇವಾಲಯವೊಂದಕ್ಕೆ ಶಿವನಸಮುದ್ರ ಸೀಮೆಯ ಚೊಕ್ಕನಾಥಪುರ ಎಂಬ ಗ್ರಾಮವನ್ನು ದಾನ ಕೊಟ್ಟನು.[83] ಕೆಂಪೇಗೌಡನು ಬೆಂಗಳೂರಿನ ಗವಿಗಂಗಾಧರೇಶ್ವರನ ಭಕ್ತನಾಗಿದ್ದನಲ್ಲದೆ, ಶಿವಗಂಗೆಯ ಗಂಗಾಧರೇಶ್ವನ ಪರಮಭಕ್ತನೂ ಆಗಿದ್ದನು. ಈ ದೇವಾಲಯಕ್ಕೆ ಗಂಟೆಯೊಂದನ್ನು ದಾನ ಮಾಡಿರುವುದಲ್ಲದೆ, ಗಂಗಾಧರೇಶ್ವರನ ಎದುರಿನಲ್ಲಿ ಅಂಜಲಿ ಬದ್ಧನಾಗಿ ನಿಂತಿರುವ ತನ್ನ ಕಂಚಿನ ಭಕ್ತಮುದ್ರೆಯ ಪ್ರತಿಮೆಯನ್ನು ಮಾಡಿಸಿ, ತನ್ನ ಭಕ್ತಿಯನ್ನು ಶಾಶ್ವತಗೊಳಿಸಿಕೊಂಡಿದ್ದಾನೆ (ಚಿತ್ರ–1).

### 3.4.1.5 ಕೆರೆಗಳ ನಿರ್ಮಾಣ

ನಗರ ನಿರ್ಮಾಣ ಮಾಡಿದ ಕೆಂಪೇಗೌಡ ನಗರದ ಜನರ ನೀರಿನ ಅವಶ್ಯಕತೆಗಾಗಿ ಧರ್ಮಾಂಬುಧಿ (ಮೆಜೆಸ್ಟಿಕ್ ಬಸ್ ಸ್ಟಾಂಡ್ ಪ್ರದೇಶ) ಕೆರೆಯನ್ನು, ತನ್ನ ಮನೆದೇವರಾದ ಕೆಂಪಮ್ಮನ ಹೆಸರಿನಲ್ಲಿ ಕೆಂಪಾಂಬುಧಿ ಕೆರೆಯನ್ನು ಮತ್ತು ಸಂಪಂಗಿ ಕೆರೆಗಳನ್ನು ಕಟ್ಟಿಸಿದರು. ಕೆಂಪೇಗೌಡರು ಹೊಸ ಬೆಂಗಳೂರನ್ನು ನಿರ್ಮಿಸುವಾಗ ಗಡಿಗೋಪುರಗಳನ್ನು ನಿರ್ಮಿಸಿ ನಗರ ಇಲ್ಲಿಯವರೆಗೂ ವಿಸ್ತರಿಸಲಿ ಎಂದು ಆಶಿಸಿದ್ದನೆಂದು ಹೇಳಲಾಗುತ್ತದೆ. ಆದರೆ ಇವು ಗಡಿಗೋಪುರಗಳಾಗಿರದೆ ಕಾವಲು ಗೋಪುರಗಳಾಗಿದ್ದಂತೆ ತೋರುತ್ತದೆ. ಏಕೆಂದರೆ ಈ ಗೋಪುರಗಳು ಎತ್ತರವಾದ ಪ್ರದೇಶದಲ್ಲಿ ಅಥವಾ ಗುಡ್ಡಗಳ ಮೇಲೆ ಇವೆ. ಮುಖ್ಯವಾಗಿ ಅಂದಿನ ಬೆಂಗಳೂರು ಪ್ರವೇಶಿಸುವ ಹೆದ್ದಾರಿ ಮಾರ್ಗಗಳಿಗೆ ಹೊಂದಿಕೊಂಡಂತೆ ಇರುವುದರಿಂದ ಒಳಬರುವ ಮತ್ತು ಹೊರಹೋಗುವವರ ಮೇಲೆ ಕಣ್ಗಾವಲಿರಿಸಲು ಈ ರೀತಿಯಲ್ಲಿ ಕಾವಲು

ಗೋಪುರಗಳನ್ನು ನಿರ್ಮಿಸಿದ್ದರೆಂದು ಅರಿಯಬಹುದು. ಇದೇ ರೀತಿಯ ಕಾವಲು ಗೋಪುರವನ್ನು ಶಿವಗಂಗೆಯ ಬೆಟ್ಟಗಳ ಮೇಲೂ, ತಿರುಮಲೆಯ ಬೆಟ್ಟದ ಮೇಲೂ, ಸಾವನದುರ್ಗದ ಬೆಟ್ಟದ ಮೇಲೂ, ಕೆಂಪಾಂಬುಧಿ ಕೆರೆಯ ದಂಡೆಯ ಮೇಲಿರುವ ಗುಡ್ಡದ ಮೇಲೂ ಮಾಗಡಿಯಲ್ಲಿಯೂ ಕಾಣಬಹುದಾಗಿದೆ.

### 3.4.1.6 ಭೈರವನಾಣ್ಯ ಟಂಕಣೆ ಮತ್ತು ಬಂಧನ

ಹೊಸ ಬೆಂಗಳೂರಿನ ನಿರ್ಮಾಣದ ನಂತರ ಬಹುಶಃ ಆರ್ಥಿಕ ಸಮಸ್ಯೆಯ ಪರಿಣಾಮವನ್ನು ನಿವಾರಿಸುವ ಸಲುವಾಗಿ ಕೆಂಪೇಗೌಡನು ತನ್ನ ಮನೆದೇವರಾದ ಭೈರವನ ಹೆಸರಿನಲ್ಲಿ 'ಭೈರವ' ಎಂಬ ಬಂಗಾರದ ನಾಣ್ಯವನ್ನು ಟಂಕಿಸಲು ಬೆಂಗಳೂರಿನಲ್ಲಿ ಟಂಕಸಾಲೆಯನ್ನು ನಿರ್ಮಿಸಿದನು. ಆಗ ವಿಜಯನಗರವನ್ನು ಸದಾಶಿವರಾಯನ ಹೆಸರಿನಲ್ಲಿ ಅಳಿಯ ರಾಮರಾಯನು ಆಳ್ವಿಕೆ ಮಾಡುತ್ತಿದ್ದನು. ಅವನು ಈ ವಿಷಯ ಕೇಳಿ ಕುಪಿತನಾಗಿ ಕೆಂಪೇಗೌಡನನ್ನು ತನ್ನ ಬಳಿಗೆ ಕರೆಸಿಕೊಂಡು ಆನೆಗೊಂದಿಯಲ್ಲಿ ಐದು ವರ್ಷಗಳ ಕಾಲ ಬಂಧನದಲ್ಲಿಟ್ಟನು. ಅಲ್ಲದೆ, ಅವನ ಯಲಹಂಕ ರಾಜ್ಯವನ್ನು ಮುಟ್ಟುಗೋಲು ಹಾಕಿಕೊಂಡು ಚನ್ನಪಟ್ಟಣದ ರಾಣಾ ಜಗದೇವರಾಯನಿಗೆ ದಕ್ಷಿಣದ 46 ಜಿಲ್ಲೆಗಳನ್ನು ಅಮರ ಮಾಗಣೆಯಾಗಿ ಒಂಬತ್ತು ಲಕ್ಷ ಪಗೋಡಗಳ ಕಂದಾಯ ಲಭಿಸುವಂತೆ ನೀಡಿದನು. ಅದರಲ್ಲಿ ಅಮರ ಮಾಗಣೆಯ ಭಾಗವಾಗಿ ಬೆಂಗಳೂರು ಜಿಲ್ಲೆಯೂ ಸೇರಿತ್ತು. ಕೆಂಪೇಗೌಡನು ಆನೆಗೊಂದಿಯಲ್ಲಿ ಬಂಧನಕ್ಕೆ ಒಳಗಾಗುವ ಹೊತ್ತಿಗೆ ಬೆಂಗಳೂರನ್ನು 45 ವರ್ಷ ಆಳಿದ್ದನು. ಆನೆಗೊಂದಿಯಲ್ಲಿ ಕೆಂಪೇಗೌಡನು ಬಂದನದಲ್ಲಿದ್ದಾಗ ರಾಜಾಸ್ಥಾನದಲ್ಲಿನ ಆತನ ಸ್ನೇಹಿತರ ಪ್ರಭಾವದಿಂದಲೂ ಹಾಗೂ ತನ್ನ ತಪ್ಪಿಗೆ ದೊಡ್ಡ ಮೊತ್ತದ ದಂಡ ತೆರುವುದರ ಮೂಲಕವೂ ಸರ್ಕಾರವನ್ನು ಒಪ್ಪಿಸಿದ ನಂತರ ರಾಣಾ ಜಗದೇವರಾಯನ ರಾಜ್ಯದಿಂದ ಅವನ ರಾಜ್ಯವನ್ನು ಪ್ರತ್ಯೇಕಿಸಿ ವಾಪಸ್ಸು ಕೊಡಲಾಯಿತು. ಬೆಂಗಳೂರಿಗೆ ಬದಲಾಗಿ ರಾಣಾ ಜಗದೇವರಾಯನಿಗೆ ಬೇರೆ ರಾಜ್ಯವನ್ನು ಕೊಡಲಾಯಿತು. ರಾಜ್ಯವು ದೊರೆತ ನಂತರ ಕೆಂಪೇಗೌಡನು ಎಂದಿನಂತೆ ನ್ಯಾಯದಿಂದಲೂ, ಧರ್ಮದಿಂದಲೂ ಐದು ವರ್ಷಗಳ ಕಾಲ ರಾಜ್ಯಭಾರ ಮಾಡಿದನೆಂದು "ಬೆಂಗಳೂರಿನ ಐತಿಹಾಸಿಕ ಬಖೈರು" ದಾಖಲಿಸುತ್ತದೆ.[84] ಇನ್ನೊಂದು ಐತಿಹ್ಯದ ಪ್ರಕಾರ ಈ ವಿಷಯ ತಿಳಿದ ವಿಜಯನಗರದ ಅರಸ ತಿರುಮಲರಾಯನು ಕೆಂಪೇಗೌಡರನ್ನು ಪೆನುಗೊಂಡೆಗೆ (ತಾಳಿಕೋಟೆ ಯುದ್ಧದಲ್ಲಿ ಸೋತ ವಿಜಯನಗರದ ಚಕ್ರವರ್ತಿಯು ಈ ವೇಳೆಗೆ ವಿಜಯನಗರದ ರಾಜಧಾನಿಯನ್ನು ಹಂಪಿಯಿಂದ ಪೆನುಗೊಂಡೆಗೆ ವರ್ಗಾಯಿಸಿಯಾಗಿತ್ತು) ಕರೆಸಿ ಉಪಾಯವಾಗಿ

ಬಂಧಿಸಿ ಆನೆಗೊಂದಿಯಲ್ಲಿ ಸೆರೆಯಲ್ಲಿಟ್ಟನು. ಈ ತೊಂದರೆಗೆ ಚನ್ನಪಟ್ಟಣದ ಪಾಳೆಯಗಾರ ಜಗದೇವರಾಯನು ಚಕ್ರವರ್ತಿಯಲ್ಲಿ ಹೇಳಿದ ಚಾಡಿಮಾತುಗಳು ಕಾರಣವೆಂದು ವಿದ್ವಾಂಸರು ಆರೋಪಿಸುತ್ತಾರೆ.[85]

ಈ ಘಟನೆಯ ಸತ್ಯಾಸತ್ಯತೆಯನ್ನು ಪರಿಶೀಲಿಸುವುದರ ಅಗತ್ಯವಿದೆ. ಕೆಂಪೇಗೌಡನು 1532ರಲ್ಲಿ ಅಧಿಕಾರಕ್ಕೆ ಬಂದನೆಂದು ಶಾಸನಾಧಾರದ ಮೇಲೆ ಭಾವಿಸುವುದಾದರೆ, ಅವನ ಆಳ್ವಿಕೆಯ 45 ವರ್ಷಗಳನ್ನು ಸೇರಿಸಿದರೆ 1577 ಆಗುತ್ತದೆ. ಆ ಸಮಯಕ್ಕಾಗಲೇ ರಾಮರಾಯನು ಗತಿಸಿ 12 ವರ್ಷಗಳಾಗಿದ್ದವು. ಚನ್ನಪಟ್ಟಣದಲ್ಲಿ ರಾಣಪೆದ್ದ ಜಗದೇವರಾಯ ಕೂಡ ಅಧಿಕಾರಕ್ಕೆ ಬಂದಿರಲಿಲ್ಲ. ಅಧಿಕಾರಕ್ಕೆ ಬಂದಿದ್ದು 1570ರಲ್ಲಿ ಆದ್ದರಿಂದ ಈ ಘಟನೆ ನಡೆದಿದ್ದರೆ ರಾಮರಾಯನ ಕಾಲದಲ್ಲಿ ಆಗಿರಲು ಸಾಧ್ಯವಿಲ್ಲ. ಆಗಿದ್ದರೆ, ಎರಡನೆಯ ಐತಿಹ್ಯವನ್ನು ಪರಿಶೀಲಿಸುವುದು ಸೂಕ್ತ. ಇದರ ಪ್ರಕಾರ ಘಟನೆಯು ವಿಜಯನಗರದ ದೊರೆ ತಿರುಮಲರಾಯನು ಪೆನುಗೊಂಡೆಯಿಂದ ಆಳುತ್ತಿದ್ದನು ಎಂದಿದೆ. ತಿರುಮಲರಾಯನ ಕಾಲವನ್ನು 1565–1572. ರಾಣಪೆದ್ದ ಜಗದೇವರಾಯ ಕೂಡ ಚನ್ನಪಟ್ಟಣದಲ್ಲಿ ಆಳ್ವಿಕೆಗೆ ಬರುವುದು 1570ರಲ್ಲಿ ಆದ್ದರಿಂದ ಈ ಘಟನೆಯು 1570–72ರ ನಡುವೆ ನಡೆದಿರಬಹುದು. ಒಂದು ಕಡೆ 5 ವರ್ಷಗಳ ಬಂಧನದ ನಂತರ ಕೆಂಪೇಗೌಡನ ಬಿಡುಗಡೆಯಾಗುತ್ತದೆ ಎಂದರೆ ಮತ್ತೊಂದು ಕಡೆ ಹಲವು ವರ್ಷಗಳ ನಂತರ ಬಿಡುಗಡೆಯಾಗುತ್ತದೆ ಎಂದಿದೆ. ಅದೇನೆ ಇರಲಿ ಅದಕ್ಕೂ ಒಂದು ಚಾರಿತ್ರಿಕ ಸಂದರ್ಭ ಒದಗಿ ಬಂದಿರುವಂತೆ ಕಾಣುತ್ತದೆ. ಅದೇನೆಂದರೆ, 1577ರಲ್ಲಿ ಪೆನುಗೊಂಡೆಯನ್ನು ವಶಪಡಿಸಿಕೊಳ್ಳಲು ಬಿಜಾಪುರ ಮತ್ತು ಅಹಮದ್‌ನಗರ ಸುಲ್ತಾನರು ಸತತವಾಗಿ ದಾಳಿಗಳನ್ನು ನಡೆಸುತ್ತಿದ್ದರು. ಈವೇಳೆಗೆ ವಿಜಯನಗರದ ದೊರೆ ತಿರುಮಲರಾಯನೂ ಇಳಿದು ಶ್ರೀರಂಗರಾಯ ಆಳುತ್ತಿದ್ದನು. ಇದೇವೇಳೆ ಚನ್ನಪಟ್ಟಣದಲ್ಲಿಯೂ ರಾಣಪೆದ್ದ ಜಗದೇವರಾಯನ ನಂತರ ಅವನ ತಮ್ಮ ಇಮ್ಮಡಿ ಜಗದೇವರಾಯನು ಅಧಿಕಾರಕ್ಕೆ ಬಂದಿದ್ದನು. ಶ್ರೀರಂಗರಾಯನ ನಂತರ 1586ರಲ್ಲಿ ಇಮ್ಮಡಿ ವೆಂಕಟ ಚಂದ್ರಗಿರಿಯಲ್ಲಿ ಪಟ್ಟಾಭಿಷಿಕ್ತನಾದನು. ಅಲ್ಲಿಂದ ಪೆನುಗೊಂಡೆಗೆ ಹೋದನು. ಈ ವೇಳೆ ಬಿಜಾಪುರ ಮತ್ತು ಅಹಮದ್ ನಗರದ ಸುಲ್ತಾನರು ಪೆನುಗೊಂಡೆಯ ಮೇಲೆ ಸತತವಾಗಿ ದಾಳಿಗಳನ್ನು ನಡೆಸತೊಡಗಿದರು. ಪರಾಕ್ರಮಿಯಾದ ಚನ್ನಪಟ್ಟಣದ ಇಮ್ಮಡಿ ಜಗದೇವರಾಯನ ನೇತೃತ್ವದಲ್ಲಿ ಹಲವು ಪಾಳೆಯಗಾರರ ಸೈನ್ಯವು ಕುತುಬ್‌ಷಾಹಿ ಸೈನ್ಯವನ್ನು ಸೋಲಿಸಿ ಹಿಮ್ಮೆಟ್ಟಿಸಿ, ಪೆನುಗೊಂಡೆಯನ್ನು ರಕ್ಷಿಸುವಲ್ಲಿ ಯಶಸ್ವಿಯಾದರು. ಈ ಸಂದರ್ಭದಲ್ಲಿ ಕೆಂಪೇಗೌಡನ ಸೈನಿಕ ಸಹಾಯ ಕೂಡ ವಿಜಯನಗರದ ದೊರೆ ವೆಂಕಟನಿಗೆ ಅನಿವಾರ್ಯವಾಗಿದ್ದಿರಬಹುದು. ಈ

ವೇಳೆ ಅವನ ಬಿಡುಗಡೆಯಾಗಿರುವ ಸಾಧ್ಯತೆಗಳಿವೆ. ಈ ಹೋರಾಟದ ನೇತೃತ್ವವಹಿಸಿ, ಪರಾಕ್ರಮ ಮೆರೆದ ಇಮ್ಮಡಿ ಜಗದೇವರಾಯನಿಗೆ 'ಘನಗಿರಿ ರಕ್ಷಕ' ಎಂಬ ಬಿರುದು ನೀಡಿ, ಬಾರಾಮಹಲ್‌ನಿಂದ ಪಶ್ಚಿಮ ಘಟ್ಟದವರೆಗಿನ 9 ಲಕ್ಷ ಪಗೋಡ ವರಮಾನವಿದ್ದ ಪ್ರದೇಶವನ್ನು ನೀಡಿ ಗೌರವಿಸಲಾಯಿತು. ಆದರೆ ಮೇಲೆ ಬಖೈರು ದಾಖಲಿಸಿರುವಂತೆ 9ಲಕ್ಷ ಪಗೋಡಗಳ ಪ್ರದೇಶ ದೊರೆತಿದ್ದು ರಾಣಜಗದೇವರಾಯನಿಗೆ ಅಲ್ಲ. ಅದು 1586ರ ಸುಮಾರಿಗೆ ಇಮ್ಮಡಿ ಜಗದೇವರಾಯನಿಗೆ ಸಿಕ್ಕ ಉಡುಗೊರೆ. ಬಹುಶಃ ಈ ಸಂದರ್ಭದಲ್ಲಿ ಜಗದೇವರಾಯನ ನಿಯಂತ್ರಣದಲ್ಲಿದ್ದ ಬೆಂಗಳೂರನ್ನು ಕೆಂಪೇಗೌಡನಿಗೆ ಹಿಂತಿರುಗಿಸಿ, 9 ಲಕ್ಷ ಪಗೋಡದ ವಿಶಾಲ ಪ್ರದೇಶವನ್ನು ನೀಡಿರುವಂತೆ ತೋರುತ್ತದೆ.

ಹಿರಿಯ ಕೆಂಪೇಗೌಡನು ಬಂಧನದ ಗ್ರಹಣದಿಂದ ವಿಮೋಚನೆಗೊಂಡು ಸುಖಾಂತ್ಯ ಕಂಡ ಸಂತೋಷದಲ್ಲಿ ಶಿವಗಂಗೆಯ ಗಂಗಾಧರೇಶ್ವರನಿಗೆ ತನ್ನ ಪುತ್ರ ಪೌತ್ರ ಪರಂಪರೆಯ ಅಭಿವೃದ್ಧಿಯನ್ನು ಬಯಸಿ, ಮತ್ತು ತಂದೆ–ತಾಯಿಗಳಿಗೆ ಮೋಕ್ಷವನ್ನು ಕೋರಿ ಒಂದು ದೊಡ್ಡ ಘಂಟೆಯನ್ನು ಅರ್ಪಿಸುತ್ತಾನೆ.[86] ಈ ಘಟನೆಗೂ ಮೊದಲು ಕೆಂಪೇಗೌಡನು ಹೊರಡಿಸಿರುವ ಶಾಸನ ಎಂದರೆ 1578ರ ಮಾಸ್ತಿಯ ತಾಮ್ರ ಶಾಸನ. ಇದು ಒಂದು ಕೂಟಶಾಸನವಾಗಿರುವ ಸಾಧ್ಯತೆಗಳಿವೆ. ಆನಂತರದ ಕಾಲದಲ್ಲಿ ಅಕ್ಷರ ಬಲ್ಲವರು ಬರೆದುಕೊಂಡಿರುವ ತಾಮ್ರಪಟ ಇದಾಗಿದೆ. ಏಕೆಂದರೆ ಹಿರಿಯ ಕೆಂಪೇಗೌಡನ ಯಾವ ಸಮಕಾಲೀನ ಶಾಸನಗಳಲ್ಲಿಯೂ ಹಿರಿಯ ಕೆಂಪೇಗೌಡ ಎಂಬ ಪ್ರಯೋಗಗಳಿಲ್ಲ. ಅದೇನಿದ್ದರೂ ಅವನ ನಂತರ ಕಾಲದ ಶಾಸನಗಳಲ್ಲಿ ಮಾತ್ರ ಕಂಡುಬರುತ್ತದೆ.[87]

ಕೆಂಪೇಗೌಡನ ಬಂಧನದ ಘಟನೆಯನ್ನು ಸಮರ್ಥಿಸುವಂತಹ ಸಮಕಾಲೀನ ಆಧಾರಗಳ ಕೊರತೆ ಇವೆಯಾದರೂ, ಬಖೈರು ಮತ್ತು ಮೌಖಿಕ ಕಥನಗಳಲ್ಲಿ ರೂಢಿಯಲ್ಲಿರುವ ಆಧಾರಗಳನ್ನೇ ಅಂತಿಮ ಎನ್ನಲಾಗದು. ಬಖೈರುಗಳಲ್ಲಿರುವ ಕಾಲವು ಚಾರಿತ್ರಿಕ ಸಮರ್ಥನೆಯನ್ನು ನಿಖರವಾಗಿ ನೀಡುವಲ್ಲಿ ಸೋತಿದೆ. ಆದರೂ, ತಮ್ಮ ಹದ್ದುಮೀರಿದ ಪಾಳೆಯಗಾರರನ್ನು ವಿಜಯನಗರದ ಅರಸರು ನಿಯಂತ್ರಿಸುತ್ತಿದ್ದ ಕೆಲವು ಪ್ರಸಂಗಗಳಿವೆ. ಚಿತ್ರದುರ್ಗದ ಪಾಳೆಯಗಾರ ಮತ್ತಿ ತಿಮ್ಮಣ್ಣನಾಯಕನನ್ನು ಹೀಗೆಯೇ ಬಂಧಿಸಿ ಸೆರೆಯಲ್ಲಿಟ್ಟ ಪ್ರಕರಣ ಇದೆ. ಅದೇ ರೀತಿ ಮಧುಗಿರಿ ಮಹಾನಾಡಪ್ರಭು ಇಮ್ಮಡಿ ಚಿಕ್ಕಪ್ಪಗೌಡನ ವಿರುದ್ಧ ಚನ್ನಪಟ್ಟಣದ ಪಾಳೆಯಗಾರ ಚಾಡಿ ಹೇಳಿದ್ದರಿಂದ ವಿಜಯನಗರದ ದೊರೆಯೇ ಇವನ ಬಂಧನಕ್ಕೆ ಬರುತ್ತಾನೆ. ದೊರೆಯನ್ನೇ ರಾತ್ರಿ ಅಪಹರಿಸಿ ಕೊನೆಗೆ ತನ್ನ ರಾಜನಿಷ್ಠೆಯನ್ನು

ತೋರ್ಪಡಿಸುತ್ತಾನೆ. ಇದರಿಂದ ಚಿಕ್ಕಪ್ಪಗೌಡನ ನಿಷ್ಠೆಯನ್ನರಿತು ದೊರೆಯು ಅವನನ್ನು ಸನ್ಮಾನಿಸಿ ಹೊರಡುತ್ತಾನೆ. ಈ ಪ್ರಕರಣದಲ್ಲಿಯೂ ಚನ್ನಪಟ್ಟಣದ ಪಾಳೆಯಗಾರರನನ್ನು ಚಾಡಿಕೋರನಾಗಿ ಚಿತ್ರಿಸಲಾಗಿದೆ. ಬಹುಶಃ ಜಗದೇವರಾಯನು ವಿಜಯನಗರದ ಅರಸರಿಗೆ ಸಮೀಪಬಂಧುವಾಗಿದ್ದರಿಂದ ಈ ರೀತಿಯ ಪಿತೂರಿಗಳನ್ನು ನೆರೆಹೊರೆಯವರ ಮೇಲೆ ಮಾಡುತ್ತಿದ್ದನೆಂದು ಕಾಣುತ್ತದೆ.

ಇನ್ನೂ ಹಿರಿಯ ಕೆಂಪೇಗೌಡನ ವಿಚಾರಕ್ಕೆ ಬಂದರೆ, ಆತನು ಭೈರವ ನಾಣ್ಯ ಟಂಕಿಸಿದ ಬಗೆಗೆ ನಮಗೆ ಯಾವುದೇ ಸ್ಪಷ್ಟ ಆಧಾರಗಳು ದೊರೆತಿಲ್ಲ. ಇತ್ತೀಚೆಗೆ ಎಂ.ಜಿ. ನಾಗರಾಜ್ ಅವರು ರಾಮನಗರ–ಮಾಗಡಿ ಮಾರ್ಗದ ವಡವಾಟದ (ಲಕ್ಷ್ಮೀಪುರದ) ಸಮೀಪದ ಬೇಡಿತಿ ಕಲ್ಲಿನ ಬಳಿ ದೊರೆತ ಅವರೇಕಾಳಿನ ಗಾತ್ರದ 'ವಿಜಯ' ಎಂಬ ನಾಣ್ಯವು ಕೆಂಪೇಗೌಡನ ಕಾಲದ್ದು. 'ಭೈರವ' ನಾಣ್ಯವನ್ನು ಹಳ್ಳಿಗರು 'ವಿಜಯ' ಎಂಬ ಹೆಸರಿನಿಂದಲೂ ಕರೆಯುತ್ತಿದ್ದರು. ಬಹುಶಃ ವಿಜಯನಗರದ ಅನುಮತಿ ದೊರೆತ ಮೇಲೆ ಆ ಹೆಸರಿನ ಸಂಕೇತವನ್ನು ಭೈರವ ನಾಣ್ಯಕ್ಕೆ ಬಳಸಿರಬಹುದೆನ್ನಿಸುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.[88] ಆದರೆ ಈ ಅಭಿಪ್ರಾಯಕ್ಕೆ ಆಧಾರಗಳು ಸಾಲದು. ಭೈರವ ನಾಣ್ಯವೊಂದು ದೊರೆತರೆ ಕೆಂಪೇಗೌಡನ ಬಂಧನದ ವಾದಕ್ಕೆ ಹೆಚ್ಚುಶಕ್ತಿ ಬರುತ್ತದೆ. ಅಲ್ಲಿಯವರೆಗೂ ಕಾಯಬೇಕು.

ಹಿರಿಯ ಕೆಂಪೇಗೌಡರು ಕಲಿ ಮಾತ್ರನಾಗಿರದೇ ಕವಿ ಹೃದಯದವರೂ ಆಗಿದ್ದನು. ಸಂಗೀತ, ನಾಟಕ ಪ್ರೇಮಿಯೂ ಆಗಿದ್ದರು. ಇವರು 'ಗಂಗಾ–ಗೌರಿ ವಿಲಾಸಂ' ಎಂಬ ತೆಲುಗು ಯಕ್ಷಗಾನ ರಚಿಸಿದನೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಹುಲಿಯೂರು ದುರ್ಗದಲ್ಲಿದ್ದ ಕೆಂಪೇಗೌಡರ ಉಪಪತ್ನಿ ನಾಟಕಶಾಲೆಯ ಶೃಂಗಾರಮ್ಮ ಎಂಬಾಕೆ ಅಲ್ಲಿ ಒಂದು ಅಗ್ರಹಾರ ಮತ್ತು ಕೆರೆಯನ್ನು ನಿರ್ಮಿಸಿದ್ದಳೆಂದು ವಿದ್ವಾಂಸರು ಈವರೆಗೆ ಹೇಳುತ್ತಾ ಬಂದಿರುವುದುಂಟು. ಆದರೆ, ಈ ಅಭಿಪ್ರಾಯ ಸಮಂಜಸವಾದುದಲ್ಲ. ಎಂಬುದನ್ನು ಆರಂಭದಲ್ಲಿಯೇ ಚರ್ಚಿಸಲಾಗಿದೆ. ಅಲ್ಲದೆ, ಸಾಹಿತ್ಯಕ್ಕೆ ಸಂಬಂಧಿಸಿದ ಅಧ್ಯಾಯದಲ್ಲಿಯೂ ಮುಂದೆ ಚರ್ಚಿಸಲಾಗುವುದು. ಶೃಂಗಾರಮ್ಮ ಹಿರಿಯ ಕೆಂಪೇಗೌಡನ ಕಾಲಕ್ಕೆ ಸೇರಿದವರಲ್ಲ. ಇವಳಿಗೆ ಸಂಬಂಧಿಸಿದ ಹುಲಿಯೂರುದುರ್ಗದ ಶಾಸನಗಳ ಕಾಲವನ್ನು ತಪ್ಪಾಗಿ ನಿರ್ಧರಿಸಿರುವುದೇ ಈ ತಪ್ಪಿಗೆ ಕಾರಣವಾಗಿದೆ. ಈ ಕುರಿತು ಇಮ್ಮಡಿ ಹಿರಿಯ ಕೆಂಪೇಗೌಡನಿಗೆ ಸಂಬಂಧಿಸಿದ ಭಾಗದಲ್ಲಿ ಚರ್ಚಿಸಲಾಗುವುದು.

### 3.4.1.7 ಶ್ರೀರಂಗಪಟ್ಟಣ ಅಧಿಪತ್ಯದ ವಿಚಾರ

ವಿಜಯನಗರದ ದೊರೆ ಕೃಷ್ಣದೇವರಾಯನು ಉಮ್ಮತ್ತೂರಿನ ಗಂಗರಾಯನನ್ನು ಸೋಲಿಸಿ, ಉಮ್ಮತ್ತೂರನ್ನು ಆಕ್ರಮಿಸಿದನು. ಗಂಗರಾಯನು ಕಾವೇರಿಯಲ್ಲಿ ಮುಳುಗಿ ಸತ್ತನು. ಕೃಷ್ಣದೇವರಾಯನು ಗೆದ್ದ ನೂತನ ರಾಜ್ಯವು ವಿಜಯನಗರ ಸಾಮ್ರಾಜ್ಯದ ಹೊಸ ಪ್ರಾಂತವಾಯಿತು. ಶ್ರೀರಂಗಪಟ್ಟಣ ಅದರ ರಾಜಧಾನಿಯಾಯಿತು. ಸಾಳ್ವ ಗೋವಿಂದರಾಯನು ಅದರ ಮಾಂಡಲಿಕನಾಗಿ ನಿಯುಕ್ತನಾದನು. ಸ್ಥಳೀಯ ಆಡಳಿತವು ಮೂರು ಮಂದಿ ಸ್ಥಾನಿಕ ನಾಯಕರಲ್ಲಿ ನಿಹಿತವಾಯಿತು. ಅವರಲ್ಲಿ ಬೆಂಗಳೂರ ಕೆಂಪೇಗೌಡನೂ ಒಬ್ಬನೆಂದು ಎಂ.ವಿ. ಕೃಷ್ಣರಾವ್ ಅವರು ಅಭಿಪ್ರಾಯಪಟ್ಟಿದ್ದಾರೆ.[89]

ಈ ಅಭಿಪ್ರಾಯವನ್ನು ಪರಿಶೀಲಿಸಿರುವ ಎಂ.ಜಿ. ಮಂಜುನಾಥ ಅವರು ಈ ಹೇಳಿಕೆಗೆ ಯಾವುದೇ ಅಧಾರಗಳೂ ಇಲ್ಲ. **'ತೆಲುಗು ಕವಿ ಜೀವಿತಮು'** ಗ್ರಂಥದಲ್ಲಿ ಶ್ರೀರಂಗಪಟ್ಟಣದಲ್ಲಿ ಸ್ಥಾನಿಕ ಅಧಿಕಾರಿಯಾಗಿ ಕೃಷ್ಣರಾಯನಿಂದ ನೇಮಿಸಲ್ಪಟ್ಟ ಕಾಂಬಗೌಡ ಎಂಬ ವ್ಯಕ್ತಿಯ ಹೆಸರು ದೊರೆಯುತ್ತದೆ. ಆತನಿಗೂ ಕೆಂಪೇಗೌಡನಿಗೂ ಯಾವ ಸಂಬಂಧವೂ ಇಲ್ಲ. ಕೃಷ್ಣರಾಯನು ಉಮ್ಮತ್ತೂರನ್ನು ಜನಿಸಿದ್ದು 1512ರಲ್ಲಿ. ಆ ಕಾಲಘಟ್ಟದಲ್ಲಿ ಕೆಂಪೇಗೌಡನು ಬಾಲಕನಾಗಿದ್ದಂತೆ ತೋರುತ್ತದೆ ಎಂದು ಹೇಳಿದ್ದಾರೆ.[90] ಚಾರಿತ್ರಿಕವಾಗಿ ಪರಿಶೀಲಿಸಿದಾಗ ಮಂಜುನಾಥ ಅವರ ಅಭಿಪ್ರಾಯ ಸರಿಯಾಗಿರುವಂತೆ ತೋರುತ್ತದೆ. ಹಿರಿಯ ಕೆಂಪೇಗೌಡನ ಆಳ್ವಿಕೆಯ ಕಾಲ 1513ರಿಂದ ಆರಂಭವಾಯಿತೆಂದು ವಾದಿಸುವ ವಿದ್ವಾಂಸರಿಗೆ ಬಹುಶಃ ಈ ಅಂಶ ಪೂರಕವಾಗಿರುವಂತೆ ಕಾಣುತ್ತದೆ.[91]

### 3.4.1.8 ಸಮಾಜ ಸುಧಾರಕನಾಗಿ ಕೆಂಪೇಗೌಡ

ಮೊರಸು ಒಕ್ಕಲಿಗರಲ್ಲಿ ಮನೆಯ ಹಿರಿಮಗಳ ಮದುವೆಯ ಸಂದರ್ಭದಲ್ಲಿ ತಾಯಿಯಾದವಳು ತನ್ನ ಕಿರುಬೆರಳು ಮತ್ತು ಉಂಗುರಬೆರಳಿನ ಕೊನೆಯ ಗಿಣ್ಣುಗಳನ್ನು ದೇವರಿಗೆ ಅರ್ಪಿಸುವ ಸಂಪ್ರಾಯವಿತ್ತು. ಆದರೆ ಕೆಂಪೇಗೌಡನು ಅದುವರೆಗೂ ಅಸ್ತಿತ್ವದಲ್ಲಿದ್ದು ದೇಶದ ಪ್ರಭುಗಳ ಘನತೆ ಗೌರವಗಳಿಗೆ ಕುಂದುಂಟು ಮಾಡುವಂತಹ ಹಳೆಯ ಮೂಡನಂಬಿಕೆಯ ಸಂಪ್ರದಾಯವಾದ ಸ್ತ್ರೀಯರ ಎರಡು ಬೆರಳುಗಳನ್ನು ಕತ್ತರಿಸುವ ಪರಿಪಾಠವನ್ನು ಕೊನೆಗಾಣಿಸಿದನು. ದೇವರ ಹೆಸರಿನಲ್ಲಿ ನಡೆಯುತ್ತಿದ್ದ ಈ ಹಳೆಯ ಧಾರ್ಮಿಕ ಆಚಾರವು ಕೆಂಪೇಗೌಡನಿಂದ ನಿಲ್ಲಿಸಲ್ಪಟ್ಟಿತು. ಅದರ ಬದಲಿಗೆ ಚಿನ್ನ ಬೆಳ್ಳಿಯ ಬೆರಳುಗಳನ್ನು ಸಮರ್ಪಿಸುವ

ಪದ್ಧತಿಯು ಬಳಕೆಗೆ ಬಂದಿತು. ಕೆಂಪೇಗೌಡನು ಗುಪ್ತವಾಗಿ ಶಿವಭಕ್ತನಾದನೆಂದು ತಿಳಿದುಬರುತ್ತದೆ.[92]

**'ವೀರಭದ್ರ ವಿಜಯ'**ದಲ್ಲಿ ಹಿರಿಯ ಕೆಂಪೇಗೌಡನನ್ನು ಕುರಿತು ವರ್ಣನೆ ಇದೆ. ಯಲಹಂಕ ವಂಶವೆಂಬ ಹೆಸರಿನ ರಾಜವಂಶದಲ್ಲಿ ಅಮಿತ ಮಹಿಮೆಯುಳ್ಳವನಾದ ಕೀರ್ತಿ ಪ್ರತಾಪಗಳಿಂದ ಜನಪ್ರಿಯನಾಗಿದ್ದ ಶ್ರೇಷ್ಠ ಗುಣಗಳಿಂದ ಕೂಡಿದ ಹಿರಿಯ ಕೆಂಪೇಂದ್ರನೆಂಬ ರಾಜನಿದ್ದನು. ಎಲ್ಲಾ ವಿಷಯಗಳಲ್ಲೂ ಅಭಿರುಚಿಯುಳ್ಳವನಾಗಿದ್ದ ಇವನ ಯಶೋಮಂಜರಿಯು ಕರ್ಣಾಟ, ದ್ರವಿಡ ಮತ್ತು ಆಂಧ್ರ ವನಿತೆಯರ ಕರ್ಣಪೂರದಂತೆ ಸುಶೋಭಿತವಾಗಿತ್ತು. ಇವನು ತನ್ನ ಬಾಹುಬಲದಿಂದ ಅನೇಕ ಶತ್ರುರಾಜರನ್ನು ಗೆದ್ದಿದ್ದನು. ಆಹಾರವನ್ನು ಬಿಟ್ಟು ಒಣಗಿದ್ದ ಶತ್ರುಗಳ ಕಣ್ಣೀರಿನ ಹೊನಲನ್ನು ಹೋಗಲಾಡಿಸಿ, ಅವರನ್ನು ಕರುಣೆಯಿಂದ ರಕ್ಷಿಸಲೆಂದೇ ಖಡ್ಗವನ್ನು ಧರಿಸಿದ್ದ ಇವನ ರೀತಿ ವಿಚಿತ್ರವಾಗಿತ್ತೆಂದು ಕವಿ ಏಕಾಮ್ರ ದೀಕ್ಷಿತನು ವರ್ಣಿಸಿದ್ದಾನೆ.[93]

ಹಿರಿಯ ಕೆಂಪೇಗೌಡನಿಗೆ ಪುತ್ರ ಸಂತಾನ ತಡವಾಗಿರುವ ಸಾಧ್ಯತೆಗಳಿವೆ. ಶಿವಗಂಗೆಯ ಘಂಟೆ ಮೇಲೆ "ಯೆಲಹಕನಾಡಪ್ರಭು ಕೆಂಪನಂಜೆಗೌಡರ ಮಕ್ಕಳೂ ಕೆಂಪೇಗೌಡರೂ ತಮಗೆ ಪುತ್ರ ಪೌತ್ರ ಪಾರಂಪರೆಯಾಭಿಉದ್ರಿಧ್ಧಿಯಾಗಲಿ ಯೆಂದು ತಂಮ ಪಿತ್ರು ಮಾತ್ರುಗಳಿಗೆ ಮೋಕ್ಷವಾಗಲಿ..." ಎಂಬುದಾಗಿ ಶಾಸನವಿದೆ. ಈ ಶಾಸನದ ಕಾಲ 1588. "ಬಹಳ ವರ್ಷಗಳು ಮಕ್ಕಳಿದ್ದಿರಲಿಲ್ಲದುದರಿಂದಲೋ ಏನೋ ಹಿರಿಯ ಕೆಂಪೇಗೌಡನು ಈ ದಾನಶಾಸನದಲ್ಲಿ 'ಪುತ್ರ ಪೌತ್ರಾಭಿವೃದ್ಧಿ'ಯನ್ನು ಕೋರಿಕೊಂಡಿದ್ದಾನೆ. ಇಷ್ಟು ಹೊತ್ತಿಗೆ ಇಮ್ಮಡಿ ಕೆಂಪೇಗೌಡನು ಹುಟ್ಟಿದ್ದರೂ ಬಹಳ ಕಾಲಕ್ಕಾದ ತನ್ನ ಏಕಪುತ್ರನ ಮತ್ತು ಅವನ ಪೀಳಿಗದ ಶ್ರೇಯಸ್ಸನ್ನು ಬಯಸಿ ಈ ಹಿರಿಯ ಕೆಂಪರಸನು ಹೀಗೆ ಬರೆಸಿದ್ದರೂ ಇರಬಹುದು"[94] ಎಂದು ಘಂಟೆಯ ಮೇಲಿನ ಶಾಸನವನ್ನು ಕರ್ಲಮಂಗಲಂ ಶ್ರೀಕಂಠಯ್ಯ ವಿಶ್ಲೇಷಿಸುತ್ತಾರೆ. ಇವರ ಊಹೆ ನಿಜವಾಗಿರುವ ಸಾಧ್ಯತೆಗಳೂ ಇವೆ. ಏಕೆಂದರೆ, ಕೆಂಪೇಗೌಡ 1532–1597ರವರೆಗೆ ಸುಮಾರು 65 ವರ್ಷಗಳ ಕಾಲ ಆಳ್ವಿಕೆ ನಡೆಸಿರುವುದ ಕೂಡ ಈ ಅಂಶವನ್ನು ಪುಷ್ಟೀಕರಿಸುತ್ತದೆ. ಇಮ್ಮಡಿ ಕೆಂಪೇಗೌಡನು ಬಹುಶಃ 1597ರಲ್ಲಿ ಪ್ರಾಪ್ತ ವಯಸ್ಸಿಗೆ ಬಂದಾಗ ತಂದೆಯಿಂದ ಅಧಿಕಾರ ಸ್ವೀಕರಿಸಿರುವ ಸಾಧ್ಯತೆಗಳಿವೆ. ಏಕೆಂದರೆ, ಈತನು ಕೂಡ 1640ರ ದಶಕದವರೆಗೂ ಆಳ್ವಿಕೆ ಮಾಡಿರುವುದನ್ನು ಗಮನಿಸಿದರೆ ತಡವಾಗಿ ಹುಟ್ಟಿದನೆಂದು ಊಹಿಸಲು ಎಲ್ಲಾ ಸಾಧ್ಯತೆಗಳೂ ಇವೆ. ಹಿರಿಯ ಕೆಂಪೇಗೌಡನು 1597ರಲ್ಲಿ ತನ್ನ ಏಕೈಕ ಪುತ್ರನಾದ ಇಮ್ಮಡಿ ಕೆಂಪೇಗೌಡನಿಗೆ ಅಧಿಕಾರವಹಿಸಿಕೊಟ್ಟನು. ಅಲ್ಲದೆ, 1608ರವರೆಗೂ ಬದುಕಿದ್ದನೆಂಬುದಕ್ಕೆ ಶಿವಗಂಗೆಯ ಅವನದೇ

ಪ್ರತಿಮೆಯ ಮೇಲಿನ ಶಾಸನ ಸಾಕ್ಷಿಯಾಗಿದೆ. ಆದರೆ ಇತ್ತೀಚೆಗೆ ಮಾಗಡಿ–ಕುಣಿಗಲ್ ನಡುವೆ ಇರುವ ಕೆಂಪಾಪುರದಲ್ಲಿ ದೊರೆತ ಮಂಟಪವೊಂದರ ಮೇಲಿನ ಶಾಸನವನ್ನು ಆಧರಿಸಿ (ಚಿತ್ರ–25), ಹಿರಿಯ ಕೆಂಪೇಗೌಡನು ಯುದ್ಧದಲ್ಲಿ ಹೋರಾಡಿ ಮಡಿದನೆಂದೂ ಹಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[95] ಆದರೆ ಈ ಸಮಾಧಿಯು ಇಮ್ಮಡಿ ಹಿರಿಯ ಕೆಂಪೇಗೌಡನದೆಂದು ಸಂಶೋಧಕರೊಬ್ಬರು ವಾದಿಸುತ್ತಾರೆ.[96] ಇದೇ ಅಭಿಪ್ರಾಯ ಪ್ರಸ್ತುತ ಅಧ್ಯಯನಕಾರರದೂ ಆಗಿರುವುದರಿಂದ ಈ ಚರ್ಚೆಯನ್ನು ಇಮ್ಮಡಿ ಹಿರಿಯ ಕೆಂಪೇಗೌಡನ ಕುರಿತು ಚರ್ಚಿಸುವ ಸಂದರ್ಭದಲ್ಲಿ ಗಮನಿಸಲಾಗುವುದು.

ಕೆಂಪೇಗೌಡನ ನಂತರ ಅವನ ಮಗನಾದ ಇಮ್ಮಡಿ ಕೆಂಪೇಗೌಡನು ಕ್ರಿ.ಶ 1597ರಲ್ಲಿ ಅಧಿಕಾರಕ್ಕೆ ಬಂದನು. ಆ ಮೂಲಕ ವಿಶ್ರಾಂತ ಜೀವನಕ್ಕೆ ತೆರಳಿದ ಕೆಂಪೇಗೌಡನು ತನ್ನ ಆರಾಧ್ಯ ದೈವನಾದ ಶಿವಗಂಗೆಯ ಗಂಗಾಧರೇಶ್ವನ ಆರಾಧನೆಯಲ್ಲಿ ಕಾಲಕಳೆಯತೊಡಗಿದಂತೆ ತೋರುತ್ತದೆ. ಏಕೆಂದರೆ, ಕೆಂಪೇಗೌಡನು 1510ರಲ್ಲಿ ಜನಿಸಿದನೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ನಿಖರವಾದ ಆಧಾರ ಸಿಗುವವರೆಗೂ ಅದೇ ವರ್ಷವನ್ನು ಕೆಂಪೇಗೌಡನ ಜನನ ವರ್ಷವೆಂದು ತಾತ್ಕಾಲಿಕವಾಗಿ ಪರಿಗಣಿಸಬೇಕಾಗುತ್ತದೆ. ಅಂದರೆ ತನ್ನ ಮಗನಿಗೆ ಅಧಿಕಾರ ವಹಿಸಿಕೊಡುವ ಹೊತ್ತಿಗೆ ಕೆಂಪೇಗೌಡನಿಗೆ 87 ವರ್ಷ ವಯಸ್ಸಾಗಿತ್ತು. ಆ ವೃದ್ಧಾಪ್ಯದ ಕೊನೆಯ ದಿನಗಳಲ್ಲಿ ತನ್ನ ಮಗನಿಗೆ ಅಧಿಕಾರವಹಿಸಿ ಕೆಂಪೇಗೌಡನು ಹೇಗೆ ಕಾಲ ದೂಡುತ್ತಿದ್ದನು ಎಂಬುದನ್ನು ತಿಳಿಯಲು ಕ್ರಿ.ಶ 1608ರ ಶಿವಗಂಗೆಯ ಗಂಗಾಧರೇಶ್ವರ ದೇವಸ್ಥಾನದಲ್ಲಿರುವ ಕೆಂಪೇಗೌಡನ ಭಕ್ತಮುದ್ರೆಯಲ್ಲಿರುವ ಪ್ರತಿಮೆಯ ಪೀಠದ ಶಾಸನವೇ ಸಾಕ್ಷಿ. ಬಹುಶಃ ಆರಾಧ್ಯ ದೈವನ ಪೂಜೆ ಪುನಸ್ಕಾರಗಳಲ್ಲಿ ತನ್ನ ವೃದ್ಧಾಪ್ಯದ ದಿನಗಳನ್ನು ಕೆಂಪೇಗೌಡನು ಕಳೆದಂತೆ ತೋರುತ್ತದೆ.

### 3.4.2 ಇಮ್ಮಡಿ ಕೆಂಪೇಗೌಡ (1597–ಸು. 1644)

ಕೆಂಪೇಗೌಡನ ಮಗನಾದ ಇಮ್ಮಡಿ ಕೆಂಪೇಗೌಡನು ಮಹಾಪರಾಕ್ರಮಿ ಎಂದು ಸಮಕಾಲೀನ ಸಾಹಿತ್ಯಗಳಿಂದ ತಿಳಿದು ಬರುತ್ತದೆ. ವಿಶೇಷವಾಗಿ **'ಕೆಂಪರಾಯ ತಮ್ಮರಾಯನ ಪದಗಳು'** ಕೃತಿಯಲ್ಲಿ ಗಮನಿಸಬಹುದು. ಈ ಕೃತಿಯನ್ನು ಕರ್ಲಮಂಗಲಂ ಶ್ರೀಕಂಠಯ್ಯನವರು **'ಗೌಡಕುಲ ವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ'** (1961) ಎಂಬ ಹೆಸರಿನಲ್ಲಿ ಸಂಪಾದಿಸಿದರು. ಮುಂದೆ ಎಂ.ಜಿ ಮಂಜುನಾಥ್ ಅವರು ಸಂಪಾದಿಸಿದ **ಹೊನ್ನಕವಿಯ ಸಮಗ್ರಸಾಹಿತ್ಯ** (2012) ಕೃತಿಯಲ್ಲಿ **ಕೆಂಪರಾಯ ತಮ್ಮರಾಯನ ಪದಗಳು** ಸೇರಿವೆ. ಇದು ಎರಡು ಭಾಗಗಳಿಂದ ಕೂಡಿದ್ದು,

ಮೊದಲ ಭಾಗದಲ್ಲಿ ಇಮ್ಮಡಿ ಕೆಂಪೇಗೌಡನು ಅಯ್ಯಮಗೌಡನೊಡನೆ ನಡೆಸಿದ ಕದನವನ್ನು ಮತ್ತು ಎರಡನೇ ಭಾಗದಲ್ಲಿ ಚಕ್ರವರ್ತಿ ವೆಂಕಟಪತಿರಾಯನನ್ನು ಶತೃಗಳ ಆಕ್ರಮಣದಿಂದ ಪಾರು ಮಾಡಿ ಮತ್ತೆ ಪಟ್ಟಕಟ್ಟಿದ ಸಂಗತಿಯನ್ನು ಕಾಣಬಹುದು.[97] ಈ ಎರಡೂ ಭಾಗಗಳನ್ನು ಕುರಿತು ಪಿ.ವಿ.ಕೃಷ್ಣಮೂರ್ತಿ ಅವರು ವಿದ್ವತ್ಪೂರ್ಣ ಲೇಖನಗಳನ್ನು ಬರೆದಿದ್ದಾರೆ.[98] ಶ್ರೀಕಂಠಯ್ಯನವರು **ಕೆಂಪೇಗೌಡನ ಜಯಪ್ರಶಸ್ತಿ**ಯ ಕರ್ತೃ ಗುರು ನಂಜೇಶ ಎಂದು ಅಭಿಪ್ರಾಯ ಪಟ್ಟಿದ್ದರು. ಆದರೆ ಇತ್ತೀಚೆಗೆ ಈ ಕೃತಿಯನ್ನು ಬರೆದವನು ಶಿವಗಂಗೆಯ ಹೊನ್ನಕವಿ ಎಂಬುದನ್ನು ಬಿ. ನಂಜುಂಡಸ್ವಾಮಿ ಅವರು ತೋರಿಸಿಕೊಟ್ಟಿದ್ದಾರೆ. ಈ ಕೃತಿಯು ಇಮ್ಮಡಿ ಕೆಂಪೇಗೌಡನ ಸೈನಿಕ ಸಾಧನೆಗಳನ್ನು ಹಾಡುಗಬ್ಬದ ರೂಪದಲ್ಲಿ ಪ್ರಶಂಸಿಸಿದೆ.

ಇಮ್ಮಡಿ ಕೆಂಪೇಗೌಡನ ಸಮಕಾಲೀನ ದಕ್ಷಿಣ ಕರ್ನಾಟಕದ ಪ್ರಮುಖ ಅರಸರಲ್ಲಿ ಮೈಸೂರಿನ ರಾಜ ಒಡೆಯರ್ (1578–1617), ಆರನೇ ಚಾಮರಾಜ ಒಡೆಯರ್ (1617–1637), ಇಮ್ಮಡಿ ರಾಜ ಒಡೆಯರ್, ನರಸರಾಜ ಒಡೆಯರ್ (1638–1659) ಪ್ರಮುಖರು. ಇವರಲ್ಲದೆ, ಹದಿನಾಡಿನಲ್ಲಿ ರಾಮರಾಜನಾಯಕ, ಚನ್ನಪಟ್ಟಣದ ರಾಣಿ ಪೆದ್ದ ಜಗದೇವರಾಯ, ಮಧುರೆಯ ವೀರಪ್ಪನಾಯಕ (1572–1595) ಪ್ರಮುಖರು.

### 3.4.2.1 ಅಯ್ಯಮಗೌಡನೊಡನೆ ಕದನ

ಸುಗುಟೂರಿನ ಪ್ರಭು ಇಮ್ಮಡಿ ತಮ್ಮೇಗೌಡನು ಮರಣ ಹೊಂದಿದಾಗ ಆತನ ಭಂಡಾರ, ಆನೆ ಕುದುರೆ ಮುಂತಾದ ಸಂಪತ್ತನ್ನು ಅಯ್ಯಮಗೌಡ ಎಂಬಾತನು ವಶಪಡಿಸಿಕೊಂಡನು. ಅಲ್ಲದೆ ಬಿಲ್ಲಮಗೊಂಡನಹಳ್ಳಿ, ಹೊಸಕೋಟೆ, ಬೇಟೆರಾಯನಗುಡಿ ಮೊದಲಾದ ಕೋಟೆಗಳನ್ನು ಗೆದ್ದುಕೊಂಡನು. ಆಗ ಇಮ್ಮಡಿ ಕೆಂಪೇಗೌಡನು ಇಮ್ಮಡಿ ತಮ್ಮೇಗೌಡನ ಮಗನಾದ ಮುಮ್ಮಡಿ ತಮ್ಮೇಗೌಡನಿಗೆ ಆಶ್ರಯ ನೀಡಿ, ಕೋಳಾಲ (ಕೋಲಾರ), ಬಿಲಗೊಂಡನಹಳ್ಳಿ (ಸರ್ಜಾಪುರ), ಬೇಟೆರಾಯನಗುಡಿ ಮುಂತಾದ ಕೋಟೆಗಳನ್ನು ಗೆದ್ದು ಭದ್ರಪಡಿಸಿ ಸೈನ್ಯ ಸಹಿತ ಹೊಸಕೋಟೆಯನ್ನು ಮುತ್ತಿಗೆ ಹಾಕಿದನು. ಆಗ ಅಯ್ಯಮಗೌಡನು ಪೆನುಗೊಂಡೆಗೆ ತನ್ನ ಮಂತ್ರಿಯನ್ನು ಕಳುಹಿಸಿ ವಿಜಯನಗರದ ಅರಸ ವೆಂಕಟಪತಿರಾಯನ್ನು ಒಲಿಸಿಕೊಂಡು ಕೆಂಪೇಗೌಡನ ವಿರುದ್ಧದ ಹೋರಾಟಕ್ಕೆ ಸಹಾಯವನ್ನು ಯಾಚಿಸುತ್ತಾನೆ. ಆಗ ವೆಂಕಟಪತಿರಾಯನು ಅಯ್ಯಮಗೌಡನ ಪರವಾಗಿ ಅನೇಕ ವೀರರನ್ನು ಕಟ್ಟಿಕೊಂಡು ಯುದ್ಧ ಸನ್ನದ್ಧನಾಗಿ ಬಂದು ಹೊಸಕೋಟೆಯ ಉತ್ತರದಿಕ್ಕಿನಲ್ಲಿ ಇಮ್ಮಡಿ ಕೆಂಪೇಗೌಡನ ಸೈನ್ಯವನ್ನು ಮುಖಾಮುಖಿಯಾಗುತ್ತಾನೆ. ನಡೆದ ಘೋರ ಯುದ್ಧದಲ್ಲಿ ಕೆಂಪೇಗೌಡನು ಎದುರಾಳಿಗಳಲ್ಲಿ

ಭೀತಿಯನ್ನುಂಟುಮಾಡುತ್ತಾನೆ. ವೆಂಕಟಪತಿರಾಯನೊಂದಿಗೆ ಬಂದ ವೀರರು ರಾಯನನ್ನು ಬಿಟ್ಟು ಫಲಾಯನಗೈದರು. ಕೊನೆಗೆ ವೆಂಕಟಪತಿರಾಯ ಅಲ್ಲಿಂದ ಪೆನುಗೊಂಡೆಗೆ ಹಿಂತಿರುಗಿದನು. ನಂತರ ಇಮ್ಮಡಿ ಕೆಂಪೇಗೌಡನು ಹೊಸಕೋಟೆಯನ್ನು ವಶಪಡಿಸಿಕೊಂಡು ಅಯ್ಯಮಗೌಡ ಮತ್ತು ಅವನ ಸಹಚರರನ್ನು ಕೊಲ್ಲುತ್ತಾನೆ. ಈ ಘಟನೆಯು ಕ್ರಿ.ಶ. 1612ರಲ್ಲಿ ಜರುಗಿತು. ಈ ಸುದ್ದಿಯನ್ನು ಕೇಳಿ ಅನಂತರಾಜ, ಮಾಕರಾಜ, ಯಾಚಮನಾಯಕ, ಜಗ್ಗರಾಜ, ಜಗದೇವರಾಯ, ತಿಮ್ಮೇಂದ್ರ, ಶಿರಾದ ರಂಗಪ್ಪ, ದಳವಾಯಿ ಚುಂಚಣ್ಣ, ಇಮ್ಮಡಿ ಬೈರ ಮುಂತಾದ ಪಾಳೆಯಗಾರರು ಒಟ್ಟಾಗಿ ಬೆಂಗಳೂರು ನಗರವನ್ನು ಮುತ್ತಿದರೂ ಜಯಕಾಣದೆ ಸೋತು ಹಿಮ್ಮೆಟ್ಟಿದರು. ಹೀಗೆ ಇಮ್ಮಡಿ ಕೆಂಪೇಗೌಡನು ಚಕ್ರವರ್ತಿ ವೆಂಕಟಪತಿರಾಯನನ್ನು ಮೆಚ್ಚಿಸಿದನಲ್ಲದೆ, ಸುಗುಟೂರು ಮನೆತನದಲ್ಲಿ ಮುಮ್ಮಡಿ ತಮ್ಮೇಗೌಡನನ್ನು ಅಧಿಕಾರಕ್ಕೆ ತಂದನು. ಈ ಜಯದಿಂದ ಇಮ್ಮಡಿ ಕೆಂಪೇಗೌಡನ ಕೀರ್ತಿಯು ಕಾಶಿಯಿಂದ ರಾಮೇಶ್ವರದವರೆಗೆ ಹಬ್ಬಿತು.[99] ಇಮ್ಮಡಿ ತಮ್ಮೇಗೌಡನ ಸಂಪತ್ತನ್ನು ವಶಪಡಿಸಿಕೊಂಡು ಅಂತಿಮವಾಗಿ ಇಮ್ಮಡಿ ಕೆಂಪೇಗೌಡನಿಂದ ಸೋತು ಕೊಲ್ಲಲ್ಪಟ್ಟ ಅಯ್ಯಮಗೌಡನು ಇಮ್ಮಡಿ ತಮ್ಮೇಗೌಡನ ತಮ್ಮನೆಂದು ಪಿ.ವಿ.ಕೃಷ್ಣಮೂರ್ತಿ ಅವರು ಅಭಿಪ್ರಾಯ ಪಟ್ಟಿದ್ದಾರೆ.[100] ಈ ಘಟನೆಯು ಇಮ್ಮಡಿ ಕೆಂಪೇಗೌಡನ ಆಳ್ವಿಕೆಯ 15ನೆಯ ವರ್ಷವಾದ ಶಕ 1534ನೆಯ ಪರಿಧಾವಿ ವರ್ಷದಲ್ಲಿ (ಕ್ರಿ.ಶ 1612ರಲ್ಲಿ) ಜರುಗಿತೆಂದು ಈ ಕಾವ್ಯವು ತಿಳಿಸುತ್ತದೆ.

**3.4.2.2 ಶ್ರೀರಂಗರಾಯನೊಡನೆ ಯುದ್ಧ:** ಇಮ್ಮಡಿ ಕೆಂಪೇಗೌಡನ ಸಾಧನೆಯನ್ನು ಕೇಳಿ ಅಸೂಯೆಗೊಂಡ ಶ್ರೀರಂಗಪಟ್ಟಣದ ರಾಜನಾಗಿದ್ದ 'ಶ್ರೀರಂಗರಾಯ'ನು ಇಮ್ಮಡಿ ಕೆಂಪೇಗೌಡನನ್ನು ಕೆಣಕಿ ಅವನ ರಾಜ್ಯದ ಮೇಲೆ ಆಕ್ರಮಣ ನಡೆಸಿದನು. ಇಮ್ಮಡಿ ಕೆಂಪೇಗೌಡನು ಅವನ ಬಲಿಷ್ಠ ಸೈನ್ಯವನ್ನು ಹಾರು ಹೊಡೆದು ಸೋಲಿಸಿದನಲ್ಲದೆ ಅವನ ಆನೆ–ಕುದುರೆಗಳೆಲ್ಲವನ್ನು ಕಸಿದುಕೊಂಡನು. ಈ ಯುದ್ಧದಲ್ಲಿ ಎಲ್ಲವನ್ನು ಕಳೆದುಕೊಂಡು ಶ್ರೀರಂಗರಾಯ ದುರ್ಬಲನಾದನು.**[101]** ಈ ವಿಜಯದ ವೃತ್ತಾಂತವು **ವೀರಭದ್ರ ವಿಜಯ**ದಲ್ಲಿ ಹೀಗೆ ಬಣ್ಣಿಸಲ್ಪಟ್ಟಿದೆ:[102] **"**ಶ್ರೀರಂಗರಾಯನ ಚತುರಂಗ ಬಲಾಂಬು ರಾಶಿಯನ್ನು ತನ್ನ ಬಾಹುಬಲವೆಂಬ ಮಂಥರ ಪರ್ವತದಿಂದ ಕಡೆದು ಅಲ್ಲೋಲ ಕಲ್ಲೋಲಗೊಳಿಸಿದವನೂ, ಶ್ರೀರಂಗರಾಯನ ಗಜ, ತುರುಗ ಸಮೂಹವನ್ನು ಸೆರೆ ಹಿಡಿದುಕೊಂಡವನೆಂದು ಪ್ರಶಂಸೆಗೊಳಗಾದ ಇವನು ನಿಜವಾಗಿ ದೇವೇಂದ್ರನೇ ಆಗಿದ್ದ.**"**

ಈ ಯುದ್ಧದಲ್ಲಿ ದುರ್ಬಲನಾದ ಶ್ರೀರಂಗರಾಯನನ್ನು ಮೈಸೂರಿನ ರಾಜಒಡೆಯರ್ ಸೋಲಿಸಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡು ತನ್ನ ರಾಜಧಾನಿ ಮಾಡಿಕೊಂಡನು ಎಂದು ಶ್ರೀಕಂಠಯ್ಯನವರು ಹೇಳಿದ್ದಾರೆ. ಆದರೆ, ಕ್ರಿ.ಶ. 1610ರಲ್ಲಿಯೇ ರಾಜ ಒಡೆಯರು ಶ್ರೀರಂಗರಾಯನಿಂದ ಶ್ರೀರಂಗಪಟ್ಟಣವನ್ನು ಕಸಿದುಕೊಂಡ ಬಗ್ಗೆ **'ಮಹಾರಾಜರ ವಂಶಾವಳಿ'**ಯಿಂದ ತಿಳಿದು ಬರುತ್ತದೆ. ಆದ್ದರಿಂದ 1610ಕ್ಕೆ ಮೊದಲು ಶ್ರೀರಂಗರಾಯನೊಡನೆ ಕೆಂಪೇಗೌಡ ಯುದ್ಧ ಮಾಡಿರಬಹುದಾದ ಸಾಧ್ಯತೆಗಳನ್ನು ಕುರಿತು ಮರುಪರಿಶೀಲಿಸಬೇಕಾದ ಅಗತ್ಯವಿದೆ.

### 3.4.2.3 ವಿಜಯನಗರ ಸಾಮ್ರಾಟನ ರಕ್ಷಣೆಗಾಗಿ ಹೋರಾಟ

ಇಮ್ಮಡಿ ಕೆಂಪೇಗೌಡನು ಕ್ರಿ.ಶ. 1634ರ ಸುಮಾರಿನಲ್ಲಿ ಮತ್ತೊಂದು ಯುದ್ಧದಲ್ಲಿ ಪಾಲ್ಗೊಳ್ಳಬೇಕಾಯಿತು. ವಿಜಯನಗರ ಸಾಮ್ರಾಜ್ಯದ ಸಿಂಹಾಸನವು ಅಂತಃಕಲಹದಿಂದಾಗಿ ದಿಕ್ಕಿಲ್ಲದಂತಾಗಿತ್ತು. ದುರ್ಬಲನಾದ ವಿಜಯನಗರದ ಸಾಮ್ರಾಟ 2ನೇ ವೆಂಕಟಪತಿಯ ಸಾಮಂತ ರಾಜರು, ಪಾಳೆಯಗಾರರು ಸಂಚು ಹೂಡಿ ಪೆನುಗೊಂಡೆಯನ್ನು ಮುತ್ತಿದರು. ಆಗ ವೆಂಕಟಪತಿಯು ಮಂತ್ರಿಯ ಮೂಲಕ ಇಮ್ಮಡಿ ಕೆಂಪೇಗೌಡನಿಗೆ ರಾಯಸ ಕಳುಹಿಸಿ ತನ್ನ ರಾಜ್ಯವನ್ನು ಕಾಪಾಡಲು ಕೋರಿದನು. ಕೂಡಲೇ ಸ್ಪಂದಿಸಿದ ಕೆಂಪೇಗೌಡನು 300 ಆನೆಗಳು, ನಾಲ್ಕೈದು ಸಾವಿರ ಕುದುರೆ ಮತ್ತು ಒಂಟೆಗಳೊಂದಿಗೆ ತಿಮ್ಮರಾಜ, ರಂಗಪತಿರಾಜ, ನಂದ್ಯಾಲದ ವೆಂಕಪರಾಜ, ನೆಲಗೋಟ ತಿಮ್ಮನಾಯಕ, ವೆಂಕಟಪ್ಪ ನಾಯಕ, ರಾಯಭದ್ರನೃಪ, ಪಾವಗಡದ ಕೃಷ್ಣಪ್ಪ, ನಾರಣೇಂದ್ರ, ದಳವಾಯಿ ಪಾಪಯ್ಯ, ಜಗದೇವರಾಯ, ಚಿಕ್ಕರಾಯ ತಮ್ಮಯ್ಯಗೌಡ ಮುಂತಾದ ಪಾಳೆಯಗಾರರೊಡನೆ ಪೆನುಗೊಂಡೆಯ ಮೇಲೆ ದಾಳಿ ಮಾಡಿ ಜಯಗಳಿಸಿ ವೆಂಕಟಪತಿರಾಯನಿಗೆ ಪಟ್ಟಕಟ್ಟಿಸಿದನೆಂದು ತಿಳಿದು ಬರುತ್ತದೆ.[103] ಇದರಿಂದ ಸಂತೋಷಗೊಂಡ 2ನೇ ವೆಂಕಟಪತಿಯು ಇಮ್ಮಡಿ ಕೆಂಪೇಗೌಡನಿಗೆ 'ಸ್ವಾಮಿದ್ರೋಹರಗಂಡ' ಎಂಬ ಬಿರುದನ್ನು ನೀಡಿ ಗೌರವಿಸಿದನು. ವೆಂಕಟಪತಿರಾಯನಿಗೆ ಬೆಂಬಲ ನೀಡಿದ ರಾಯಲಸೀಮೆ ಪ್ರದೇಶದ ಸ್ಥಳೀಯ ಪ್ರಭುಗಳಾದ ತಿಮ್ಮರಾಜ, ರಂಗಪತಿರಾಜ, ನಂದ್ಯಾಲದ ವೆಂಕಪರಾಜ, ನೆಲಗೋಟ ತಿಮ್ಮನಾಯಕ, ವೆಂಕಟಪ್ಪ ನಾಯಕ, ರಾಯಭದ್ರನೃಪ, ಪಾವಗಡದ ಕೃಷ್ಣಪ್ಪ, ನಾರಣೇಂದ್ರ, ದಳವಾಯಿ ಪಾಪಯ್ಯ, ಜಗದೇವರಾಯ ಇವರುಗಳು ವೆಂಕಟಪತಿರಾಯನ ಸಂಬಂಧಿಗಳಾಗಿದ್ದರು. ಇವರ ನೆರವಿನಿಂದ ಸಿಂಹಾಸನವನ್ನು ಸ್ಥಿರಗೊಳಿಸಲು ವೆಂಕಟಪತಿರಾಯನು ಪ್ರಯತ್ನಿಸುತ್ತಿದ್ದನು. ಆದರೆ ಕನ್ನಡ ಪ್ರದೇಶದ ಸ್ಥಳೀಯ ಪ್ರಭುಗಳಿಗೆ ಇವನ

ಬಗೆಗೆ ವಿಶ್ವಾಸವಿರಲಿಲ್ಲ. ಸಿರಾದ ರಂಗಪ್ಪನಾಯಕ, ಹೊಸೂರಿನ ಚಂದ್ರಶೇಖರ, ದೊಡ್ಡಬಳ್ಳಾಪುರದ ದಳವಾಯಿ, ಬಿಜ್ಜಾವರದ ಇಮ್ಮಡಿ ಚಿಕ್ಕಭೂಪಾಲ, ಹೊಸಕೋಟೆಯ ತಮ್ಮೇಗೌಡ, ಕೊರಟಗೆರೆಯ ರಾಮಭೈರೇಗೌಡ ಮೊದಲಾದ ತುಮಕೂರು ಕೋಲಾರ ಜಿಲ್ಲೆಯ ಮೊರಸು ನಾಡಪ್ರಭುಗಳ ವಿಶ್ವಾಸ ಮತ್ತು ಬೆಂಬಲವನ್ನು ಪಡೆಯುವ ಸಲುವಾಗಿ ಇವರೆಲ್ಲರ ಮೇಲೆ ಪ್ರಭಾವವನ್ನು ಹೊಂದಿದ್ದ ಬೆಂಗಳೂರಿನ ಇಮ್ಮಡಿ ಕೆಂಪೇಗೌಡನಿಗೆ ವೆಂಕಟಪತಿರಾಯನು ಮಂತ್ರಿಗಳ ಮೂಲಕ ರಾಯಸ ಕಳುಹಿಸಿಕೊಟ್ಟನು.[104] ಕೆಂಪೇಗೌಡನ ನೆರವಿನಿಂದ ಬಹುತೇಕ ಕನ್ನಡ ಪ್ರದೇಶದ ಸ್ಥಳೀಯ ಪ್ರಭುಗಳ ಬೆಂಬಲ ದೊರಕಲು ಸಾಧ್ಯವಾಯಿತು.

### 3.4.2.4 ಗುಡೇಮಾರನಹಳ್ಳಿ ತಳವಾರ ಗಂಗನ ಹತ್ಯೆ

ಇಮ್ಮಡಿ ಕೆಂಪೇಗೌಡನು ಅಧಿಕಾರಕ್ಕೆ ಬಂದ ಆರಂಭದ ವರ್ಷದಲ್ಲಿ ನಡೆದ ಘಟನೆಯೊಂದನ್ನು 'ಮಾಗಡಿಯ ಬಖೈರು' ತಿಳಿಸುತ್ತದೆ.[105] ಗುಡೇಮಾರನಹಳ್ಳಿಯ ತಳವಾರನಾದ ಗಂಗನು ತನ್ನ ಶಕ್ತಿ ಸಾಮರ್ಥ್ಯಗಳನ್ನು ವೃದ್ಧಿಸಿಕೊಂಡು ಸಾವನದುರ್ಗ ಗಿರಿದುರ್ಗಕ್ಕೆ ಸೇರಿದ ಅನೇಕ ಪ್ರದೇಶಗಳನ್ನು ವಶಪಡಿಸಿಕೊಂಡನು. ಮಾಗಡಿಯ ಕೆಳಕೋಟೆಯ ಭಾಗವನ್ನು ನಿರ್ಮಿಸಿ ಅಲ್ಲಿಯೇ ವಾಸಮಾಡಿಕೊಂಡಿದ್ದರೂ ದುರ್ಗ ಅವನ ವಶವಾಗಲಿಲ್ಲ. ಇದರಿಂದಾಗಿ ಬೆಂಗಳೂರಿನ ಇಮ್ಮಡಿ ಕೆಂಪೇಗೌಡನ ಸ್ನೇಹವನ್ನು ಬಯಸಿ ಮಾಗಡಿಯನ್ನು ಅವನ ವಶಕ್ಕೆ ಕೊಡುತ್ತೇನೆಂದು ಭಾಷೆ ಕೊಟ್ಟನು.

ಹೀಗಾಗಿ ಇಮ್ಮಡಿ ಕೆಂಪೇಗೌಡನು ಶಾಲಿವಾಹನ ಶಕ 1527ರ ಪ್ರಭವ ಸಂವತ್ಸರದಲ್ಲಿ (ಕ್ರಿ.ಶ 1605) ಸೈನ್ಯ ಸಮೇತನಾಗಿ ಬಂದು ಗಂಗನೊಡಗೂಡಿ ಗುಡೇಮಾರನಹಳ್ಳಿಯಿಂದ ಮಾಗಡಿಯ ಕೆಳಕೋಟೆಗೆ ದಂಡೆತ್ತಿ ಬಂದು ಆ ಕೋಟೆಯ ಜೀಬೀ ದರವಾಜಾದ ಬಳಿ ಗಂಗನನ್ನು ಮೋಸದಿಂದ ಕೊಂದು ಕೆಳಕೋಟೆಯನ್ನು ವಶಪಡಿಸಿಕೊಂಡನು. ಎಸ್.ಕೆ. ನರಸಿಂಹಯ್ಯನವರು ದಾಖಲಿಸಿರುವುದನ್ನು ಗಮನಿಸಬಹುದು. ಸಾಮಂತರಾಯನೊಬ್ಬನು ಮೊದಲು ಈ ದುರ್ಗದ ಮೇಲೆ ಕೋಟೆಯನ್ನು ಕಟ್ಟಿ 8000 ಸೈನ್ಯವನ್ನೂ 4 ಮಂದಿ ಸೇನಾ ನಾಯಕರನ್ನೂ ಇಟ್ಟುಕೊಂಡು ದೊರೆತನ ಮಾಡುತ್ತಿದ್ದುದರಿಂದ ಇದಕ್ಕೆ ಸಾಮಂತದುರ್ಗವೆಂದು ಹೆಸರಾಯಿತು. ಅವನ ತರುವಾಯ ಆತನ ಸಂತತಿಯವರು ಕೆಲವು ಕಾಲ ರಾಜ್ಯಭಾರ ಮಾಡಿ ಸಂತತಿ ಇಲ್ಲದೆ ಹೋಗಲು ಗುಡೇಮಾರನಹಳ್ಳಿ ತಳವಾರ ಗಂಗನು ಇದನ್ನಾಕ್ರಮಿಸಿಕೊಂಡನು. ಇಮ್ಮಡಿ ಕೆಂಪೇಗೌಡನು ಗಂಗನನ್ನು ಕೊಂದು ಮಾಗಡಿ ಸಾಮಂತದುರ್ಗವನ್ನು ಸ್ವಾಧೀನಕ್ಕೆ ತೆಗೆದುಕೊಂಡನು.[106] ಮಾಗಡಿಯಲ್ಲಿ ಮಣ್ಣಿನ ಕೋಟೆಯನ್ನು ಕಟ್ಟಿಸಿದ ಇಮ್ಮಡಿ ಕೆಂಪೇಗೌಡನು

ಅಲ್ಲಿ ಕ್ರಮವಾದ ಜನವಸತಿಯನ್ನು ಏರ್ಪಡಿಸಿ ದುಷ್ಟರನ್ನು ದಂಗೆಕೋರರನ್ನು ನಾಶಮಾಡಿ, ಅಲ್ಲಿ ಜಾಗೃತ ಸೇನಾದಳವೊಂದನ್ನು ಇಟ್ಟು ಆ ಪ್ರದೇಶವನ್ನು ಬೆಂಗಳೂರಿನೊಂದಿಗೆ 14 ವರ್ಷಗಳ ಕಾಲ ಆಳಿದನು. ಅಂದರೆ ಮಾಗಡಿಯನ್ನು 1624ರಲ್ಲಿ ಇಮ್ಮಡಿ ಕೆಂಪೇಗೌಡ ಗಂಗನಿಂದ ವಶಪಡಿಸಿಕೊಂಡನೆಂದು ಹೇಳಬಹುದು. ಮಾಗಡಿಯ ಮತ್ತೊಂದು ಬಖೈರು ಪ್ರಕಾರ ಇಮ್ಮಡಿ ಕೆಂಪೇಗೌಡನು ಕರೀಸಾಮಂತ ದುರ್ಗದ ಮೇಲೆ ಬೆಳೆದಿದ್ದ ಕಾಡನ್ನು ಕಡಿದು, ದುರ್ಗವನ್ನು ದುರಸ್ತಿಗೊಳಿಸಿ, ಮತ್ತೆ ಅಲ್ಲಿ ಸೇನೆಯನ್ನು ಇರಿಸಿ ಸೇನಾಧಿಪತಿಗಳನ್ನು ನಿಯಮಿಸಿದನು. ಸಾಮಂತಿರಾಯನ ಹೆಸರನ್ನು ಬದಲಿಸಿ, ಮಾಗಡಿ ಎಂಬ ಹೊಸ ಹೆಸರನ್ನು ಕೊಟ್ಟನೆಂದೂ, 'ಮಾ' ಎಂದರೆ ತೆಲುಗಿನಲ್ಲಿ 'ತನ್ನದು' ಎಂದೂ, ಗುಡಿ ಎಂದರೆ 'ಠಾಣ್ಯ'ವೆಂದೂ 'ನನ್ನಠಾಣ್ಯ' ಎಂಬಂತೆ ಘೋಷಿಸಿದನೆಂದು ತಿಳಿಸುತ್ತದೆ.[107]

### 3.4.2.5 ರಣದುಲ್ಲಾಖಾನನೊಡನೆ ಯುದ್ಧ

ಬಿಜಾಪುರದ ಸುಲ್ತಾನನ ದಂಡನಾಯಕನಾದ ರಣದುಲ್ಲಾಖಾನನು ಬೆಂಗಳೂರಿನ ಮೇಲೆ 1638ರಲ್ಲಿ ದಂಡೆತ್ತಿ ಬರುತ್ತಾನೆ. ಇದಕ್ಕೆ ಕಾರಣವೊಂದು ಬಖೈರಿನಲ್ಲಿ ದಾಖಲಾಗಿದೆ.[108] "ಸುಮತಿ ಬೇಗೂರಿನ ಚಿಕ್ಕ ಕುಮಾರ ರಾಜನೂ, ಬೆಂಗಳೂರ ಕೆಂಪೇಗೌಡನೂ ಜಗಳವಾಡಿದಾಗ ಕುಮಾರರಾಜನು ಬಿಜಾಪುರದ ಅಲಿ ಆದಿಲ್‌ಶಾಹನ ಬಳಿಗೆ ಹೋಗಿ ಇದ್ದ ಪರಿಸ್ಥಿತಿಯನ್ನು ವಿವರಿಸಿ ದೊಡ್ಡ ಸೈನ್ಯದೊಡನೆ ರಣದುಲ್ಲಾಖನನನ್ನು ಕರೆತಂದು ಬೆಂಗಳೂರಿನ ಕೋಟೆಗೆ ಮುತ್ತಿಗೆ ಹಾಕಿಸಿದನು. ಕೋಟೆಯನ್ನು ಗೆದ್ದು ಕೆಂಪೇಗೌಡನನ್ನು ಸೆರೆ ಹಿಡಿದರೂ ಮರ್ಯಾದೆಯಿಂದ ನಡೆಸಿಕೊಂಡು ಅವನಿಗೆ ಮಾಗಡಿಯನ್ನು ದಯಪಾಲಿಸಿ ಬೆಂಗಳೂರಿನ ಕೋಟೆಯಲ್ಲಿ ಠಾಣ್ಯವೊಂದನ್ನು ಇಟ್ಟು ಹೊಸಕೋಟೆಗೆ ಬಂದು ಕೋಟೆಯನ್ನು ಗೆದ್ದು ಆನೇಕಲ್ ಪ್ರದೇಶವನ್ನು ತಿಮ್ಮೇಗೌಡನಿಗೆ ಕೊಟ್ಟನು..." ಇದೇ ಸಂಗತಿಯನ್ನು ಗೋವಿಂದ ವೈದ್ಯನ **ಕಂಠೀರವನರಸರಾಜ ವಿಜಯ**ದಲ್ಲಿ ಹೀಗೆ ಹೇಳಿದೆ. ಬೆಂಗಳೂರುಗೌಡನು (ಕೆಂಪೇಗೌಡ ಎಂದು ಹೆಸರು ಹೇಳುವುದಿಲ್ಲ) ಎಷ್ಟೇ ಪರಾಕ್ರಮಿಯಾಗಿದ್ದರೂ, ನೆರೆ ಹೊರೆಯ ಪಾಳೆಗಾರರ ಮೋಸದಿಂದಾಗಿ ಸೋಲಬೇಕಾಯಿತು. ಅಲ್ಲದೆ ರಣದುಲ್ಲಾಖಾನನು ದೊಡ್ಡ ಸೈನ್ಯವನ್ನು ತಂದಿದ್ದರಿಂದ ಗೆಲುವು ನಿರಾಯಾಸವಾಗಿ ಅವನದೇ ಆಯಿತು. ಸೋತು ಕಂಗೆಟ್ಟ ಇಮ್ಮಡಿ ಕೆಂಪೇಗೌಡನು ತನ್ನ ಮಗನನ್ನು ಕೈಸೆರೆಗಟ್ಟಿ ಆಯತಪ್ಪಿ ದುರ್ಗಗಳನ್ನು ಬಿಟ್ಟು ಕುಣಿಗಲ್ ಕಡೆಗೆ ಹೊರಟು ಹೋದನು. ಅವನ ನೇತೃತ್ವದ ಯಲಹಂಕರಾಜ್ಯದ ಅಧೀನದಲ್ಲಿದ್ದ ದೊಡ್ಡಬಳ್ಳಾಪುರ, ಕೋಳಾಲ (ಕೋಲಾರ), ಬಿಜ್ಜಾವರ, ಚಿಕ್ಕಬಳ್ಳಾಪುರ, ಹೊಳವನಹಳ್ಳಿ, ಹೊಸಕೋಟೆ, ಬಾಗಲೂರು,

ಹೊಸೂರು, ಮಾಸ್ತಿ, ಶಿಡ್ಲಘಟ್ಟ ಮೊದಲಾದ ಪಾಳೆಯಗಾರರೆಲ್ಲರೂ ಹೆದರಿ ರಣದುಲ್ಲಾಖಾನನಿಗೆ ಕಾಣಿಕೆಯಿತ್ತು ಅವನ ಅಧೀನರಾದರು. ಯಲಹಂಕ ರಾಜ್ಯ ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ಬಹುವಿಸ್ತಾರವನ್ನು ಪಡೆದಿದ್ದುದಕ್ಕೆ ಇದು ಸಾಕ್ಷಿಯಾಗಿತ್ತು (ನಕ್ಷೆ– 3). ಆದರೆ ಈ ಬಗ್ಗೆ ಕೆಲವು ವಿದ್ವಾಂಸರು ಅನುಮಾನ ವ್ಯಕ್ತಪಡಿಸಿದ್ದಾರೆ. ರಣದುಲ್ಲಾಖಾನನು ತನ್ನ ಸಂಗಡ ಸೈನ್ಯದೊಡನೆ ಎರಡನೇ ದಂಡನಾಯಕ ಷಹಜಿಗೆ ಗೆದ್ದ ಪ್ರದೇಶಗಳಲ್ಲೊಂದನ್ನು ಜಾಗೀರು ಕೊಡುವ ವಾಗ್ದಾನದ ಮೇಲೆ ಬೆಂಗಳೂರನ್ನು ಜಾಗೀರಾಗಿ ಕೊಡಮಾಡಲಾಯಿತು.[109]

ಇದಕ್ಕೆ ಮೊದಲು ಇಮ್ಮಡಿ ಕೆಂಪೇಗೌಡನು ಬೆಂಗಳೂರು, ಮಾಗಡಿ ಮತ್ತು ಸಾವನದುರ್ಗಗಳನ್ನು ಹೊಂದಿದ್ದನು. ರಣದುಲ್ಲಾಖಾನ್ ನೇತೃತ್ವದ ಸೇನೆಯು ಕೆಂಪೇಗೌಡನ ಪರಾಕ್ರಮವನ್ನು ಮುರಿಯಲು ಶಿವಗಂಗೆಯಲ್ಲಿ ಬೀಡುಬಿಟ್ಟಿತು. ಕೆಂಪೇಗೌಡನು ಅವನನ್ನು ಬಯಲಿನಲ್ಲಿ ಎದುರಿಸದೆ ದುರ್ಗದಿಂದ ಕಾದಿದನೆಂದು **'ಕಂಠೀರವ ನರಸರಾಜ ವಿಜಯ'** ಹೇಳುತ್ತದೆ. 'ದುರ್ಗ'ದಿಂದ ಕಾದಿದನು ಎಂಬುದನ್ನು ರಾಗೌ ಅವರು ಇದು ಸಾವನದುರ್ಗವಲ್ಲದೆ ಬೇರೆಯಲ್ಲ ಎಂದಿದ್ದಾರೆ.[110] ಕೆಂಪೇಗೌಡನು ತನ್ನ ಮಗನನ್ನು ಖಾನನ ವಶಕ್ಕೆ ಒಪ್ಪಿಸಿ, ದುರ್ಗವನ್ನು ಮತ್ತು ರಾಮಗಿರಿ ಮುಂತಾದ ವಿಶಾಲ ಸೀಮೆಯನ್ನು ಬಿಟ್ಟುಕೊಟ್ಟದ್ದು, ನೆರೆಯವನು ನೀಡಿದ ಕುಣಿಗಲ್ ಸೀಮೆಗೆ ಹೋಗಬೇಕಾಯಿತು. ಅದನ್ನು **'ಕಂಠೀರವ ನರಸರಾಜ ವಿಜಯ'**ದಲ್ಲಿ ಹೀಗೆ ಕವಿ ಹೇಳಿದ್ದಾನೆ.[111]

> ಅನಿರತೊಳಗೆ ಕಂಗೆಟ್ಟು ಖಾನಗೆ ತನ್ನ
> ತನುಜನ ಕೈಸೆರೆಗಟ್ಟಿ
> ಘನನಂಬುಗೆಗೊಂಡು ದುರ್ಗವನಿತ್ತಾಗ
> ಮನನೊಂದು ತೆರಳಿದ ಗೌಡ
>
> ರಾಮಗಿರಿಯ ದುರ್ಗ ಮೊದಲಾದ ಘನವಹ
> ಸೀಮೆಯ ಖಳನಿಗೆ ಕೊಟ್ಟು
> ನೇಮವಳಿದು ನೆರೆಯವನಿತ್ತ ಕುಣಿಗಿಲ
> ಸೀಮೆಗೈದಿದನೇಪೇಳ್ವೆ

ಒಪ್ಪಂದ: ಒಟ್ಟಾರೆ, ಸೋತ ಇಮ್ಮಡಿ ಕೆಂಪೇಗೌಡನು ರಣದುಲ್ಲಾಖಾನನಿಗೆ ವಾರ್ಷಿಕ ಖಂಡಣಿಗೆ ಕೊಡಲು ಒಪ್ಪಿ, ಮಾಗಡಿ ಮತ್ತು ಕುಣಿಗಲ್ ಸೀಮೆಗಳಿಂದ ಆಳ್ವಿಕೆಯನ್ನು ಆರಂಭಿಸಿರುವಂತೆ ಕವಿಯ ಮಾತುಗಳಲ್ಲಿ ತೋರುತ್ತದೆ. ಜೊತೆಗೆ ರಣದುಲ್ಲಾಖಾನನು ದಕ್ಷಿಣದಲ್ಲಿ ಒಂದು

ನೀತಿಯನ್ನು ಅನುಸರಿಸಿದನೆಂದು ಹಯವದನರಾವ್ ಅವರು ಅಭಿಪ್ರಾಯ ಪಡುತ್ತಾರೆ. ಅವರು ಹೇಳುವಂತೆ ರಣದುಲ್ಲಾಖಾನನು ಮುಖ್ಯ ಪಟ್ಟಣಗಳನ್ನು ವಶಪಡಿಸಿಕೊಂಡು ಅಭಿವೃದ್ಧಿ ಹೊಂದದಿರುವ ಪ್ರದೇಶಗಳನ್ನು ಅದೇ ಪಾಳೆಯಗಾರರಿಗೆ ವಹಿಸಿಕೊಟ್ಟನು. ಉದಾಹರಣೆಗೆ, ಬಸವಪಟ್ಟಣವನ್ನು ಸ್ವಾಧೀನ ಪಡಿಸಿಕೊಂಡು ತರಿಕೆರೆಯನ್ನು ಪಾಳೆಯಗಾರನಿಗೆ ನೀಡಿದನು. ಅದೇರೀತಿ ಹೊಸಕೋಟೆಯನ್ನು ಪಡೆದು ಆನೇಕಲ್ಲನನ್ನು ಕೊಡಮಾಡಿದನು. ಕೋಲಾರ ಪಡೆದು ಪುಂಗನೂರನ್ನು ಕೊಟ್ಟನು. ಸಿರಾ ಪಡೆದು ರತ್ನಗಿರಿಯನ್ನು ಕೊಟ್ಟನು.[112] ಒಟ್ಟಾರೆ, ಅಭಿವೃದ್ಧಿ ಹೊಂದಿದ ಕೇಂದ್ರಗಳನ್ನು ಗೆದ್ದುಕೊಂಡು ರಾಜ್ಯದ ಅಂಚಿನ ಪ್ರದೇಶಗಳನ್ನು ಕಪ್ಪಕಾಣಿಕೆಯನ್ನು ಕೊಡಲೊಪ್ಪಿದ ಪಾಳೆಯಗಾರರಿಗೆ ಹಿಂತಿರುಗಿಸಿದನು. ಇದರ ಹಿಂದಿನ ಉದ್ದೇಶವಿಷ್ಟೆ, ಅಭಿವೃದ್ಧಿ ಹೊಂದದಿರುವ ಪ್ರದೇಶಗಳನ್ನು ಪಾಳೆಯಗಾರರಿಗೆ ವಹಿಸಿಕೊಟ್ಟಾಗ, ಆ ಪ್ರದೇಶಗಳನ್ನು ಅಭಿವೃದ್ಧಿಪಡಿಸುತ್ತಾರೆ ಎಂಬುದಾಗಿತ್ತು. ಹಿಂದಿನ ಬಹುತೇಕ ಎಲ್ಲ ಆಕ್ರಮಣಶೀಲ ರಾಜರುಗಳ ನೀತಿ ಕೂಡ ಇದೇ ಆಗಿತ್ತು.

ವಿಶಾಲ ಯಲಹಂಕ ರಾಜ್ಯವನ್ನು ಆಳುತ್ತಿದ್ದ ಇಮ್ಮಡಿ ಕೆಂಪೇಗೌಡನ ಆಳ್ವಿಕೆಯು ಕುಣಿಗಲ್ ಮತ್ತು ಅಷ್ಟೇನು ಅಭಿವೃದ್ಧಿ ಕಾಣದ ಮಾಗಡಿ ಪ್ರಾಂತ್ಯಗಳಿಗೆ ಸೀಮಿತವಾಯಿತು. ಕವಿ ಗೋವಿಂದವೈದ್ಯನು "ನೆರೆಯವನಿತ್ತ ಕುಣಿಗಲ್ ಸೀಮೆ" ಎಂದು ಹೇಳಿರುವುದನ್ನು ಗಮನಿಸಿದರೆ, 1638ರ ನಂತರ ಮಾತ್ರವೇ ಕುಣಿಗಲ್ ಸೀಮೆಯ ಮೇಲೆ ಯಲಹಂಕ ನಾಡಪ್ರಭುಗಳು ಅಧಿಪತ್ಯ ಹೊಂದಿದರೇ? ಎಂಬ ಪ್ರಶ್ನೆ ಮೂಡುತ್ತದೆ. ಆದರೆ ಕುಣಿಗಲ್ ತಾಲ್ಲೂಕಿನಲ್ಲಿ ದೊರೆತಿರುವ ಶಾಸನಗಳನ್ನು ಗಮನಿಸಿದರೆ, ಕುಣಿಗಲ್ ಪ್ರದೇಶವನ್ನು ಯಲಹಂಕ ನಾಡಪ್ರಭುಗಳ ಅಧೀನದಲ್ಲಿ ಕಸಪಯ್ಯ ನಾಯಕ ಎಂಬುವವನು ನೋಡಿಕೊಳ್ಳುತ್ತಿದ್ದನೆಂದು ತಿಳಿಯುತ್ತದೆ. ಆದ್ದರಿಂದ ಇಮ್ಮಡಿ ಕೆಂಪೇಗೌಡನು ಕುಣಿಗಲ್ ಸೀಮೆಯನ್ನು ಅಧೀನ ಅಧಿಕಾರಿಯಿಂದ ನೇರ ಆಳ್ವಿಕೆಗೆ ಪಡೆದುಕೊಂಡನೆಂದು ವಿಶ್ಲೇಷಿಸಬಹುದು.

ಒಟ್ಟಾರೆ, ಯಲಹಂಕವೇ ಇಲ್ಲದ 'ಯಲಹಂಕ ನಾಡಪ್ರಭು'ಗಳಾಗಿ ಇಮ್ಮಡಿ ಕೆಂಪೇಗೌಡನ ಮುಂದಿನ ಪೀಳಿಗೆಯರವರು ಮಾಗಡಿ ಮತ್ತು ಕುಣಿಗಲ್‌ಗಳನ್ನು ಆಳಬೇಕಾಯಿತು. ರಾಜಕೀಯ ಪ್ರಾದೇಶಿಕ ವ್ಯಾಪ್ತಿಯೊಳಗಿನ ತಮ್ಮ ಮೂಲ ನೆಲೆಯನ್ನು ಯಾವ ಪ್ರಭುತ್ವ ಕೂಡ ತನ್ನ ನಿಯಂತ್ರಣದಿಂದ ಕಳೆದುಕೊಳ್ಳಲು ಇಷ್ಟಪಡುವುದಿಲ್ಲ. ಏಕೆಂದರೆ ಅದು ಆ ಪ್ರಭುತ್ವದ **ಅಸ್ಮಿತೆ** ಮತ್ತು **ಅಸ್ತಿತ್ವದ** ಪ್ರಶ್ನೆಯಾಗಿರುತ್ತದೆ. ಒಂದು ವೇಳೆ ಪ್ರಭುತ್ವವು ಮೂಲ ನೆಲೆಯ ಅಸ್ತಿತ್ವವನ್ನು ಕಳೆದು ಕೊಂಡಿತಾದರೂ ಅದರ ಅಸ್ಮಿತೆಯನ್ನು ಉಳಿಸಿಕೊಳ್ಳಲು ಬಯಸುತ್ತದೆ. ಪ್ರಸ್ತುತ

ಯಲಹಂಕ ನಾಡಪ್ರಭುಗಳ ಪ್ರಾದೇಶಿಕ **ನೆಲೆ** ಮತ್ತು **ನಾಮ**ವನ್ನು ವಿಶ್ಲೇಷಿಸಿದಾಗ ಅದು ಸ್ಪಷ್ಟವಾಗುತ್ತದೆ. ಏಕೆಂದರೆ ಈ ಮನೆತನದ ಕಟ್ಟಕಡೆಯ ನಾಡಪ್ರಭುವಾದ ಮುಮ್ಮಡಿ ಕೆಂಪವೀರಪ್ಪಗೌಡನು ಮಾಗಡಿ ಸುತ್ತಮುತ್ತಲ ಪ್ರದೇಶಕ್ಕಷ್ಟೇ ಸೀಮಿತಗೊಂಡಿದ್ದರೂ ತನ್ನನ್ನು **'**ಯಲಹಂಕ ನಾಡಪ್ರಭು**'** ಎಂದು ಕೊನೆಗಾಲದ (ಕ್ರಿ.ಶ 1719) ಶಾಸನದಲ್ಲಿಯೂ ಕರೆದುಕೊಂಡಿದ್ದಾನೆ.[113] ತಮ್ಮ ಪೂರ್ವಿಕರ ಮೂಲವನ್ನು ಗುರುತಿಸಿಕೊಳ್ಳುವುದರಲ್ಲಿಯೂ ಶ್ರೇಷ್ಠತೆಯನ್ನು ಹುಡುಕಿಕೊಳ್ಳುವುದು ಚರಿತ್ರೆಯುದ್ದಕ್ಕೂ ನಡೆದುಕೊಂಡು ಬಂದಿರುವ ಪರಿಕ್ರಮವಾಗಿದೆ.

### 3.4.2.6 ಧಾರ್ಮಿಕ ಕಾರ್ಯಗಳು

ಇಮ್ಮಡಿ ಕೆಂಪೇಗೌಡನು ನಿರ್ಮಾಣ ಮಾಡಿಸಿದ ದೇವಾಲಯಗಳಲ್ಲಿ ಅಲಸೂರು ಸೋಮೇಶ್ವರ ದೇವಾಲಯ ಒಂದು. ಈ ದೇವಾಲಯವನ್ನು ಮೊದಲು ಜಯಗೌಡನೂ, ಗಿಡ್ಡಪ್ಪ ಗೌಡನೂ ಮಣ್ಣಿನ ಗೋಡೆ, ಮರದ ಸ್ತಂಭ, ದೂಲಗಳಿಂದ ಕಟ್ಟಿದ್ದರು. ಹಿರಿಯ ಕೆಂಪೇಗೌಡನು ತನ್ನ ಕಾಲದಲ್ಲಿ ಗರ್ಭಗೃಹವನ್ನು ಮಾತ್ರ ಶಿಲ್ಪಶಾಸ್ತ್ರ ನಿಪುಣರಿಂದ ಸುಂದರವಾಗಿ ಕಲ್ಲಿನಲ್ಲಿ ಕಟ್ಟಿಸಿದನು. ಇಮ್ಮಡಿ ಕೆಂಪೇಗೌಡನು ಪ್ರಸಿದ್ಧರಾದ ದಕ್ಷಿಣ ದೇಶದ ಶಿಲ್ಪಿಗಳಿಂದ ಈಗಿರುವ ದೇವಾಲಯ, ವಿಶಾಲವಾದ ಗೋಪುರ, ಪ್ರಾಕಾರ, ನವರಂಗ, ಹಜಾರ ಮೊದಲಾದುವನ್ನೂ, ಕಾಮಾಕ್ಷಿ ಅಮ್ಮನವರ ದೇವಾಲಯವನ್ನು 1605ರಲ್ಲಿ ಕಟ್ಟಿಸಿದನು ಎಂದು ಎಸ್.ಕೆ. ನರಸಿಂಹಯ್ಯನವರು ದಾಖಲಿಸಿದ್ದಾರೆ.**[114]** ಇಮ್ಮಡಿ ಕೆಂಪೇಗೌಡನು ಸೋಮೇಶ್ವರ ದೇವಾಲಯವನ್ನು ಕಟ್ಟಿಸಿ ಹಲವು ದತ್ತಿಗಳನ್ನು ನೀಡಿದನೆಂದು ಬಖೈರು ದಾಖಲಿಸುತ್ತದೆ.[115] ಇವನು ದೇವಾಲಯದ ನಿತ್ಯಪೂಜೆ ಮತ್ತು ರಥ ಮತ್ತಿತರ ಉತ್ಸವಗಳಿಗಾಗಿ ಅಲಸೂರು ಹೋಬಳಿಯ 33 ಗ್ರಾಮಗಳಲ್ಲಿ ಒಂದು ಖಂಡುಗಕ್ಕೆ ಒಂದು ಕೊಳಗದಂತೆ ಮಿರಾಸೆ ಕೊಡುವಂತೆ ಕಟ್ಟುನಿಟ್ಟು ಮಾಡಿದನು. ಕೆಂಪಾಪುರ ಮತ್ತು ಐಗಂಡಪುರಗಳನ್ನು ಅಗ್ರಹಾರಗಳನ್ನಾಗಿ ಮಾಡಿ ಬ್ರಾಹ್ಮಣರಿಗೆ ಹಂಚಿಕೆ ಮಾಡಿದನು. ಕೆಂಪಾಪುರ ಅಗ್ರಹಾರದ ಸಮೀಪ ತಮ್ಮ ವಂಶಸ್ಥನಾದ ಗಿಡ್ಡೇಗೌಡನ ಹೆಸರಿನಲ್ಲಿ ಗಿಡ್ಡಪ್ಪನ ಕೆರೆ ನಿರ್ಮಾಣ ಮಾಡಿಸಿದನು. ಬೆಂಗಳೂರು ಕೋಟೆಯ ದಕ್ಷಿಣದಲ್ಲಿ (ಈಗಿನ ಒಕ್ಕಲಿಗರ ಸಂಘ ಇರುವ ಪ್ರದೇಶ) ಕಾರಂಜಿ ಕೆರೆಯನ್ನು ನಿರ್ಮಾಣ ಮಾಡಿಸಿ, ಕೋಟೆಯ ಒಳಕ್ಕೆ ಗಾರೆಯ ಕಾಲುವೆಯಿಂದ ನೀರನ್ನು ಒದಗಿಸಿದನು. ಕೆಂಪಾಂಬುಧಿ ಕೆರೆಯನ್ನು ಅಭಿವೃದ್ದಿ ಪಡಿಸಿ ವ್ಯವಸಾಯಕ್ಕೆ ಅನುಕೂಲ ಕಲ್ಪಿಸಿದನು.

ಇಮ್ಮಡಿ ಕೆಂಪೇಗೌಡನ ವ್ಯಕ್ತಿತ್ವ ಮತ್ತು ಬೆಂಗಳೂರಿನ ವರ್ಣನೆಯನ್ನು ಷಹಜಿಯ ಕಾಲದ ಸಂಸ್ಕೃತ ಕೃತಿ **'ಶಿವಭಾರತ'** ಸೊಗಸಾಗಿ ವರ್ಣಿಸಿದೆ. ಅದರಂತೆ: ಹಗಲಿರುಳೂ ವೀರಸಂಹಾರಕಾರಿಯಾದ ಯುದ್ದವನ್ನು ಮಾಡಿ ಯುದ್ಧನಿಪುಣನಾದ ಕೆಂಪೇಗೌಡನಿಂದ ಸುಮನೋಹರವಾದ ಬೆಂಗಳೂರನ್ನು ವಶಪಡಿಸಿಕೊಂಡು ವಿಜಯಿಯಾದ ರಣದುಲ್ಲಾಖಾನನಿಂದ ಷಹಜಿಗೆ ಅರ್ಪಿಸಲ್ಪಟ್ಟಿತು. ಬಲಿಷ್ಠವಾದ ಪ್ರಾಕಾರ ಗೋಪುರಗಳಿಂದ ಕೂಡಿದ ಬೆಂಗಳೂರು ಪುರದಲ್ಲಿ, ಶ್ವೇತವರ್ಣದ ಭವನಗಳ ಅಗ್ರಭಾಗದಲ್ಲಿ, ಪತಾಕೆಗಳು ತೂಗುತ್ತಿದ್ದವು. ಶಿಲ್ಪಕಲಾನೈಪುಣ್ಯದಿಂದ ಕೂಡಿದ ಮಯನು ನಿರ್ಮಿಸಿದಂತಹ ರಮ್ಯ ಸೌಧಗಳು, ವಿವಿಧ ಸಾಮಗ್ರಿಗಳಿಂದ ಕೂಡಿದ ವಿಶಾಲ ಅಂಗಡಿಗಳು, ಬೆಳಗುವ ಬಾವಿಗಳು, ಬೃಹತ್ ಕೆರೆಗಳು, ನಾಲ್ಕು ದಾರಿಗಳು ಸೇರುವಲ್ಲಿ ಜಲಯಂತ್ರಗಳಿಂದ ಚಿಮ್ಮುತ್ತಿರುವ ಕಾರಂಜಿಗಳು, ಫಲಪುಷ್ಪಭರಿತ ಹೂದೋಟಗಳು, ನಾನಾ ವರ್ಣಗಳ ಶಿಲಾ ಮುದ್ರಣಕಲೆಗಳಿಂದ ಕೂಡಿದ ಸುಂದರ ಮಂದಿರಗಳು, ಬಲಿಷ್ಠವಾದ ಪುರದ್ವಾರಗಳು, ದುರ್ಗಮವಾದ ಬುರುಜುಗಳು, ಅವುಗಳ ತುದಿಯಲ್ಲಿ ಅಳವಡಿಸಿರುವ ತೋಪುಗಳು, ಅರಿ ಭಯಂಕರ ಕಂದಕಗಳು, ಸಾಗರದಷ್ಟು ವಿಶಾಲವಾದ ಸರೋವರಗಳು, ಬಳ್ಳಿಗಳಿಂದ ಕೂಡಿದ ಉದ್ಯಾನಗಳು, ಕನಕಾಚಲಸದೃಶ ದೇವಾಲಯಗಳಿಂದ ಅಲಂಕೃತಗೊಂಡಿರುವ ಬೆಂಗಳೂರಿನಲ್ಲಿ ಇಂದ್ರಸದೃಶನಾದ ಆ ನೃಪಸತ್ತಮನು (ಇಮ್ಮಡಿ ಕೆಂಪೇಗೌಡನು) ತನ್ನ ಪರಿಜನರೊಂದಿಗೆ ವಿಧವಿಧವಾದ ಆನಂದಗಳನ್ನು ಹೊಂದಿದ್ದನೆಂದು ವರ್ಣಿಸುತ್ತದೆ.[116] ಇದೇ ಅಭಿಪ್ರಾಯವನ್ನು ಜಯರಾಂ ಪಿಂಡ್ಯೆ ರಚಿಸಿರು **'ರಾಧಾಮಾಧವ ವಿಳಾಸ ಚಂಪುಕಾವ್ಯ'**ವೂ ವ್ಯಕ್ತಪಡಿಸುತ್ತದೆ. ಅದರಂತೆ ಬೆಂಗಳೂರು ಶ್ರೀಮಂತ ನಗರವಾಗಿದ್ದು ಸುತ್ತಲೂ ಕೋಟೆ ಕೊತ್ತಲಗಳಿಂದ, ಗುಡಿಗೋಪುರಗಳು, ಭವ್ಯವಾದ ಕಟ್ಟಡಗಳಿಂದ ಸುಂದರವಾದ ಹೂದೋಟಗಳಿಂದ, ಅಗಲವಾದ ರಸ್ತೆಗಳಿಂದ, ತಂಪಾದ ಚಿಲುಮೆಗಳಿಂದ ಕೂಡಿದ ಸುಂದರವಾದ ತಾಣವಾಗಿತ್ತೆಂದು ಜಯರಾಮ ಪಿಂಡ್ಯೆ ಹೊಗಳುತ್ತಾನೆ.[117] ಇದರಿಂದ ಬೆಂಗಳೂರು ನಗರವು ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ಬಹುವೈಭವದಿಂದ ಮೆರೆಯುತ್ತಿತ್ತು ಎಂಬುದು ಅರ್ಥವಾಗುತ್ತದೆ.

### 3.4.2.7 ಮಾಗಡಿ ಮತ್ತು ಕುಣಿಗಲ್ ಪ್ರಾಂತ್ಯಗಳ ಹಂಚಿಕೆ

1639ರ ನಂತರ ಮಾಗಡಿ ಮತ್ತು ಕುಣಿಗಲ್ ಪ್ರಾಂತ್ಯಗಳಿಗೆ ಸೀಮಿತವಾದ ಯಲಹಂಕನಾಡನ್ನು ಇಮ್ಮಡಿ ಕೆಂಪೇಗೌಡನು ಆಳುವ ಶಕ್ತಿಯನ್ನು ಆ ಹೊತ್ತಿಗೆ ವಯಸ್ಸಿನ ಕಾರಣದಿಂದ ಕಳೆದುಕೊಂಡಿದ್ದಂತೆ ತೋರುತ್ತದೆ. ಆದ್ದರಿಂದ ಪ್ರಾಂತ್ಯಗಳನ್ನು ತನ್ನ ಇಬ್ಬರು

ಮಡದಿಯರ ಮಕ್ಕಳಾದ (ಇಮ್ಮಡಿ ಕೆಂಪೇಗೌಡನಿಗೆ ಕೆಂಪಮ್ಮ ಮತ್ತು ಲಿಂಗಮ್ಮ ಎಂಬಿಬ್ಬರು ಹೆಂಡತಿಯರು. ಹಿರಿಯ ಹೆಂಡತಿ ಕೆಂಪಮ್ಮನಲ್ಲಿ ಮುಮ್ಮಡಿ ಕೆಂಪೇಗೌಡ ಮತ್ತು ಹಲಸ ಹಾಗೂ ಲಿಂಗಮ್ಮನಲ್ಲಿ ಇಮ್ಮಡಿ ಹಿರಿಯ ಕೆಂಪೇಗೌಡ ಜನಿಸಿದರು ಎಂದು **ವೀರಭದ್ರ ವಿಜಯ**ದಲ್ಲಿ ಸ್ಪಷ್ಟವಾಗಿ ಹೇಳಿದೆ. ಇದನ್ನು ಇತರ ಆಕರಗಳೂ ದೃಢೀಕರಿಸುತ್ತವೆ.)[118] ಮುಮ್ಮಡಿ ಕೆಂಪೇಗೌಡ ಮತ್ತು ಇಮ್ಮಡಿ ಹಿರಿಯ ಕೆಂಪೇಗೌಡರಿಬ್ಬರಿಗೂ ಯಲಹಂಕ ನಾಡನ್ನು ಹಂಚಿಕೆ ಮಾಡಿರುವುದು ಶಾಸನಗಳ ಶಿಸ್ತುಬದ್ಧ ಅಧ್ಯಯನದಿಂದ ಮತ್ತು ಸಮಕಾಲೀನ ಸಾಹಿತ್ಯಗಳಿಂದ ತಿಳಿದುಬರುತ್ತದೆ. 1648ರಲ್ಲಿ ರಚನೆಯಾದ ಕಂಠೀರವ ನರಸರಾಜ ವಿಜಯ ಕೃತಿಯಲ್ಲಿ ಮಾಗಡಿ ಮತ್ತು ಕುಣಿಗಲ್ ಪ್ರದೇಶಗಳು ಇಬ್ಬರು ವ್ಯಕ್ತಿಗಳಿಂದ ಆಳಲ್ಪಡುತ್ತಿತ್ತು ಎಂಬ ಸುಳುಹುಗಳಿವೆ. ಈ ಕೃತಿಯಲ್ಲಿ ಕವಿಯು ಮಹಾನವಮಿ ಉತ್ಸವಕ್ಕೆ ಬಂದಿದ್ದ ಮನ್ನೆಯರನ್ನು ಹೀಗೆ ಬಣ್ಣಿಸಿದ್ದಾನೆ: [119]

ಕಿವಿಯೊಳೊಪ್ಪುವ ಕಾಮಾಕ್ಷಿ ಕಡಕು ಗಂಟಿ
ತವೆ ಚಿನ್ನ ಸರ ಪೈರಣೆಯ
ಚವಿಯಿಂದ ತನ್ನಯ ಬಲುಸಹ ಕುಣಿಗಿಲ್ಪು
ರವ ನಾಳ್ವ ನೃಪನೈತಂದ

ನಾಗರ ಫಣಿಯ ಪಟ್ಟೆಯ ದಟ್ಟಿ ಕೊರಳೊಳು
ರಾಗದೆ ಮೆರೆವ ಉಳಿಗಳ
ತೂಗುವಾಯುಧಗಳ ಭಟರ ಸಮ್ಮೇಳದೆ
ಮಾಗಡಿ ಯುಧಿಪತಿ ಬಂದ

ಬೆಡಗಿನ ತೇಜಿಯನೇರಿ ಚಾಮರಗಳ
ಬಿಡದೆ ಡಾಳಿಸಿಕೊಳ್ವನಾರೆ
ಮಡದಿರನ್ನಳೆ ಕೇಳು ಕುಣಿಗಿಲನಾಳುವ
ದೊಡಕೆಂಪೇಗೌಡನೆ ಈತ

ಮುತ್ತಿನ ಕುಚ್ಚಿನಂದಣವೇರಿ ಸುಭಟರ
ಮೊತ್ತದೆ ಬಹ ದೊರೆಯಾರೆ
ಉತ್ತಮ ಮಾಗಡಿಯಧಿಪತಿ ಚಿಕಗೌಡ
ಚಿತ್ತಜರೂಪನಬ್ಜಾಕ್ಷಿ

ಈ ಪದ್ಯದ ಸಾಲುಗಳಲ್ಲಿ ಕುಣಿಗಲ್ ಮತ್ತು ಮಾಗಡಿಯ ಅಧಿಪತಿಗಳನ್ನು ಕುರಿತು ಪ್ರತ್ಯೇಕವಾಗಿಯೇ ಹೇಳಿರುವುದನ್ನು ಗಮನಿಸಬಹುದು. ಮೂರನೇ ಪದ್ಯದಲ್ಲಿ ಬರುವ

ಕುಣಿಗಿಲನಾಳುವ ದೊಡಕೆಂಪೇಗೌಡನೇ ಎಂಬುದು ಎರಡನೇ ಹಿರಿಯ ಕೆಂಪೇಗೌಡನನ್ನು ಉದ್ದೇಶಿಸಿ ಹೇಳುತ್ತಿರುವಂತೆ ಕಾಣುತ್ತದೆ. ಯಲಹಂಕನಾಡಿನ ಕುಣಿಗಲ್ ಸೀಮೆಯನ್ನು ಇಮ್ಮಡಿ ಹಿರಿಯ ಕೆಂಪೇಗೌಡನಿಗೂ, ಮಾಗಡಿ ಸೀಮೆಯನ್ನು ಮುಮ್ಮಡಿ ಕೆಂಪೇಗೌಡನಿಗೂ ವಹಿಸಿಕೊಟ್ಟಿರುವಂತೆ ತೋರುತ್ತದೆ. ಕ್ರಿ.ಶ. 1658ರ ಮಾಗಡಿ ತಾಲ್ಲೂಕಿನ ಅಳಲಕುಪ್ಪೆ ಶಾಸನದಿಂದ[120] ಆ ಪ್ರದೇಶವು ಮುಮ್ಮಡಿ ಕೆಂಪೇಗೌಡನಿಗೆ ಸೇರಿತ್ತೆಂದು ತಿಳಿಯುವುದು. ಕುಣಿಗಲ್ ತಾಲ್ಲೂಕ್, ಹುಲಿಯೂರುದುರ್ಗ ಹೋಬಳಿ ಹಂದಲಗೆರೆಯ 1653ರ ಅಪ್ರಕಟಿತ ಶಾಸನ ಕೂಡ ಮುಮ್ಮಡಿ ಕೆಂಪೇಗೌಡನದಾಗಿದ್ದು, ಅಳಲಕುಪ್ಪೆ ಯಿಂದ ಕೇವಲ 4 ಕಿ.ಮೀ. ದಕ್ಷಿಣಕ್ಕಿದೆ.[121] ಹೆಚ್ಚು ಕಡಿಮೆ ಇದೇ ಕಾಲದಲ್ಲಿ ಕುಣಿಗಲ್ ಭಾಗವನ್ನು ಇಮ್ಮಡಿ ಹಿರಿಯ ಕೆಂಪೇಗೌಡ ಆಳುತ್ತಿದ್ದ ಬಗೆಗೆ ಶಾಸನಗಳಿವೆ. ಆದರೆ ಇವುಗಳ ಕಾಲವನ್ನು ರೈಸ್ ಅವರು ತಪ್ಪಾಗಿ ನಿರ್ಧರಿಸಿರುವುದರಿಂದ ಸ್ವಲ್ಪ ಮಟ್ಟಿನ ಗೊಂದಲಗಳಿವೆ.[122]

ಇಂದು ಕುಣಿಗಲ್ ಪಟ್ಟಣದ ಭಾಗವಾಗಿರುವ ಕೃಷ್ಣಸಾಗರ ಅಗ್ರಹಾರದಲ್ಲಿನ ಶಾಸನವು ಯಲಹಂಕ ನಾಡಪ್ರಭು ಯಿಂಮಡಿ ಹಿರೀಕೆಂಪಯ್ಯಗೌಡನ ಮಡದಿ ವೇಂಕಟಕ್ರುಷ್ಣಾಜಮ್ಮಳು ತನ್ನ ಮಾವ ಯಿಂಮಡಿ ಕೆಂಪೇಗೌಡನಿಗೂ ತನ್ನ ಅತ್ತೆ ಲಿಂಗಾಜಮ್ಮನಿಗೂ ಪುಣ್ಯವಾಗಲೆಂದು ಅಗ್ರಹಾರ ಮಾಡಿಸಿ, ಕುಣಿಗಲ್ ದೊಡ್ಡಕೆರೆ ಹಿಂದಿನ ಗದ್ದೆ ಮತ್ತು ಹೊಲವನ್ನು ಬ್ರಾಹ್ಮಣರಿಗೆ ದಾನ ನೀಡಿದ ಸಂಗತಿಯನ್ನು ತಿಳಿಸುತ್ತದೆ.[123] ಅದೇ ರೀತಿ ಶೃಂಗಾರಸಾಗರವನ್ನು ಒಳಗೊಂಡಿರುವ ಇಂದಿನ ಹುಲಿಯೂರುದುರ್ಗದಲ್ಲಿ ಇಮ್ಮಡಿ ಹಿರಿಯ ಕೆಂಪೇಗೌಡನ ಪಟ್ಟದ ನಾಟಕಶಾಲೆಯ ಶೃಂಗಾರಮ್ಮ ಎಂಬುವವಳು ಹಾಕಿಸಿರುವ ಮೂರು ಶಾಸನಗಳಿವೆ. ಅವುಗಳ ಪ್ರಕಾರ ಆಕೆಯು ಅಗ್ರಹಾರ, ಕೆರೆ ಮತ್ತು ಬಸವ ಮಂಟಪ ಮಾಡಿಸಿದ ಕುರಿತು ಶಾಸನಗಳು ಉಲ್ಲೇಖಿಸುತ್ತವೆ. ಬಹುಶಃ ಶೃಂಗಾರಮ್ಮ ಇಮ್ಮಡಿ ಹಿರಿಯ ಕೆಂಪೇಗೌಡನ ಮಡದಿಯರಲ್ಲಿ ಒಬ್ಬಳಾಗಿರುವಂತೆ ತೋರುತ್ತದೆ. ಶೃಂಗಾರಮ್ಮನ ಯಾವ ಶಾಸನಗಳಲ್ಲಿಯೂ ಕಾಲದ ಸ್ಪಷ್ಟ ಉಲ್ಲೇಖವಿಲ್ಲದಿರುವುದರಿಂದ ತಪ್ಪಾಗಿ ನಿರ್ಧರಿಸಿದ ಕೃಷ್ಣಸಾಗರ ಅಗ್ರಹಾರ ಶಾಸನದ ಕಾಲವನ್ನೇ ಅನ್ವಯಿಸಿ ಇವುಗಳ ಕಾಲ ಕೂಡ ಕ್ರಿ.ಶ. 1599 ಎಂಬ ಅಭಿಪ್ರಾಯಕ್ಕೆ ಬಿ.ಎಲ್.ರೈಸ್ ಬಂದಂತಿದೆ. ಆದರೀಗ ಕೃಷ್ಣಸಾಗರ ಶಾಸನದ ಕಾಲವು ಪರಿಷ್ಕರಣೆಗೊಳ್ಳುವುದರಿಂದ ಈ ಮೂರೂ ಶಾಸನಗಳನ್ನು ಕ್ರಿ.ಶ. 1659ರ ಸುಮಾರಿಗೆ ಸೇರಿಸಿಕೊಳ್ಳಬೇಕಾಗುತ್ತದೆ.[124]

ಒಟ್ಟಾರೆ ಹೇಳುವುದಾದರೆ ಇಮ್ಮಡಿ ಕೆಂಪೇಗೌಡನು ಬೆಂಗಳೂರನ್ನು ತೊರೆದು ಬಂದ ನಂತರ (1639) ಹಾಗೂ **ಕಂಠೀರವ ನರಸರಾಜ ವಿಜಯ** ರಚನೆಗೆ ಮುನ್ನ (1648) ತನ್ನ

ಮಕ್ಕಳಿಗೆ ಮಾಗಡಿ ಮತ್ತು ಕುಣಿಗಲ್ ಸೀಮೆಗಳನ್ನು ವಿಂಗಡಿಸಿ ಕೊಟ್ಟಿದ್ದಾನೆ. ಖಚಿತತೆ ಇಲ್ಲದ ಕಾರಣ ತಾತ್ಕಾಲಿಕವಾಗಿ ಇವುಗಳ ನಡುವಿನ ವರ್ಷವಾದ ಕ್ರಿ.ಶ 1644 ಅನ್ನು ಯಲಹಂಕ ನಾಡನ್ನು ಇಮ್ಮಡಿ ಕೆಂಪೇಗೌಡ ತನ್ನ ಮೂವರು ಮಕ್ಕಳಲ್ಲಿ ಮುಮ್ಮಡಿ ಕೆಂಪೇಗೌಡ ಮತ್ತು ಇಮ್ಮಡಿ ಹಿರಿಯ ಕೆಂಪೇಗೌಡನ ನಡುವೆ ಹಂಚಿಕೆ ಮಾಡಿದ ಕಾಲವೆಂದು ಗುರುತಿಸಬಹುದು.

### 3.4.3 ಮುಮ್ಮಡಿ ಕೆಂಪೇಗೌಡ (ಸು.1644–1678)

ಇಮ್ಮಡಿ ಕೆಂಪೇಗೌಡನ ಮೊದಲ ಮಡದಿ ಕೆಂಪಮ್ಮಳ ಉದರದಲ್ಲಿ ಜನಿಸಿದ ಗಂಡು ಮಕ್ಕಳಲ್ಲಿ ಮುಮ್ಮಡಿ ಕೆಂಪೇಗೌಡ ಹಿರಿಯವನು. ಹಲಸ ಕಿರಿಯವನು. ಇವನನ್ನು **ವೀರಭದ್ರ ವಿಜಯ**ದಲ್ಲಿ 'ಜನ್ಮತಃ ಪ್ರತಾಪಶಾಲಿ' ಎಂದು ಬಣ್ಣಿಸಿದೆ. ಇವನು ಷಹಜಿಯ ಸೈನ್ಯವನ್ನು 6–7 ಬಾರಿ ಸೆಣಸಿ ಕೊನೆಗೆ ಯುದ್ಧದಲ್ಲಿ ಅವನ ಧ್ವಜ, ಛತ್ರಿ ಮತ್ತು ಆನೆಗಳನ್ನು ಸೆರೆ ಹಿಡಿದುಕೊಂಡನೆಂದು ಮತ್ತು ದುಸ್ಸಾಧ್ಯವೆನ್ನಿಸಿದ್ದ ಮೈಸೂರಿನ ಕಂಠೀರವ ನರಸರಾಜನ ಸೈನ್ಯಕ್ಕೆ ಬಿರುಗಾಳಿಯಂತೆ ನುಗ್ಗಿ ಕುಠಾರಪ್ರಾಯನಾಗಿ ಭೂಮಿಯನ್ನು ಗೆದ್ದನೆಂದು ತಿಳಿಸಿದೆ.[125] ಆದರೆ ಇವನ ಸಾಧನೆಯನ್ನು ಬೆಂಬಲಿಸುವ ಬೇರಾವ ಪೂರಕ ಆಧಾರಗಳು ಇಲ್ಲದ ಕಾರಣ ಇದನ್ನು ವಿದ್ವಾಂಸರು ಉತ್ಪ್ರೇಕ್ಷೆ ಎಂದು ತಳ್ಳಿಹಾಕಿದ್ದಾರೆ. ಆದರೆ, ಮುಮ್ಮಡಿ ಕೆಂಪೇಗೌಡನು ಷಹಜಿಯನ್ನು ಸೋಲಿಸಿ, ಬೆಂಗಳೂರನ್ನು ಗೆದ್ದಿದ್ದಾನೆ. ಆದರೆ ಅವನನ್ನು ಮೈಸೂರಿನ ಕಂಠೀರವ ನರಸರಾಜ ಒಡೆಯರ್ ಸೋಲಿಸಿ ಬೆಂಗಳೂರನ್ನು ಮತ್ತೆ 1638–48ರ ನಡುವೆ ವಶಮಾಡಿಕೊಂಡಂತೆ ತೋರುತ್ತದೆ.

ಈತನು ಮಹಾನ್ ದೈವಭಕ್ತನೆಂದು ಇತಿಹಾಸದಲ್ಲಿ ಗುರುತಿಸಲಾಗಿದೆ. ಇವನು ಮಾಗಡಿಯ ಸೋಮೇಶ್ವರನನ್ನು ಪ್ರಾರ್ಥಿಸಿ ಮಳೆ ತರುವ ಮೂಲಕ ಕ್ಷಾಮವನ್ನು ನಿವಾರಿಸಿದನೆಂದು ಹೇಳಲಾಗುತ್ತದೆ. ಆದ್ದರಿಂದ ಇವನನ್ನು 'ಮಳೆ ಕೆಂಪರಾಯ' ಎಂದು ಕರೆಯುವುದು ವಾಡಿಕೆ.[126] ಬರಗಾಲದ ಸಂದರ್ಭವನ್ನು ನಿರ್ವಹಿಸುವ ಸಲುವಾಗಿ ಈತನು ಕೆಂಪಸಾಗರ ಎಂಬ ಕೆರೆಯನ್ನು ಮಾಡಿಸಿ ಕೃಷಿ ಅಭಿವೃದ್ಧಿಪಡಿಸಿದನು.

'ವೀರಭದ್ರ ವಿಜಯ'ದಲ್ಲಿ ಕವಿಯು ಇವನನ್ನು ಅರ್ಜುನನಂತೆ ಶ್ರೇಷ್ಠನೆಂದು ಬಣ್ಣಿಸಿದ್ದಾನೆ. ಕಣ್ಣುಗಳನ್ನು ಬೇಡಿಬಂದ ಭಕ್ತನಿಗೆ ದೇವನು ಒಂದು ಕಣ್ಣು ಕೊಟ್ಟು ಮತ್ತೊಂದು ಕಣ್ಣನ್ನು ಕೊಡಲು ರಾಜನನ್ನು ತೋರಿಸಿದನಂತೆ. ಇದರಿಂದ ಮುಮ್ಮಡಿ ಕೆಂಪೇಗೌಡನು ಇದರಿಂದ ಈ ರಾಜನು ಸುಬ್ರಹ್ಮಣ್ಯನ ಶಕ್ತಿಯನ್ನು ಹೊಂದಿದವನೆಂದೂ, ವೀರಭದ್ರನ ಅಂಶವೇ ಎಂದು ತಿಳಿಯುವಂತೆ ದೇವನೇ ಸ್ಪಷ್ಟಪಡಿಸಿದನೆಂದು ಕವಿಯು ತಿಳಿಸಿದ್ದಾನೆ.[127] ಇಂತಹ ಕಥನಗಳು

ರಾಜ ಒಡೆಯರ್ ಬಗೆಗೂ ಇರುವುದನ್ನು ಕಾಣಬಹುದು. ಇಂತಹ ಕಥನಗಳಿಂದ ಅರಸ ಕೂಡ ದೈವಾಂಶ ಸಂಭೂತ ಎಂಬುದನ್ನು ಬಿಂಬಿಸುವುದು ಕವಿಯ ಉದ್ದೇಶವಿದ್ದಂತಿದೆ. ಮೊದಲ ಬಾರಿಗೆ ಯಲಹಂಕ ವಂಶಸ್ಥ ಅರಸನೊಬ್ಬ ತನ್ನನ್ನು ಸದಾಶಿವ ಗೋತ್ರದವನೆಂದು ಗುರುತಿಸಿಕೊಂಡಿರುವುದು ಗಮನಾರ್ಹ. ಇಲ್ಲಿಯವರೆಗೂ ಚತುರ್ಥಗೋತ್ರದವರೆಂದು ಗುರುತಿಸಿಕೊಂಡಿದ್ದರು. ಇದು ಶೈವಧರ್ಮ ಸ್ವೀಕಾರದಿಂದ ಗೋತ್ರ ಬದಲಾವಣೆಯಾಗಿರುವ ಸಂಭವವಿದೆ. ಈತನು ಅನೇಕ ಬ್ರಾಹ್ಮಣರಿಗೆ ದಾನದತ್ತಿಗಳನ್ನು ನೀಡಿದನಲ್ಲದೆ, ಮಠಮಾನ್ಯಗಳಿಗೂ ಗ್ರಾಮಗಳನ್ನೇ ಬಿಟ್ಟನು. ಅವುಗಳಲ್ಲಿ ಮುಖ್ಯವಾದುದೆಂದರೆ, ಕಾಸಿಯಲ್ಲಿ ಮಠವೊಂದನ್ನು ಕಟ್ಟಿಸಿ, ಶಿವಲಿಂಗವನ್ನು ಪ್ರತಿಷ್ಠಾಪಿಸಿ, ಕಾಶಿಯ ಮಠಕ್ಕೆ ಅಳಲುಕುಪ್ಪೆ ಗ್ರಾಮವನ್ನು ದಾನವಾಗಿ ಬಿಟ್ಟನು.[128] ಈತನು ತನ್ನ ಉಪಪತ್ನಿಯರಾದ ಜಪಾಮುದ್ದಿ ಮತ್ತು ಭರ್ಗಾವತಿಯರ ಹೆಸರಿನಲ್ಲಿ ದೊಡ್ಡ ಕೆರೆಗಳನ್ನು ನಿರ್ಮಾಣ ಮಾಡಿಸಿದನು. ಇವನ ಆಳ್ವಿಕೆ ಮಾಗಡಿ ಸೀಮೆಗಷ್ಟೇ ಸೀಮಿತವಾಗಿತ್ತು.

### 3.4.4 ಇಮ್ಮಡಿ ಹಿರಿಯ ಕೆಂಪೇಗೌಡ (ಸು. 1644–1662?)

ಇಮ್ಮಡಿ ಹಿರಿಯ ಕೆಂಪೇಗೌಡ ಎಂಬ ಯಲಹಂಕ ಮನೆತನದ ನಾಡಪ್ರಭುವೊಬ್ಬ ಕುಣಿಗಲ್ ಇಂದ ಆಳುತ್ತಿದ್ದನೆಂದು ಗುರುತಿಸುವಲ್ಲಿ ಮತ್ತು ಅವನ ವ್ಯಕ್ತಿತ್ವವನ್ನು ನಿರೂಪಿಸುವಲ್ಲಿ ಈವರೆಗಿನ ವಿದ್ವಾಂಸರು ವಿಫಲರಾಗಿದ್ದಾರೆ. ಇಮ್ಮಡಿ ಹಿರಿಯ ಕೆಂಪೇಗೌಡರ ಸಾಧನೆಗಳೆಲ್ಲವನ್ನೂ ತಾತನಾದ ಹಿರಿಯ ಕೆಂಪೇಗೌಡನಿಗೆ ಆರೋಪಿಸುವ ಮೂಲಕ ಇವನಿಗೆ ಇತಿಹಾಸದಲ್ಲಿ ಅನ್ಯಾಯವೆಸಗಲಾಗಿದೆ. ಇದಕ್ಕೆ ಕಾರಣವಾಗಿರುವುದು ತಾತನ ಹೆಸರನ್ನು ಮೊಮ್ಮಗನಿಗೆ ಇಟ್ಟಿರುವುದು. ಈವರೆಗಿನ ಬಹುತೇಕ ಇತಿಹಾಸಕಾರರು ಇಮ್ಮಡಿ ಹಿರಿಯ ಕೆಂಪೇಗೌಡ ಶಾಸನಗಳನ್ನು ಹಿರಿಯ ಕೆಂಪೆಗೌಡನದೆಂದೇ ಭಾವಿಸಿರುವುದು ಈ ಅನ್ಯಾಯಕ್ಕೆ ಕಾರಣವಾಗಿದೆ. ಅದೇನೆ ಇರಲಿ, ಇಮ್ಮಡಿ ಕೆಂಪೇಗೌಡನ ಎರಡನೆಯ ಹೆಂಡತಿ ಲಿಂಗಮ್ಮ (ಲಿಂಗಾಂಬಿಕೆ)ಯ ಹೊಟ್ಟೆಯಲ್ಲಿ ಜನಿಸಿದ ಮಗನೇ ಇಮ್ಮಡಿ ಹಿರಿಯ ಕೆಂಪೇಗೌಡ. ಕುಣಿಗಲ್ ನಿಂದ ಆಳುತ್ತಿದ್ದ ಇಮ್ಮಡಿ ಹಿರಿಯ ಕೆಂಪೆಗೌಡನ ವ್ಯಕ್ತಿತ್ವವನ್ನು ನಿರೂಪಿಸುವ ಕೆಲವೇ ಕೆಲವು ಶಾಸನ ಮತ್ತು ಸಾಹಿತ್ಯಾಧಾರಗಳಿವೆ. ಅವುಗಳಲ್ಲಿ ಏಕಾಮ್ರ ದೀಕ್ಷಿತನ **'ವೀರಭದ್ರ ವಿಜಯ',** ಗೋವಿಂದ ವೈದ್ಯನ **'ಕಂಠೀರವ ನರಸರಾಜ ವಿಜಯ'** ಪ್ರಮುಖವಾದವು.

ಕುಣಿಗಲ್ ಪಟ್ಟಣವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡಿದ್ದ ಇಮ್ಮಡಿ ಹಿರಿಯ ಕೆಂಪೇಗೌಡನು ಆಳ್ವಿಕೆ ಆರಂಭಿಸಿದ್ದರಿಂದ ಅವನನ್ನು ಕುಣಿಗಲ್ ಕೆಂಪೇಗೌಡನೆಂದು ಕರೆಯುವುದು ಹೆಚ್ಚು ಸೂಕ್ತವಾಗಿದೆ. **'ಕಂಠೀರವ ನರಸರಾಜ ವಿಜಯ'**ದಲ್ಲಿ ಈ ರೀತಿ ಇದೆ:[129]

ಬೆಡಗಿನ ತೇಜಿಯನೇರಿ ಚಾಮರಗಳ
ಬಿಡದೆ ಡಾಳಿಸಿಕೊಳ್ವನಾರೆ
ಮಡದಿರನ್ನಳೆ ಕೇಳು ಹುಣಿಗಿಲನಾಳುವ
ದೊಡಕೆಂಪೇಗೌಡನೇ ಈತ ॥

ಇಲ್ಲಿ ಇಮ್ಮಡಿ ಹಿರಿಯ ಕೆಂಪೇಗೌಡನನ್ನು ದೊಡ್ಡ ಕೆಂಪೇಗೌಡನೆಂದು ಕರೆಯಲಾಗಿದೆ. 'ವೀರಭದ್ರ ವಿಜಯ'ದಲ್ಲಿ ಕುಣಿಗಲ್ ಕೆಂಪೇಗೌಡನನ್ನು ಅರ್ಥಾತ್ ಇಮ್ಮಡಿ ಹಿರಿಯ ಕೆಂಪೇಗೌಡನನ್ನು ಹೀಗೆ ಚಿತ್ರಿಸಿದೆ:[130] "ಇವನ ಅತಿ ಪರಾಕ್ರಮವುಳ್ಳ ಬಾಹುಗಳು ಶತ್ರುಗಳೆಂಬ ಗಂಧಹಸ್ತಿಗಳ ನೆತ್ತಿಗೆ ಅಂಕುಶದಂತಿತ್ತು. ಇವನ ಪರಾಕ್ರಮದಿಂದ ವೀರರ ಭೂಮಿಯಾಗುತ್ತಿತ್ತು. ಇವನು ಬಹುಭಾಷಾ ಪಂಡಿತನಾಗಿದ್ದು, ಅನೇಕ ಭಾಷೆಗಳಲ್ಲಿ ಕವಿ ಆಗಿದ್ದನು. ಹಲವು ಭಾಷೆಗಳನ್ನು ಅಭ್ಯಸಿಸಿದ್ದ ಇವನನ್ನು 'ನವ ಕವಿತಾ ಗುಂಭಪುಂಭವಾಣಿ' ಎಂದು ಕರೆದಿದೆ." ಅಂದರೆ ಕುಣಿಗಲ್ ಕೆಂಪೇಗೌಡನು ಮಹಾನ್ ಕಲಿ ಮಾತ್ರವಲ್ಲ ಪ್ರಬುದ್ಧ ಕವಿಯೂ ಆಗಿದ್ದನೆಂದು ತಿಳಿಯುತ್ತದೆ. ಈ ಮೊದಲು ತೆಲುಗಿನಲ್ಲಿರುವ **'ಗಂಗಾಗೌರಿ ವಿಲಾಸಮು'** ಕೃತಿಯನ್ನು ಬರೆದಾತ ಹೊಸ ಬೆಂಗಳೂರು ನಿರ್ಮಾಪಕರಾದ ಹಿರಿಯ ಕೆಂಪೇಗೌಡನೆಂತಲೂ, ತೆಲುಗಿನ ಕೃತಿಯನ್ನು ಬರೆದಿರುವುದರಿಂದ ಯಲಹಂಕ ಪ್ರಭುಗಳು ತೆಲುಗು ಭಾಷಿಕ ಮೂಲದವರಿರಬೇಕೆಂತಲೂ ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದರು. ಅದಕ್ಕೆ ಕಾರಣ **'ಗಂಗಾಗೌರಿ ವಿಲಾಸಮು'** ಕೃತಿಯಲ್ಲಿ "ಹಿರಿಯ ಕೆಂಪ ನೃಪರ್ತಿ" ಎಂದು ಕರೆದಿರುವುದಾಗಿತ್ತು. ಆದರೆ, ಹಿರಿಯ ಕೆಂಪೇಗೌಡನು ವಿದ್ವಾಂಸನಾಗಿದ್ದನು ಎನ್ನುವುದಕ್ಕೆ ಬೇರಾವ ಆಕರಗಳೂ ಇಲ್ಲ. ಅಲ್ಲದೆ, ಬರೆದ ಭಾಷೆಯ ಹಿನ್ನೆಲೆಯಲ್ಲಿಯೇ ಅವರ ಮಾತೃ ಭಾಷೆಯನ್ನು ನಿರ್ಧರಿಸಲೂ ಆಗದು. ಏಕೆಂದರೆ, ಕನ್ನಡದಲ್ಲಿ ಜ್ಞಾನಪೀಠ ಪ್ರಶಸ್ತಿ ಪಡೆದ ಹಲವು ಮಂದಿ ಸಾಹಿತಿಗಳ ಮಾತೃಭಾಷೆ ಕನ್ನಡವೇ ಅಲ್ಲ! ಎಂಬುದನ್ನು ನೆನಪಿಗೆ ತಂದುಕೊಳ್ಳುವುದು ಒಳಿತು. ಅದೇನೇ ಇರಲಿ, ನಮಗೆ ಕುಣಿಗಲ್ ಕೆಂಪೇಗೌಡನು ಬಹುಭಾಷಾ ವಿದ್ವಾಂಸರಾಗಿದ್ದ ಬಗೆಗೆ 'ವೀರಭದ್ರ ವಿಜಯ'ದಲ್ಲಿ ತಿಳಿಸಿದೆ. ಆದ್ದರಿಂದ 'ಗಂಗಾಗೌರಿ ವಿಲಾಸಮು' ಬರೆದವನೂ ಕೂಡ ಕುಣಿಗಲ್ ಕೆಂಪೇಗೌಡನೇ ಆಗಿದ್ದಾನೆಯೇ ವಿನಃ ಹಿರಿಯ ಕೆಂಪೇಗೌಡನಾಗಿರಲು ಸಾಧ್ಯವಿಲ್ಲ. ಅನೇಕ ವೇಳೆ ದೀರ್ಘವಾದ ಹೆಸರುಗಳನ್ನು ಸಂಕ್ಷೇಪಗೊಳಿಸಿ ಪ್ರಯೋಗಿಸುವುದರಿಂದ ಈ ರೀತಿಯ ಗೊಂದಲಗಳು ಸೃಷ್ಟಿಯಾಗುತ್ತವೆಯಷ್ಟೆ.

ಕುಣಿಗಲ್ ಇಂದ ಆಳಲಾರಂಭಿಸಿದ ಕುಣಿಗಲ್ ಕೆಂಪೇಗೌಡನು ಪ್ರಾಂತ್ಯದ ದಕ್ಷಿಣಕ್ಕೆ ಹುಲಿಯೂರಿನ ಕುಂಭಿ ಬೆಟ್ಟದಲ್ಲಿ ಕೋಟೆಯನ್ನು ಕಟ್ಟಿಸಿ, ಸೈನಿಕ ಠಾಣೆಯನ್ನು ನಿರ್ಮಿಸಿದಂತೆ ತೋರುತ್ತದೆ. ಆ ನಂತರ ಹುಲಿಯೂರು ಗ್ರಾಮವು ಮುಂದೆ ಹುಲಿಯೂರುದುರ್ಗ ಹೆಸರಿನಿಂದ ಪಟ್ಟಣವಾಗಿ ವಿಕಾಸವೊಂದಿರುವಂತೆ ಕಾಣುತ್ತದೆ. ಈ ಸಂಗತಿಯನ್ನು ಶಾಸನಗಳ ಸೂಕ್ಷ್ಮ ಅಧ್ಯಯನದಿಂದ ಅರಿಯಬಹುದಾಗಿದೆ. ಅದೇ ರೀತಿಯಲ್ಲಿ ಹುತ್ರಿದುರ್ಗದ ಕೋಟೆ ಕೂಡ ಇವರ ಕಾಲದಲ್ಲಿಯೇ ಅಭಿವೃದ್ಧಿ ಹೊಂದಿರಬಹುದೇ ಹೊರತು ಅದಕ್ಕೆ ಮೊದಲು ಎನ್ನಲು ಆಧಾರಗಳಿಲ್ಲ. ಹುತ್ರಿದುರ್ಗದ ಎಲಿಯೂರು ದ್ವಾರವನ್ನು ಮಾಡಿಸಿದ ಚನ್ನಮನಾಯಕನು ಕೆಂಪೇಗೌಡನ ಅಧೀನ ಅಧಿಕಾರಿಯಾಗಿರಬಹುದೆಂದು ಬಿ.ಎಲ್.ರೈಸ್ ಆದಿಯಾಗಿ ಅನೇಕ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಇತ್ತೀಚೆಗೆ ಅಧ್ಯಯನ ನಡೆಸಿರುವ ಹಂ.ಗು. ರಾಜೇಶ್ ಅವರ ಪ್ರಕಾರ 17ನೆಯ ಶತಮಾನದ ಆರಂಭಿಕ ದಶಕಗಳವರೆಗೆ ಹುತ್ರಿದುರ್ಗದ ಮೇಲೆ ಯಾವುದೇ ನಿಯಂತ್ರಣವನ್ನು ಯಲಹಂಕ ನಾಡಪ್ರಭುಗಳು ಹೊಂದಿರುವಂತೆ ಕಾಣುವುದಿಲ್ಲ. ಇವರ ಮೊದಲ ಶಾಸನ ಸಿಗುವುದೇ ಹುತ್ರಿದುರ್ಗಕ್ಕೆ ಸಮೀಪವಿರುವ ಕಲ್ಯಾದಲ್ಲಿ. ಅದರ ಕಾಲ ಕ್ರಿ.ಶ. 1621. ಅಂದರೆ, ಹುತ್ರಿದುರ್ಗದ ಕೋಟೆಯು ಯಲಹಂಕ ನಾಡಪ್ರಭುಗಳಿಗೂ ಪೂರ್ವದಲ್ಲಿಯೇ ನಿರ್ಮಾಣವಾಗಿತ್ತು.[131]

ಕುಣಿಗಲ್ ಕೆಂಪೇಗೌಡನಿಗೆ ವೆಂಕಟಕೃಷ್ಣಾಜಮ್ಮ ಎಂಬ ಪತ್ನಿಯೂ, ಶೃಂಗಾರಮ್ಮ ಎಂಬ ಉಪಪತ್ನಿಯೂ ಇದ್ದಂತೆ ಕುಣಿಗಲ್ ಮತ್ತು ಹುಲಿಯೂರು ದುರ್ಗಗಳಲ್ಲಿನ ಶಾಸನಗಳಿಂದ ತಿಳಿದುಬರುತ್ತದೆ. ವೆಂಕಟಕೃಷ್ಣಾಜಮ್ಮ ಕುಣಿಗಲ್‌ನಲ್ಲಿ ಅಗ್ರಹಾರ ಮಾಡಿಸಿ, ಕುಣಿಗಲ್ ದೊಡ್ಡಕೆರೆಯ ಹಿಂದಿನ ಗದ್ದೆ ಮತ್ತು ಹೊಲವನ್ನು ಬ್ರಾಹ್ಮಣರಿಗೆ ದಾನ ನೀಡಿದ ಸಂಗತಿಯನ್ನು ಕುಣಿಗಲ್ ಪಟ್ಟಣದ ಕೃಷ್ಣಸಾಗರ ಅಗ್ರಹಾರದಲ್ಲಿರುವ ಶಾಸನವು ತಿಳಿಸುತ್ತದೆ.[132] ಅದೇ ರೀತಿ ಹುಲಿಯೂರು ದುರ್ಗದಲ್ಲಿರುವ ಇಮ್ಮಡಿ ಹಿರಿಯ ಕೆಂಪೇಗೌಡನ ಕಾಲದ ಮೂರು ಶಾಸನಗಳಲ್ಲಿ ಪಟ್ಟದ ನಾಟಕ ಶಾಲೆಯ ಶೃಂಗಾರಮ್ಮ ಶೃಂಗಾರಸಾಗರ ಅಗ್ರಹಾರವನ್ನು, ಸಮೀಪದಲ್ಲಿ ಒಂದು ಕೆರೆಯನ್ನು ಮತ್ತು ಹಳೆಪೇಟೆಯಲ್ಲಿ ಒಂದು ಬಸವ ಮಂಟಪವನ್ನು ಮಾಡಿಸಿದ ಬಗೆಗೆ ಮಾಹಿತಿ ನೀಡುತ್ತವೆ.

ಇಮ್ಮಡಿ ಹಿರಿಯ ಕೆಂಪೇಗೌಡ ಅಥವಾ ಕುಣಿಗಲ್ ಕೆಂಪೇಗೌಡನ ಎಲ್ಲ ಸಾಧನೆಗಳನ್ನು ಇತಿಹಾಸಕಾರರು ಹೆಸರಿನ ಗೊಂದಲದಿಂದ ಅವನ ತಾತನಾದ ಹೊಸ ಬೆಂಗಳೂರು ನಿರ್ಮಾಪಕ ಹಿರಿಯ ಕೆಂಪೇಗೌಡನಿಗೆ ತಳಕು ಹಾಕುವ ಮೂಲಕ ಕುಣಿಗಲ್ ಕೆಂಪೇಗೌಡನನ್ನು ಚರಿತ್ರೆಯ

ಮಟಗಳಿಂದಲೇ ಕಣ್ಮರೆ ಮಾಡಿದ್ದು ವಿಷಾಧನೀಯ. ಪರಾಕ್ರಮಿಯಾದ ಕುಣಿಗಲ್ ಕೆಂಪೇಗೌಡನ ಅಂತ್ಯ ಕೂಡ ಅಷ್ಟೇ ಸ್ವಾಭಿಮಾನಯುತವಾಗಿತ್ತು ಎಂಬುದನ್ನು ಲಾವಣಿಗಳಲ್ಲಿ ಕಾಣಬಹುದು. ಕುಣಿಗಲ್ ನಾಡಿನ ಮೇಲೆ ದಂಡೆತ್ತಿ ಬಂದ ಮೈಸೂರ ದಳವಾಯಿ ದೊಡ್ಡಯ್ಯ ಮತ್ತು ಇಮ್ಮಡಿ ಹಿರಿಯ ಕೆಂಪೇಗೌಡನ ನಡುವೆ ಕದನ ಜರುಗಿತು. ವೀರ ಕೆಂಪೇಗೌಡ ಸೋಲನ್ನಪ್ಪುವ ಮುನ್ನ ತಮ್ಮನ್ನು ತಾನು ಇರಿದುಕೊಂಡು ಆತ್ಮಹತ್ಯೆ ಮಾಡಿಕೊಂಡ. ಅವನ ಅಂತ್ಯದ ಬಗ್ಗೆ ಪಿ.ಕೆ.ರಾಜಶೇಖರ್ ಅವರು ಸಂಗ್ರಹಿಸಿದ ಲಾವಣಿಯ ಸಾಲುಗಳು ಹೀಗಿವೆ:[133]

> ಆಗ ಮಾಗಡಿ ಕೆಂಪೆಗೌಡ ಏನೋಚನೆ ಮಾಡುತ್ತಾನೆ
>
> ..............................................
>
> ಅವ್ನು–ಸೊಂಟದಲ್ಲಿದ್ದ ಬಾಕ ಕೈಗಾದ್ರೆ ತಕ್ಕೊಂಡ
> ಅವ್ನು–ಎದೆಗಾದ್ರೆ ತಾಟಿಕೊಂಡು ಕುಂತು ಪ್ರಾಣಬಿಟ್ಟನಲ್ಲೊ
> ಕೈಯಾರ ಪ್ರಾಣುವನ್ನೆ ಕಳುಕೊಂಡ ಕೆಂಪೆಗೌಡು
> ಎಂತೆ ದೊರೆಮಗನೀಗೆ ಎಂತೆಕಾಲ ಕೂಡಿತಪ್ಪ
> ಮೈಸೂರು ದಳವಾಯಿ ಕೆಂಪೇಗೌಡ್ನ ನೋಡಿದ
> ತನ್ನ ತೊಡೆ ಮ್ಯಾಲುಕಾದ್ರೆ ಅವನ ತಲೆ ಇಟುಕೊಂಡ
> ಮಾವೀನ ತೋಪಿನಲ್ಲಿ ಅವನ ಗೋರಿ ಮಾಡಿಸಿದ.

ಹಾಗಾದರೆ ಈ ಗೋರಿ ಎಲ್ಲಿದೆ? ಕೆಂಪಾಪುರದಲ್ಲಿ ಪತ್ತೆಯಾಗಿರುವ ಸಮಾಧಿಯ ಮೇಲಿನ ಶಾಸನದಲ್ಲಿ ಹಿರಿಯ ಕೆಂಪೇಗೌಡರು ಕುಣಿಗಲಿಂದ ಬಂದು ಯಿ ಬಳಿಯೆ ಜಗಳ(ಕದನ)ವನ್ನು ಮಾಡಿ ಐಕ್ಯವಾಗಿ ಕೈಲಾಸಕ್ಕೆ ಹೋದರೆಂದು ಹೇಳುತ್ತದೆ. ಸಮಾಧಿ ಶಾಸನದಲ್ಲಿ ಉಲ್ಲೇಖಿಸಿರುವ ಹಿರಿಯ ಕೆಂಪೇಗೌಡ ಬೇರೆಯಾರೂ ಅಲ್ಲ ಕುಣಿಗಲ್‌ಯಿಂದ ಆಳುತ್ತಿದ್ದ ಇಮ್ಮಡಿ ಹಿರಿಯ ಕೆಂಪೇಗೌಡನೇ ಎಂದು ಆಧಾರಪೂರ್ವಕವಾಗಿ ಹಂ.ಗು. ರಾಜೇಶ್ ತೋರಿಸಿಕೊಟ್ಟಿರುತ್ತಾರೆ.[134] ಇಮ್ಮಡಿ ಹಿರಿಯ ಕೆಂಪೇಗೌಡನು 1660ರ ದಶಕದ ಆರಂಭದಲ್ಲಿ ಮೈಸೂರಿನ ದಳವಾಯಿ ಸೈನ್ಯದ ವಿರುದ್ಧ ಹೋರಾಡುತ್ತಲೇ ಮಡಿದನು. ಲಾವಣಿಗಳಲ್ಲಿ ಬಿಂಬಿತವಾಗಿರುವಂತೆ ತನ್ನ ಸೋಲನ್ನು ಅರಿತ ಇಮ್ಮಡಿ ಹಿರಿಯ ಕೆಂಪೇಗೌಡನು ಶರಣಾಗದೆ ತನ್ನನ್ನು ತಾನು ಇರಿದುಕೊಳ್ಳುತ್ತಾನೆ. ಇಮ್ಮಡಿ ಹಿರಿಯ ಕೆಂಪೇಗೌಡನ ಪರಾಕ್ರಮ ಮತ್ತು ಸ್ವಾಭಿಮಾನ ಕಂಡು ಓಡಿಬಂದ ದಳವಾಯಿಯು ಅವನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಸಂತೈಸುವ ಪ್ರಯತ್ನ ಮಾಡುತ್ತಾನೆ. ಆದರೆ ಬದುಕುಳಿಯುವುದಿಲ್ಲ. ಅಂತಿಮವಾಗಿ, ಇಮ್ಮಡಿ ಹಿರಿಯ ಕೆಂಪೇಗೌಡನನ್ನು ಸಮೀಪದ ಮಾವಿನ ತೋಪಿನಲ್ಲಿ ಸಮಾಧಿ

ಮಾಡಿ ಗೋರಿನಿರ್ಮಿಸಿದನೆಂದು ತಿಳಿದು ಬರುತ್ತದೆ. ಆ ಮೂಲಕ ಕುಣಿಗಲ್ ಸೀಮೆಯು ಮೈಸೂರಿನ ಅಧಿಪತ್ಯಕ್ಕೆ ಸೇರಿತು. ಕೊನೆಗೆ ಯಲಹಂಕ ನಾಡೆಂದು ಹೇಳಿಕೊಳ್ಳಲು ಉಳಿದ ಏಕೈಕ ಸೀಮೆ ಎಂದರೆ ಮಾಗಡಿ ಮಾತ್ರ. ಇದನ್ನು ಮುಮ್ಮಡಿ ಕೆಂಪೇಗೌಡನು ಶ್ರಮಪಟ್ಟು ಉಳಿಸಿಕೊಂಡಿದ್ದನು.

ಕುಣಿಗಲ್ಲಿಗೆ 2 ಮೈಲಿ ದೂರದ ಗವಿಮಠ ಇದೆ. ಮೈಸೂರು ಅರಸ ದೊಡ್ಡದೇವರಾಜನು ಹುಲಿಯೂರು ದುರ್ಗ ಮತ್ತು ಕುಣಿಗಲ್‌ಗಳನ್ನು ಗೆದ್ದು ಮಠದ ತಪ್ಪಲಲ್ಲಿ ಬೀಡುಬಿಟ್ಟಿದ್ದಾಗ, ಗವಿಮಠದ ಸಿದ್ಧವೀರಸ್ವಾಮಿಗಳು ಅನುಷ್ಠಾನದಲ್ಲಿದ್ದರು. ಗವಿ ಮತ್ತು ಪೌಳಿಯನ್ನು ಗಮನಿಸಿ, ಇಲ್ಲಿ ಯಾರೋ ಶತ್ರುಗಳು ಅಡಗಿಕೊಂಡಿರಬಹುದೆಂದು ತಿಳಿದು ಫಿರಂಗಿಗಳಿಂದ ಗವಿಗೆ ಹೊಡೆಸಿದನು. ಆ ಫಿರಂಗಿಯ ಗುಂಡುಗಳು ಪುಷ್ಪಗಳಾದವು. ಆಶ್ಚರ್ಯಗೊಂಡ ಅರಸ ಸ್ಥಳಕ್ಕೆ ಹೋಗಿ ನೋಡಿದಾಗ ಶಂಖ, ಜಾಗಟೆ ಮತ್ತು ಡಮರುಗಳ ಶಬ್ದ ಕೇಳಿಸಿತು. ಸ್ವಾಮಿಗಳು ಗವಿಯಿಂದ ಹೊರಬಂದು ದರ್ಶನ ನೀಡಿದರು. ರಾಜನಿಗೆ ಜ್ಞಾನೋದಯವಾಗಿ ಕ್ಷಮೆಯಾಚಿಸಿ, ಪಾದಕ್ಕೆರಗಿದನು. ಆಗ ಸ್ವಾಮಿಗಳು "ಋಷಿಗಳ ಬ್ರಹ್ಮತೇಜೋಬಲದ ಮುಂದೆ ಕ್ಷತ್ರಿಯ ಬಲವು ಅತ್ಯಲ್ಪವಾದುದು. ಧರ್ಮದಿಂದ ರಾಜ್ಯವಾಳು, ಧರ್ಮ ರಕ್ಷಕರನ್ನು ಕಾಪಾಡು..." ಎಂದು ಆಶೀರ್ವದಿಸಿದರು. ಆಗ ರಾಜನು ಸ್ವಾಮಿಗಳ ದರ್ಶನಕ್ಕೆ ಬರುವ ಪ್ರಸಾದಕ್ಕಾಗಿ ಎಲಗಲಹಳ್ಳಿ, ತಾವರೆಕೆರೆ, ಹೂಲಿಕಟ್ಟೆ, ವಿರುಪಸಂದ್ರ, ಅಂಕನಹಳ್ಳಿ ಗವಿಮಠಗಳನ್ನೂ ಮತ್ತು ಪ್ರತಿ ಐದು ಮಠದ 60 ಎಕರೆ ಭೂಮಿಯನ್ನು ಮಠಕ್ಕೆ ದಾನವಾಗಿ ಕೊಟ್ಟನು.[135] ಬಹುಶಃ ಈ ಘಟನೆಯು ಇಮ್ಮಡಿ ಹಿರಿಯ ಕೆಂಪೇಗೌಡನ ಮರಣದ ತರುವಾಯ ಸಂಭವಿಸಿರುವಂತೆ ತೋರುತ್ತದೆ.

## 3.5 ಕೊನೆಗಾಲದ ನಾಡಪ್ರಭುಗಳು

ಯಲಹಂಕ ನಾಡಿನ ಕೊನೆಗಾಲದ ನಾಡಪ್ರಭುಗಳೆಂದರೆ ದೊಡ್ಡವೀರಪ್ಪಗೌಡ (ಸು.1678–1705), ಇಮ್ಮಡಿ ಮತ್ತು ಕೊನೆಯ ಅರಸ ಮುಮ್ಮಡಿ ಕೆಂಪವೀರಪ್ಪಗೌಡ (1705–1728). ಇವರು ಮೈಸೂರು ಅರಸರಿಂದ ತೀವ್ರ ತೊಂದರೆಯನ್ನು ಅನುಭವಿಸಬೇಕಾಯಿತು. ಮುಮ್ಮಡಿ ಕೆಂಪೇಗೌಡನಿಗೆ ಮೂವರು ರಾಣಿಯರು. ಅವರಲ್ಲಿ ಮೊದಲನೆಯವಳು–ಬಸವಮಾಂಬ. ಎರಡನೆಯವಳು–ತೋಟದಾಂಬಾ. ಮೂರನೆಯವಳು– ಬೈಯ್ಯಮಾಂಬೆ. ಬಸವಮಾಂಬೆಗೆ ಇಮ್ಮಡಿ ಕೆಂಪ ಮತ್ತು ದೊಡ್ಡ ವೀರಪ್ಪಗೌಡ ಎಂಬ ಇಬ್ಬರು ಮಕ್ಕಳು. ತೋಟದಾಂಬೆಗೆ ಇಮ್ಮಡಿ ಹಲಸ ಮತ್ತು ಭೈಯ್ಯಮಾಂಬೆಗೆ ಚನ್ನವೀರ ಎಂಬ ಮಕ್ಕಳು ಜನಿಸಿದರು.

### 3.5.1 ದೊಡ್ಡ ವೀರಪ್ಪಗೌಡ (ಸು. ಕ್ರಿಶ 1678–1705 )

ಈತನು ಸಾವನದುರ್ಗದ ವೀರಭದ್ರನ ರಥೋತ್ಸವಕ್ಕೆ ಬಂದ ಸನ್ನಿವೇಶವನ್ನು ಏಕಾಮ್ರ ದೀಕ್ಷತನು ವರ್ಣಿಸಿರುವುದು. ಇವನು ರಣರಂಗದಲ್ಲಿ ಶೌರ್ಯವನ್ನು ಪ್ರದರ್ಶಿಸಿ ಭೂಮಿಯನ್ನು ಗೆದ್ದು, ಉಪವನವನ್ನಾಗಿ ಮಾಡಿ ಸಂಪತ್ತನ್ನು ಹಂಚುವ ಬುದ್ದಿಯುಳ್ಳ ರಾಜಾಧಿರಾಜನೆನ್ನಿಸಿದ್ದನು. ಈ ರಾಜನಾದರೊ, ಪೂರ್ವ, ಪಶ್ಚಿಮ ಮತ್ತು ಉತ್ತರ ದಿಕ್ಕಿನ ರಾಜರನ್ನೆಲ್ಲ ಸದೆ ಬಡಿದು, ಕೀರ್ತಿವಂತನಾಗಿ ದಾಕ್ಷಿಣಾತ್ಯ ರಾಜರ ಪಾಲಿಗೆ ಪ್ರಾಣವಾಯುವಿನಂತಿದ್ದನೆಂದು ಬಣ್ಣಿಸಿದ್ದಾನೆ. ನಿಜವಾಗಿಯೂ ಮಹೇಶ್ವರನ ಪರಿಣಾಮವಾಗಿ ಜನಿಸಿದ ವೀರಭದ್ರನೇ ಸರಿ. ವಿದ್ವಾಂಸರಿಗೆ, ಕವಿಗಳಿಗೆ ಸ್ಪೂರ್ತಿದಾತನಾದ ಇವನನ್ನು ಯಲಹಂಕ ವಂಶದ **'ಭಾಗ್ಯದಾತ'**ನೆಂದು ಕರೆದಿದ್ದಾನೆ.[136] ಇವನ ಬಗೆಗೆ ಏಕಾಮ್ರ ದೀಕ್ಷಿತನು **'ವೀರಭದ್ರ ವಿಜಯ'**ದ ಉದ್ದಕ್ಕೂ ಅತಿಯಾದ ಉತ್ಪ್ರೇಕ್ಷೆಯ ಮಾತುಗಳನ್ನಾಡಿದ್ದಾನೆ. ಆದರೆ ಮಾಡಿದ ಸಾಧನೆಗಳ ಬಗೆಗೆ ವಿವರಗಳು ವಿರಳ. ಇವನ ಕಾಲದಲ್ಲಿ ಮಾಗಡಿ ಸೀಮೆಗೆ ಯೆಲೆಯೂರು ಹೋಬಳಿ ಸೇರಿತ್ತೆಂದು ತಿರುಮಲೆಯ ತಾಮ್ರಶಾಸನದಿಂದ (1681) ತಿಳಿಯುತ್ತದೆ. ಅಂದರೆ, ಯೆಲೆಯೂರು ಮತ್ತು ಮಾಗಡಿಯ ನಡುವೆ ಇರುವ ಹುತ್ರಿದುರ್ಗವು ಮಾಗಡಿ ಸೀಮೆಯ ಭಾಗವಾಗಿತ್ತೆಂದು ಅರ್ಥ. ಮೈಸೂರಿನ ಚಿಕ್ಕದೇವರಾಜ ಒಡೆಯರು ಕೊರಟಗೆರೆ, ಮಾಗಡಿ, ಮಧುಗಿರಿ, ಚನ್ನರಾಯನದುರ್ಗ ಬಿಜ್ಜಾವರ ಮುಂತಾದ ಪ್ರದೇಶಗಳ ಮೇಲೆ ಮುತ್ತಿಗೆ ಹಾಕಿದಾಗ, ದೊಡ್ಡವೀರಪ್ಪಗೌಡನು ಖಂಡಣಿಗೆ ಕೊಡಲೊಪ್ಪಿದನು. ಹಲವು ಮಠ ದೇವಾಲಯಗಳಿಗೂ ದಾನಧತ್ತಿಗಳನ್ನು ನೀಡಿದನು. ಮುಖ್ಯವಾಗಿ ಹಾಗಲುಕೋಟೆ, ನೇರಲವಾಡಿ, ಕಲ್ಲುದೇವನಹಳ್ಳಿ, ಚಕ್ರಭಾವಿ, ಹುಣಸೆಕುಪ್ಪೆಗಳನ್ನು ತನ್ನ ತಂದೆತಾಯಿಗಳಿಗೆ ಪುಣ್ಯವಾಗಲೆಂದು ಹೊಲಮನೆ ದಾನಮಾಡಿದನು. ಶೃಂಗೇರಿ ಮಠಕ್ಕೆ ಸೀಗೇಕುಪ್ಪೆಯನ್ನೂ, ಕುಕ್ಕೆಯ ಸುಬ್ರಹ್ಮಣ್ಯನಿಗೆ ಅರೆಬ್ಯಾಡರಹಳ್ಳಿಯನ್ನೂ ದಾನವಾಗಿ ನೀಡಿದನು.[137] ಯಲಹಂಕ ನಾಡಪ್ರಭುಗಳ ಕಾಲದ ತಾಮ್ರಶಾಸನಗಳ ವಿಶ್ವಾಸಾರ್ಹತೆಯ ಬಗೆಗೆ ಸಂಶಯಗಳಿರುವುದರಿಂದ ಈ ಅಭಿಪ್ರಾಯವನ್ನು ಸಂಶಯದ ಪೆಟ್ಟಿಗೆಯಲ್ಲಿಯೇ ಇಟ್ಟು ನೋಡಬೇಕಿದೆ. ಒಂದು ವೇಳೆ ಅದನ್ನು ಪರಿಗಣಿಸಿದರೂ ಕೂಡ ಇಂದಿನ ಮಾಗಡಿ ತಾಲ್ಲೂಕಿನ ಕೆಲಭಾಗ ಮತ್ತು ಕುಣಿಗಲ್ ತಾಲ್ಲೂಕಿನ ಹುತ್ರಿದುರ್ಗ ಸುತ್ತಲ ಕೆಲವು ಗ್ರಾಮಗಳಷ್ಟೆ 17ನೆಯ ಶತಮಾನದ ಕೊನೆಯ ವೇಳೆಗೆ ಯಲಹಂಕ ನಾಡಿನ ಭಾಗಗಳಾಗಿದ್ದವು.

### 3.5.2 ಮುಮ್ಮಡಿ ಕೆಂಪವೀರಪ್ಪಗೌಡ (1705–1728)

ಯಲಹಂಕ ನಾಡಪ್ರಭುಗಳ ಕೊನೆಯ ಅರಸ ಮುಮ್ಮಡಿ ಕೆಂಪವೀರಪ್ಪಗೌಡ. ಈತ ದೊಡ್ಡವೀರಪ್ಪಗೌಡ ಮತ್ತು ಮುದ್ದುವೀರಮಾಂಬೆಯರ ಮಗ. ಇವನ ಕಾಲದಲ್ಲಿ ಹುತ್ರಿದುರ್ಗ ಉಪರಾಜಧಾನಿಯಾಗಿತ್ತೆಂದು ಮುನಿರಾಜಪ್ಪ ಅವರು ಅಭಿಪ್ರಾಯ ಪಡುತ್ತಾರೆ.[138] ಕೆಂಪವೀರಪ್ಪಗೌಡನಿಗೂ ಮೈಸೂರು ಒಡೆಯರ್ ಒಂದನೇ ಕೃಷ್ಣರಾಯನ ದಳವಾಯಿ ಕಳಲೆ ದೇವರಾಜನಿಗೂ ಕ್ರಿ.ಶ. 1714ರಲ್ಲಿ ಯುದ್ಧ ನಡೆದುದರ ಬಗ್ಗೆ **'ಕಕುದ್ಗಿರಿ ಮಹಾತ್ಮ್ಯ'**ದಲ್ಲಿ ವಿವರಗಳಿವೆ. ಮಾಗಡಿಯ ಸೋಮೇಶ್ವರ ದೇವಾಲಯ ಕೆಂಪವೀರಪ್ಪಗೌಡನ ಕಾಲದಲ್ಲಿ ನಿರ್ಮಾಣವಾಯಿತು. ಇದರ ಪ್ರತಿಷ್ಠಾಪನಾ ಸಂದರ್ಭದಲ್ಲಿ ಕಲ್ಯದ ಕೃಷ್ಣನಪಾಳ್ಯವನ್ನು ಸೇವಾದಿಗಳಿಗಾಗಿ, ಜುಟ್ಟನಹಳ್ಳಿ, ಶ್ರೀಪತಿಹಳ್ಳಿಗಳನ್ನು ದೀಪಾರಾಧನೆಗಾಗಿ ಮತ್ತು ಶೀರನಹಳ್ಳಿಯನ್ನು ರಥೋತ್ಸವಕ್ಕಾಗಿ ಮಾನ್ಯವಾಗಿ ಬಿಡಲಾಯಿತು. ಬೃಹತ್ತಾದ ಸೋಮೇಶ್ವರ ದೇವಾಲಯವು ತಿರುಮಲೆಯ ರಂಗನಾಥ ದೇವಾಲಯಕ್ಕೆ ಪರ್ಯಾಯವಾದ ನಿರ್ಮಾಣವಾಗಿ ತೋರುವುದರಿಂದ ಇದು ಶೈವ ಮತ್ತು ವೈಷ್ಣವ ಧರ್ಮಗಳ ತಾತ್ವಿಕ ಸಂಘರ್ಷದ ಪರಿಣಾಮವಾಗಿದೆ ಎಂದು ಮುನಿರಾಜಪ್ಪ ಅವರು ಅಭಿಪ್ರಾಯ ಪಡುತ್ತಾರೆ.[139] ಈ ಧಾರ್ಮಿಕ ಸಂಘರ್ಷಕ್ಕೆ ಮಂತ್ರಿ ಅಣ್ಣಾಜಯ್ಯನ ಕುತಂತ್ರವಾಗಿದೆ. ಬಿಳಿ ಆನೆಯ ಕೊಡುಗೆಯ ಸಂಬಂಧವಾಗಿ ಮೈಸೂರಿನ ದೊರೆ ದೊಡ್ಡಕೃಷ್ಣರಾಜ ಒಡೆಯರಿಗೆ ಬರೆಯಲಾದ ಪತ್ರವು ತಿದ್ದಲ್ಪಟ್ಟಿದ್ದು ವೈಷಮ್ಯಕ್ಕೆ ಕಾರಣವಾಯಿತು. ಮೈಸೂರು ಅರಸರು ಕುಂಬಾರ ಜಾತಿಯವರು ಎಂದು ಮಂತ್ರಿ ಅಣ್ಣಾಜಿರಾಯ ತಿದ್ದಿದ್ದರಿಂದ ದಳವಾಯಿ ದೇವರಾಜಯ್ಯನು ಕುಪಿತಗೊಂಡು ಮಾಗಡಿ, ಸಾವನದುರ್ಗ ಮುತ್ತಲು ಬಂದನು. ಆ ಸಮಯದಲ್ಲಿ ಕೆಂಪವೀರಪ್ಪಗೌಡನ ಸೇನಾಪತಿ ವೀರಭದ್ರನಾಯಕ ದುರ್ಗದ ರಕ್ಷಣೆಗೆ ಇದ್ದನು. ಮೈಸೂರು ಸೈನ್ಯದಿಂದ ವೀರಭದ್ರನಾಯಕ ನೆಲಪಟ್ಟಣದಲ್ಲಿ ಸೆರೆಯಾದನು. ಕೆಂಪವೀರಪ್ಪಗೌಡನನ್ನು ಅಚ್ಚಲುದುರ್ಗದಲ್ಲಿ ಬಂಧಿಸಲಾಯಿತು. ಕೆಂಪವೀರಪ್ಪಗೌಡನನ್ನು ಬಂಧಿಸಿ ಪಂಜರದಲ್ಲಿಟ್ಟುಕೊಂಡು ವಡವಾಟ (ಲಕ್ಷ್ಮೀಪುರ) ಮೂಲಕ 1728ರಲ್ಲಿ ಸಾಗಿಸಲಾಯಿತು. ವಡವಾಟವು ಕತ್ತಿ ಹಾಗೂ ಮದ್ದುಗುಂಡುಗಳ ತಯಾರಿಕೆಯ ಕೇಂದ್ರವಾಗಿತ್ತೆನ್ನಲಾಗುತ್ತದೆ.[140] ಅಂತಿಮವಾಗಿ ಕೆಂಪವೀರಪ್ಪಗೌಡನನ್ನು ಬಂಧಿಸಿ ಶ್ರೀರಂಗಪಟ್ಟಣದಲ್ಲಿ ಇರಿಸಲಾಗಿತ್ತು. ಅಲ್ಲಿಂದ ತಮ್ಮ ವಂಶಕ್ಕೆ ಹಕ್ಕುದಾರನಾಗಿ ಉಳಿದಿದ್ದ ಹುಲಿಕಲ್ಲಿನ ಕೃಷ್ಣರಾಜಗೌಡರಿಗೆ ತನ್ನ ಪಟ್ಟದಕತ್ತಿ, ಶಿಖಿಸರಗಳನ್ನು ತನ್ನ ನಂಬಿಕಸ್ಥ ಸೇವಕ ಸೋಮ ಎಂಬಾತನ ಮೂಲಕ ಪತ್ರದ ಜೊತೆಗೆ ಕಳುಹಿಸಿ ಕೊಟ್ಟಿದ್ದನು. ಈ ಪತ್ರವೇ ಕೆಂಪವೀರಪ್ಪಗೌಡನ ಕೊನೆಯ ಪತ್ರವಾಗಿದೆ.[141] ಅಲ್ಲದೆ ಸೇವಕನ ಮೂಲಕ ಏನೋ ಹೇಳಿ

ಕಳುಹಿಸಿದಂತೆ ಕಾಣುತ್ತದೆ. ಈತನಿಂದ ನೀವು ಎಲ್ಲ ವಿಚಾರವನ್ನು ಕೇಳಿ ತಿಳಿದುಕೊಂಡು ನಂತರ ಮುಂದಿನ ಕೆಲಸ ಆಗುಮಾಡಿಸುವಂತೆ ಹೇಳಿದ್ದನು. ಬಹುಶಃ ಶ್ರೀರಂಗಪಟ್ಟಣದ ಬಂಧನದಿಂದ ತನ್ನನ್ನು ಬಿಡಿಸುವ ಪ್ರಯತ್ನಕ್ಕೆ ಸಂಬಂಧಿಸಿದ ವಿಚಾರವಿದ್ದಂತೆ ತೋರುತ್ತದೆ. ಆದರೆ ಬಿಡಿಸುವ ಮೊದಲೇ ಶ್ರೀರಂಗಪಟ್ಟಣದಲ್ಲಿ ಕೆಂಪವೀರಪ್ಪಗೌಡನು ಮರಣ ಹೊಂದಿದನು. ಅದರೊಂದಿಗೆ ಯಲಹಂಕ ನಾಡಪ್ರಭುಗಳ ಪ್ರಭುತ್ವವು ಅಂತ್ಯವಾಯಿತು.

## 3.6 ಉಪಸಂಹಾರ

ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಿರುವ ಸಂಗತಿಗಳಿಂದ ಕಂಡುಕೊಂಡ ಅಂಶಗಳನ್ನು ಗಮನಿಸಬಹುದು:

ಯಲಹಂಕ ನಾಡಪ್ರಭುಗಳೂ ಸೇರಿದಂತೆ ದಕ್ಷಿಣ ಕರ್ನಾಟಕದಲ್ಲಿ ಏಳಿಗೆ ಬಂದ ಬಹುತೇಕ ಅರಸು ಮನೆತನಗಳ ಪೂರ್ವಿಕರು ವಲಸಿಗರೇ ಆಗಿದ್ದಾರೆ. ಇದರಿಂದ ಸ್ಥಳೀಯ ನಿವಾಸಿಗಳೇಕೆ ಸ್ಥಳೀಯ ಪ್ರಭುಗಳಾಗಿ ಪ್ರವರ್ಧಮಾನಕ್ಕೆ ಬರಲಿಲ್ಲ ಎಂಬ ವಿಷಯವಾಗಿ ಚರ್ಚಿಸಿದ್ದು, ವಲಸಿಗರನ್ನು 'ಸಕ್ರಿಯಬಣ'ವೆಂದು ಗುರುತಿಸಲಾಗಿದೆ. ಇವರು ವಿಶೇಷವಾದ ಸಾಹಸ, ಶೌರ್ಯ, ಕ್ರಿಯಾಶೀಲತೆ ಮತ್ತು ಸೃಜನಶೀಲತೆಯನ್ನು ಹೊಂದಿರುತ್ತಾರೆ. ಆದರೆ ಸ್ಥಳೀಯ ಮೂಲ ನಿವಾಸಿಗಳನ್ನು 'ತಟಸ್ಥ ಬಣ'ವೆಂದು ಗುರುತಿಸಲಾಗಿದ್ದು, ಅವರು ಯಾವುದೇ ವೀರತ್ವದ ವಿಶೇಷ ಗುಣಗಳನ್ನು ಸಂಪಾದಿಸಿಕೊಳ್ಳದೆ ಕಾಲಕಾಲಕ್ಕೆ ಎದುರಾಗುವ ಸ್ಥಳೀಯ ಸಮಸ್ಯೆಗಳನ್ನಷ್ಟೇ ನಿವಾರಿಸಿಕೊಳ್ಳುತ್ತಾ ಹೋಗುವವರಾಗಿರುವುದರಿಂದ ಅವರಲ್ಲಿ ವಿಶೇಷ ಕೌಶಲ್ಯಗಳು, ಸೃಜನಶೀಲತೆ, ಅದಮ್ಯ ಸಾಹಸಗುಣಗಳು ಕಂಡುಬರುವುದಿಲ್ಲ. ಇದರ ಜೊತೆಗೆ ಸಾಮಾನ್ಯವಾಗಿ ನಾಡಪ್ರಭುಗಳ ಕಥನಗಳಲ್ಲಿ ಕಂಡು ಬರುವ 'ಏಳು' ಎಂಬುದು ಏಳಿಗೆ, ಸಮೃದ್ಧಿಯ ಅರ್ಥವನ್ನು ಸೂಚಿಸುತ್ತದೆ ಎಂಬುದನ್ನು ಗಮನಿಸಲಾಗಿದೆ.

ಯಲಹಂಕ ನಾಡಪ್ರಭುಗಳ ಚರಿತ್ರೆಯ ಆಕರಗಳನ್ನು ಗಮನಿಸಿದಾಗ 17ನೆಯ ಶತಮಾನದ ಅಂತ್ಯದವರೆಗೂ ಯಲಹಂಕ ನಾಡಪ್ರಭುಗಳ ಆರಂಭಿಕ ವ್ಯಕ್ತಿಗಳ ಬಗೆಗೆ ಯಾವುದೇ ವಿಶ್ವಾಸಾರ್ಹ ಆಧಾರಗಳಲ್ಲಿ ಉಲ್ಲೇಖಗಳಿಲ್ಲ. ಈ ಆಧಾರಗಳು ಕೂಡ ಆ ಹೊತ್ತಿಗೆ ರೂಪುಗೊಂಡಿದ್ದ ಐತಿಹ್ಯಗಳು ಮತ್ತು ಮೌಖಿಕ ಆಕರಗಳಿಂದ ಪ್ರೇರಿತವಾಗಿ ರಚನೆಗೊಂಡಿರುವ ಸಾಧ್ಯತೆಗಳಿವೆ.

ಯಲಹಂಕ ನಾಡಪ್ರಭುಗಳ ವಂಶದಲ್ಲಿ ಕೆಂಪೇಗೌಡ / ಕೆಂಪ ಹೆಸರಿನಿಂದಲೇ ಎಂಟು ಮಂದಿ ಇರುವುದೇ ಅವರ ಕಾಲ ನಿಷ್ಕರ್ಶೆ ಮತ್ತು ಸಾಧನೆಯನ್ನು ಗುರುತಿಸಲು ಇರುವ ಬಹುದೊಡ್ಡ ತೊಡಕಾಗಿದೆ. ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ಅಂದರೆ 17ನೆಯ ಶತಮಾನದ ಆರಂಭದ ದಶಕಗಳಲ್ಲಿ ಯಲಹಂಕ ರಾಜ್ಯವು ಬೆಂಗಳೂರು, ಕೋಲಾರ, ರಾಮನಗರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳ ಕೆಲವು ಭಾಗಗಳನ್ನು ಹಾಗೂ ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಯ ಕೆಲಭಾಗವನ್ನು ಒಳಗೊಂಡಿತ್ತು. ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ಯಲಹಂಕ ರಾಜ್ಯವು ಗರಿಷ್ಠ ವಿಸ್ತಾರವನ್ನು ಹೊಂದಿತ್ತು. ಆದರೆ, ಅದೇ ಶತಮಾನದ ಕೊನೆಯ ದಶಕಗಳ ವೇಳೆಗೆ ಯಲಹಂಕ ರಾಜ್ಯವು ಕೆಲವೇ ಕೆಲವು ಗ್ರಾಮಗಳಿಗೆ ಸೀಮಿತಗೊಂಡಿತು. ಯಲಹಂಕ ನಾಡಿನಲ್ಲಿ ಯಲಹಂಕ ಗ್ರಾಮವೇ ಇಲ್ಲವಾಗುವ ಮಟ್ಟಿಗೆ ಸಂಕುಚಿತಗೊಂಡಿದುದು ವಿಪರ್ಯಾಸ. ಕೇವಲ ಪ್ರಾದೇಶಿಕ ಅಸ್ಮಿತೆಯ ಸಂಕೇತವಾಗಿ ಮಾತ್ರ ಕೊನೆಗಾಲದ ಯಲಹಂಕ ನಾಡನ್ನು ಕಾಣಬಹುದಾಗಿದೆ.

ಈ ಮನೆತನದ ಹೆಚ್ಚಿನವರ ಹೆಸರಿನವರ ಜೊತೆಗಿರುವ ಕೆಂಪ ಹೆಸರೇ ಉಳಿದವರ ಸಾಧನೆಗಳನ್ನು ಜನಪ್ರಿಯ ಕೆಂಪೇಗೌಡನಿಗೆ ಆರೋಪಿಸುವ ಮೂಲಕ ಚರಿತ್ರಾಕಾರರು ಅನ್ಯಾಯವೆಸಗಿದ್ದಾರೆ. ಆದ್ದರಿಂದ ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕುಣಿಗಲ್ ಕೆಂಪೇಗೌಡ ಎಂದೇ ಜನಪ್ರಿಯನಾಗಿದ್ದ ಇಮ್ಮಡಿ ಹಿರಿಯ ಕೆಂಪೇಗೌಡನ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ನಡೆಸಲಾಗಿದೆ. ಇನ್ನೊಂದು ಅಂಶ ಮಾಗಡಿ ತಾಲ್ಲೂಕು ಕೆಂಪಾಪುರದಲ್ಲಿ ಪತ್ತೆಯಾಗಿರುವ ಶಾಸನಯುಕ್ತ ಸ್ಮಾರಕವು ಹಿರಿಯ ಕೆಂಪೇಗೌಡನ ಸಮಾಧಿ ಎಂದೇ ಹೇಳಲಾಗುತ್ತಿದೆ. ಆದರೆ ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಗುರುತಿಸಿರುವಂತೆ ಅದು ಕುಣಿಗಲ್ ಕೆಂಪೇಗೌಡನ ಸಮಾಧಿಯಾಗಿರುವುದಾಗಿ ಕಂಡುಕೊಳ್ಳಲಾಗಿದೆ. ಮೈಸೂರು ಸೈನ್ಯದ ವಿರುದ್ಧ ನಡೆದ ಯುದ್ಧದಲ್ಲಿ ಕುಣಿಗಲ್ ಕೆಂಪೇಗೌಡ ದುರ್ಮರಣಕ್ಕೀಡಾಗುತ್ತಾನೆ. ಹೀಗೆ ಕುಣಿಗಲ್ ಕೆಂಪೇಗೌಡನಂತಹ ಅದೆಷ್ಟೋ ಅಳರಸರು ಚರಿತ್ರೆಯ ಪುಟಗಳಿಂದ ಅಳಿಸಿ ಹೋಗಿದ್ದಾರೆ. ಇನ್ನು ಜನಸಾಮಾನ್ಯರಂತು ಲೆಕ್ಕವೇ ಇಲ್ಲ. ಮರೆತುಹೋದ ಮಹಾನೀಯರನ್ನು ಮತ್ತೆ ಮುನ್ನೆಲೆಗೆ ತರುವ ಪ್ರಯತ್ನ ನಡೆಸಲಾಗಿದೆ.

* * * * *

## ಅಡಿ ಟಿಪ್ಪಣಿಗಳು

1. ಕರ್ನಲ್ ವಿಲ್ಕ್ಸ್, **ಹಿಸ್ಟರಿ ಆಫ್ ಮೈಸೂರು,** ಸಂಪುಟ–1, ಪು.55; ರೈಸ್ ಬಿ.ಎಲ್. **ಮೈಸೂರ್ ಗ್ಯಾಸೆಟಿಯರ್ ಸಂಪುಟ–1,** ಪು.358; ಎಸ್.ಕೆ ನರಸಿಂಹಯ್ಯ, 1922, **ಮಾಗಡಿ ಕೆಂಪೇಗೌಡ: ಬೆಂಗಳೂರು ಸ್ಥಾಪಕ ಮತ್ತು ಆತನ ಪೂರ್ವಿಕರು,** ಹಯವದನ ರಾವ್, 1930, **ಮೈಸೂರ್ ಗ್ಯಾಸೆಟಿಯರ್, ಸಂಪುಟ–5,** ಪು.41–44; ಕರ್ಲಮಂಗಲ ಶ್ರೀಕಂಠಯ್ಯ, 1961, **ಗೌಡಕುಲ ವಿಭೂಷಣ ಕೆಂಪೇಗೌಡ ಜಯಪ್ರಶಸ್ತಿ;** ಎಂ.ವಿ.ಕೃಷ್ಣರಾವ್, 1964, **ಬೆಂಗಳೂರು ಕೆಂಪೇಗೌಡ;** ಫಜಲ್ ಹಸನ್ ಎಂ., 1970, **ಬೆಂಗಳೂರು ಥ್ರೂ ದಿ ಸೆಂಚುರೀಸ್,** ಪು.1–20; ಬ.ನ. ಸುಂದರರಾವ್, 1985, **ಬೆಂಗಳೂರಿನ ಇತಿಹಾಸ,** ಪು.23–70; ಟಿ. ದಯಾನಂದ ಪಟೇಲ್, ಜಿ.ಟಿ. ವೀರಪ್ಪ, (ಸಂ.) 1994, **ಯಲಹಂಕ ಪ್ರಭುಗಳು –ಒಂದು ಅಧ್ಯಯನ;** ಎಂ.ಎಚ್.ಕೃಷ್ಣಯ್ಯ, ದೇವರಕೊಂಡಾರೆಡ್ಡಿ, (ಸಂ.) 1996, **ಬೆಂಗಳೂರು ಕೆಂಪೇಗೌಡರ ವಂಶಸ್ಥರು;** ಅಣ್ಣಾಸ್ವಾಮಿ, 2003, **ಬೆಂಗಳೂರು ಟು ಬ್ಯಾಂಗಲೂರು,** ಪು.109–139; ಹ.ಕ ರಾಜೇಗೌಡ, 2005, **ಬೆಂಗಳೂರು ಕೆಂಪೇಗೌಡ ಮತ್ತು ಅವನ ವಂಶಸ್ಥರು;** ಮುನಿರಾಜಪ್ಪ, 2005, **ಮಾಗಡಿ ಸೀಮೆ,** ಪು. 32–58; ಲಿಂಗಯ್ಯ ಡಿ., 2005, **ಯಲಹಂಕ ನಾಡಪ್ರಭುಗಳು: ಜಾನಪದ ಸಂಪುಟ;** ಎಂ.ಜಿ.ಮಂಜುನಾಥ್, 2006, **ಬೆಂಗಳೂರಿನ ಬಖೈರುಗಳು;** ಎಂ.ಜಿ.ಮಂಜುನಾಥ್ (ಸಂ.), 2006, **ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ;** ಎಸ್.ಕೆ.ಅರುಣಿ, 2006, **ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ;** ಆರ್.ಗೋಪಾಲ್ (ಸಂ.) ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು; ಪಿ.ವಿ.ಕೃಷ್ಣಮೂರ್ತಿ, 2011, **ಶಾಸನ, ಇತಿಹಾಸ ಮಂಥನ,** 97–162; ಬಿ.ಎಸ್.ಪುಟ್ಟಸ್ವಾಮಿ, **ಯಲಹಂಕ ನಾಡಪ್ರಭು ಕೆಂಪೇಗೌಡ ಮತ್ತು ಆತನ ವಂಶಸ್ಥರು;** ಇವರಲ್ಲದೆ, ಬಿ.ಪುಟ್ಟಯ್ಯ, ಡಿ.ಎಸ್. ವೆಂಕಟರಾಯಪ್ಪ, ಸೂರ್ಯನಾಥ ಕಾಮತ್, ನಂದಿ ವೆಂಕಟೇಶ್‌ಮೂರ್ತಿ, ಎಚ್.ಎಸ್. ಗೋಪಾಲ್ ರಾವ್, ಸ್ಮಿತಾ ಡಿ., ಬೋರಯ್ಯ ಹೆಚ್.ಬಿ., ಮೊದಲಾದ ಅನೇಕ ವಿದ್ವಾಂಸರು ಯಲಹಂಕನಾಡಪ್ರಭುಗಳು ಅಥವಾ ಕೆಂಪೇಗೌಡರನ್ನು ಕುರಿತು ಅಲ್ಲಲ್ಲಿ ಬಿಡಿ ಲೇಖನಗಳನ್ನು ಮತ್ತು ಕಿರುಕೃತಿಗಳನ್ನು ರಚಿಸಿದ್ದಾರೆ.
2. ಕೃಷ್ಣಮೂರ್ತಿ ಪಿ.ವಿ., **'ಶಾಸನ ಇತಿಹಾಸ ಮಂಥನ',** 2011: 131.
3. ಬೋರಯ್ಯ ಎಚ್.ಎಂ., **ಯಲಹಂಕ ಮಹಾನಾಡ ಪ್ರಭುಗಳು,** 2020: 14.
4. ಪ್ರಸ್ತುತ ಮಹಾಪ್ರಬಂಧದ 'ಅನುಬಂಧ–2' ನೋಡಿ.
5. ಕೃಷ್ಣಮೂರ್ತಿ ಪಿ.ವಿ., ಪೂರ್ವೋಕ್ತ, 2011: 131–132.
6. **ಎ.ಕ.(ರೈ)9:** ದೇವನಹಳ್ಳಿ– 75.
7. **ಅದೇ.:** ಬೆಂಗಳೂರು– 13
8. **ಎ.ಕ.(ರೈ)9:** ದೇವನಹಳ್ಳಿ– 50.
9. **ಅದೇ.:** ನೆಲಮಂಗಲ– 31.

10. **ಅದೇ.**: ದೊಡ್ಡಬಳ್ಳಾಪುರ– 31.

11. **ಅದೇ.**: ದೇವನಹಳ್ಳಿ– 50.

12. ಕೃಷ್ಣಮೂರ್ತಿ ಪಿ.ವಿ., 2011: 135.

13. **ಅದೇ.**

14. ಬೋರಯ್ಯ ಎಚ್.ಎಂ., **ಪೂರ್ವೋಕ್ತ,** 2020: 15.

15. ಮಹಾದೇವಯ್ಯ, ಮುನಿನಗರ, **"**ಮುನಿನಗರದ ಅಪ್ರಕಟಿತ ಶಾಸನ ಮತ್ತು ಪ್ರಾಚೀನ ಅವಶೇಷಗಳು**"**, 2002: 78–79.

16. ದೇವರಕೊಂಡಾರೆಡ್ಡಿ, **"**ಗುಮ್ಮಳಾಪುರದ ಗಂಗಮ್ಮನ ಗುಡಿ ಶಿಲಾಶಾಸನ**"**, 1990: 31–33.

17. ರಾಮಕೃಷ್ಣನ್ ಆರ್. **"**ಯಲಹಂಕ ನಾಡ ಪ್ರಭುಗಳು : ಉಗಮ**"**, 1996: 2.

18. ಮಂಜುನಾಥ ಎಂ.ಜಿ., **'ಬೆಂಗಳೂರಿನ ಬಖೈರುಗಳು'**, 2006ಎ: 38–40.

19. ಎಡ್ಗರ್ ಥರ್ಸ್ಟನ್ & ರಂಗಾಚಾರಿ ಕೆ., **ದಕ್ಷಿಣ ಭಾರತದ ಜಾತಿ ಮತ್ತು ಬುಡಕಟ್ಟುಗಳು – ಸಂಪುಟ 5,** 2019:74–75.

20. ನರಸಿಂಹಯ್ಯ ಎಸ್.ಕೆ., **ಪೂರ್ವೋಕ್ತ,** 1924 (1922): 6–11.

21. ಮೈಸೂರು ಮಹಾರಾಜ ಕಾಲೇಜಿನ ತೆಲುಗು ಸಹಾಯಕ ಪ್ರಾಧ್ಯಾಪಕರಾದ ವಿದ್ವಾನ್ ಕೆ. ಸುಬ್ಬರಾಮಪ್ಪ ಅವರು **ಮೈಸೂರು ವೈಶ್ಯ ಪತ್ರಿಕೆ**ಯ 1956 ನವೆಂಬರ್ ಸಂಚಿಕೆಯಲ್ಲಿ ಮತ್ತು **ಪ್ರಜಾವಾಣಿ** ದಿನಪತ್ರಿಕೆಯ 17.03.1957 ರಂದು **"**ಬೆಂಗಳೂರು ನಿರ್ಮಾಪಕ ಕೆಂಪೇಗೌಡರು ತೆಲುಗಿನವರು – ತೆಲುಗು ಕವಿ**"** ಎಂಬ ಲೇಖನವೊಂದನ್ನು ಬರೆದಿದ್ದಾರೆ. ಎಂ.ಆರ್. ಗೋಪಾಲಕೃಷ್ಣಸ್ವಾಮಿ ಎಂಬುವವರು **"**ಬೆಂಗಳೂರು ಸ ನಾ ಪಿಂಚಿನ ಕೆಂಪೇಗೌಡ ತೆಲುಗು ಕವಿ**"** ಎಂಬ ತೆಲುಗು ಲೇಖನವೊಂದನ್ನು **ಪ್ರಜಾಮತ** ದಿನಪತ್ರಿಕೆಯಲ್ಲಿ ದಿನಾಂಕ: 27.01.1957 (ಪು.9)ರಲ್ಲಿ ಬರೆದಿರುವರು.

22. ಕೃಷ್ಣರಾವ್ ಎಂ.ವಿ. ಮತ್ತಿತರರು, **'ಕರ್ನಾಟಕ ಇತಿಹಾಸ ದರ್ಶನ',** 1970: 460.

23. Suryanath U Kamath, **'Karnataka State Gazetteer - Bangalore District'**, 1990: 61.

24. ಕೃಷ್ಣಮೂರ್ತಿ ಪಿ.ವಿ., **ಪೂರ್ವೋಕ್ತ,** 2011: 11–13.

25. **ಅದೇ.**: 13.

26. ದೇವರಕೊಂಡಾರೆಡ್ಡಿ, **"**ಮೊರಸುನಾಡು**"**, 1999: 147.

27. ಶ್ರೀಕಂಠಯ್ಯ, ಕರ್ಲಮಂಗಲಂ, **'ಕೆಂಪೇಗೌಡನ ಜಯಪ್ರಶಸ್ತಿ'**, 1961: ಮುನ್ನುಡಿ ಪು.57.

28. **ಪ್ರಜಾವಾಣಿ** ದಿನಾಂಕ: 19.05.1957: ಪು.6.

29. **ಅದೇ.**

30. **ಅದೇ.:** 20.05.1957: ಪು.4.

31. **ಅದೇ.**

32. **ಅದೇ.** 21.05.1957: 4.

33. **ಅದೇ.**

34. **ಅದೇ.**

35. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 38–46.

36. **ಎಂ.ಎ.ಆರ್.,** 1943: 160–163.

37. ಶ್ರೀಕಂಠಯ್ಯ, ಕರ್ಲಮಂಗಲಂ, **ಪೂರ್ವೋಕ್ತ,** 1961: ಮುನ್ನುಡಿ ಪು.11–13.

38. ರಾಜೇಗೌಡ ಹ.ಕ. **'ಬೆಂಗಳೂರು ಕೆಂಪೇಗೌಡ ಮತ್ತು ಅವನ ವಂಶಸ್ಥರು',** 2005: 34–36; ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006: ಪ್ರಸ್ತಾವನೆ 29.

39. ನರಸಿಂಹಯ್ಯ ಎಸ್.ಕೆ., **ಪೂರ್ವೋಕ್ತ,** 1924 (1922): 15.

40. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006: ಪ್ರಸ್ತಾವನೆ 26–27.

41. ಕೃಷ್ಣಮೂರ್ತಿ ಪಿ.ವಿ., **"ಆವತಿ ನಾಡಪ್ರಭುಗಳು",** 2001: 325; ಎಚ್.ಎಂ. ಬೋರಯ್ಯ, **'ಆವತಿ ನಾಡಪ್ರಭುಗಳು',** 2017: 14–15.

42. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006: ಪ್ರಸ್ತಾವನೆ 27.

43. ಅರುಣಿ ಎಸ್.ಕೆ., **'ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ',** 2007: 94.

44. **ಅದೇ.**

45. 1341ರ ನಾಗಶೆಟ್ಟಿಹಳ್ಳಿಯ ಶಾಸನ (**ಎ.ಕ.(ರೈ)9**: ಬೆಂಗಳೂರು–129); 1342ರ ಗಾಣಿಗರಹಳ್ಳಿ ಕೆರೆಕೋಡಿ ಶಾಸನ (**ಎ.ಕ.(ರೈ)9**: ಬೆಂಗಳೂರು–24); 1348ರ ಕಟಿಗೇನಹಳ್ಳಿ ಶಾಸನ (**ಎ.ಕ.(ರೈ)9**: ದೇವನಹಳ್ಳಿ–50); 1367ರ ಕಿತಗನೂರಿನ ಶಾಸನ (**ಎ.ಕ.(ರೈ)9:** ಹೊಸಕೋಟೆ–117).

46. **ಎಂ.ಎ.ಆರ್., ಪೂರ್ವೋಕ್ತ**: 160. ಶಾಸನ ಸಂಖ್ಯೆ 51.

47. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 18 & 39.

48. **ಅದೇ.:** 18 & 40.

49. **ಅದೇ.**:40.

50. **ಅದೇ.**

51. ನಾಗರಾಜ್ ಎಂ.ಜಿ., **"ಕೆಂಪೇಗೌಡರ ಪೂರ್ವಜರು ಕೆಲವು ಹೊಸ ಸಂಗತಿಗಳು"**, 2016: 85.

52. **ಎ.ಕ.(ರೈ)10:** ಮಾಲೂರು– 57.

53. **ಎಂ.ಎ.ಆರ್., ಪೂರ್ವೋಕ್ತ:** 160.

54. ಬೋರಯ್ಯ ಎಚ್.ಎಂ., **ಪೂರ್ವೋಕ್ತ:** 30.

55. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 41.

56. **ಎ.ಕ.(ರೈ)10:** ಮಾಲೂರು– 57.

57. **ಅದೇ.; ಎ.ಕ.(ಅ)9:** 119, ನೆಲಮಂಗಲ– 107 ಮತ್ತು 109. ಶಾಸನ ಸಂಖ್ಯೆ 107ರಲ್ಲಿ ಬೆಂಗಳೂರ ಕೆಂಪನಾಚಯ ಗೌಡರ ಕುಮಾರ ಎಂದಿದೆ.

58. ರೈಸ್ ಅವರು ಸಂಪಾದಿಸಿರುವ **ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ–9,** ಬೆಂಗಳೂರು ಜಿಲ್ಲೆಯ ಶಾಸನ ಸಂಪುಟದಲ್ಲಿನ ಮಾಗಡಿ–22 ಮತ್ತು 45 ಸಂಖ್ಯೆಯ ಅಪೂರ್ಣವಾದ ಶಾಸನಗಳನ್ನು **ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ** ಸಂಪಾದಕರು ಮರುಓದು ನಡೆಸಿ ಸದರಿ ಸಂಪುಟದಲ್ಲಿ ಶಾ.ಸಂ.– 11 ಮತ್ತು 12ರಲ್ಲಿ ಹೆಚ್ಚಿನ ಪಾಠವನ್ನು ಕೊಟ್ಟಿದ್ದಾರೆ. ಆ ಪಾಠದಲ್ಲಿ ಕೆಂಪೇಗೌಡನ ತಂದೆಯಾದ ಕೆಂಪನಾಚೇ(ನಂಜೇ)ಗೌಡನ ಹೆಸರು ಕಂಡುಬರುತ್ತದೆ. ಆದರೆ ರೈಸ್ ಅವರ ಪ್ರಕಟಣೆಯಲ್ಲಿ ಎರಡೂ ಶಾಸನಗಳಲ್ಲಿಯೂ ಕೆಂಪನಂಜೇಗೌಡನ ಹೆಸರಿರುವ ಸ್ಥಳವನ್ನು ಅಸ್ಪಷ್ಟವೆಂದು ಖಾಲಿ ಬಿಟ್ಟಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಪುಟ ಸಂಪಾದಕರ ಪರಿಷ್ಕೃತ ಪಾಠದ ವಿಶ್ವಾಸಾರ್ಹತೆಯನ್ನು ಪರಿಶೀಲಿಸುವುದು ಸಂಶೋಧನೆಯ ದೃಷ್ಟಿಯಿಂದ ಅಗತ್ಯವಿತ್ತು. ಏಕೆಂದರೆ ಇದೇ ಮೊದಲ ಬಾರಿಗೆ ಕೆಂಪೇಗೌಡನ ತಂದೆ ಹೆಸರು ಸಮಕಾಲೀನ ಶಾಸನಗಳಲ್ಲಿ ಕಂಡುಬರುವುದರಿಂದ ಮತ್ತು ಯಲಹಂಕ ನಾಡಪ್ರಭುಗಳ ಆರಂಭ ಕಾಲಕ್ಕೆ ಸೇರಿರುವ ಈ ಇವೆರಡೂ ಶಾಸನಗಳು ಮಾಗಡಿ ತಾಲ್ಲೂಕಿನಲ್ಲಿಯೇ ಕಂಡುಬಂದಿರುವುದರಿಂದ ಮರುಓದನ್ನು ಖಾತ್ರಿಪಡಿಸಿಕೊಳ್ಳುವುದು ಸೂಕ್ತವೆಂದು ಕಲ್ಯ ಮತ್ತು ಕೆಂಪೋಹಳ್ಳಿ (ಈಗ ಕೋಡಿಪಾಳ್ಯ)ಗಳಿಗೆ ಎರಡೆರಡು ಬಾರಿ ಭೇಟಿ ನೀಡಿ ಕ್ಷೇತ್ರಕಾರ್ಯ ಮಾಡಿ ಪರಿಶೀಲಿಸಿದಾಗ ಬಿ.ಎಲ್. ರೈಸ್ ಅವರು ಓದಿರುವ ಪಾಠಕ್ಕೆ ಇಲ್ಲಿನ ಶಾಸನಗಳು ನಿಷ್ಠವಾಗಿದ್ದವೇ ವಿನಃ **ಯ.ನಾ.ಶಾ.ಸಂಪುಟ**ದಲ್ಲಿನ ಪಾಠಕ್ಕಲ್ಲ. ಉನ್ನತ ಚರ್ಚೆಗಾಗಿ ನೋಡಿ: ರಾಜೇಶ್ ಹಂ.ಗು. **"'ಹಿತಾಸಕ್ತವರ್ಗ ಮತ್ತು ಚಾರಿತ್ರಿಕ ರಾಜಕಾರಣ'ದ ಹಿನ್ನೆಲೆಯಲ್ಲಿ ಸಮಾಧಿಯ ಕೆಂಪೇಗೌಡನಿಗಾಗಿ ಹುಡುಕಾಟ", ಚರಿತ್ರೆ ಅಧ್ಯಯನ, ಸಂಪುಟ–10, ಸಂಚಿಕೆ–1,** ಜುಲೈ–ಡಿಸೆಂಬರ್ 2017: 169–198.

59. **ಎ.ಕ.(ರೈ)10:** ಮಾಲೂರು– 57.

60. **ಎ.ಕ.(ಅ)9:** 119, ನೆಲಮಂಗಲ– 109.

61. **ಯ.ನಾ.ಶಾ.ಸಂಪುಟ,** ಶಾಸನ ಸಂ.–35.

62. **ಅದೇ.:** ಶಾಸನ ಸಂ.– 42.

63. **ಅದೇ.**: ಶಾಸನ ಸಂ.– 49.

64. **ಅದೇ.**: ಶಾಸನ ಸಂ.– 52.

65. ಯೋಗೀಶ್ವರಪ್ಪ ಡಿ.ಎನ್., **ನಾಯಕತನ ಪದ್ಧತಿ,** 2017: 2–5.

66. **ಅದೇ.**: 5.

67. ವೈಜ್ಞಾನಿಕವಾಗಿ ಲೆಕ್ಕಾಚಾರ ಮಾಡುವುದೇ ಆದರೆ, ಐತಿಹ್ಯಗಳ ಪ್ರಕಾರ ರಣಭೈರೇಗೌಡನು ತನ್ನ ಆರು ಮಂದಿ ಸೋದರರ ಜೊತೆ ಯಲಹಂಕ ಪರಿಸರಕ್ಕೆ ವಲಸೆ ಬಂದ ಎನ್ನುವುದಾದರೆ ಹಿರಿಯನಾದ ರಣಭೈರೇಗೌಡನಿಗೆ ಕನಿಷ್ಟ 30 ವರ್ಷಗಳಾದರೂ ದಾಟಿರಬೇಕು. ಆವತಿಯಲ್ಲಿ ನೆಲೆಸಿದ್ದ ಸಂದರ್ಭದಲ್ಲಿಯೇ ಮಗು ಜಯಗೌಡ ಜನಿಸಿದನೆಂದು ಊಹಿಸಬಹುದು. ಏಕೆಂದರೆ, ಮಗುವಿನ ಮುಖದ ಮೇಲಿನ ಬಿಸಿಲಿಗೆ ಅಡ್ಡವಾಗಿ ಸರ್ಪವೊಂದು ಎಡೆಬಿಚ್ಚಿ ನೆರಳು ನೀಡುತ್ತಿತ್ತು ಎಂಬ ಐತಿಹ್ಯವು ಜಯಗೌಡನಿಗೆ ಸಂಬಂಧಿಸಿದ್ದು ಎಂದು ಹೇಳಲಾಗುತ್ತದೆ. ಬಹುಶಃ ರಣಭೈರೇಗೌಡನು ತನ್ನ 30 ವಯಸ್ಸಿನಿಂದ 70ನೇ ವಯಸ್ಸಿನವರೆಗೂ ಆಳಿದನೆಂದು ಅಂದಾಜಿಗೆ ಇಟ್ಟುಕೊಂಡರೂ, ರಣಭೈರೇಗೌಡನು 40 ವರ್ಷಗಳ ಕಾಲ ಆಳಿರಬಹುದು. ರಣಭೈರೇಗೌಡನ ನಂತರ ಜಯಗೌಡನು ಅಧಿಕಾರಕ್ಕೆ ಬಂದಿದ್ದರೆ ಆಗ ಅವನಿಗೆ 40 ವರ್ಷಗಳು ತುಂಬಿರುತ್ತದೆ. ಜಯಗೌಡನು ಕೂಡ ತನ್ನ 70ನೇ ವಯಸ್ಸಿನವರೆಗೂ ಆಳಿದನೆಂದುಕೊಂಡರೆ ಅವನ ಆಳ್ವಿಕೆಯ ಅವಧಿ 30 ವರ್ಷಗಳಾಗುತ್ತದೆ. ಅದೇ ರೀತಿ ಅವನ ಮಗ ಗಿಡ್ಡೇಗೌಡನು ಜಯಗೌಡನ 30ನೇ ವಯಸ್ಸಿನಲ್ಲಿ ಜನಿಸಿದನೆಂದು ಕೊಂಡರೆ, ಜಯಗೌಡನ ಆಳ್ವಿಕೆಯ ಅಂತ್ಯದ ಹೊತ್ತಿಗೆ ಗಿಡ್ಡೇಗೌಡನಿಗೂ 40 ವರ್ಷಗಳಾಗಿರುತ್ತದೆ. ಅವನು ಕೂಡ 70ನೇ ವಯಸ್ಸಿನವರೆಗೂ ಆಳಿದನೆಂದರೆ ಅವನ ಆಳ್ವಿಕೆಯ ಅವಧಿ ಕೂಡ 30 ವರ್ಷಗಳಾಗುತ್ತದೆ. ಅಂದರೆ ಮೂರು ತಲೆಮಾರುಗಳ ಆಳ್ವಿಕೆಯ ಅವಧಿ (40+30+30=100) ನೂರುವರ್ಷಗಳನ್ನು ದಾಟಲಾರದು. ಇನ್ನೂ ಉದಾರವಾಗಿ ಲೆಕ್ಕಾಚಾರಮಾಡಿ ಪ್ರತಿ ತಲೆಮಾರಿಗೆ ಹೆಚ್ಚುವರಿಯಾಗಿ 10 ವರ್ಷಗಳನ್ನು ಸೇರಿಸಿದರೂ ಕೂಡ ಮೂರು ತಲೆಮಾರುಗಳ ಗರಿಷ್ಠ ಆಳ್ವಿಕೆಯ ಅವಧಿ 130 ವರ್ಷಗಳನ್ನು ದಾಟುವುದಿಲ್ಲ. ಹೀಗಿರುವಾಗ 185 ವರ್ಷಗಳ ಅವಧಿಯ ಆಳ್ವಿಕೆಗೆ ಕನಿಷ್ಠ ಐದಾರು ತಲೆಮಾರುಗಳಾದರೂ ಬೇಕಾಗುತ್ತದೆ.

68. ಗೋವರ್ಧನ ಸುಂಕಂ, **"ಬೆಂಗಳೂರು ಪರಿಸರದ ರಾಜಕೀಯ ಅವಲೋಕನ (ಹೊಯ್ಸಳೋತ್ತರ ಯುಗದಿಂದ ನಾಡಪ್ರಭುಗಳ ಆಗಮನದವರೆಗೆ)",** 2018: 83–102.; ಗಂಗಾಂಬಿಕೆ ಎಸ್., **'ಕೆಂಪೇಗೌಡರು ಮತ್ತು ಅವರ ವಂಶೀಯರು ಹೊಸ ಪರಿವೀಕ್ಷಣೆಗಳು',** 2020.

69. ಗೋವರ್ಧನ ಸುಂಕಂ, **ಅದೇ.**: 98–100.

70. **ಅದೇ.**: 88.

71. ಹಿರಿಯ ಕೆಂಪೇಗೌಡನ ಕಾಲಾವಧಿ ಕುರಿತು ಪ್ರಮುಖವಾಗಿ ಎಸ್.ಕೆ. ನರಸಿಂಹಯ್ಯ (1922); ಬಿ. ಪುಟ್ಟಯ್ಯ (1923); ಎಂ.ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ (1970) ಮುಂತಾದವರು 1513–

1569 ಎಂದರೆ, ಸೂರ್ಯನಾಥ ಕಾಮತ್ (1990); ಶಿವಣ್ಣ (1994) ಮೊದಲಾದವರು 1513–1570 ಎಂದಿದ್ದಾರೆ. ಎಚ್.ಎಸ್. ಗೋಪಾಲರಾವ್ ಅವರ ಪ್ರಕಾರ 1510–1578 ಹೀಗೆ ವಿದ್ವಾಂಸರ ನಡುವೆ ಭಿನ್ನಾಭಿಪ್ರಾಯಗಳಿವೆ.

72. **ಎ.ಕ.(ಅ)9:** ನೆಲಮಂಗಲ–107.
73. ಶ್ರೀಕಂಠಯ್ಯ, ಕರ್ಲಮಂಗಲ, **ಪೂರ್ವೋಕ್ತ,** 1961: 30.
74. ಗಂಗಾಂಬಿಕೆ ಎಸ್., **ಪೂರ್ವೋಕ್ತ,** 2020:30.
75. ರಾಜೇಶ್ ಹಂ.ಗು., **"ಕೆಂಪಾಪುರ ಸಮಾಧಿಯ ಕೆಂಪೇಗೌಡ ಯಾರು?",** 2016:65.
76. **ಎಂ.ಎ.ಆರ್**. 1915: 16.
77. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 41.
78. ರಾಜೇಶ್ ಹಂ.ಗು., **"ಕೆಂಪೇಗೌಡರ ಬೆಂಗಳೂರು: ನೆಲೆ–ಹಿನ್ನೆಲೆ",** 2020: 499–501.
79. ರಾಜೇಶ್ ಹಂ.ಗು., **"ಕೆಂಪೇಗೌಡನ ಸೊಸೆ ಲಕ್ಷ್ಮೀದೇವಿಯ ಆತ್ಮಬಲಿದಾನ: ಒಂದು ಚಾರಿತ್ರಿಕ ಪರಿಶೀಲನೆ",** 2020: 657–662.
80. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 42.
81. **ಅದೇ.**
82. **ಅದೇ.**: 43.
83. **ಎ.ಕ.(ರೈ)9:** ಬೆಂಗಳೂರು–57.
84. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 43–44.
85. ಕೃಷ್ಣರಾವ್ ಎಂ.ವಿ., ಮತ್ತಿತರರು, 1970: 507–508.
86. **ಎ.ಕ.(ಅ)9:** ನೆಲಮಂಗಲ– 109.
87. ರಾಜೇಶ್ ಹಂ.ಗು., **ಪೂರ್ವೋಕ್ತ,** 2016:66.
88. **ಉಧೃತ:** ಮಂಜುನಾಥ ಎಂ.ಜಿ., 2006: ಪ್ರಸ್ತಾವನೆ ಪು.43.
89. ಕೃಷ್ಣರಾವ್ ಎಂ.ವಿ., ಮತ್ತಿತರರು, **ಪೂರ್ವೋಕ್ತ,** 1970: 379.
90. ಮಂಜುನಾಥ ಎಂ.ಜಿ., 2006: ಪ್ರಸ್ತಾವನೆ ಪು.44.
91. ಕೆಂಪೇಗೌಡನು ಕೃಷ್ಣದೇವರಾಯನಿಂದ ಕ್ರಿ.ಶ. 1513ರಲ್ಲಿ ನಾಯಕತನ ಪಡೆದುದೇ ಆದರೆ, ಈಗಾಗಲೇ ಬಖೈರಿನಲ್ಲಿ ಹೇಳಿರುವಂತೆ ಕೆಂಪೇಗೌಡನು ತನ್ನ ಆಳ್ವಿಕೆಯ 45ನೆಯ ವರ್ಷದಲ್ಲಿ ಬಂಧನಕ್ಕೆ ಒಳಗಾದ ಎನ್ನುವುದಾದರೆ ಆ ವರ್ಷ ಕ್ರಿ.ಶ. 1558ವೆಂದೂ, ಐದು ವರ್ಷಗಳ ಬಂಧನದ ನಂತರ

ಬಿಡುಗಡೆಯಾಗಿ, ಆನಂತರ ಐದು ವರ್ಷ ಆಳ್ವಿಕೆ ನಡೆಸಿದನೆಂದು ಬಖ್ಯೆರಿನಲ್ಲಿ ಹೇಳಿರುವುದರಿಂದಲೇ ಕೆಂಪೇಗೌಡನ ಕೊನೆಯ ವರ್ಷವನ್ನು 1569 ಎಂದು ಅನೇಕ ವಿದ್ವಾಂಸರು ಅಭಿಪ್ರಾಯ ತಳೆದಿರುವಂತೆ ತೋರುತ್ತದೆ. ಆದರೆ ಈ ಅಭಿಪ್ರಾಯಕ್ಕೆ ಶಾಸನಗಳು ಪೂರಕವಿಲ್ಲದಿರುವುದನ್ನು ಗಮನಿಸಬೇಕು.

92. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 44.

93. ವಸಂತಲಕ್ಷ್ಮಿ ಕೋ., **"**ಏಕಾಮ್ರ ದೀಕ್ಷಿತನ 'ವೀರಭದ್ರ ವಿಜಯ'ದಲ್ಲಿ ಯಲಹಂಕ ಪ್ರಭುಗಳು**"**, 1996: 37.

94. ಶ್ರೀಕಂಠಯ್ಯ ಕರ್ಲಮಂಗಲಂ, 1961: 34–35.

95. ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಶೇಕ್ ಮಸ್ತಾನ್ ಅವರ ನೇತೃತ್ವದ ಐವರು ತಜ್ಞಸದಸ್ಯರ ಸಮಿತಿಯು ಅಧ್ಯಯನ ನಡೆಸಿ, ದಿ:31.10.2015ರಂದು ವರದಿ ಸಿದ್ಧಪಡಿಸಿ, ಬಿ.ಬಿ.ಎಂ.ಪಿ.ಗೆ ಸಲ್ಲಿಸಿತು. ಈ ವರದಿಯಲ್ಲಿ ತಜ್ಞರು ಹಿರಿಯ ಕೆಂಪೇಗೌಡನ ಸಮಾಧಿ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಜೊತೆಗೆ ನೋಡಿ: ಗೋಪಾಲರಾವ್ ಎಚ್.ಎಸ್., **"**ಕೆಂಪಾಪುರದಲ್ಲಿರುವ ಕೆಂಪೇಗೌಡರ ಸಮಾಧಿ**"**, 2016: 194–109 ಮತ್ತು ನಾಗರಾಜ್ ಎಂ.ಜಿ., **"**ಹಿರಿಯ ಕೆಂಪೌಗೌಡರ ವೀರಸಮಾಧಿ ನೆಲೆ ಕೆಂಪಾಪುರದಲ್ಲಿ ಹೊಸ ಸಂಸ್ಕೃತ ಶಾಸನ ಪತ್ತೆ**"**, 2017: 18–19.

96. ರಾಜೇಶ್ ಹಂ.ಗು. **ಪೂರ್ವೋಕ್ತ,** 2016.

97. ಕರ್ಲಮಂಗಲಂ ಶ್ರೀಕಂಠಯ್ಯ, ಪೂರ್ವೋಕ್ತ, 1961; ಮಂಜುನಾಥ್ ಎಂ.ಜಿ., (ಸಂ.), **'ಹೊನ್ನಕವಿಯ ಸಮಗ್ರಸಾಹಿತ್ಯ,'** 2012: 1–58.

98. ನೋಡಿ: ಪಿ.ವಿ. ಕೃಷ್ಣಮೂರ್ತಿ ಅವರ **ಶಾಸನ, ಇತಿಹಾಸ ಮಂಥನ** (2011) ಕೃತಿಯಲ್ಲಿನ 'ಕೆಂಪೇಗೌಡ ಜಯಪ್ರಶಸ್ತಿ– ಒಂದು ಚಾರಿತ್ರಿಕ ಪರಿಶೀಲನೆ' ಮತ್ತು 'ಕೆಂಪೇಗೌಡ ಜಯಪ್ರಶಸ್ತಿ ಉಲ್ಲೇಖಿತ ಮುಮ್ಮಡಿ ವೆಂಕಟಪತಿದೇವರಾಯನ ಕಾಲದ ಸ್ಥಳೀಯ ಪ್ರಭುಗಳ ಪ್ರಭಾವ– ಒಂದು ವಿವೇಚನೆ'.

99. ಶ್ರೀಕಂಠಯ್ಯ ಕರ್ಲಮಂಗಲಂ, ಪೂರ್ವೋಕ್ತ, 1961: ಮುನ್ನುಡಿ ಪು.37–38 ಮತ್ತು **ಕೆಂಪೇಗೌಡನ ಜಯಪ್ರಶಸ್ತಿ** ಮೊದಲ ಭಾಗ ಪು.1–7; ಮಂಜುನಾಥ್ ಎಂ.ಜಿ, ಪೂರ್ವೋಕ್ತ, 2012: 1–19.

100. ಕೃಷ್ಣಮೂರ್ತಿ ಪಿ.ವಿ., **ಸುಗುಟೂರು ವೀರಶೈವ ಅರಸುಮನೆತನ,** 1994: 16–17.

101. ಶ್ರೀಕಂಠಯ್ಯ ಕರ್ಲಮಂಗಲಂ, **ಪೂರ್ವೋಕ್ತ,** 1961: ಮುನ್ನುಡಿ 38.

102. ವಸಂತಲಕ್ಷ್ಮಿ ಕೋ, **ಪೂರ್ವೋಕ್ತ,** 1996: 38.

103. ಶ್ರೀಕಂಠಯ್ಯ ಕರ್ಲಮಂಗಲಂ, **ಕೆಂಪೇಗೌಡನ ಜಯಪ್ರಶಸ್ತಿ** ಎರಡನೆಯ ಭಾಗ 1961: 1–7; ಮಂಜುನಾಥ್, **ಕೆಂಪರಾಯ ತಮ್ಮರಾಯನ ಪದಗಳು** ಎರಡನೆಯ ಭಾಗ, 2012: 20–58.

104. ಕೃಷ್ಣಮೂರ್ತಿ ಪಿ.ವಿ., **ಪೂರ್ವೋಕ್ತ,** 2011: 150.

105. ಮಂಜುನಾಥ್ ಎಂ.ಜಿ., **ಪೂರ್ವೋಕ್ತ,** 2006ಅ: 81.

106. ನರಸಿಂಹಯ್ಯ ಎಸ್.ಕೆ, **ಪೂರ್ವೋಕ್ತ,** 1924(1922): 37.

107. ಮಂಜುನಾಥ್ ಎಂ.ಜಿ., **ಪೂರ್ವೋಕ್ತ,** 2006ಅ: 92.

108. **ಅದೇ.**: 78.

109. ರಾ.ಗೌ, **'ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು',** 2010(1992): 277.

110. **ಅದೇ.**

111. **ಕಂಠೀರವನರಸರಾಜ ವಿಜಯ,** ಸಂಧಿ–11, ಪದ್ಯ– 61, 62.

112. Hayavadana Rao, **Mysore Gazetteer,** Vol.2.: Pp.: 2428.

113. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006: ಶಾಸನ ಸಂ– 90.

114. ನರಸಿಂಹಯ್ಯ ಎಸ್.ಕೆ., **ಪೂರ್ವೋಕ್ತ,** 1924(1922): 32–33.

115. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 45.

116. ಉದ್ಧೃತ: Fazlul Hasan, **Bangalore Through the Centuries,** 1970: 231 - Parmanand , 'Shiva Bharat', 1927: 80. (43-54).

117. ಸುಷ್ಮಾ ಆರೂರ್, **"**ಬೆಂಗಳೂರಿನಲ್ಲಿ ಶಹಾಜಿ ಭೋಸಲೆ (1636 ರಿಂದ 1664ರ ಅವಧಿ) – 'ರಾಧಾಮಾಧವ ವಿಲಾಸ ಚಂಪು' ಕಾವ್ಯ ಹಿನ್ನೆಲೆಯಲ್ಲಿ**", ಇತಿಹಾಸ ದರ್ಪಣ, ಪುಸ್ತಕ–9,** 2011: 14.

118. ವಸಂತಲಕ್ಷ್ಮಿ ಕೋ., ಪೂರ್ವೋಕ್ತ; 1996:38–39; ಶ್ರೀಕಂಠಯ್ಯ, ಪೂರ್ವೋಕ್ತ, 1961: 31; ಮತ್ತು ರಿತ್ತಿ, ಶ್ರೀನಿವಾಸ, (ಸಂ.), **ಎ.ಕ.**(ಪ)24, 2009: ಕುಣಿಗಲ್– 25.

119. ಶಾಮಶಾಸ್ತ್ರಿ ಆರ್. (ಸಂ.) 1971, **ಕಂಠೀರವ ನರಸರಾಜ ವಿಜಯ,** ಸಂಧಿ: 20, ಪದ್ಯ: 60, 61, 95, 96

120. **ಎ.ಕ(ರೈ)9:** ಮಾಗಡಿ–35.

121. ರಾಜೇಶ್ ಹಂ.ಗು., **"**ಕುಣಿಗಲ್ ತಾಲ್ಲೂಕು ಹ(ಅ)ಂದಲಗೆರೆ ಗ್ರಾಮದ ನಾಮವಿವೇಚನೆ ಮತ್ತು ಪ್ರಾಚ್ಯಾವಶೇಷಗಳು**",** 2017: 499.

122. ರಾಜೇಶ್ ಹಂ.ಗು., **ಪೂರ್ವೋಕ್ತ,** 2016: 70–71.

123. **ಎ.ಕ.(ರೈ)12:** ಕುಣಿಗಲ್–12.

124. ರಾಜೇಶ್ ಹಂ.ಗು., **ಪೂರ್ವೋಕ್ತ,** 2016: 70–71.

125. ವಸಂತಲಕ್ಷ್ಮಿ ಕೋ., **ಪೂರ್ವೋಕ್ತ,** 1996: 38–39.

126. ಕೃಷ್ಣರಾವ್ ಎಂ.ವಿ, 1964: 123.

127. ವಸಂತಲಕ್ಷ್ಮಿ ಕೋ., **ಪೂರ್ವೋಕ್ತ,** 1996: 39.

128. **ಎ.ಕ.(ರೈ)9:** ಮಾಗಡಿ–35.

129. ಶಾಮಶಾಸ್ತ್ರಿ ಆರ್. (ಸಂ.), **ಪೂರ್ವೋಕ್ತ,** 1971: ಸಂಧಿ– 25, ಪದ್ಯ– 65.

130. ವಸಂತಲಕ್ಷ್ಮಿ ಕೋ., **ಪೂರ್ವೋಕ್ತ,** 1996: 39.

131. ರಾಜೇಶ್ ಹಂ.ಗು., **"**ಹುತ್ರಿದುರ್ಗ: ಒಂದು ಚಾರಿತ್ರಿಕ ಅಧ್ಯಯನ**",** 2019: 392–398.

132. **ಎ.ಕ.(ರೈ)12:** ಕುಣಿಗಲ್–12.

133. ರಾಜಶೇಖರ್ ಪಿ.ಕೆ. ಮತ್ತಿತರರು, **'ಮಾಗಡಿ ಕೆಂಪೇಗೌಡ',** 2009(1975): 126.

134. ರಾಜೇಶ್ ಹಂ.ಗು., **ಪೂರ್ವೋಕ್ತ,** 2016: 63–82.

135. ಶಿವಸ್ವಾಮಿ ಜಿ.ವಿ., **ಶ್ರೀಉರಿಲಿಂಗ ಶಿವಾಚಾರ್ಯರ ಚರಿತ್ರೆ,** ಬೆಟ್ಟಹಳ್ಳಿ ಮಠ, ಕುಣಿಗಲ್ ತಾ., 1978.

136. ವಸಂತಲಕ್ಷ್ಮಿ ಕೋ., **ಪೂರ್ವೋಕ್ತ,** 1996: 41.

137. ಮುನಿರಾಜಪ್ಪ, **'ಮಾಗಡಿ ಸೀಮೆ ಇತಿಹಾಸ–ಸಂಸ್ಕೃತಿ',** 2005: 51.

138. **ಅದೇ.:** 52.

139. **ಅದೇ.:** 53.

140. ನಾಗರಾಜ್ ಎಂ.ಜಿ., **"**ಯಲಹಂಕ ವಂಶಾವಳಿ ಮತ್ತು ಸಾಂಸ್ಕೃತಿಕ ಸಾಧನೆಗಳು**",** 2010:98.

141. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006: ಶಾ.ಸಂ.– 91.

# ಅಧ್ಯಾಯ–4

# ಆಡಳಿತ ಮತ್ತು ಆರ್ಥಿಕ ವ್ಯವಸ್ಥೆ

ಯಲಹಂಕ ನಾಡಪ್ರಭುಗಳ ಕಾಲದ ಆಡಳಿತ ವಿವರಗಳನ್ನು ಅರಿಯಲು ಆಕರಗಳ ಕೊರತೆ ಇವೆ. ಬಹುತೇಕ ಶಾಸನಗಳು ದಾನಶಾಸನಗಳೇ ಆಗಿರುವುದರಿಂದ ಅವುಗಳಿಂದ ಹೆಚ್ಚಿನ ಆಡಳಿತ ವಿಚಾರಗಳೇನು ತಿಳಿಯುವುದಿಲ್ಲ. ಸಾಹಿತ್ಯ ಕೃತಿಗಳಲ್ಲಿಯೂ ಆಡಳಿತಾತ್ಮಕ ವಿಚಾರಗಳ ಕೊರತೆ ಇವೆ. ಆದ್ದರಿಂದ ಸಮಕಾಲೀನ ವಿಜಯನಗರ ಮತ್ತು ನಾಡಪ್ರಭುಗಳ ಆಡಳಿತಾತ್ಮಕ ವಿಚಾರಗಳನ್ನೇ ಯಲಹಂಕ ನಾಡಪ್ರಭುಗಳಿಗೂ ಅನ್ವಯಿಸಿ ನೋಡಬೇಕಾದುದು ಅನಿವಾರ್ಯವಾಗಿದೆ. ದಕ್ಷಿಣ ಕರ್ನಾಟಕದ ನಾಡಪ್ರಭುಗಳ ಕಾಲದ ಆಡಳಿತವೇ ಬಹುತೇಕವಾಗಿ ಯಲಹಂಕ ನಾಡಿನಲ್ಲಿಯೂ ಆಚರಣೆಯಲ್ಲಿತ್ತೆಂದು ಭಾವಿಸಬಹುದಾಗಿದ್ದು, ಅವರ ಕಾಲದ ಆಡಳಿತದ ಅಧ್ಯಯನವು ಬಹುತೇಕ ಪ್ರಸ್ತುತ ಪ್ರೌಢಪ್ರಬಂಧದ ವಿಷಯಕ್ಕೂ ಪೂರಕವಾಗಿರುತ್ತದೆ.

ಯಲಹಂಕ ನಾಡಪ್ರಭುಗಳ ಕಾಲದ ಆಡಳಿತ ವ್ಯವಸ್ಥೆಯನ್ನು ಕುರಿತು ಬ.ನ. ಸುಂದರರಾವ್, ಡಿ.ಎಸ್. ಜಯಪ್ಪಗೌಡ ಅವರು ಸ್ವಲ್ಪ ಮಟ್ಟಿನ ಪ್ರಯತ್ನಗಳನ್ನು ನಡೆಸಿರುತ್ತಾರೆ. ಆದರೆ, ವಿ. ಶ್ರೀನಿವಾಸನ್ ಅವರ ಪ್ರಯತ್ನ ಉತ್ತಮವಾಗಿದೆ. ಆಕರಗಳ ಕೊರತೆಯಿಂದಾಗಿ ಆ ಬರಹಗಳಲ್ಲಿಯೂ ಕೆಲವು ಮಿತಿಗಳಿರುವುದುಂಟು. ಪ್ರಸ್ತುತ ಅಧ್ಯಾಯದಲ್ಲಿ ಪ್ರಧಾನವಾಗಿ ನಾಡುಗಳಲ್ಲಿನ ಆಡಳಿತ ವ್ಯವಸ್ಥೆ ಹೇಗೆ ನಡೆಯುತ್ತಿತ್ತು ಎಂಬ ವಿಷಯದ ಮೇಲೆ ಕೇಂದ್ರೀಕರಿಸುವ ಪ್ರಯತ್ನವನ್ನು ಮೊದಲ ಭಾಗದಲ್ಲಿ ನಡೆಸಲಾಗಿದೆ.

ಪ್ರಸ್ತುತ ಅಧ್ಯಾಯದ ಎರಡನೆಯ ಭಾಗದಲ್ಲಿ ರಾಜ್ಯ ಪ್ರಭುತ್ವದ ಮತ್ತೊಂದು ಮುಖ್ಯಭಾಗವಾಗಿರುವ ಆರ್ಥಿಕತೆಯನ್ನು ಕುರಿತು ಚರ್ಚಿಸಲಾಗಿದೆ. ಆರ್ಥಿಕತೆಯು ಯಾವುದೇ ರಾಜ್ಯ ಪ್ರಭುತ್ವದ ಒಂದು ಚಾಲಕಶಕ್ತಿಯಾಗಿದೆ. ಸಂಪನ್ಮೂಲವಿಲ್ಲದೆ ಸಾಮ್ರಾಜ್ಯ ಅಸ್ಥಿರವಾಗುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರಗಳು ಸಂಪನ್ಮೂಲ ಕ್ರೋಢೀಕರಣಕ್ಕೆ ಇನ್ನಿಲ್ಲದ ಕಸರತ್ತನ್ನು ನಡೆಸುತ್ತಲೇ ಇರುತ್ತವೆ. ಅದಕ್ಕಾಗಿ ಕಂದಾಯ ಸಂಗ್ರಹಕ್ಕಾಗಿ ಹೊಸ ಹೊಸ ಮಾರ್ಗಗಳನ್ನು ಶೋಧಿಸುತ್ತಿರುತ್ತವೆ. ಹಾಗಾಗಿ ನಾಡಿನ ಆರ್ಥಿಕ ಮೂಲವನ್ನು ಕುರಿತು ಚರ್ಚೆ ನಡೆಸಲಾಗಿದೆ.

## 4.1 ಆಡಳಿತ ವ್ಯವಸ್ಥೆ

ಆಡಳಿತ ಮತ್ತು ಆರ್ಥಿಕತೆ ಯಾವುದೇ ರಾಜ್ಯ ಪ್ರಭುತ್ವದ ಮುಖ್ಯ ಭಾಗವಾಗಿವೆ. ಆಡಳಿತ ವ್ಯವಸ್ಥೆ ಎಂಬುದು ಒಂದು ನಾಗರಿಕ ಸಮಾಜದ ಬಹುಮುಖ್ಯ ಲಕ್ಷಣವಾಗಿದೆ. ಆಡಳಿತದಲ್ಲಿನ ಸುಧಾರಣೆಯು ಆ ಕಾಲಘಟ್ಟದ ನಾಗರಿಕತೆಯ ಸುಧಾರಣೆ ಎಂದೇ ಅರ್ಥೈಸಬಹುದಾಗಿದೆ. ಮೌರ್ಯರ ಕಾಲದಿಂದ ಭಾರತದಲ್ಲಿ ಆಡಳಿತ ವ್ಯವಸ್ಥೆ ಎಂಬುದು ವಿಕಾಸವಾಗುತ್ತಾ ಬಂದಿದೆ. ಆಧುನಿಕ ಸಂದರ್ಭದಲ್ಲಿಯೂ ಆಡಳಿತ ಸುಧಾರಣೆ ಎಂಬುದು ಬಹುಚರ್ಚಿತ ವಿಷಯವಾಗಿದೆ.

### 4.1.1 ನಾಡಪ್ರಭುಗಳ ಪೂರ್ವದ ಆಡಳಿತ ವ್ಯವಸ್ಥೆ

ದಕ್ಷಿಣ ಕರ್ನಾಟಕದಲ್ಲಿ ಗಂಗರ ಕಾಲದಿಂದಲೇ ಸ್ಥಿರವಾದ ಆಡಳಿತವು ನೆಲೆಗೊಂಡಂತೆ ತೋರುತ್ತದೆ. ಗಂಗರ ನಂತರ ಹೊಯ್ಸಳರು ಆಳಿದರು. ಆದರೆ ಗಂಗರ ನಂತರ ಚೋಳರ ಆಡಳಿತದ ಪರಿಣಾಮವಾಗಿ ದಕ್ಷಿಣ ಕರ್ನಾಟಕವು ಅನೇಕ ರೀತಿಯ ಆಡಳಿತಾತ್ಮಕ ಬದಲಾವಣೆಗಳಿಗೆ ಒಳಗಾಯಿತು.

#### 4.1.1.1 ಗಂಗರು ಮತ್ತು ಚೋಳರ ಕಾಲದಲ್ಲಿ ದಕ್ಷಿಣ ಕರ್ನಾಟಕದ ಆಡಳಿತ

ದಕ್ಷಿಣ ಕರ್ನಾಟಕದಲ್ಲಿ ಗಂಗರ ಕಾಲದಿಂದಲೇ ಸ್ಥಿರವಾದ ಆಡಳಿತವು ನೆಲೆಗೊಂಡಂತೆ ತೋರುತ್ತದೆ. ದಕ್ಷಿಣ ಕರ್ನಾಟಕವು ಗಂಗ ಮತ್ತು ನೊಳಂಬ ಅರಸರಿಂದ ಆಳಲ್ಪಡುತ್ತಿತ್ತು. 950ರ ಕೊಂಡಹಳ್ಳಿ ಶಾಸನದ ಪ್ರಕಾರ[1] ಇರಿವ ನೊಳಂಬಾದಿರಾಜ (ಇರಿವ ನೊಳಂಬ ದಿಲೀಪ)ನ ಕಾಲದಲ್ಲಿ ನಂದಿಗೊಳಿ ಗಾವುಂಡನು ಮಿಯಭಸಪ್ಪನಿಗೆ ಕೈವಾರನಾಡು ಮತ್ತು ನೆಕ್ಕುಂದಿ ನಾಡಿನ ಎಲ್ಲ ದೇವಾಲಯಗಳ ದತ್ತಿಯ ವ್ಯವಸ್ಥಾಪಕ ಮತ್ತು ಪಟ್ಟಣದ ಆಡಳಿತಗಳನ್ನು ಕಾರ್ಯವಹಿಸಿದಂತೆ ತಿಳಿದು ಬರುತ್ತದೆ. ಇರಿವ ನೊಳಂಬ ದಿಲೀಪ ಹಾಗೂ ರಾಷ್ಟ್ರಕೂಟರ ಮೂರನೇ ಕೃಷ್ಣ ಮಿತ್ರರಾಗಿದ್ದರು. ಗಂಗರು ಕೂಡ ರಾಷ್ಟ್ರಕೂಟರಿಗೆ ನಿಷ್ಠರಾಗಿದ್ದರು.

ದಕ್ಷಿಣ ಕರ್ನಾಟಕದಲ್ಲಿ 950–1000ದವರೆಗಿನ ಕಾಲಾವಧಿಯು ತೀವ್ರ ರಾಜಕೀಯ ಸಂಘರ್ಷದ ಕಾಲಾವಧಿಯಾಗಿತ್ತು. ಈ ಅವಧಿಯಲ್ಲಿ ಗಂಗ, ನೊಳಂಬ, ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ ಮತ್ತು ಚೋಳರು ರಾಜಕೀಯ ಮೇಲಾಟ ನಡೆಸಿದರು. ಮಹತ್ವಾಕಾಂಕ್ಷಿಯಾದ ರಾಜರಾಜಚೋಳನು (985–1014) ವೆಂಗೈನಾಡು, ಗಂಗಪಾಡಿ, ನೊಳಂಬವಾಡಿ, ತಡಿಗೈವಳಿ ಮುಂತಾದವುಗಳನ್ನು ಗೆದ್ದನೆಂದು ಕೆಲವು ಶಾಸನಗಳು ತಿಳಿಸುತ್ತವೆ.[2] ಗಂಗವಾಡಿಯು ಚೋಳರ ವಶಕ್ಕೆ ಹೋಗುವ ಮೂಲಕ ದಕ್ಷಿಣ ಕರ್ನಾಟಕವು ಅವರ ತೆಕ್ಕೆಗೆ ಹೋಯಿತು. ಸುಮಾರು 997

ರಿಂದ 1118ರವರೆಗೆ ದಕ್ಷಿಣ ಕರ್ನಾಟಕವು ಚೋಳ ರಾಜ್ಯದ ಭಾಗವಾಗಿತ್ತು. ಚೋಳರ ಮೂರು ಮಂಡಲಗಳ ವ್ಯಾಪ್ತಿಯೊಳಗೆ ಈ ಪ್ರದೇಶವು ಹಂಚಿಕೆಯಾಗಿತ್ತು. ಆ ಮಂಡಲಗಳು ವಳನಾಡುಗಳು ಮತ್ತು ಅನೇಕ ನಾಡುಗಳನ್ನು ಹೊಂದಿದ್ದವು.

ರಾಜರಾಜಚೋಳನು 990ರಲ್ಲಿ ನೊಳಂಬ ರಾಜ್ಯದ ದಕ್ಷಿಣ ಭಾಗವನ್ನು ಆಕ್ರಮಿಸಿಕೊಂಡನು. ಹೀಗಾಗಿ ಅನೇಕ ನೊಳಂಬರು ಚೋಳರ ಅಧೀನರಾಗಿ ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ಆಳ್ವಿಕೆ ನಡೆಸಿದರು. 997ರಲ್ಲಿ ನೊಳಂಬರ ಅಯ್ಯಪ್ಪದೇವನ ಮಗ ಗನ್ನರಸನು ಚೋಳರ ಅಧೀನದಲ್ಲಿ ದಳಿಗವಾಡಿಯ ಕುರುಕ್ಷಂದಳ್ಳನ್ನು ಆಳುತ್ತಿದ್ದನು. ಶ್ರೀಧರಯ್ಯ ಎಂಬಾತನು ಅವನ ದಂಡನಾಯಕನಾಗಿದ್ದನು.[3] ನಾಡಗಾಮುಂಡನಾದ ರಾಜೇಂದ್ರ ಚೋಳ ಗಾಮುಂಡನು ಬಿನ್ನಮಂಗಲಕ್ಕೆ ಸೇರಿದವನು.[4] ರಾಜೇಂದ್ರ ಚೋಳನ ಕಾಲದಲ್ಲಿ ಬೆಂಗಳೂರು ಪರಿಸರದಲ್ಲಿ ಮಹಿಳೆಯರು ಆಡಳಿತದಲ್ಲಿ ಮಾತ್ರವಲ್ಲ ಶೌರ್ಯದಲ್ಲಿಯೂ ಕೀರ್ತಿವಂತರಾಗಿದ್ದರು. 1023ರಲ್ಲಿ ಪದಿಯರಕ್ಕ ಜೋಳಯ್ಯಗಾವುಂಡನ ಮಗ ಪಲಯ್ಯಗಾವುಂಡ ಎಂಬಾತನ ತಂಗಿ ಮಣ್ಣಿಯಬ್ಬೆಯು ಕಾರಪಾಕರ್ (ಪ್ರತಿನಿಧಿ) ಆಗಿದ್ದಳು. ದಕ್ಷಿಣ ಕರ್ನಾಟಕದ ಪರಿಸರದಲ್ಲಿ ಪ್ರಾಚೀನ ಕಾಲದಿಂದಲೂ ಮಹಿಳೆಯರು ಆಡಳಿತ ಮತ್ತು ಹೋರಾಟದಲ್ಲಿ ಭಾಗಿಯಾಗಿದ್ದರೆಂದು ತಿಳಿದುಬರುತ್ತದೆ.

ಸುಮಾರು 120 ವರ್ಷಗಳ ಕಾಲ ದಕ್ಷಿಣ ಕರ್ನಾಟಕ ಪ್ರದೇಶವನ್ನು ಒಳಗೊಂಡಂತೆ ಗಂಗವಾಡಿ, ನೊಳಂಬವಾಡಿ ಮೊದಲಾದ ಪ್ರದೇಶಗಳಲ್ಲಿ ಆಳ್ವಿಕೆ ನಡೆಸಿದ ಚೋಳರು ಆಡಳಿತದಲ್ಲಿ ತಮ್ಮದೇ ಛಾಪು ಮೂಡಿಸಿದ್ದಾರೆ. ಇವರು ಆರಂಭದಲ್ಲಿ ಕನ್ನಡದಲ್ಲಿಯೇ ಶಾಸನಗಳನ್ನು ಹಾಕಿದರಾದರೂ ನಂತರ ತಮಿಳಿನಲ್ಲಿಯೇ ಬರೆಸಲಾರಂಭಿಸಿದರು. ಇವರ ಆಡಳಿತದ ಪ್ರಭಾವ ಎಷ್ಟು ತೀವ್ರವಾಗಿತ್ತೆಂದರೆ ಹೊಯ್ಸಳ ದೊರೆಗಳು ತಮ್ಮ ಬಹುತೇಕ ಶಾಸನಗಳನ್ನು ತಮಿಳಿನಲ್ಲಿಯೇ ಬೆಂಗಳೂರು ಪರಿಸರದಲ್ಲಿ ಹಾಕಿಸಿದರು. ಆರಂಭಿಕ ವಿಜಯನಗರ ದೊರೆಗಳು ಸಹ ತಮಿಳು ಸನ್ನಿಗೆ ಒಳಗಾಗಿ ಶಾಸನ ಹಾಕಿಸಿದರು. ಬಹುಶಃ ಹರಿಹರ ಬುಕ್ಕರು ಮೂರನೇ ಬಲ್ಲಾಳನ ಕಾಲದಲ್ಲಿ ಬೆಂಗಳೂರಿನ ಪರಿಸರದಲ್ಲಿಯೇ ಆಳ್ವಿಕೆ ನಡೆಸುತ್ತಿದ್ದರಿಂದ ಅವರ ಮೇಲೂ ತಮಿಳು ಪ್ರಭಾವ ತೀವ್ರವಾಗಿದ್ದಿರಬಹುದು. ಚೋಳರ ಆಡಳಿತದಲ್ಲಿ ಗಮನಿಸಬಹುದಾದ ಪ್ರಮುಖ ಅಂಶ ಎಂದರೆ ಸ್ಥಳೀಯ ಆಡಳಿತಗಾರರನ್ನು ಮತ್ತು ಗ್ರಾಮಗಳ ಹೆಸರುಗಳನ್ನು ತಮಿಳೀಕರಣಗೊಳಿಸಿದರು. ಆಡಳಿತಗಾರರನ್ನು ತಮಿಳು ಪ್ರದೇಶದಿಂದಲೂ ಕರೆತಂದು ನೇಮಿಸಿದರು.

ನಾಡಗಾವುಂಡರು ಮೊದಲಾದ ಅಧಿಕಾರಿಗಳು ತಮ್ಮ ಹೆಸರಿನ ಜೊತೆಗೆ ರಾಜನ ಹೆಸರನ್ನು ಒಳಗೊಂಡ ಪ್ರತಿನಾಮದೇಯವನ್ನು ಹೊಂದಿದ್ದರು. ಉದಾ: ರಾಜಾಧಿರಾಜ ಚೋಳನ ಕಾಲದಲ್ಲಿ ಕುಕ್ಕನೂರು ಗಾಮುಂಡ ರಾಜಾಧಿರಾಜ ವೇಳಾನ್ ಎಂದು ಕರೆದುಕೊಂಡರೆ, ರಾಜೇಂದ್ರಚೋಳನ ಕಾಲದಲ್ಲಿದ್ದ ಕುಕ್ಕನೂರು ಗಾಮುಂಡನು ರಾಜೇಂದ್ರ ಚೋಳ ಕಾಮುಂಡನ್ ಎಂತಲೂ, ಸಣ್ಣೈನಾಡ ಗಾಮುಂಡ ಕುರುಡಿ ವಸಾವಯನ್ ವೀಮನ್ ಎಂಬಾತ ಜಯಗೊಂಡ ಚೋಳ ವೇಳಾನ್ ಎಂತಲೂ ಪ್ರತಿನಾಮದೇಯ ಹೊಂದಿದರು. ಇದು ಅವರ ಸ್ವಾಮಿನಿಷ್ಠೆಯ ಪ್ರತೀಕವಿರಬಹುದು. ಅದೇ ರೀತಿ ವಿಕ್ಕೂರು ಗ್ರಾಮವು ಪ್ರತಿನಾಮದೇಯವಾದ ಜಯಗೊಂಡ ಚೋಳಪುರಂ ಆಗಿದೆ. ಕೇವಲ ಗ್ರಾಮಗಳು ಮಾತ್ರವಲ್ಲ ನಾಡ ಹೆಸರನ್ನೆ ಬದಲಿಸಿರುವುದುಂಟು. ಉದಾ: ದಡಿಗಾವಳಿನಾಡು 'ವಿಕ್ರಮ ಚೋಳ ಮಂಡಲ'ವಾಗಿದೆ.[5]

ಚೋಳರ ಕಾಲದ ಆಡಳಿತದಲ್ಲಿನ ಮತ್ತೊಂದು ವಿಶೇಷ ಎಂದರೆ ವಿವಿಧ ರೀತಿಯ ಆಡಳಿತ ವಿಭಾಗಗಳು ಮತ್ತು ಅಧಿಕಾರಿವರ್ಗಗಳನ್ನು ಪರಿಚಯಿಸಿದ್ದಾಗಿದೆ. ದಕ್ಷಿಣ ಕರ್ನಾಟಕದ ಚೋಳರ ಶಾಸನಗಳನ್ನು ಅವಲೋಕಿಸಿದರೆ ದಂಡನಾಯಕ, ಸೇನಾಪತಿ, ನಾಡಗಾವುಂಡ, ಮಹಾಮಾತ್ರ, ನಾಡನಾಯಗನ್ ಮೊದಲಾದ ಅಧಿಕಾರಿ ವರ್ಗಗಳು ಹಾಗೂ ಮಂಡಲ, ವಳನಾಡು, ಪರ್ರು, ನಾಡು ಮೊದಲಾದ ಆಡಳಿತ ವಿಭಾಗಗಳನ್ನು ಹೆಸರಿಸಬಹುದಾಗಿದೆ. ಬೆಂಗಳೂರಿನ ಪರಿಸರದ ಶಾಸನಗಳಲ್ಲಿ ದಂಡನಾಯಕನ ಮೊದಲ ಉಲ್ಲೇಖ ಸಿಗುವುದೇ ಚೋಳರ ಮೊದಲ ಶಾಸನದಲ್ಲಿ.[6] ಅದರಲ್ಲಿ ದಂಡನಾಯಕ ಶ್ರೀಧರಯ್ಯನನ್ನು ಉಲ್ಲೇಖಿಸಿದೆ. ನಂತರ 1029ರ ಸೋಲದೇವನಹಳ್ಳಿ ಶಾಸನದಲ್ಲಿ ವಾಮನಯ್ಯ ದಂಡನಾಯಕನ ಹೆಸರಿದೆ.[7] ಚೋಳರಿಗೆ ಪೂರ್ವದ ಶಾಸನಗಳಲ್ಲಿ ದಂಡನಾಯಕ ಎಂಬ ಸೇನಾ ಮುಖ್ಯಸ್ಥನ ಪ್ರಸ್ತಾಪ ಕಂಡು ಬರುವುದಿಲ್ಲವಾದ್ದರಿಂದ ಇದು ಚೋಳರ ಆಡಳಿತದ ಕಾಣಿಕೆ ಎನ್ನಬಹುದು. ತಮ್ಮ ನಂತರದ ಆಡಳಿತದಲ್ಲಿ ಚೋಳರ ಪ್ರಭಾವ ಎಷ್ಟಿತ್ತೆಂದರೆ ಹೊಯ್ಸಳರು ಚೋಳರ ತಮಿಳು ಅಧಿಕಾರಿಗಳನ್ನೆ ಮುಂದುವರೆಸಿದಂತೆ ಕಾಣುತ್ತದೆ.[8] ಇದರಿಂದಾಗಿ ಒಂದು ಕಾಲಘಟ್ಟದಲ್ಲಿ ದಕ್ಷಿಣ ಕರ್ನಾಟಕದ ಬೆಂಗಳೂರು ಪರಿಸರ ತಮಿಳುಮಯವಾದ ಆಡಳಿತದಿಂದ ಕೂಡಿತ್ತು ಎಂಬುದಂತೂ ನಿಶ್ಚಿತ. ನಂತರ ತಲಕಾಡು ಹೊಯ್ಸಳರ ಕೈವಶವಾಯಿತು.

#### 4.1.1.2 ಹೊಯ್ಸಳರ ಆಡಳಿತಶಾಹಿ

ಬೆಂಗಳೂರು ಪರಿಸರದಲ್ಲಿ ಮೇಲ್ನೋಟಕ್ಕೆ ಹೊಯ್ಸಳರು ಚೋಳರ ಆಡಳಿತ ಪದ್ಧತಿ ಮತ್ತು ಅಧಿಕಾರಿಗಳನ್ನು ಮುಂದುವರೆಸಿದಂತೆ ಕಂಡುಬರುತ್ತದೆಯಾದರೂ, ಹೊಯ್ಸಳರು

ಬೆಂಗಳೂರು ಪರಿಸರದಲ್ಲಿ ಸೈನಿಕವಾಗಿ ಮತ್ತು ಆಡಳಿತಾತ್ಮಕವಾಗಿ ತಮ್ಮದೇಯಾದ ಹೊಸ ಪದವಿಗಳನ್ನು ಸೃಜಿಸಿದರು. ಅವುಗಳಲ್ಲಿ ಮುಖ್ಯವಾಗಿ ಮಹಾಮಂಡಲೇಶ್ವರ ಮಹಾಸಾಮಂತಾಧಿಪತಿ, ಸೇನಬೋವ ಮೊದಲಾದವುಗಳನ್ನು ಹೆಸರಿಸಬಹುದು. ಸಾಮಂತ / ಮಹಾಸಾಮಂತ ಎಂಬ ಮೊದಲ ಉಲ್ಲೇಖ ಚನ್ನಪಟ್ಟಣದ ಶಾಸನ –141ರಲ್ಲಿ ಕಂಡು ಬರುತ್ತದೆಯಾದರೂ ಸಾಕಷ್ಟು ತೃಟಿತವಾಗಿರುವ ಶಾಸನದ ಕಾಲ ತಿಳಿಯುವುದಿಲ್ಲ. ಆದರೆ ರೈಸರು ಇದರ ಕಾಲ ಸುಮಾರು 900 ಎಂದು ಅಂದಾಜಿಸಿದ್ದಾರೆ. ಆ ನಂತರ ಸುಮಾರು 1115ಕ್ಕೆ ಸೇರಿದ ವಿಷ್ಣುವರ್ಧನನ ಶಾಸನದಲ್ಲಿ 'ಪೊಯ್ಸಳ ಸಾಮಂತ ಮಣ್ಣೈನಾಡ ಆಳ್ವನ್' ಎಂಬ ಉಲ್ಲೇಖ ಸಿಗುತ್ತದೆ. ನಂತರ 1140ರ ಶಾಸನದಲ್ಲಿ 'ಸಾಮಂತ ಕುಂಜಾಸನಂ' ಎಂದು ಉಲ್ಲೇಖವಾಗಿದೆ.[9] ಇದನ್ನು ಬಿಟ್ಟರೆ ಮತ್ತೆ 1315 ಶಾಸನದಲ್ಲಿಯೇ ಸಿಗುವುದು.[10] ಅದರಲ್ಲಿ 'ಮಹಾಸಾಮಂತಾಧಿಪತಿ' ಎಂದು ಉಲ್ಲೇಖವಾಗಿದೆ. ಅದೇ ರೀತಿ ಮಂಡಲೇಶ್ವರ / ಮಹಾಮಂಡಲೇಶ್ವರ ಉಲ್ಲೇಖ ಕೂಡ 1115ಕ್ಕೆ ಸೇರಿದ ವಿಷ್ಣುವರ್ಧನ ಕಾಲದ ಶಾಸನದಲ್ಲಿಯೇ ಮೊದಲು ಕಂಡುಬರುವುದು.[11] ಇದು ವಿಷ್ಣುವರ್ಧನನ ಬಿರುದಾಗಿದೆ. ನಂತರ 1145ರ ಶಾಸನದಲ್ಲಿ ಮಹಾಮಂಡಲೇಶ್ವರ ಎಂಬುದು ನರಸಿಂಹನ ಬಿರುದಾಗಿ ದಾಖಲಾಗಿದೆ. ಎರಡನೇ ಬಲ್ಲಾಳ ಕೂಡ 1196ರ ಶಾಸನದಲ್ಲಿ ಮಹಾಮಂಡಲೇಶ್ವರ ಎಂದು ಕರೆದುಕೊಂಡಿದ್ದಾನೆಯಾದರೂ, ಆನಂತರ ಅವನು ಹೊಯ್ಸಳರನ್ನು ಸ್ವತಂತ್ರ ಚಕ್ರವರ್ತಿಗಳ ವಂಶವಾಗಿ ಮಾಡಿದನು. ಅದಕ್ಕೆ ತಕ್ಕಂತೆ ಮಹಾರಾಜಾಧಿರಾಜ, ರಾಜಪರಮೇಶ್ವರ ಮುಂತಾದ ಚಕ್ರವರ್ತಿಯ ಬಿರುದುಗಳನ್ನು ಧರಿಸಿದನು.

ಮಹಾಮಂಡಲೇಶ್ವರ, ಮಹಾಸಾಮಂತರ ಸ್ಥಾನಮಾನಗಳನ್ನು ನೋಡುವುದಾದರೆ 1267ರ ಶಾಸನದಲ್ಲಿ ಪ್ರತಾಪ ಚಕ್ರವರ್ತಿ ಹೊಯ್ಸಳ ವೀರ ನರಸಿಂಹನು ದೋರಸಮುದ್ರದಲ್ಲಿ ಆಳುವಾಗ ಮಹಾಮಂಡಲೇಶ್ವರ ಬೇಚಿದೇವರಸನು ಯಲಹಂಕ ನೆಲೆವೀಡಿನಲ್ಲಿ ರಾಜ್ಯವಾಳುತ್ತಿದ್ದನು.[11] ಅದೇ ರೀತಿ 1115ರ ಶಾಸನದಲ್ಲಿ ಮಹಾಮಂಡಲೇಶ್ವರ, ವೀರಗಂಗ ಪೊಯ್ಸಳದೇವ (ವಿಷ್ಣುವರ್ಧನ) ಆಳುವಾಗ ಮಣ್ಣೈನಾಡಾಳ್ವನ್ ಕೋರಗಾವುಂಡನ ಮಗ ಸೋಮಗಾವುಂಡ ಎಂದಿದೆ.[12] ಸ್ವತಂತ್ರ ರಾಜನೊಬ್ಬ ತನ್ನನ್ನು ಚಕ್ರವರ್ತಿ ಎಂದು ಕರೆದು ಕೊಂಡರೆ ಅವನ ಅಧೀನನನ್ನು ಮಹಾಮಂಡಲೇಶ್ವರ ಎಂದು, ಅವನ ಅಧೀನ ಆಡಳಿತಗಾರರನ್ನು ಸಾಮಂತ ಅಥವಾ ಮಹಾಸಾಮಂತರೆಂದು ಸಂಭೋಧಿಸಲಾಗುತ್ತಿತ್ತು.

ಮಹಾಪ್ರಧಾನ ಪದವಿಯನ್ನು ರಾಜಪರಿವಾರಕ್ಕೆ ಸಂಬಂಧಿಸಿದವರು ಅಥವಾ ಹತ್ತಿರದವರು ಅಲಂಕರಿಸುತ್ತಿದ್ದರು. ರಾಜನ ಜೊತೆ ನಿಕಟ ಸಂಬಂಧವನ್ನು ಹೊಂದಿರುತ್ತಿದ್ದರು.

1343ರ ಶಾಸನದಲ್ಲಿ ಮಹಾಪ್ರಧಾನ ದಾದಿ ಸೋಮಯ ದಂಡನಾಯಕನು ಬಲ್ಲಾಳದೇವರಿಗೆ ಶಿರಪ್ರಧಾನನಾದವನೆಂದು ಬಣ್ಣಿಸಿದೆ.[13] ಇದೇ ಸೋಮಯನನ್ನು 1339ರ ಶಾಸನದಲ್ಲಿ 'ತಸ್ಯ ರಾಜಾನ್ವಯ' (ರಾಜ ವಂಶದಿಂದ ಬಂದ ಪ್ರಧಾನ) ಎಂದಿದೆ.[14] ಇದರಿಂದ ಆತ ರಾಜಮನೆತನಕ್ಕೆ ಹತ್ತಿರದವನೆಂದು ತಿಳಿಯಬಹುದು. ರಾಜನ ಆಸ್ಥಾನದಲ್ಲಿಯು ಈ ಮಹಾಪ್ರಧಾನರು ಇದ್ದಂತೆಯೂ ತೋರುತ್ತದೆ.

ಮತ್ತೊಂದು ಪ್ರಮುಖವಾದ ಅಧಿಕಾರ ಪದವಿ 'ದಂಡನಾಯಕ'. ಇದು ಚೋಳರಿಂದ ಬೆಂಗಳೂರಿನ ಪರಿಸರದಲ್ಲಿ ಪರಿಚಯಗೊಂಡಿತು. ದಂಡನಾಯಕ ಹೆಸರೇ ಸೂಚಿಸುವಂತೆ ಸೇನೆಯ ಪದವಿಯಾಗಿದೆ. ನಾಡುಗಳಲ್ಲಿ ಸಾಮಾನ್ಯವಾಗಿ ನಾಡಗಾವುಂಡರು ಆಡಳಿತವನ್ನು ನೋಡಿಕೊಳ್ಳುವುದುಂಟು. ಕೆಲಮೊಮ್ಮೆ ದಂಡನಾಯಕರನ್ನು ನಾಡಗಾವುಂಡರಾಗಿ ನೇಮಿಸಿರುವುದನ್ನೂ ಕಾಣಬಹುದು. 1330ರ ಶಾಸನವು ಜಾಲೆಯ ದಂಡನಾಯಕನು ಕುಕ್ಕಲನಾಡನ್ನು ಆಳುತ್ತಿದ್ದನೆಂದು ತಿಳಿಸುತ್ತದೆ.[15] 1332ರ ಶಾಸನವೊಂದು ಮಹಾಸಾಮಂತಾಧಿಪತಿ ವೈಯಿಚ್ಚಗಾವುಂಡ, ಕೊಂಗ ಇರಾಮೆ ನಾಯಕ್ಕರ್ ಇವರುಗಳು ವೀರ ಬಲ್ಲಾಳ ದೇವರ ಮಗ ಸಿಂಗೆ ದಂಡನಾಕನ ಅಧೀನ ಅಧಿಕಾರಿಗಳಾಗಿದ್ದರೆಂದು ತಿಳಿಸುತ್ತದೆ.[16] ಇದರಿಂದ ದಂಡನಾಯಕನ ಅಧೀನದಲ್ಲಿ ಮಹಾಸಾಮಂತ ರಿದ್ದರೆಂದು ತಿಳಿಯುತ್ತದೆ. ನಾಡುಗಳ ರಕ್ಷಣೆಗೂ ಸ್ಥಳೀಯ ದಂಡನಾಯಕರಿರುತ್ತಿದ್ದರು. ಅದೇ ರೀತಿ ರಾಜನ ಆಸ್ಥಾನದಲ್ಲಿಯೂ ದಂಡನಾಯಕರಿರುತ್ತಿದ್ದರು. 1317ರ ಶಾಸನದಲ್ಲಿ ಅಲುವ ದಂಡನಾಯಕನ ಮಗ ಗಂಗೆಯ ದಂಡನಾಯಕನು ರಾಜ ಆಸ್ಥಾನದ ದಂಡನಾಥರಲ್ಲಿ ಒಬ್ಬ ಎಂದು ತಿಳಿಸುತ್ತದೆ.[17] ಗಾವುಂಡ / ನಾಳ್ಗಾವುಂಡ ಪದವಿಗಳು ಗ್ರಾಮ ಅಥವಾ ನಾಡುಗಳು ಆಡಳಿತ, ರಕ್ಷಣೆ ಮತ್ತು ಸೇನಬೋವ ನೆರವಿನಿಂದ ಕಂದಾಯ ಸಂಗ್ರಹದ ಮೇಲ್ವಿಚಾರಣೆಯನ್ನು ನೋಡಿಕೊಳ್ಳಬೇಕಾದ ಜವಾಬ್ದಾರಿಯನ್ನು ಹೊತ್ತಿರುತ್ತಾರೆ. ನಾಡೊಳಗೆ ಅಥವಾ ಗ್ರಾಮದಲ್ಲಿ ಭೂಮಿಯನ್ನು ದಾನ ಅಥವಾ ಕೊಡುಗೆ ನೀಡುವಾಗ ಇವರ ಉಪಸ್ಥಿತಿ ಮುಖ್ಯವಾಗಿರುತ್ತದೆ. ಅಲ್ಲದೆ ನಾಡು ಮತ್ತು ಗ್ರಾಮಗಳ ಯಾವುದೇ ಕಾರ್ಯ ಚಟುವಟಿಕೆಗಳ ಉಸ್ತುವಾರಿಯನ್ನು ನೋಡಿಕೊಳ್ಳವ ಮುಖಂಡರಾಗಿರುತ್ತಾರೆ. ಗ್ರಾಮಗಳಲ್ಲಿ ಒಬ್ಬನಿಗಿಂತ ಹೆಚ್ಚು ಗಾಮುಂಡರಿದ್ದುದಾಗಿಯೂ ಶಾಸನಗಳಿಂದ ತಿಳಿದು ಬರುತ್ತದೆ.

ಪೆರ್ಗಡೆ ಎಂಬ ಅಧಿಕಾರಿಯ ಉಲ್ಲೇಖ ಶಾಸನಗಳಲ್ಲಿ ಕಂಡುಬರುತ್ತದೆ. ಪೆರ್ಗಡೆಯಾದ ಮಾಚ್ಚಗಾವುಂಡನು ಸಣ್ಣೈನಾಡಿನ ಆವಂತಿಯೂರ ಭೂಒಡೆಯ ಎಂದು 1133ರ ಶಾಸನವು ತಿಳಿಸಿದರೆ,[18] 1156ರ ಶಾಸನದಲ್ಲಿ ಕುಕ್ಕಲನಾಡ ಆಳ್ವಾರರ ರಾಜ್ಯದ ಪೆರ್ಕಡಿಯಾದ ಅಚ್ಚಲ್ಯೆಯನ್

ಎಂದು ತಿಳಿಸುತ್ತದೆ.[19]. ಪೆರ್ಗಡೆಗೂ ಕೂಡ ಭೂಮಿಯನ್ನು ಸರ್ವಮಾನ್ಯವಾಗಿ ಕೊಟ್ಟಿರುವುದನ್ನು ಕಾಣಬಹುದು.[20] ಮೂಲತಃ ರಾಜಾಧಿಕಾರಿಯಾದ ಪೆರ್ಗಡೆ ನಿಧಾನವಾಗಿ ಗ್ರಾಮಾಡಳಿತದ ಜೊತೆಗೆ ಸೇರಿಕೊಂಡರು.[21] ಮತ್ತೊಬ್ಬ ಅಧಿಕಾರಿ ಸೇನಬೋವ. ಸೇನಬೋವನು ಸ್ಥಳೀಯವಾಗಿ ಪ್ರಭಾವಿಯಾದ ಅಧಿಕಾರಿ. ಇವನು ತೆರಿಗೆ ಸಂಗ್ರಹಿಸುವ, ಶಿಲಾಶಾಸನಗಳನ್ನು ಬರೆಯುವ ಮತ್ತು ದಾಖಲೆಗಳನ್ನು ಇಡುವಂತಹ ಪ್ರಮುಖ ಕಾರ್ಯವನ್ನು ನಿರ್ವಹಿಸುವನು. ಯಾವುದೇ ಕೊಡುಗೆ, ಸರ್ವಮಾನ್ಯಗಳನ್ನು ನೀಡುವಾಗ ಮೇಲ್ವರ್ಗದ ಅಧಿಕಾರಿಗಳ ಜೊತೆ ಸೇನಬೋವ ಕೂಡ ಇರುವುದನ್ನು ಕೆಲವು ಶಾಸನಗಳಲ್ಲಿ ನೋಡಬಹುದು. ಎರಡು ಗ್ರಾಮಗಳ ಚತುಸ್ಸೀಮೆಯನ್ನು ದೇವಾಲಯಕ್ಕೆ ಕೊಟ್ಟ 1328ರ ಶಾಸನವೊಂದರಲ್ಲಿ[22] ಮಹಾಪ್ರಧಾನ, ದಂಡನಾಯಕ, ನಾಡಗೌಡರ ಜೊತೆಯಲ್ಲಿ ಸೇನಬೋವ ಅಲ್ಲಾಳನೂ ಉಪಸ್ಥಿತನಿದ್ದನು. ಯಲಹಂಕನಾಡಿನ ಸೇನಬೋವನಾದ ಅಲ್ಲಾಳನಿಗೆ ಸಾಕಷ್ಟು ಕೊಡುಗೆಗಳನ್ನು ಕೊಟ್ಟ ಬಗ್ಗೆ ಶಾಸನಗಳಿವೆ. ಇವನನ್ನು ಕುರಿತು ಪ್ರತ್ಯೇಕವಾಗಿ ನೋಡಲಾಗುವುದು. ಈ ಸೇನಬೋವ ಎನ್ನುವ ಪದವಿಯೇ ನಂತರ ಕ್ರಮೇಣವಾಗಿ ಶಾನುಭೋಗ ಎಂಬ ಲೆಕ್ಕಿಗನ ಆಡಳಿತವಾಯಿತು.

ಬೆಂಗಳೂರಿನ ಪರಿಸರದ ಶಾಸನಗಳಲ್ಲಿ ಉಕ್ತವಾಗಿರುವ ಈ ಮಂಡಲೇಶ್ವರ, ಮಹಾಮಂಡಲೇಶ್ವರ, ಸಾಮಂತ, ಮಹಾಸಾಮಂತಾಧಿಪತಿ ಮೊದಲಾದವುಗಳು ಊಳಿಗಮಾನ್ಯ ಒಡೆಯ ಮತ್ತು ಊಳಿಗಮಾನ್ಯ ಏಣಿಶ್ರೇಣಿಯಲ್ಲಿನ ವಿವಿಧ ಹಂತಗಳನ್ನು ಪ್ರತಿನಿಧಿಸುತ್ತವೆ ಎಂದು ಆರ್.ಎನ್.ನಂದಿ ಅವರು ಅಭಿಪ್ರಾಯ ಪಟ್ಟಿದ್ದಾರೆ. ರಾಜನಿಂದ ಗಾಮುಂಡನವರೆಗೆ ಇರುವ ವಿವಿಧ ಆಡಳಿತ ಮತ್ತು ಅಧಿಕಾರದ ಪದವಿಗಳು ಒಂದು ಪಿರಮಿಡ್ಡಿನ ಏಣಿಶ್ರೇಣಿಯೊಳಗೆ ಕಾರ್ಯ ನಿರ್ವಹಿಸುವಂತೆ ತೋರುವುದರಿಂದ ಇದನ್ನು ಊಳಿಗಮಾನ್ಯ ವ್ಯವಸ್ಥೆಗೆ ಸಮೀಕರಿಸಬಹುದು.

#### 4.1.1.3 ವಿಜಯನಗರ ಕಾಲದಲ್ಲಿ ಆಡಳಿತ ರೂಪುಗೊಂಡ ಬಗೆ

ಹೊಯ್ಸಳರ ನಂತರ ಇಡೀ ದಕ್ಷಿಣ ಭಾರತವು ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಾಗ ಹಲವಾರು ನಾಡಪ್ರಭುಗಳು ಹಾಗೂ ಆಳರಸರ ಮೂಲಕ ಈ ಪ್ರದೇಶದ ಆಡಳಿತವು ಸುಲಭವಾಗಿ ಸಾಗುವಂತೆ ನೋಡಿಕೊಳ್ಳಲಾಯಿತು. ಹೊಯ್ಸಳರ ನಂತರ ಏಕಾಏಕಿಯಾಗಿ ಇಡೀ ದಕ್ಷಿಣ ಭಾರತದ ಎಲ್ಲಾ ಆಡಳಿತವನ್ನೂ ವಿಜಯನಗರದ ಅರಸರು ತಮ್ಮ ತೆಕ್ಕೆಗೆ ತೆಗೆದುಕೊಂಡಾಗ ನಾಡಿನ ಆಡಳಿತದಲ್ಲಿ ಆಮೂಲಾಗ್ರ ಬದಲಾವಣೆಗಳನ್ನು ತರಲಾರಂಭಿಸಿದರು. ವಿಜಯನಗರದ ರಾಜಧಾನಿಯು ಹಂಪೆಯಲ್ಲಿ ಕೇಂದ್ರೀಕೃತವಾಗಿದ್ದರಿಂದ ದೂರದೂರದ

ಪ್ರದೇಶದ ಆಳ್ವಿಕೆಯ ಸುಲಭತೆಗಾಗಿ ಕೆಲವು ಮಾರ್ಪಾಟುಗಳನ್ನು ಮಾಡಬೇಕಾಯಿತು. ಹೊಯ್ಸಳರು ಯಾವ ಪ್ರದೇಶಗಳಲ್ಲಿ ತಮಿಳು ಅಧಿಕಾರಿಗಳನ್ನು ಮುಂದುವರೆಸಿದ್ದರೋ ಅದನ್ನು ಮೊದಲನೆಯದಾಗಿ ಕೊನೆಗಾಣಿಸಿ ಆ ಜಾಗಗಳಲ್ಲಿ ಕನ್ನಡ ಮೂಲದ ನಾಯಕರನ್ನು ನೆಲೆಗೊಳಿಸುವ ಸಣ್ಣ ಪ್ರಯತ್ನವನ್ನು ನಿಧಾನವಾಗಿ ಹಾಗೂ ಜನಾಭಿಪ್ರಾಯಕ್ಕೆ ಮನ್ನಣೆ ದೊರಕುವಂತೆ ವಿಜಯನಗರದ ದೊರೆಗಳು ಮಾಡಿದರು.[23]

ನಾಡುಗಳ ವಿಂಗಡಣೆಯನ್ನು ಪ್ರಧಾನವಾಗಿ ತುಂಡರಿಸಿ ಇಡೀ ರಾಜ್ಯದ ಆಡಳಿತ ಕೇಂದ್ರಗಳನ್ನು ಪುನರ್ರಚಿಸಲಾಯಿತು. ಇಂತಹ ಸಂದರ್ಭಗಳಲ್ಲಿ ಅದುವರೆವಿಗೂ ವಿಶೇಷವಾಗಿ ಖ್ಯಾತಿಗೊಳಿಸಿದ್ದ ನಾಡುಗಳಲ್ಲಿ ಹಲವು ತೆರೆಮರೆಗೆ ಸರಿದು, ಹೊಸ ನಾಡಕೇಂದ್ರಗಳನ್ನು ರೂಪಿಸುವುದರ ಮೂಲಕ ಹಳೆಯ ಕೇಂದ್ರಗಳು ನಿಧಾನವಾಗಿ ಕಣ್ಮರೆಯಾಗುವಂತಹ ವ್ಯವಸ್ಥೆಯನ್ನು ವಿಜಯನಗರದ ಅರಸರು ಆರಂಭಿಸಿದರು. ಮಂಡಲಗಳ ಪ್ರಾಧಾನ್ಯತೆಯನ್ನು ಗೌಣಗೊಳಿಸಿ ಹೊಸರೀತಿಯ ಸೀಮೆ, ವಳಿತ, ಪಟ್ಟಡಿ, ವೇಂಠೆ, ಚಾವಡಿ ಮುಂತಾದ ಆಡಳಿತ ಹಾಗೂ ನ್ಯಾಯಿಕ ಕೇಂದ್ರಗಳನ್ನು ಸ್ಥಾಪಿಸಲಾಯಿತು.[24] ಇವೆಲ್ಲವಕ್ಕೂ ಮುಖ್ಯವಾಗಿ ಮೊದಲನೆಯ ಬಾರಿಗೆ 'ರಾಜ್ಯ'ವೆನ್ನುವ ಅತೀದೊಡ್ಡ ಆಡಳಿತ ಘಟಕದ ರಾಜಧಾನಿಯನ್ನು ಸ್ಥಾಪಿಸುವುದರ ಮೂಲಕ ಅಧಿಕಾರದ ಅತ್ಯಂತ ದೊಡ್ಡದೊಡ್ಡ ಕೇಂದ್ರಗಳನ್ನು ಈ 'ರಾಜ್ಯಕೇಂದ್ರ'ದಿಂದ ನಿರ್ವಹಿಸುವ ವ್ಯವಸ್ಥೆಯನ್ನು ಜಾರಿಗೆ ತಂದರು. ಇದೊಂದು ರೀತಿಯಲ್ಲಿ ಭೂಮಾಲಿಕತ್ವದಲ್ಲಿಯೂ, ಹೊಸತೆರಿಗೆ ವ್ಯವಸ್ಥೆಯಲ್ಲಿಯೂ, ರಾಜಕಾರಣದ ಪುನರ್ಭರಣದಲ್ಲಿಯೂ ನಾಡಜನರಿಗೆ ಹೆಚ್ಚಿನ ಅನುಕೂಲಕರವಾದ ವಾತಾವರಣವನ್ನು ಉಂಟು ಮಾಡಿತು.[25]

ಹೊಯ್ಸಳರ ಕಾಲದಲ್ಲಿ ಹೆಚ್ಚು ಪ್ರಚಲಿತದಲ್ಲಿದ್ದ ಸರ್ವಾಧಿಕಾರವು ವಿಜಯನಗರದ ಕಾಲದಲ್ಲಿ ಬಹುತೇಕ ಇಲ್ಲವಾಯಿತು. ದಂಡನಾಯಕರು, ಮಹಾಮಂಡಲೇಶ್ವರರ ಪದವಿಗಳು ಹಿಂದಿನಂತೆ ಸರ್ವಾಧಿಕಾರವನ್ನು ಹೊಂದಿರಲಿಲ್ಲ. ಹೊಯ್ಸಳರಲ್ಲಿ ಸಮರ್ಥ ದಂಡನಾಯಕರು ಹಾಗೂ ಮಹಾಮಂಡಲೇಶ್ವರರು ರಾಜ್ಯದ ಆಡಳಿತವನ್ನು ನಡೆಸುವ ಹಂತಕ್ಕೆ ಏರುತ್ತಿದ್ದರು. ಇವರ ಆಡಳಿತದ ಭೂಭಾಗವು ವಿಸ್ತಾರವಾಗಿತ್ತು. ಹಾಗಾಗಿ ದಂಗೆಗಳನ್ನು ಅಡಗಿಸಲು, ಕಂದಾಯಗಳನ್ನು ಸಂಗ್ರಹಿಸಲು ಕೆಲವು ತೊಡಕುಗಳಿದ್ದವು. ಇದನ್ನು ತಿಳಿದಿದ್ದ ವಿಜಯನಗರದ ದೊರೆಗಳು ಮಹಾಮಂಡಲೇಶ್ವರ ಪದವಿಯನ್ನು ತೆಗೆದುಹಾಕಿದಂತೆ ತೋರುತ್ತದೆ. ಆರಂಭಿಕ ವಿಜಯನಗರದ ದೊರೆಗಳೇ ತಮ್ಮನ್ನು ತಾವು 'ಮಹಾಮಂಡಲೇಶ್ವರ' ಎಂಬ ಬಿರುದಿನಿಂದ ಕರೆದುಕೊಂಡಿದ್ದಾರೆ.

ಇದರ ಅರ್ಥ 'ಈ ವಿಸ್ತಾರವಾದ ಭೂಮಿಯ ಅಧಿಪತಿ' ಎಂಬುದಾಗಿದೆ. ದಂಡನಾಯಕರು ಸೈನ್ಯದ ನಿರ್ವಹಣೆಗೆ ಮಾತ್ರ ಸೀಮಿತರಾದಂತೆ ತೋರುತ್ತದೆ. ಮಹಾಸಾಮಂತಾಧಿಪತಿಗಳಿಗೆ ವಿಜಯನಗರ ಕಾಲದಲ್ಲಿ ವಿಶೇಷವಾದ ಪ್ರಾಧಾನ್ಯತೆಯೂ ದೊರೆಯಿತು.[26]

### 4.1.2 ನಾಡಪ್ರಭುಗಳ ಕಾಲದ ಸ್ಥಳೀಯ ಆಡಳಿತ ಸ್ವರೂಪ

ವಿಜಯನಗರ ಕಾಲದ ಆಡಳಿತ ವ್ಯವಸ್ಥೆಯ ಸ್ವರೂಪವನ್ನು ನೋಡುವುದಾದರೆ, ರಾಜಧಾನಿಯಲ್ಲಿ ರಾಜ / ಚಕ್ರವರ್ತಿ ಇರುತ್ತಿದ್ದನು. ಅವನ ಅಧೀನದಲ್ಲಿ ರಾಜಪ್ರತಿನಿಧಿ ಅಥವಾ ಮಹಾ ಅರಸು ಇರುತ್ತಿದ್ದನು. ಅವನ ಅಧೀನದಲ್ಲಿ ಮಹಾಮಂಡಲೇಶ್ವರರು ಇರುತ್ತಿದ್ದರು. ಮಹಾಮಂಡಲೇಶ್ವರರ ಅಧೀನದಲ್ಲಿ ನಾಡುಗಳು ಮತ್ತು ನಾಡಪ್ರಭುಗಳು ಬರುತ್ತಿದ್ದರು. ನಾಡಪ್ರಭುಗಳ ಅಧೀನದಲ್ಲಿ ಸೀಮೆಗಳು, ಸೀಮೆಗಳ ಅಧೀನದಲ್ಲಿ ಗ್ರಾಮಗಳು, ಅಗ್ರಹಾರಗಳು ಬರುತ್ತಿದ್ದವು. ಗ್ರಾಮಗಳು ಮತ್ತು ಅಗ್ರಹಾರಗಳ ಅಧೀನದಲ್ಲಿ ಆಯಗಾರರು ಬರುತ್ತಿದ್ದರು. ಇದು ವಿಜಯನಗರ ಕಾಲದ ಸ್ಥಳೀಯ ಆಡಳಿತದ ಸ್ಥೂಲ ಪರಿಚಯವಾಗಿದೆ.[27]

### 4.1.3 ನಾಡು ಮತ್ತು ನಾಡಪ್ರಭುಗಳು

ಯಲಹಂಕ ನಾಡಿನ ಪ್ರಾಂತೀಯ ಸ್ವರೂಪವನ್ನು ನೋಡುವುದಾದರೆ, ಗ್ರಾಮಗಳು ಆಡಳಿತದ ಕೊನೆಯ ಘಟಕಗಳಾಗಿದ್ದವು. ಕೆಲವು ಗ್ರಾಮಗಳ ಗುಂಪನ್ನು ಸೀಮೆ ಎನ್ನುತ್ತಿದ್ದರು. ಕೆಲವು ಸೀಮೆಗಳು ಸೇರಿ ನಾಡು ಆಗುತ್ತಿತ್ತು. ವಿಜಯನಗರ ಕಾಲದಲ್ಲಿ ನಾಡು ಒಂದು ಪ್ರಾದೇಶಿಕ ಸಂಸ್ಥೆಯಾಗಿತ್ತು. ನಾಡು ಒಂದು ಆಡಳಿತ ವಿಭಾಗವಾಗಿದ್ದು, ನಾಡು ಸಭೆ, ಹಲವು ಗ್ರಾಮಗಳ ಒಂದು ಸಭೆಯಾಗಿದ್ದು ಪದೇಪದೇ ಸೇರುತ್ತಿತ್ತು. ನಾಡ ಸಭೆಯ ಮುಖ್ಯಸ್ಥ ನಾಡಗೌಡ. ರಾಜ ಮತ್ತು ರಾಜನ ಅಧಿಕಾರಿಗಳು ಸಾಮಾನ್ಯವಾಗಿ ನಾಡಗೌಡನನ್ನು ನೇಮಕ ಮಾಡುತ್ತಿದ್ದರು. ನಾಡಗೌಡನ ಹುದ್ದೆ ವಂಶಪಾರಂಪರ್ಯವಾಗಿದ್ದಿತು. ನಾಡಗೌಡರಿಗೆ ವೇತನವಾಗಿ ಉಂಬಳಿ ಅಥವಾ ಕೊಡುಗೆಗಳನ್ನು ನೀಡಲಾಗುತ್ತಿತ್ತು. ಕೊಡುಗೆ ಎಂದರೆ ಕಂದಾಯವನ್ನು ಮನ್ನ ಮಾಡಿದ ಭೂಮಿಯಾಗಿರುತ್ತಿತ್ತು. 1563ರಲ್ಲಿ ಗಂಗಪ್ಪ ನಾಯಕ ಎಂಬುವವನಿಗೆ ಕೊಳಾಲ ಸೀಮೆಯ ಎಲ್ಲ ಗ್ರಾಮಗಳ ತರಿ ಮತ್ತು ಒಣ ಭೂಮಿಗಳ ಕಂದಾಯ ವಿನಾಯಿತಿ ಮತ್ತು ಗ್ರಾಮವೊಂದನ್ನು ದಂಡಿಗೆ ಉಂಬಳಿಯಾಗಿ ಶಾಶ್ವತ ದತ್ತಿ ನೀಡಲಾಯಿತು.[28] ನಾಡಿನ ಜನರನ್ನು ನಾಡಸಭೆ ಹೊಂದಿರುತ್ತಿತ್ತು. ನಾಡ ಸಭೆಯ ಕರ್ತವ್ಯವೆಂದರೆ– ತೆರಿಗೆ ವಸೂಲು ಮಾಡುವುದು, ನ್ಯಾಯದಾನ ಮಾಡುವುದು ಮತ್ತು ಅವನ ನಿಯಂತ್ರಣದಲ್ಲಿರುವ ಪ್ರದೇಶಗಳಲ್ಲಿನ ದೇವಾಲಯಗಳ ಉಸ್ತುವಾರಿ ನೋಡಿಕೊಳ್ಳುವುದು, ನೀರಾವರಿ ವ್ಯವಸ್ಥೆಯನ್ನು ಕಲ್ಪಿಸುವುದು

ಇತ್ಯಾದಿಗಳಾಗಿದ್ದವು. ಜೊತೆಗೆ ನಾಡಪ್ರಭುವು ತನಗೆ ದೊರೆತ ಅಧಿಕಾರದ ಹಿನ್ನೆಲೆಯಲ್ಲಿ ಕೋಟೆ ಕಟ್ಟುವುದು, ಸೈನ್ಯವ್ಯವಸ್ಥೆ ಬಲಪಡಿಸುವುದು, ಧಾರ್ಮಿಕ ಸ್ಥಳಗಳ ಉಸ್ತುವಾರಿ, ದಾನದತ್ತಿಗಳನ್ನು ನೀಡುವುದು, ತೆರಿಗೆ ಸ್ಥಾಪನೆ–ಮನ್ನಾ, ಗ್ರಾಮ ನಿರ್ಮಾಣ, ಕೆರೆ ನಿರ್ಮಾಣ ಮುಂತಾದ ಜನೋಪಯೋಗಿ ಕಾರ್ಯಗಳಲ್ಲಿ ತೊಡಗುವುದರೊಂದಿಗೆ ತಮ್ಮ ಭೂಪ್ರದೇಶದ ವ್ಯಾಪ್ತಿಯಲ್ಲಿ ಸಮರ್ಥ ನ್ಯಾಯಾಧಿಕಾರಿಗಳಾಗಿಯೂ ಯಲಹಂಕ ನಾಡಪ್ರಭುಗಳು ತಮ್ಮನ್ನು ಗುರುತಿಸಿಕೊಂಡಿದ್ದಾರೆ.[29]

ತಾಳಿಕೋಟೆ ಯುದ್ಧದ (1565ರ) ನಂತರ ವಿಜಯನಗರ ಸಾಮ್ರಾಜ್ಯದಲ್ಲಿ ರಾಜಕೀಯ ಅಸ್ಥಿರತೆ ತಲೆದೋರಿದಂತೆ ಅದರ ಲಾಭ ಪಡೆದ ನಾಡಗೌಡರು ತಮ್ಮ ತಮ್ಮ ಸಾಮರ್ಥ್ಯಾನುಸಾರ ಪ್ರಬಲರಾಗತೊಡಗಿದರು. ಪ್ರಾಂತೀಯ ಸನ್ನಿವೇಶಗಳಿಗನುಗುಣವಾಗಿ ನಾಡಗೌಡರು ತಮ್ಮ ತಮ್ಮ ಆಡಳಿತ ವ್ಯವಸ್ಥೆಯನ್ನು ರೂಪಿಸಿಕೊಂಡರು. ಇದರಿಂದ ನಾಡು ನಾಡುಗಳ ನಡುವೆ ಆಡಳಿತದಲ್ಲಿ ಭಿನ್ನತೆಗಳಿದ್ದವು.[30]

### 4.1.4 ಸೀಮೆ

ಸೀಮೆಯನ್ನು ಎರಡು ಅರ್ಥಗಳಲ್ಲಿ ಬಳಸಲಾಗಿದೆ. ಒಂದು– ಪ್ರಾಂತ್ಯ. ಎರಡು– ಆಡಳಿತದ ಅನುಕೂಲಕ್ಕಾಗಿ ಹಳ್ಳಿಗಳ ಕಲ್ಪಿತ ಸಮೂಹ. ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಸೀಮೆಯನ್ನು ಹಳ್ಳಿಗಳ ಸಮೂಹದ ಅರ್ಥದಲ್ಲಿ ಬಳಸಲಾಗಿದೆ. ಸ್ಥಳ ಎಂಬ ಪದವನ್ನು ಸೀಮೆಗೆ ಸಮಾನಾಂತರವಾಗಿ ಬಳಸಲಾಗಿದೆ. ಸೀಮೆ ಎಂಬುದು ಒಂದು ಪ್ರಾದೇಶಿಕ ವಿಭಾಗವಾಗಿತ್ತು. ಒಂದು ಪ್ರದೇಶದ ಜನರು ತಮ್ಮ ಸಾಂಸ್ಕೃತಿಕ ಪ್ರತ್ಯೇಕತೆಯನ್ನು ತೋರಲು ಸೀಮೆ ಎಂಬುದನ್ನು ಬಳಸಿರಬಹುದು ಎಂದು ವಿ. ಶ್ರೀನಿವಾಸನ್ ಅಭಿಪ್ರಾಯ ಪಡುತ್ತಾರೆ.[31] ಬಹುಶಃ ಶ್ರೀನಿವಾಸನ್ ಅವರ ಅಭಿಪ್ರಾಯವನ್ನು ಒಪ್ಪಬಹುದು. ಗ್ರಾಮೀಣ ಪ್ರದೇಶದಲ್ಲಿ ಏನಾದರೂ ಕೆಲಸ ಕಾರ್ಯಗಳನ್ನು ಸಮರ್ಪಕವಾಗಿ / ಕ್ರಮಬದ್ಧವಾಗಿ ಮಾಡದವರನ್ನು "ಯಾವ ಸೀಮೆ ಮನುಷ್ಯನಯ್ಯ? ಸೀಮೆಗಿಲ್ಲದ ಪದ್ಧತಿ?" ಎಂದು ತರಾಟೆಗೆ ತೆಗೆದುಕೊಳ್ಳುತ್ತಾರೆ. ಇದನ್ನು ಸಾಂಸ್ಕೃತಿಕ ಪ್ರತ್ಯೇಕತೆಯನ್ನು ತೋರಿಸುವುದರ ನಿದರ್ಶನವಾಗಿ ನೋಡಬಹುದು.

### 4.1.5 ಗ್ರಾಮಾಡಳಿತ ವ್ಯವಸ್ಥೆ

ವಿಜಯನಗರ ಕಾಲಘಟ್ಟದಲ್ಲಿ ಆಯಗಾರ ಪದ್ಧತಿ ಪ್ರಾಮುಖ್ಯತೆಗೆ ಬಂದಿತು. ಈ ಪದ್ಧತಿಯ ಮೂಲವನ್ನು ಕಲ್ಯಾಣ ಚಾಲುಕ್ಯರು ಮತ್ತು ಹೊಯ್ಸಳರ ಕಾಲದ ಶಾಸನಗಳಲ್ಲಿಯೂ

ಗುರುತಿಸಬಹುದು. ಹಳ್ಳಿಗಳಲ್ಲಿನ ಆಯಗಾರರು 12 ವೃತ್ತಿಯವರು ಇರುತ್ತಾರೆ. ಇವರುಗಳು ಗ್ರಾಮಕ್ಕೆ ಸಂಬಂಧಿಸಿದ ಒಂದೊಂದು ವೃತ್ತಿಯನ್ನು ಅನುಸರಿಸುತ್ತಿರುತ್ತಾರೆ. ಅವರುಗಳೆಂದರೆ:[32]

| ಹೆಸರು | | ಕಾರ್ಯ ನಿರ್ವಹಣೆ |
|---|---|---|
| 1. ಗೌಡ/ಪಟೇಲ | – | ನ್ಯಾಯ ತೀರ್ಮಾನಗಳಲ್ಲಿ ಮಧ್ಯಸ್ಥಿಕೆ ವಹಿಸುವುದು. |
| 2. ಕರಣಿಕ / ಶಾನುಭೋಗ | – | ದಾಖಲಾತಿ ಮತ್ತು ನಿರ್ವಹಣೆ |
| 3. ತಳವಾರ | – | ಕಾವಲುಗಾರಿಕೆ |
| 4. ತೋಟಿ | – | ಸಾರುವುದು |
| 5. ನೀರುಗಂಟಿ | – | ಬೆಳೆಗಳಿಗೆ ನೀರು ಹಂಚುವುದು |
| 6. ಜೋಯಿಸ | – | ಭವಿಷ್ಯ ಹೇಳುವುದು, ಬಿತ್ತನೆ, ಕೊಯಿಲು, ಸುಗ್ಗಿ ಮಂತಾದವುಗಳ ಕಾಲ ನಿರ್ಣಯ, ಶುಭ ಮುಹೂರ್ತಗಳನ್ನು ಹೇಳುವುದು. |
| 7. ಕಮ್ಮಾರ | – | ಕಬ್ಬಿಣದ ಕೃಷಿ ಸಲಕರಣೆಗಳ ತಯಾರಿಕೆ |
| 8. ಬಡಗಿ | – | ಮರದ ಕೃಷಿ ಸಲಕರಣೆಗಳನ್ನು ತಯಾರಿಸುವುದು. |
| 9. ಕುಂಬಾರ | – | ಮಡಕೆ, ಹೆಂಚು ಮುಂತಾದವುಗಳ ತಯಾರಿಕೆ |
| 10. ಅಗಸ | – | ಬಟ್ಟೆ ಒಗೆಯುವುದು, ಪಂಜು ಹಿಡಿಯುವುದು, ನಡೆಮುಡಿ ಹಾಸುವುದು. |
| 11. ಕ್ಷೌರಿಕ | – | ಕೂದಲು, ಉಗುರು ಮುಂತಾದವುಗಳನ್ನು ಕತ್ತರಿಸುವುದು. ಶುಭಕಾರ್ಯಗಳಲ್ಲಿ ಮಂಗಲವಾದ್ಯ ನುಡಿಸುವುದು. |
| 12. ಅಕ್ಕಸಾಲಿಗ | – | ಚಿನ್ನಾಭರಣಗಳ ತಯಾರಿಕ |

ಕೃಷ್ಣದೇವರಾಯನ ನಂತರ ವಿಜಯನಗರದ ದೊರೆಗಳಿಗೆ ಬಲಿಷ್ಠ ಕೇಂದ್ರ ಸರ್ಕಾರವನ್ನು ನಡೆಸಲು ಕಷ್ಟವಾಯಿತು. ಜನರ ಆಸ್ತಿಪಾಸ್ತಿ ಮತ್ತು ಜೀವವನ್ನು ರಕ್ಷಣೆ ಮಾಡುವಲ್ಲಿ ವಿಫಲರಾದರು. ಇಂಥ ಪರಿಸ್ಥಿತಿಯಲ್ಲಿ ಸ್ಥಳೀಯ ಮುಖಂಡರು ಒಂದು ಗೂಡಿ ತಮ್ಮದೇಯಾದ ವ್ಯವಸ್ಥೆಗಳನ್ನು ಸ್ಥಾಪಿಸಿಕೊಂಡರು. ಅದೇ ಆಯಗಾರ ಪದ್ಧತಿಯಾಗಿ ರೂಪುತಳೆಯಿತು. ಗ್ರಾಮದ ಸೇವಕರಾದ ಇವರಿಗೆ ಸಂಭಾವನೆಯಾಗಿ ಗ್ರಾಮದ ಭೂಮಾಲಿಕ ಕುಟುಂಬಗಳು ಸುಗ್ಗಿಯಲ್ಲಿ

'ಆಯ' ಅಥವಾ 'ಅಡದೆ'ಯನ್ನು ಧಾನ್ಯದ ರೂಪದಲ್ಲಿ ಕೊಡುತ್ತಿದ್ದರು. ಇವರಲ್ಲಿ ಕೆಲವರನ್ನು ಸರ್ಕಾರವೇ ನೇಮಿಸುತ್ತಿತ್ತು. ಉದಾಹರಣೆಗೆ ಗೌಡ, ಶಾನುಭೋಗ, ಜೋಯಿಸ ಮುಂತಾದವರು. ಇವರ ಸ್ಥಾನಮಾನಗಳು ವಂಶಪಾರಂಪರ್ಯವಾಗಿ ಮುಂದುವರೆಯುತ್ತಿದ್ದವು. ಗ್ರಾಮಮಟ್ಟದಲ್ಲಿ ಪಟೇಲ ಅಥವಾ ಗೌಡ ಊರಿನ ಕಂದಾಯ ಸಂಗ್ರಹಕಾರನಾದರೆ, ಶಾನುಭೋಗ ಲೆಕ್ಕಿಗನಾಗಿರುತ್ತಿದ್ದ. ಶಾನುಬೋಗರಾಗಿ ಬ್ರಾಹ್ಮಣರೇ ಪ್ರಧಾನವಾಗಿದ್ದರೆ, ಪಟೇಲರಾಗಿ ಸಾಮಾನ್ಯವಾಗಿ ಊರಿನ ಜಮೀನ್ದಾರ ಅಥವಾ ಒಕ್ಕಲಿಗರೇ ಪ್ರಧಾನವಾಗಿ ಇರುತ್ತಿದ್ದರು. ಒಕ್ಕಲಿಗರಿಲ್ಲದ ಕಡೆಗಳಲ್ಲಿ ಲಿಂಗಾಯತ ಮೊದಲಾದ ಸಾಮಾಜಿಕವಾಗಿ ಮೇಲ್ ಸ್ತರದ ಸಮುದಾಯದವರೇ ಆಗುತ್ತಿದ್ದರೆಂದು ತೋರುತ್ತದೆ.

### 4.1.6 ನಾಡಪ್ರಭುವಿನಿಂದ ನಾಯಕತನದ ಕಡೆಗೆ

ಸ್ಥಳೀಯ ಮಟ್ಟದ ಆಡಳಿತ ಮುಖ್ಯಸ್ಥನಾಗಿರುತ್ತಿದ್ದ ನಾಡಪ್ರಭು ಒಂದು ವಂಶಪಾರಂಪರ್ಯವಾದ ಸ್ಥಾನವಾಗಿತ್ತು ಎಂಬುದನ್ನು ಮೇಲೆ ನೋಡಿದ್ದೇವೆ. ಈ ನಾಡಪ್ರಭುಗಳು ಸ್ಥಳೀಯವಾಗಿ ಮಾಡುತ್ತಿರುವ ಕಾರ್ಯಗಳು ಮತ್ತು ನಾಡಿನ ರಕ್ಷಣೆಯ ವಿಚಾರದಲ್ಲಿ ತೋರ್ಪಡಿಸಿದ ಕ್ಷಮತೆ ಮತ್ತು ಪರಾಕ್ರಮಗಳಿಂದಾಗಿ ತನ್ನ ರಾಜನ ಗಮನ ಸೆಳೆದು ಉನ್ನತ ಅಧಿಕಾರಸ್ಥ ಸ್ಥಾನಗಳಿಗೆ ಪದೋನ್ನತಿ ನೀಡುವ ಪರಿಪಾಠ ಹೊಯ್ಸಳ ರಾಜ್ಯದಲ್ಲಿ ಇತ್ತು. ಉದಾಹರಣೆಗೆ, ಮಧುಗಿರಿ ಮಹಾನಾಡಪ್ರಭುಗಳ ಮನೆತನದ ವೀರಪ್ಪಗೌಡ ಮತ್ತು ಅವನ ಸೋದರರ ಪೂರ್ವಜರು ಹೊಯ್ಸಳರ ಸಾಮ್ರಾಜ್ಯದ ಪೂರ್ವಭಾಗದ ಸಾಮಂತ ದೊರೆಗಳಲ್ಲಿ ನಾಡಗೌಡರಾಗಿದ್ದು ತಮ್ಮ ಸಾಹಸ, ಧೈರ್ಯ, ಪ್ರಾಮಾಣಿಕತೆ, ಕರ್ತವ್ಯನಿಷ್ಠೆಯಿಂದ ರಾಜನ ಪ್ರೀತಿಗೆ ಪಾತ್ರರಾಗಿ ಅನೇಕ ಪ್ರದೇಶಗಳನ್ನು ಕೊಡುಗೆ ಮಾನ್ಯವಾಗಿ ಪಡೆದು ಉನ್ನತ ಪದವಿಗೇರುತ್ತಾರೆ ಎಂದು ಆರ್.ಕಾವಲಮ್ಮ ಅವರು ತೋರಿಸಿಕೊಟ್ಟಿದ್ದಾರೆ.[33] ಇದೇ ರೀತಿ ಬೆಂಗಳೂರಿನ 1327ರ ದೊಮ್ಮಲೂರುಶಾಸನ,[34] ಚಿಕ್ಕಜಾಲದ 1328ರ ಶಾಸನ[35] 1341ರ ನಾಗಶೆಟ್ಟಿಹಳ್ಳಿಯ ಶಾಸನ[36] ಮುಂತಾದ ಶಾಸನಗಳಲ್ಲಿ ಯಲಹಂಕನಾಡಿನ ಮಯಿಲೇಗೌಡ, ಮಾರೇಗೌಡ, ಮಲ್ಲಯ್ಯಗೌಡ, ತಾಮಿಯಪ್ಪ ಮುಂತಾದವರನ್ನು ಹೆಸರಿಸುತ್ತದೆ. ಈ ವ್ಯಕ್ತಿಗಳು ಯಲಹಂಕ ನಾಡಿನ ಮೂಲಪುರುಷ ರಣಭೈರೇಗೌಡ ಮತ್ತು ಅವನ ಸೋದರರೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ.[37] ಈ ಬಗ್ಗೆ ನಿರ್ದಿಷ್ಟ ಆಧಾರಗಳ ಕೊರತೆ ಇದೆಯಾದರೂ, ಇವರು ಯಲಹಂಕ ನಾಡಪ್ರಭುಗಳ ಮನೆತನದವರೇ ಆಗಿದ್ದರೆ, ಮಧುಗಿರಿಯ ನಾಡಪ್ರಭುಗಳ ಮನೆತನದವರಂತೆಯೇ ಯಲಹಂಕ ನಾಡಪ್ರಭುಗಳೂ ಕೂಡ ತಮ್ಮ ಸಾಹಸ, ಧೈರ್ಯ, ನಿಷ್ಠೆ

ಮತ್ತು ಪ್ರಾಮಾಣಿಕತೆಯಿಂದಾಗಿ ವಿಜಯನಗರದ ಅರಸರಿಂದ ನಾಯಕತನ ಪಡೆದರೆಂದು ಊಹಿಸಲು ಅವಕಾಶವಿದೆ. ಏಕೆಂದರೆ, 1532ರ ದಾಸರಹಳ್ಳಿ ಶಾಸನದಲ್ಲಿ ಅಚ್ಯುತರಾಯರು ಕೆಂಪದೇವರಸರಿಗೆ ಯಲಹಂಕ ನಾಡಿನ ನಾಯಕತನ ಕೊಟ್ಟಬಗ್ಗೆ ಉಲ್ಲೇಖವಿದೆ. ಹೀಗೆ ನಾಡಪ್ರಭುಗಳು ಪಾಳೆಯಗಾರರು ಎಂಬ ಹೆಸರಿನಿಂದಲೂ ಪ್ರವರ್ಧಮಾನಕ್ಕೆ ಬಂದಿರುವುದು ಉಂಟು.

### 4.1.7 ಕೇಂದ್ರಾಡಳಿತದ ನಿಯಂತ್ರಣ

ನಾಡುಗಳನ್ನು ಕೇಂದ್ರಾಡಳಿತವು ನಿಯಂತ್ರಿಸುತ್ತಿತ್ತು. ವಿಜಯನಗರ ಸಾಮ್ರಾಜ್ಯದ ಅರಸರು, ಅವರ ಮಹಾ ಮಂಡಲೇಶ್ವರರು ಮತ್ತು ಮಹಾಮಂಡಲೇಶ್ವರರ ಪ್ರತಿನಿಧಿಗಳು ಯಲಹಂಕ ನಾಡಿನಲ್ಲಿ ಕೊಡುಗೆ ನೀಡಿರುವುದು ಮತ್ತು ತೆರಿಗೆಯನ್ನು ರದ್ದುಗೊಳಿಸಿರುವುದು ಕಂಡುಬರುತ್ತದೆ. ಅಲ್ಲದೆ ಇಮ್ಮಡಿ ಕೆಂಪೇಗೌಡನು ಕೊಡುಗೆ ನೀಡುವಾಗ ವಿಜಯನಗರದ ಅರಸರ ಅಪ್ಪಣೆ ಪಡೆದಿರುವುದನ್ನು ಕಂಡುಬರುತ್ತದೆ. ಯಲಹಂಕ ನಾಡಪ್ರಭುಗಳು ತಮ್ಮ ಪ್ರಾಬಲ್ಯಕ್ಕೊಳಪಟ್ಟಿದ್ದ ಈ ನಾಡಿನಲ್ಲಿ ಸಂಪೂರ್ಣಾಧಿಕಾರ ಹೊಂದಿರಲಿಲ್ಲ ಎಂಬುದನ್ನು ತಿಳಿಯಬಹುದು.[38] ನಾಡಪ್ರಭುಗಳು ಸ್ವತಂತ್ರ ನಾಣ್ಯಗಳನ್ನು ಟಂಕಿಸುವಂತಿರಲಿಲ್ಲ. ಟಂಕಿಸಬೇಕಿದ್ದರೆ ದೊರೆಗಳ ಅಪ್ಪಣೆ ಬೇಕಿತ್ತು. ಅಪ್ಪಣೆ ಇಲ್ಲದೆ ನಾಣ್ಯಗಳನ್ನು ಮುದ್ರಿಸಿದ ಪಕ್ಷದಲ್ಲಿ ಅಂತಹ ಪ್ರಭುಗಳನ್ನು ತೀವ್ರಶಿಕ್ಷೆಗೆ ಗುರಿಪಡಿಸಲಾಗುತ್ತಿತ್ತು. ಹಿರಿಯ ಕೆಂಪೇಗೌಡನನ್ನು ಇದೇ ಕಾರಣಕ್ಕಾಗಿ ಬಂಧಿಸಿ, ಆನೆಗುಂದಿಯಲ್ಲಿ ಇಡಲಾಗಿತ್ತೆಂದು ಹೇಳಲಾಗುತ್ತದೆ.

### 4.1.8 ರಾಜಧಾನಿಗಳು

ಯಲಹಂಕ ನಾಡಪ್ರಭುಗಳ ಆಳ್ವಿಕೆಯ ಕಾಲಾವಧಿಯಲ್ಲಿ ಯಲಹಂಕ, ಬೆಂಗಳೂರು, ಮಾಗಡಿ–ಸಾವನದುರ್ಗ ಮತ್ತು ಕುಣಿಗಲ್‌ಗಳು ರಾಜಧಾನಿಗಳಾಗಿದ್ದವು.

#### 4.1.8.1 ಯಲಹಂಕ

ಯಲಹಂಕ ನಾಡಪ್ರಭುಗಳ ಆರಂಭಕಾಲದಿಂದ 1538ರವರೆಗೆ ಯಲಹಂಕ ರಾಜಧಾನಿಯಾಗಿತ್ತು. ಯಲಹಂಕದಿಂದಲೇ ಕೆಂಪೇಗೌಡ ಮನೆತನದ ಆಳ್ವಿಕೆಯ ನಾಡಿಗೆ / ರಾಜ್ಯಕ್ಕೆ ಯಲಹಂಕ ಎಂಬ ಹೆಸರು ಬಂದಿತು. ಆನಂತರ ಯಲಹಂಕ ಕೈತಪ್ಪಿದ ಮೇಲೂ ಅದೇ ಹೆಸರಿನಿಂದ ಆಳ್ವಿಕೆಯನ್ನು ಕೊನವರೆಗೆ ನಡೆಸಿದ್ದು ವಿಶೇಷ.

#### 4.1.8.2 ಬೆಂಗಳೂರು

ಇಂದು ಕರ್ನಾಟಕದ ರಾಜಧಾನಿಯಾಗಿರುವ ಬೆಂಗಳೂರು ಮೊದಲು ಯಲಹಂಕದ ರಾಜಧಾನಿಯಾಗಿತ್ತು ಎಂದರೆ ಅದರ ಮಹತ್ವ ಅರ್ಥವಾಗಬಹುದು. 1538ರಲ್ಲಿ ಹಿರಿಯ ಕೆಂಪೇಗೌಡನು ಇಲ್ಲಿ ಕೋಟೆ ಮತ್ತು ಪೇಟೆಯನ್ನು ರಚಿಸುವ ಮೂಲಕ ತನ್ನ ನಾಡಿನ ರಾಜಧಾನಿಯನ್ನಾಗಿ ಮಾಡಿಕೊಂಡ. ಈ ನಗರ ಅಸ್ತಿತ್ವಕ್ಕೆ ಬಂದ ಒಂದು ಶತಮಾನದಲ್ಲಿಯೇ ದಕ್ಷಿಣ ಭಾರತದ ಪ್ರಮುಖ ನಗರವಾಗಿ ಬೆಳವಣಿಗೆಯನ್ನು ಕಂಡಿತು. ಪ್ರಮುಖ ವಾಣಿಜ್ಯ ಕೇಂದ್ರವಾಗಿ ಗುರುತಿಸಲ್ಪಟ್ಟಿತು. ಆದ್ದರಿಂದ ಶತ್ರುಗಳ ಕಣ್ಣು ಬೆಂಗಳೂರಿನ ಮೇಲೆ ಬಿತ್ತು. 1638ರಲ್ಲಿ ರಣದುಲ್ಲಾಖಾನ್ ಬೆಂಗಳೂರಿನ ಮೇಲೆ ದಾಳಿ ನಡೆಸಿ ವಶಪಡಿಸಿಕೊಳ್ಳುವ ಮೂಲಕ ಬೆಂಗಳೂರು ಯಲಹಂಕ ನಾಡಪ್ರಭುಗಳ ಕೈತಪ್ಪಿತು. ಶಿವಾಜಿಯ ತಂದೆ ಷಹಜಿಗೆ ಜಾಗೀರಾಗಿ ಕೊಡಲಾಗಿದ್ದ ಈ ನಗರವನ್ನು ಮುಮ್ಮಡಿ ಕೆಂಪೇಗೌಡನು ಷಹಜಿಯನ್ನು 6–7 ಬಾರಿ ಸೋಲಿಸಿ ಬೆಂಗಳೂರನ್ನು ಗೆದ್ದುಕೊಳ್ಳುವಲ್ಲಿ ಯಶಸ್ವಿಯಾದನೆಂದು 'ಕಂಠೀರವ ನರಸರಾಜ ವಿಜಯ' ಹೇಳುತ್ತದೆ. ಆದರೆ ಅಲ್ಪದಿನಗಳಲ್ಲಿಯೇ ಬೆಂಗಳೂರು ಮತ್ತೆ ಮೊಘಲರ ವಶವಾಯಿತು.

#### 4.1.8.3 ಮಾಗಡಿ

ಮಾಗಡಿಯನ್ನು ತಳವಾರ ಗಂಗ ಎಂಬುವವನು ಸಾವಂತರಾಯನಿಂದ ಕಸಿದುಕೊಂಡನೆಂದು ಬಖೈರುಗಳು ಹೇಳುತ್ತವೆ. ಇದನ್ನು ಇಮ್ಮಡಿ ಕೆಂಪೇಗೌಡನು 1605ರಲ್ಲಿ ಗೆದ್ದುಕೊಂಡನೆಂದೂ, ಮತ್ತೊಂದು ಕಡೆ 1624ರಲ್ಲಿ ಗೆದ್ದುಕೊಂಡನೆಂದು ಹೇಳುತ್ತದೆ. ಹೆಚ್ಚುಕಡಿಮೆ ಯಲಹಂಕ ನಾಡಪ್ರಭುಗಳ ಅಂತ್ಯದವರೆಗೂ ಅಂದರೆ 1728ರವರೆಗೆ ಮಾಗಡಿ ರಾಜಧಾನಿಯಾಗಿತ್ತು.

#### 4.1.8.4 ಕುಣಿಗಲ್

ಇಮ್ಮಡಿ ಕೆಂಪೇಗೌಡನು ತನ್ನ ಯಲಹಂಕ ರಾಜ್ಯವನ್ನು ಇಬ್ಭಾಗ ಮಾಡಿ ಮುಮ್ಮಡಿ ಕೆಂಪೇಗೌಡ ಮತ್ತು ಇಮ್ಮಡಿ ಹಿರಿಯ ಕೆಂಪೇಗೌಡರಲ್ಲಿ ಹಂಚಿಕೆ ಮಾಡಿದಂತೆ ಕಂಡುಬರುತ್ತದೆ. ಅದರಲ್ಲಿ ಇಮ್ಮಡಿ ಹಿರಿಯ ಕೆಂಪೇಗೌಡನು ಕುಣಿಗಲಿಂದ ಆಳ್ವಿಕೆ ನಡೆಸುತ್ತಿದ್ದನು. ಆದರೆ ಹೆಚ್ಚಿನ ಕಾಲ ರಾಜಧಾನಿಯಾಗಿ ಉಳಿಯಲಿಲ್ಲ.

**4.1.8.5 ಸಾವನದುರ್ಗ**

ಯಲಹಂಕ ನಾಡಪ್ರಭುಗಳ ಕೊನೆ ದೊರೆಯಾದ ಮುಮ್ಮಡಿ ಕೆಂಪವೀರಪ್ಪ ಗೌಡನು ಇಲ್ಲಿ ನೆಲಪಟ್ಟಣವನ್ನು ಮಾಡಿಕೊಂಡು ಆಶ್ರಯ ಪಡೆದಿದ್ದನು. ಅಂತಿಮವಾಗಿ ಮೈಸೂರು ಸೈನ್ಯಕ್ಕೆ ಇಲ್ಲಿಯೇ ಸೆರೆಸಿಕ್ಕನು.

**4.1.9 ಮಂತ್ರಾಲೋಚನ ಸಭೆ**

ಕೆಂಪೇಗೌಡನ ಆಸ್ಥಾನದಲ್ಲಿ ಎಂಟು ಜನ ಮಂತ್ರಿಗಳಿರುತ್ತಿದ್ದರು. ಇಕ್ಕಟ್ಟಿನ ಪ್ರಸಂಗ ಒದಗಿದಾಗ ಗೌಡನು ಈ ಮಂತ್ರಿಗಳ ಜೊತೆಗೆ ಅನುಭವಸ್ಥರಾಗಿದ್ದ ಊರಿನ ಹಿರಿಯರನ್ನೂ ಕರೆಸಿ ಸಮಾಲೋಚನೆ ನಡೆಸುತ್ತಿದ್ದನು. ಅವರ ಸಲಹೆಗಳನ್ನೂ ಪಡೆಯುತ್ತಿದ್ದನು ಎಂದು ಬ.ನ.ಸುಂದರರಾವ್ ದಾಖಲಿಸುತ್ತಾರೆ.[39]

**4.1.10 ಸೈನಿಕ ವ್ಯವಸ್ಥೆ**

ಯಲಹಂಕ ನಾಡಪ್ರಭುಗಳಲ್ಲಿ ಸದಾ ಸನ್ನದ್ಧವಾಗಿದ್ದ ಸೈನ್ಯವಿರಲಿಲ್ಲ. ಅರೆಕಾಲಿಕ ಸೈನಿಕರು ಇರುತ್ತಿದ್ದರು. ಕೃಷಿ ಹಿನ್ನೆಲೆಯವರೇ ಸೈನ್ಯದಲ್ಲಿ ಅಧಿಕವಾಗಿ ಇದ್ದುದರಿಂದ ಅವರು ಬಿಡುವಿನ ಸಮಯದಲ್ಲಿ ಕೃಷಿಯಲ್ಲಿ ತೊಡಗುತ್ತಿದ್ದರು. ಯುದ್ಧ ಒದಗಿ ಬಂದಾಗ ಸೈನ್ಯದ ಸೇವೆಗೆ ಹೋಗುತ್ತಿದ್ದರು. ಕೆಂಪೇಗೌಡನಲ್ಲಿ 8000 ಕಾಲಾಳು ಮತ್ತು ಒಂದು ಸಾವಿರ ಕುದುರೆ ಸೈನಿಕರಿದ್ದರೆಂದು ತಿಳಿದು ಬರುತ್ತದೆ.[40] ಬೆಂಗಳೂರು ಸೀಮೆಯ ಸಮಸ್ತ ಸೈನ್ಯಕ್ಕೂ ಕೆಂಪೇಗೌಡನೇ ಅಧಿಪತಿಯಾಗಿದ್ದನು. ಯಲಹಂಕ ನಾಡಪ್ರಭುಗಳು ವಿಜಯನಗರ ದೊರೆಗಳಿಂದ ಕರೆ ಬಂದಾಗ ಅಥವಾ ದೊರೆಗಳು ಅಪಾಯಕ್ಕೆ ಸಿಲುಕಿದಾಗ ತಕ್ಷಣ ಸಹಾಯಕ್ಕೆ ದಾವಿಸುತ್ತಿದ್ದ ನಿಷ್ಠಾವಂತ ಸಾಮಂತರಾಗಿದ್ದು. ಶತ್ರುಗಳು ಪೆನೊಗೊಂಡೆಯನ್ನು ಮುತ್ತಿದಾಗ ವಿಜಯನಗರದ ದೊರೆಯ ಕರೆಯ ಮೇರೆಗೆ ಇಮ್ಮಡಿ ಕೆಂಪೇಗೌಡನು ತನ್ನ ನೆರೆಯ ಪಾಳೆಯಗಾರರನ್ನೆಲ್ಲ ಸಂಘಟಿಸಿ ಶತ್ರುಗಳನ್ನು ಬಡಿದೋಡಿಸಿ, ಪೆನುಗೊಂಡೆಯನ್ನು ಮುಕ್ತಗೊಳಿಸಿದನು.

ಯಲಹಂಕ ನಾಡಪ್ರಭುಗಳು ಪ್ರತಿವರ್ಷ ಅಧಿರಾಜರಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸಬೇಕಾಗುತ್ತಿತ್ತು. ಸಾಮಾನ್ಯವಾಗಿ ದಸರಾ ಉತ್ಸವದ ಸಂದರ್ಭದಲ್ಲಿ ಎಲ್ಲಾ ಸಾಮಂತರು ಮಹಾನವಮಿಯ ದಿವಸ ತಮ್ಮ ತಮ್ಮ ಕಪ್ಪವನ್ನು ಸಲ್ಲಿಸುತ್ತಿದ್ದರು. ನಾಣ್ಯವನ್ನು ಟಂಕಿಸುವ ಅಧಿಕಾರ ನಾಡಪ್ರಭುಗಳಿಗೆ ಇರುತ್ತಿರಲಿಲ್ಲ. ಅದಕ್ಕೆ ವಿಶೇಷವಾದ ಅನುಮತಿಯನ್ನು ಅಧಿರಾಜನಿಂದ ಪಡೆಯ ಬೇಕಾಗಿತ್ತು. ಕುಣಿಗಲ್ ಹಣ ಎಂಬ ನಾಣ್ಯ ಚಲಾವಣೆಯಲ್ಲಿತ್ತು.

ಬಹುಶಃ ಇಮ್ಮಡಿ ಹಿರಿಯ ಕೆಂಪೇಗೌಡ ಟಂಕಿಸಿದ್ದನೆಂದು ಕಾಣುತ್ತದೆ. ಈ ಹೊತ್ತಿಗೆ ವಿಜಯನಗರ ಸಾಮ್ರಾಜ್ಯ ಪತನದತ್ತ ಸರಿದಿದ್ದರಿಂದ ಎಲ್ಲಾ ಪಾಳೆಯಗಾರರು ಸ್ವತಂತ್ರರಾಗುತ್ತಿದ್ದರು. ಆದ್ದರಿಂದ ನಾಣ್ಯವನ್ನು ಮುದ್ರಿಸುವ ಧೈರ್ಯ ಇಮ್ಮಡಿ ಹಿರಿಯ ಕೆಂಪೇಗೌಡನಿಗೆ ಬಂದಿರಬಹುದು. ಈ ಸಂದರ್ಭದಲ್ಲಿ ಹಿರಿಯ ಕೆಂಪೇಗೌಡನು ಅನುಮತಿ ಇಲ್ಲದೆ ಭೈರವ ನಾಣ್ಯವನ್ನು ಟಂಕಿಸಿದನೆಂಬ ಕಾರಣಕ್ಕೆ ಬಂಧನಕ್ಕೆ ಒಳಗಾಗಿದ್ದನ್ನು ಸ್ಮರಿಸಬಹುದು.

### 4.1.11 ನ್ಯಾಯ

ನ್ಯಾಯತೀರ್ಮಾನಗಳು ಗ್ರಾಮದ ಪಂಚಾಯ್ತಿಯಲ್ಲಿ ನಡೆಯುತ್ತಿದ್ದವು. ಬಗೆಹರಿದ ಮತ್ತು ಊರು ಊರುಗಳ ನಡುವಿನ ಬಿಕ್ಕಟ್ಟುಗಳು ಗ್ರಾಮ ಸಭೆಯ ಮುಂದೆ ತರಲಾಗುತ್ತಿತ್ತು. ಅವುಗಳು ನಾಡಪ್ರಭುವಿನ ನೇತೃತ್ವದಲ್ಲಿ ಬಗೆಹರಿಯುತ್ತಿದ್ದವು. ನಾಡಿನ ಸರಹದ್ದಿನಲ್ಲಿ ಉದ್ಭವಿಸುವ ಜಾತೀಯ ಸಮಸ್ಯೆಗಳನ್ನು ಪರಿಹರಿಸುವುದು ನಾಡಪ್ರಭುವಿನ ಪ್ರಮುಖ ಕರ್ತವ್ಯವಾಗಿತ್ತು. ಅದಲ್ಲದೆ, ಗ್ರಾಮಗಳ ನಡುವಿನ ಸಂಘರ್ಷ, ವೈಮನಸ್ಸುಗಳು, ಕೃಷಿ ವ್ಯಾಜ್ಯಗಳು, ದಾಳಿ ದಂಗೆಗಳಂಥ ಆಕ್ರಮಣ ಸಂದರ್ಭಗಳಲ್ಲಿ ನಾಡಗೌಡನು ನ್ಯಾಯ ತೀರ್ಮಾನದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದನು.[41]

### 4.1.11.1 ನ್ಯಾಯ ತೀರ್ಮಾನದ ಕೇಂದ್ರಸ್ಥಾನವಾಗಿ ಚಾವಡಿಗಳು

ಆ ಕಾಲದ ಶಾಸನಗಳಲ್ಲಿ 33 ಚಾವಡಿಯ ಪ್ರಸ್ತಾಪಗಳಿವೆ. ಈ ಚಾವಡಿಗಳು ನ್ಯಾಯ ತೀರ್ಮಾನದ ಕೇಂದ್ರಗಳಾಗಿದ್ದವು. ವಿಜಯನಗರೋತ್ತರ ಕಾಲದ ಅಮರನಾಯಕರ ವ್ಯವಸ್ಥೆಯಲ್ಲಿ ಪ್ರಮುಖವಾಗಿ ಇದನ್ನು ಗುರುತಿಸಬಹುದು. ಇಮ್ಮಡಿ ಕೆಂಪೇಗೌಡನು ತನ್ನ ಅವಧಿಯಲ್ಲಿ ಬೆಂಗಳೂರು ಕೋಟೆಯೊಳಗಿನ ತನ್ನ ಅರಮನೆಯ ಒಡ್ಡೋಲಗದಲ್ಲಿ ಚಾವಡಿಯೊಂದನ್ನು ವಿಸ್ತಾರವಾಗಿ ಕಟ್ಟಿಸಿದನು. ಆಡಳಿತಾಂಗದ ಎಲ್ಲ ಚಟುವಟಿಕೆಗಳು ಒಡ್ಡೋಲಗದಲ್ಲಿಯೇ ನಡೆಯುತ್ತಿದ್ದವು. ಮಾಗಡಿಯ ಸೋಮೇಶ್ವರ ದೇವಾಲಯದಲ್ಲಿ ನ್ಯಾಯ ಕಟ್ಟೆ ಇದೆ (ಚಿತ್ರ– 20). ಜಾತಿ ನಿಂದನೆಯಂತಹ ಅನಿರೀಕ್ಷಿತ ತಂಟೆ ತಕರಾರುಗಳು ಉದ್ಭವಿಸಿದಲ್ಲಿ ಆಯಾ ಕುಲದ ಮುಖಂಡರನ್ನು ಚಾವಡಿಗೆ ಕರೆಸಿ ನಾಡಪ್ರಭುಗಳ ಸಮ್ಮುಖದಲ್ಲಿಯೇ ಅವರ ಹೇಳಿಕೆಗಳನ್ನು ಕೇಳಿ ತಿಳಿದು ತೀರ್ಮಾನಗಳನ್ನು ಕೊಡಲಾಗುತ್ತಿತ್ತು.[42]

ಆ ಕಾಲದ ಜಾತಿ ಸಂಘರ್ಷದ ಉದಾಹರಣೆಯೊಂದಿದೆ. ಕನಕಪುರ ತಾಲ್ಲೂಕಿನ ಶಾಸನವೊಂದರಲ್ಲಿ ಭೂತನಹಳ್ಳಿಯ ಚೆನ್ನಿಗರಾಯ ದೇವಸ್ಥಾನದ ಮುಂಭಾಗದಲ್ಲಿ ಕ್ಷೌರಿಕರು

ತಮ್ಮ ವಾಲಗಕ್ಕೆ ಮತ್ತು ಕೊರಳಿಗೆ ಮಲ್ಲಿಗೆ ಹೂವನ್ನು ಸುತ್ತಿಕೊಂಡು ವಾದ್ಯ ನುಡಿಸುತ್ತಿದ್ದರು. ಆ ಸ್ಥಳಕ್ಕೆ ಬಂದ ಮಡಿವಾಳರ ಚೆನ್ನಶೆಟ್ಟಿ ಎಂಬಾತನು ವಾಲಗಕ್ಕೆ ಮತ್ತು ಕೊರಳಿಗೆ ಹೂ ಮುಡಿಸಿಕೊಂಡಿರುವುದಕ್ಕೆ ಆಕ್ಷೇಪ ಎತ್ತಿದನು. ಅದಕ್ಕೆ ಪ್ರತಿರೋಧ ತೋರಿದ ಕ್ಷೌರಿಕರು ಹೂ ಮುಡಿಯ ಬಾರದೆಂದು ಎಲ್ಲಿದೆ ಎಂದರು. ಈ ವಾದ ನಾಡಸಭೆಯ ಮುಂದೆ ಹೋಯಿತು. ಚೆನ್ನಶೆಟ್ಟಿಯು "ಮಲ್ಲಿಗೆ ಹೂ ನಮ್ಮ ತಾಯಿಗೆ ಸಲ್ಲುವಂತಹದು, ಅದನ್ನು ಹಜಾಮರು ಮುಡಿಯಕೂಡದು. ಇದು ನಮ್ಮ ಸಂಪ್ರದಾಯಕ್ಕೆ ವ್ಯತಿರಿಕ್ತವಾದುದು" ಎಂದು ಪ್ರತಿಪಾದಿಸಿದ. ಅದಕ್ಕೆ ಕ್ಷೌರಿಕರ ವಿವರಣೆ ಕೇಳಿದಾಗ ರಾಂಪುರಿಯ ವೆಂಕಟಾಚಲನೆಂಬುವನು "ಮಲ್ಲಿಗೆ ಹೂ ನಮಗೆ ಸಲ್ಲುತ್ತದೆ. ಅದರ ಸಂಬಂಧ ಕಂಚಿಯ ಕಡತಗಳಲ್ಲಿ ದಾಖಲೆಗಳಿವೆ" ಎಂದ. ಎರಡೂ ವಾದಗಳನ್ನು ಕೇಳಿದ ದೇಶನಾಡಿನವರು ತೀರ್ಮಾನವನ್ನು ಕಂಚಿಯ ಮೇಲ್ಮನವಿಗೆ ಸಲ್ಲಿಸುತ್ತಾರೆ. ಕಂಚಿಗೆ ತೆರಳುವ ಮುನ್ನ ಎರಡೂ ಕುಲದವರು ಒಪ್ಪಂದವೊಂದಕ್ಕೆ ಬದ್ಧರಾಗುತ್ತಾರೆ. ಯಾರ ವಿರುದ್ಧ ತೀರ್ಮಾನ ಬರುತ್ತದೆಯೊ ಅವರು ದೇಶ-ನಾಡಿನವರಿಗೂ ಕುಲಕ್ಕೂ ತಪ್ಪು ದಂಡವನ್ನು ಕಟ್ಟಬೇಕೆಂದು ಮುಚ್ಚಳಿಕೆ ಪತ್ರವನ್ನು ಬರೆದು ಕುಲದ ಮುಖಂಡರು ಸಹಿ ಮಾಡುತ್ತಾರೆ. ನಂತರ ಕಂಚಿಯಲ್ಲಿ ಕಂಚಿಗ್ರಾಮದ ಅಧಿಪತಿಗಳು ಕರಣಿಕರು, ದೇಸದವರು, ನಾಡಿನವರು, ಮೈಸೂರಿನ ಮಹಾಶಾಸ್ತ್ರಿಗಳು ವರದಯ್ಯಂಗಾರ್ ಮುಂತಾದ ಪ್ರಮುಖರ ಸಮ್ಮುಖದಲ್ಲಿ ವಾದ ಪ್ರತಿವಾದಗಳು ನಡೆದವು. ನಿಸಿಕಾಂಬದ ದೇವಾಸ್ಥಾನದಲ್ಲಿ ಶಾಸನದ ಪ್ರತಿಯನ್ನು ತೆಗೆಯಿಸಿ ತೀರ್ಪು ನೀಡುತ್ತಾರೆ. ಕಂಚಿ ಗ್ರಾಮಾಧಿಪತಿಗಳು ಶಾಸನದ ಪ್ರತಿ ತೆಗೆಯಲು ಎರಡೂ ಬಣಗಳಿಂದ ತಲಾ 20-20 ರೂಗಳನ್ನು ಪಡೆಯುವರು. ನಂತರ ಶಾಸನ ಪ್ರತಿಯನ್ನು ತೆಗೆದು ಓದಿದರು. ಅದರ ಪ್ರಕಾರ ತೀರ್ಪನ್ನು ಮಡಿವಾಳರ ಪರವಾಗಿ ನೀಡಿದರು. ತೀರ್ಪಿನ ಹಿನ್ನೆಲೆಯಲ್ಲಿ ಕ್ಷೌರಿಕರು ತಮ್ಮ ವಿರುದ್ಧ ಮಂಡಿತವಾದ ನ್ಯಾಯಕ್ಕೆ ಬದ್ದರಾಗಿ ದೇಶನಾಡಿನವರಿಗೆ ಮತ್ತು ಕುಲಕ್ಕೆ ದಂಡಕಟ್ಟುತ್ತಾರೆ. ಇನ್ನುಮುಂದೆ ಮಲ್ಲಿಗೆ ಹೂ ಮುಡಿಯುವುದಿಲ್ಲವೆಂದು ಮುಚ್ಚಳಿಕೆ ಬರೆದುಕೊಡುತ್ತಾರೆ. ಇಡೀ ಪ್ರಕರಣವನ್ನು ವಿವರಿಸಿದ ಹಾಗೂ ತೀರ್ಪಿನ ಆದೇಶವನ್ನು ದಾಖಲಿಸಿದ ಶಾಸನವೊಂದು ಸಿದ್ಧವಾಗುತ್ತದೆ. ಅದರ ಪ್ರತಿಗಳನ್ನು ಉಭಯ ಜಾತಿಗಳ ಮುಖಂಡರಿಗೂ, ಮತ್ತೊಂದು ನಕಲನ್ನು ದೊಡ್ಡ ಪೇಟೆಯ ಮುಖ್ಯಸ್ಥರ ಬಳಿಯಲ್ಲಿ ಇರಿಸಲಾಗುವುದು. ತೀರ್ಮಾನವು ಯಲಹಂಕವೂ ಸೇರಿದಂತೆ ಸೀಗಲ್ ನಾಡಿನ ಸುತ್ತಮುತ್ತಲಿನ ಪ್ರದೇಶಗಳಿಗೂ ಅನ್ವಯವಾಗುವುದೆಂದು ತಿಳಿಸಲಾಗುತ್ತದೆ.[43]

ಸಾಮಾನ್ಯವಾಗಿ ದೇವಾಲಯಗಳು ಮತ್ತು ಕೆಂಪೇಗೌಡ ಹಜಾರಗಳು ನ್ಯಾಯಾತೀರ್ಮಾನದ ಕೇಂದ್ರಗಳಾಗಿದ್ದವು. ವಿಜಯನಗರ ಪೂರ್ವದ ಸನ್ನಿವೇಶವನ್ನು

ಗಮನಿಸುತ್ತಿರುವಾಗ ರಾಮಾನುಜ ಪೂರ್ವ ದೇವಾಲಯ ವ್ಯವಸ್ಥೆಯಲ್ಲಿ ಪೂಜೆ ಪುನಸ್ಕಾರಗಳಿಗೆ ಹೆಚ್ಚಿನ ಆದ್ಯತೆಗಳಿದ್ದವು. ಆದರೆ ರಾಮಾನುಜರ ಪ್ರವೇಶವಾದೊಡನೆಯೇ ದೇವಾಲಯಗಳ ಸ್ವರೂಪದಲ್ಲಿಯೂ ಹೊಸ ಸೇರ್ಪಡೆಗಳಾಗಲು ಆರಂಭವಾದವು. ಬಹುತೇಕ ಪಾಳೆಯಗಾರರು ವಿಜಯನಗರದ ದೇವಾಲಯವ ವ್ಯವಸ್ಥೆಯನ್ನು ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಬಹಳ ಶ್ರದ್ಧಾಭಕ್ತಿಗಳಿಂದ ಅಳವಡಿಸಿಕೊಳ್ಳಲು ಸಾಧ್ಯವಾಯಿತು. ಹೀಗೆ ದೇವಾಲಯವು ಸಾಮಾಜಿಕವಾಗಿ ವಿಸ್ತರಿಸಿಕೊಳ್ಳುವತ್ತ ದೇವಾಲಯಗಳ ರಚನೆಗಳು ಹೆಚ್ಚುವರಿಯಾಗಿ ರೂಪುಗೊಳ್ಳಲು ಆರಂಭವಾಯಿತು. ಇಂತಹ ಸಂದರ್ಭದಲ್ಲಿ ದೇವಾಲಯಗಳ ಬಹಳ ಮುಖ್ಯವಾದ ಪ್ರಾಂಗಣವನ್ನು ನ್ಯಾಯಾಲಯದಂತೆ ನಿರ್ಮಿಸುವ ಮೂಲಕ ಎರಡು ರೀತಿಯ ವಿಶೇಷಗಳನ್ನು ನಾಡಪ್ರಭುಗಳ ಕಾಲದಲ್ಲಿ ಅಳವಡಿಸಲಾಯಿತು.

ಮೊದಲನೆಯದು, ದೇವಾಲಯದಲ್ಲಿಯೇ ನ್ಯಾಯಾಲಯವೂ ರೂಪುಗೊಳ್ಳುವುದರಿಂದ ನ್ಯಾಯವ್ಯವಸ್ಥೆಗೆ ಒಂದು ರೀತಿಯ ನೈತಿಕ ಬಲವೂ ಸಿಗುವಂತಾಯಿತು. ಕಾರಣ, ದೇವರ ಎದುರಿಗೆ ಸಾಕ್ಷಿಗಳು ಸುಳ್ಳು ಹೇಳುವ ಪ್ರಮೇಯವಿರುತ್ತಿರಲಿಲ್ಲ. ಯಾರಿಗೂ ಹೆದರದ ವ್ಯಕ್ತಿಗಳು ದೇವರಿಗಂತೂ ಹೆದರುತ್ತಿದ್ದ ಕಾಲವದು. ಹಾಗಾಗಿ ದೇವಾಯಲದಲ್ಲಿ ನ್ಯಾಯ ವ್ಯವಸ್ಥೆಯನ್ನು ಸುಲಭವಾಗಿ ನಿರ್ವಹಿಸುವ ಜಾಗವಾದ್ದರಿಂದ ಇಲ್ಲಿ ಹೆಚ್ಚಿನ ಅನುಕೂಲಗಳು ಪ್ರಾಪ್ತವಾದವು. ಇನ್ನೊಂದು ದೇವಾಲಯವನ್ನು ಈ ದೆಸೆಯಿಂದ ಮುಕ್ತಪ್ರವೇಶ ಯೋಜನೆಗಳಿಗೂ ಅನುವು ಮಾಡಿಕೊಡುವ ಅವಕಾಶವು ಪ್ರಾಪ್ತವಾಯಿತು. ಕೆಲವು ಶಾಸನಗಳಲ್ಲಿ ಹತ್ತೆಂಟು ಸಮುದಾಯಗಳು ಈ ನ್ಯಾಯ ವ್ಯವಸ್ಥೆಗೆ ಸಾಕ್ಷಿಗಳಾಗಿದ್ದ ಸಂಗತಿಯನ್ನು ನಾವು ಗಮನಿಸಬಹುದು. ಇವುಗಳು ಎಷ್ಟು ಪ್ರಸಿದ್ಧವಾದವು ಎಂದರೆ ಕ್ರಮೇಣ ಅನೇಕ ಕಡೆ ಇವುಗಳನ್ನು ಚಾವಡಿಗಳೆಂದು ಗುರುತಿಸಲಾಯಿತು. ಕೆಂಪೇಗೌಡರ ಹಜಾರಗಳೆಂದು ಜನ ಈಗಲೂ ನೆನಪಿಸಿಕೊಳ್ಳುವುದು ಇಂತಹ ಪರಂಪರೆಯ ಸಮರ್ಥ ಪ್ರತಿನಿಧೀಕರಣ ಎಂದು ತಿಳಿಯಬಹುದು. ಹೀಗಾಗಿ ಶಿವಗಂಗೆಯ ಕೆಂಪೇಗೌಡರ ಹಜಾರ, ಮಾಗಡಿಯ ಕೆಂಪೇಗೌಡರ ಹಜಾರಗಳು ಹೆಚ್ಚು ಜನಪ್ರಿಯವಾದವು. ಹೊಸ ಸಂಗತಿಯೊಂದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳುವುದಾದರೆ ಕೆಂಪೇಗೌಡರ ಕಾಲದಲ್ಲಿ ಕಲ್ಲಿನ ಛತ್ರಿಗಳನ್ನು ಕೆಲವೆಡೆ ಹಾಕಿಸಲಾಗಿದೆ. ಉದಾಹರಣೆಗೆ ನಂದಿಯ ಭೋಗನಂದೀಶ್ವರ ದೇವಾಲಯದ ಆವರಣ, ಬೆಂಗಳೂರಿನ ಹರಿಹರಗುಡ್ಡದ ಮೇಲಿರುವ ಹರಿಹರೇಶ್ವರ ದೇವಾಲಯದ ಪಾರ್ಶ್ವದಲ್ಲಿ, ಕೋಲಾರದ ಅಂತರಗಂಗೆಯ ಬೆಟ್ಟದ ಮೇಲೆ. ಬಹುಶಃ ಇವುಗಳೆಲ್ಲವೂ ಕೆಂಪೇಗೌಡರ ಕಾಲದ ನ್ಯಾಯ ತೀರ್ಮಾನದ ಸ್ಥಾನಗಳೂ ಆಗಿದ್ದವು. ಏಕೆಂದರೆ ಏಕಛತ್ರದಿಂದ ಆಳುತ್ತಿದ್ದ ಎಂಬ ಸಾಂಪ್ರದಾಯಿಕ ಅಭಿಪ್ರಾಯಕ್ಕೆ ಇದು

ಸಹವರ್ತಿಯಾದ ಚಿಂತನೆಯಾಗಿದೆ. ಈ ಕಲ್ಲು ನ್ಯಾಯ ವ್ಯವಸ್ಥೆಯ ಬಹಳ ಮುಖ್ಯ ಸಂಕೇತವಾಗಿರಬಹುದು. ಇದು ಶಿವಗಂಗೆಯಲ್ಲೂ ಮಾಗಡಿಯಲ್ಲೂ ಇದ್ದಿರಬಹುದು. ಕ್ರಮೇಣ ನಾಶವಾಗಿರಲೂ ಬಹುದು. ಅಥವಾ ಈ ಮೇಲ್ಕಂಡ ಜಾಗಗಳ ನ್ಯಾಯಾಲಯಗಳು ಮೇಲ್ಮಟ್ಟದ ನ್ಯಾಯಾಲಯಗಳಾಗಿದ್ದು ಉಳಿದಂತೆ ದೇವಾಲಯಗಳ ನ್ಯಾಯಾಲಯಗಳು ಪ್ರಾಥಮಿಕ ನ್ಯಾಯಾಲಯಗಳಾಗಿಯೂ ವರ್ತಿಸಿರಬಹುದು.

## 4.2 ಆರ್ಥಿಕ ವ್ಯವಸ್ಥೆ

ಯಲಹಂಕ ನಾಡು ದಕ್ಷಿಣ ಭಾರತದಲ್ಲಿಯೇ ಬಹು ಆಯಕಟ್ಟಿನ ಸ್ಥಳದಲ್ಲಿ ನೆಲೆಗೊಂಡಿತ್ತು. ಅದರ ರಾಜಧಾನಿಯಾದ ಬೆಂಗಳೂರು ದಕ್ಷಿಣ ಭಾರತದ ಭೂಮಧ್ಯ ಭಾಗದಲ್ಲಿ ನೆಲೆಗೊಂಡಿದೆ. ಪಶ್ಚಿಮ ಕರಾವಳಿಯಲ್ಲಿ ಬರುವ ಮಂಗಳೂರು ಮತ್ತು ಪೂರ್ವ ಕರಾವಳಿಯಲ್ಲಿ ಬರುವ ಚನ್ನೈ ನಡುವೆ ಸರಳ ರೇಖೆಯನ್ನು ಎಳೆದರೆ ನಡುಮಧ್ಯದಲ್ಲಿ ಬೆಂಗಳೂರು ನೆಲೆಗೊಂಡಿದೆ. ಬೆಂಗಳೂರು ನೆಲೆಗೊಂಡಿರುವ ಪ್ರದೇಶ ಸಮುದ್ರಮಟ್ಟದಿಂದ ಸರಾಸರಿ 920ಮೀ. ಇದೆ. ಜೊತೆಗೆ ಒಳನಾಡಿಗೆ ಹೋಗುವ ಯಾವುದೇ ಮಾರ್ಗಗಳಾದರೂ ಕೂಡ ಬೆಂಗಳೂರು ಮೂಲಕವೇ ಸಾಗಬೇಕು.

16ನೆಯ ಶತಮಾನದ ಆರಂಭದಲ್ಲಿ ಯೂರೋಪಿಯನ್ನರ ಆಗಮನವಾದಂತೆ ಒಳನಾಡಿನ ವ್ಯಾಪಾರ ವಹಿವಾಟು ತೀವ್ರಗೊಂಡಿತು. ಇದರಿಂದಾಗಿ ಬೆಂಗಳೂರು ಮಾರ್ಗವಾಗಿ ಸಂಚರಿಸುವ ವಾಣಿಜ್ಯ ಮತ್ತು ವ್ಯಾಪಾರದ ಮೇಲೆ ನಿಯಂತ್ರಣ ಸಾಧಿಸಿದಂತೆ ಯಲಹಂಕ ನಾಡಪ್ರಭುಗಳ ಆದಾಯದ ಮೂಲ ಕೂಡ ವೃದ್ಧಿಸಿತು. ಇದರಿಂದಾಗಿ ಆಯಕಟ್ಟಿನ ಮತ್ತು ವ್ಯಾಪಾರ ಮಾರ್ಗಗಳಲ್ಲಿ ಕೋಟೆಗಳನ್ನು ನಿರ್ಮಿಸಿ, ಸೈನ್ಯವನ್ನು ನಿಯೋಜಿಸಿ, ವ್ಯಾಪಾರಿಗಳಿಗೆ ರಕ್ಷಣೆ ಕೊಡಲಾರಂಭಿಸಿದರು. ಇದರಿಂದ ಹೆಚ್ಚಿನ ಸುಂಕ ರೂಪದ ಆದಾಯ ಹರಿದು ಬರಲಾರಂಭಿಸಿತು. ಇದು ಆದಾಯದ ಒಂದು ಭಾಗವಾದರೆ, ಮತ್ತೊಂದು ಕೃಷಿ ಮೂಲದಿಂದ ಸಂಗ್ರಹವಾಗುತ್ತಿತ್ತು. ಆದ್ದರಿಂದ ಕೃಷಿಯ ವಿಸ್ತರಣೆಗೆ ಹೆಚ್ಚಿನ ಆದ್ಯತೆ ನೀಡಿದರು. ವಿಶಾಲವಾದ ಕೆರೆಗಳನ್ನು ನಿರ್ಮಿಸಿ, ನೀರಾವರಿ ಅನುಕೂಲಗಳನ್ನು ಕಲ್ಪಿಸಿದರು. ತಿಗಳದಂತಹ ಕೃಷಿಕ ಮತ್ತು ತೋಟಗಾರಿಕ ಸಮುದಾಯಗಳನ್ನು ತಂದು ಬೆಂಗಳೂರು, ಮಾಗಡಿ ಪರಿಸರದಲ್ಲಿ ನೆಲೆಗೊಳಿಸಿದರು. ಕೃಷಿಯ ಉತ್ಪಾದನೆ ಹೆಚ್ಚಾದಂತೆ ರಾಜ್ಯಕ್ಕೂ ತೆರಿಗೆ ರೂಪದ ಆದಾಯ ಹೇರಳ ಪ್ರಮಾಣದಲ್ಲಿ ಹರಿದು ಬರುತ್ತಿತ್ತು.

### 4.2.1 ಬೆಂಗಳೂರು ನಗರ ನಿರ್ಮಾಣ

ಕೆಂಪೇಗೌಡನು ತನ್ನ ರಾಜ್ಯವಾದ ಯಲಹಂಕ ನಾಡಿನ ಗ್ರಾಮಗಳ ಸ್ಥಿತಿಗತಿಗಳನ್ನು ಪರಿಶೀಲಿಸಲು ಪ್ರಯಾಣ ಮಾಡುತ್ತಿದ್ದಾಗ ಯಲಹಂಕಾಗೆ 3 ಕೋಶ ದೂರಲ್ಲಿ ಹಳೆಯ ಬೆಂಗಳೂರಿಗೆ ಒಂದು ಕೋಶ ದೂರದ ಶಿವನಸಮುದ್ರವೆಂಬ ಗ್ರಾಮಕ್ಕೆ ಬಂದನು. ಆ ಪ್ರದೇಶವು ಕೋಟೆಯನ್ನು ನಗರವನ್ನೂ ಕಟ್ಟಲು ಪ್ರಶಸ್ತ್ಯವೆಂದು ತಿಳಿದು ಆಸ್ಥಾನದಲ್ಲಿರುವ ತನ್ನ ಹಿತೈಷಿಗಳ ಮೂಲಕ ಅಚ್ಯುತರಾಯನ ಅನುಮತಿ ಪಡೆದು ಒಂದು ಕೋಟೆ ಮತ್ತು ಪಟ್ಟಣವನ್ನು ನಿರ್ಮಿಸಿ, ಅಲ್ಲಿ ತನ್ನ ರಾಜಧಾನಿಯನ್ನು ಸ್ಥಾಪಿಸುವ ಉದ್ದೇಶದಿಂದ ಕ್ರಿ.ಶ. 1538 ಜನವರಿ 14 ರಂದು ಕಾಡನ್ನು ಕಡಿದು ಮಣ್ಣಿನ ಕೋಟೆಯ ತಳಪಾಯವನ್ನು ಪ್ರಾರಂಭಿಸಿ, 4 ಬತೇರಿಗಳುಳ್ಳ ಕೋಟೆಯನ್ನು ನಿರ್ಮಾಣ ಮಾಡಿಸಿದನು. ಕೆಂಪೇಗೌಡನು ತಾನು ನಿರ್ಮಿಸಿದ ಹೊಸ ಪಟ್ಟಣಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಜನರು ಬಂದು ನೆಲೆಸಲು ಪ್ರೋತ್ಸಾಹಿಸಿದನು. ಈ ಪಟ್ಟಣವನ್ನು ತನ್ನ ರಾಜಧಾನಿಯಾಗಿಯೂ ಮಾಡಿಕೊಂಡನು.[44]

ಇಮ್ಮಡಿ ಕೆಂಪೇಗೌಡನು ಕೂಡ ತನ್ನ ತಂದೆಯಂತೆ ಪೇಟೆ–ಪಟ್ಟಣಗಳ ನಿರ್ಮಾಣ ಮತ್ತು ಕೃಷಿಗೆ ಪೂರಕವಾದ ಕೆರೆ–ಕಟ್ಟೆಗಳನ್ನು ನಿರ್ಮಿಸುವುದರಲ್ಲಿ ಆಸಕ್ತಿಯನ್ನು ಹೊಂದಿದ್ದನು. ಇದರಿಂದಾಗಿ ಕೃಷಿ ವಿಸ್ತರಿಸಿ, ಇಳುವರಿ ಹೆಚ್ಚಾಗಿ ವ್ಯಾಪಾರ–ವಾಣಿಜ್ಯಕ್ಕೆ ಆದ್ಯತೆ ನೀಡಿದನು. ಇದಕ್ಕೆ ನಿದರ್ಶನವಾಗಿ ಬಳ್ಳಾಪುರ ಪೇಟೆಯ ರಂಗನಾಥ ದೇವಾಲಯದಲ್ಲಿರುವ ತೆಲುಗು ಶಾಸನದಲ್ಲಿ ಬೆಂಗಳೂರು ಯಾವ ಯಾವ ಪ್ರದೇಶಗಳೊಂದಿಗೆ ವ್ಯಾಪಾರದ ಸಂಬಂಧವನ್ನು ಹೊಂದಿತ್ತೆಂದು ತಿಳಿಯಬಹುದು. ಮುಖ್ಯವಾಗಿ, ಐಯ್ಯಾವಳಿಗಳಲ್ಲಿ ಪ್ರಮುಖರಾದ ಪೆಕ್ಕಂಡ, ಪೆನುಗೊಂಡ, ಬೆಂಗಳೂರು, ಗೂಳೂರು, ಚಿಕ್ಕನಾಯಕನಹಳ್ಳಿ, ಬಳ್ಳಾಪುರ, ತಾಟಪತ್ರಿ. ಚಂದ್ರಗಿರಿ, ಕೋಲಾರ, ಹೊಸಕೋಟೆ, ಕಾವೇರಿಪಟ್ಟಣ, ರಾಯಕೋಟೆ, ನರಸಿಂಹಪುರ, ಹೆಬ್ಬೂರು, ಬೇಲೂರು ಮುಂತಾದ ದೇಶ ವಿದೇಶಗಳಿಂದ ಬಂದಿದ್ದ ಸಮಸ್ತ ವರ್ತಕರು ಸೇರಿ, ದೇವಾಲಯದ ಪಡಿತರ ಸೇವೆಗಾಗಿ ಮತ್ತು ಪೂಜೆ, ಉತ್ಸವವನ್ನು ಮಾಡಲು ದಾನ ನೀಡಿದರು.[45]

ಕೆಂಪೇಗೌಡನ ಕಾಲದಲ್ಲಿ ಬೆಂಗಳೂರು ಕೃಷಿ ಉತ್ಪನ್ನಗಳ ಆರ್ಥಿಕತೆಯ ಪ್ರಮುಖ ಕೇಂದ್ರ ಮತ್ತು ಮಾರುಕಟ್ಟೆಯಾಗಿತ್ತು. ಈ ನಿಟ್ಟಿನಲ್ಲಿ ವಿವಿಧ ಪ್ರದೇಶಗಳಿಂದ ಬರುತ್ತಿದ್ದ ವಿವಿಧ ವಿನಿಮಯ ವರ್ತಕ ಸಮುದಾಯದವರಿಗೆ ಬೆಂಗಳೂರಿನಲ್ಲಿ ನಿರ್ಮಿಸಿದ್ದ ದೇವಾಲಯಗಳು, ಮಠಗಳು ವರ್ತಕರು ಮತ್ತು ವ್ಯಾಪಾರಿಗಳ ವಸ್ತುಗಳಿಗೆ ಉಗ್ರಾಣವಾಗಿ, ತಂಗುದಾಣವಾಗಿ ಮತ್ತು ಅನ್ನದಾಸೋಹ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಬೆಂಗಳೂರಿಗೆ ಬರುವ ವರ್ತಕರು

ಮತ್ತು ಸ್ಥಳೀಯ ವ್ಯಾಪಾರಿಗಳು ತಾವು ಮಾರಾಟ ಮಾಡಿ ಗಳಿಸಿದ ಹಣದಲ್ಲಿ ಒಂದು ಪಾಲನ್ನೊ ಅಥವಾ ತಮ್ಮ ಮನಸಂತೋಷಕ್ಕೆ ಅನುಸಾರವಾಗಿ ದೇವರ ದೀಪಾರಾಧನೆಗೆ ಮತ್ತು ಪ್ರಸಾದ ವಿನಿಯೋಗಕ್ಕಾಗಿ ಭೂದಾನ ನೀಡಿದರು.[46]

ಬೆಂಗಳೂರು ಕ್ರಿ.ಶ. ಆರಂಭ ಕಾಲದಿಂದಲೂ ಪ್ರಮುಖ ವ್ಯಾಪಾರಿ ಮಾರ್ಗದಲ್ಲಿದ್ದ ಆಯಕಟ್ಟಿನ ನೆಲೆಯಾಗಿತ್ತು. ಆ ಕಾರಣಕ್ಕಾಗಿ ಬೆಂಗಳೂರು ಪರಿಸರದಲ್ಲಿ ರೋಮಿನ ನಾಣ್ಯಗಳು ದೊರೆತಿವೆ. ಪ್ರಾಚೀನ ಕಾಲದಿಂದಲೂ ಬೆಂಗಳೂರು ಹತ್ತಿ ಮತ್ತು ರೇಷ್ಮೇ ಬಟ್ಟೆಗಳ ಉದ್ಯಮವಾಗಿ ಬೆಳೆದಿತ್ತೆಂದು ಪಿ.ವಿ. ಕೃಷ್ಣಮೂರ್ತಿ ಅವರು ಅಭಿಪ್ರಾಯ ಪಡುತ್ತಾರೆ.[47] ಬೆಂಗಳೂರಿನಲ್ಲಿ ಈ ಉದ್ಯಮಕ್ಕೆ ಸಂಬಂಧಿಸಿದಂತೆ ಪಟ್ಟೆಗಾರರು, ದೇವಾಂಗದವರು, ಖತ್ರಿಯರು, ನೀಲಿಗರು, ರಂಗಿನವರು, ಸಮಯಸಾಲೆ ಮತ್ತು ಪದ್ಮಸಾಲೆಯವರು, ತೊಗಟರು ಮತ್ತು ಮಗ್ಗದ ಹೊಲೆಯರೇ ಮುಂತಾದವರು ವಿಶೇಷವಾಗಿ ಅಲ್ಲಿ ನೆಲಸಿದ್ದರು. ಇವರಿಗೆ ಅಗತ್ಯವಿದ್ದ ಕಚ್ಚಾಸಾಮಾಗ್ರಿಗಳನ್ನು ಪೂರೈಸಲು ಅರಳೇ ಪೇಟೆ ಮುಂತಾದ ಪೇಟೆಗಳನ್ನು ಬೆಂಗಳೂರು ನಿರ್ಮಾಣ ಕಾಲದಲ್ಲಿ ಕೆಂಪೇಗೌಡ ಕಲ್ಪಿಸಿದ್ದನೆಂದು ಹೇಳಬಹುದು. ಸಾಂಪ್ರದಾಯಿಕ ನೆಯ್ಗೆ ಮಾಡುವ ದೇವಾಂಗದವರೂ ಹೆಚ್ಚಿನ ಸಂಖ್ಯೆಯಲ್ಲಿ ಬೆಂಗಳೂರು ಪರಿಸರದಲ್ಲಿ ಕಂಡುಬರುತ್ತಾರೆ. ಅವರು ದೇವಾಂಗಪೇಟೆಯಲ್ಲಿ ನೆಲೆಸಿದ್ದರು. ರೇಷ್ಮೆ ಮತ್ತು ಕಲಾಬತ್ತಿನ ಕೆಲಸದಲ್ಲಿ ನಿಪುಣರಾದ ಗುಜರಾತಿನ ಖತ್ರಿಗಳು ಮೌಲಿಕ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಸಮಯಸಾಲೆ ಮತ್ತು ಪದ್ಮಸಾಲೆಯರು ಬಟ್ಟೆಗಳನ್ನು ಹೊಲೆಯುವವರಾಗಿದ್ದರು. ತೊಗಟರು ವಿಶೇಷವಾದ ದಪ್ಪನಾದ ಮತ್ತು ದೀರ್ಘಕಾಲ ಬಾಳಿಕೆ ಬರುವ ಬಟ್ಟೆಗಳನ್ನು ನೇಯುತ್ತಿದ್ದರು. ಮಗ್ಗದ ಹೊಲೆಯರೆಂಬ ಮತ್ತೊಂದು ಕೆಳವರ್ಗದ ಜನರೂ ಬಟ್ಟೆಯ ಉತ್ಪಾದನೆಯಲ್ಲಿ ತೊಡಗಿದ್ದರು. ಒರಟಾದ ಮತ್ತು ಗಟ್ಟಿಯಾದ ಪುರುಷರ ಮೇಲಿನ ಮತ್ತು ಕೆಳಗಿನ ಉಡುಪುಗಳನ್ನು ಇವರು ವಿಶೇಷವಾಗಿ ತಯಾರಿಸುತ್ತಿದ್ದರು.[48] ಮಾದಿಗರು ಚರ್ಮದ ಉತ್ಪನ್ನಗಳನ್ನು ತಯಾರಿಸುವವರಾಗಿದ್ದರೆ, ಗೋಣಿಗರು ಜಂಡು ಜಾತಿಯ ಹುಲ್ಲನ್ನು ತಂದು ನೀರಿನಲ್ಲಿ ನೆನೆಸಿ, ಸಂಸ್ಕರಿಸಿ, ಗೋಣಿಚೀಲವನ್ನು ಉತ್ಪಾದಿಸುತ್ತಿದ್ದರು. ಜ್ಯೋತಿಫಣ ಅಥವಾ ನಗರದ ಗಾಣಿಗರು ಎಣ್ಣೆ ತಯಾರಿಕೆಯಲ್ಲಿ ನಿರತರಾಗಿದ್ದರು. ವಿವಿಧ ಬಗೆಯ ಎಣ್ಣೆಯನ್ನು ಗಾಣದಿಂದ ತೆಗೆಯುತ್ತಿದ್ದರು. ಬಿದಿರಿನ ವಿವಿಧ ಪ್ರಕಾರದ ಬುಟ್ಟಿ, ಮಂಕ್ಕರಿ, ಮೊರ ಮುಂತಾದ ವಸ್ತುಗಳನ್ನು ಕೊರಮರು, ಮೇದರು ಹೆಣೆಯುತ್ತಿದ್ದರು. ಜಿನಿಗರು ಚಿತ್ರಕಾರರಾಗಿದ್ದರು. ಅದೇ ರೀತಿ ಪಾಂಚಾಳರ ಗುಂಪಿಗೆ ಸೇರಿದ ಚಿನಿವಾರರು ಚಿನ್ನಬೆಳ್ಳಿಯ ಕೆಲಸಗಳನ್ನು, ಕಮ್ಮಾರರು ತಾಮ್ರ, ಕಬ್ಬಿಣದ ಕೆಲಸವನ್ನು ಮಾಡುತ್ತಿದ್ದರು. ಪಳ್ಳಿಗರೆಯ ತಮಿಳು ಮೂಲದ ತಿಗಳರು ಬೆಂಗಳೂರು ಪರಿಸರದಲ್ಲಿ

ವ್ಯಾಪಕವಾಗಿ ನೆಲೆಸಿದ್ದರು. ಶ್ರಮಜೀವಿಗಳಾದ ಇವರು ಪುಟ್ಟಪುಟ್ಟ ತೋಟಗಳಲ್ಲಿ ಸೊಪ್ಪು ತರಕಾರಿಗಳನ್ನು ಬೆಳೆದು ಸ್ಥಳೀಯರಿಗೆ ಮಾರುವುದರ ಮೂಲಕ ಸ್ಥಳೀಯರ ಅಗತ್ಯಗೆಯನ್ನು ಪೂರೈಸುತ್ತಿದ್ದರು.[49] ಅದೇ ರೀತಿ ಜೈನ, ತೆಲುಗು ಬಣಜಿಗರೂ ಇದ್ದರು. ಇವರು ಕಚ್ಚಾ ಹತ್ತಿ, ರೇಷ್ಮೆ ಮುಂತಾದ ವಸ್ತುಗಳ ಮಾರಾಟದ ವಹಿವಾಟಿನಲ್ಲಿ ಸಕ್ರಿಯರಾಗಿದ್ದರು. ಉಪ್ಪಿನ ಉತ್ಪಾದನೆಯಲ್ಲಿ ಉಪ್ಪಾರರು, ಒಕ್ಕಲಿಗ, ರೆಡ್ಡಿ, ಸಾದರ ಮುಂತಾದ ಕೃಷಿಕ ಸಮುದಾಯದವರು ಬೆಂಗಳೂರಿನಲ್ಲಿ ನೆಲೆಸಿದ್ದರು. ಬೆಂಗಳೂರಿನ ನಗರೀಕರಣದ ಸಂದರ್ಭದಲ್ಲಿ ಅನೇಕ ವೃತ್ತಿಯವರು ಹೊರಗಿನಿಂದ ಬಂದು ಇಲ್ಲಿ ನೆಲೆಸಿದರು.

### 4.2.2 ಹೊಸ ಆರ್ಥಿಕ ಪರಿಕ್ರಮ

ಬೆಂಗಳೂರಿನಂತಹ ಸಮೃದ್ಧ ಜಲಸಂಪತ್ತುಳ್ಳ ಮತ್ತು ಫಲವತ್ತಾದ ಮೈದಾನ ಪ್ರದೇಶವಿದ್ದ ಪ್ರದೇಶದಿಂದ ಹಳ್ಳಕೊಳ್ಳ ಕಣಿವೆಯಿಂದ ಕೂಡಿದೆ ಮಾಗಡಿಯ ಕಡೆಗೆ ಬಂದರು. ಹೀಗೆ ಬಂದವರು ದೊಡ್ಡ ದೊಡ್ಡ ವಾಣಿಜ್ಯ ನಗರವನ್ನು ಕಟ್ಟುವ ಕನಸು ಕಾಣದೆ ಜನರ ಕಲ್ಯಾಣಕ್ಕಾಗಿ ಬೇಕಾದ ಕ್ರಮಗಳನ್ನು ಅನುಸರಿಸಿದರು. ಏಕೆಂದರೆ, ವಾಣಿಜ್ಯ ನಗರಗಳನ್ನು ನಿರ್ಮಿಸಿದರೆ ಮತ್ತೆ ಅವುಗಳು ಅನ್ಯರ ಆಕ್ರಮಣಕ್ಕೆ ತುತ್ತಾಗುವ ಸಂಭವವಿರುತ್ತವೆ. ದೊಡ್ಡ ಸೈನ್ಯಗಳನ್ನು ಎದುರಿಸುವಷ್ಟು ಬಲಿಷ್ಠ ಸೈನ್ಯವನ್ನು ನಿರ್ವಹಿಸುವ ಸಾಮರ್ಥ್ಯ ಮತ್ತು ಸಂಪನ್ಮೂಲಗಳು ಇಲ್ಲದ ಕಾರಣ ಯಲಹಂಕ ನಾಡಪ್ರಭುಗಳು ಕೃಷಿಯ ಅಭಿವೃದ್ಧಿಯನ್ನೆ ಪ್ರಧಾನ ಅಂಶವಾಗಿ ಆ ಕಡೆಗೆ ಗಮನ ಹರಿಸಿದರು.

ಪಿನಾಕಿನಿಯಿಂದ ಅರ್ಕಾವತಿವರೆಗಿನ ನದಿಗಳ ಕಣಿವೆಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಂಡಿದ್ದವರು 1640ರ ನಂತರ ಅರ್ಕಾವತಿ ಕಣಿವೆಯಿಂದ ಶಿಂಷಾ ಕಣಿವೆಯ ವರೆಗಿನ ಹೊಸ ಪ್ರದೇಶವನ್ನು ಕೃಷಿಗೆ ಒಳಪಡಿಸಿದರು. ಸುಂಕಂ ಗೋವರ್ಧನ ಅವರು ಗುರುತಿಸುವಂತೆ ಯಲಹಂಕ ನಾಡಪ್ರಭುಗಳ ಆಗಮನದ ನಂತರ ಮಾಗಡಿ ಪರಿಸರದಲ್ಲಿ ಕೃಷಿ ಚಟುವಟಿಕೆಗಳು ಗರಿಗೆದರಿದ ಬಗೆಗೆ ಶಾಸನಾಧಾರಗಳನ್ನು ನೀಡುತ್ತಾರೆ. ಹೀಗೆ ಅರ್ಕಾವತಿಯಿಂದ ಶಿಂಷಾವರೆಗಿನ ಹೊಸ ಪ್ರದೇಶವನ್ನು ಕೃಷಿಗೆ ಒಳಪಡಿಸಬೇಕಾಯಿತು.

#### 4.2.2.1 ಕೆರೆ ನೀರಾವರಿ

ಯಲಹಂಕ ನಾಡಪ್ರಭುಗಳು ಬೆಂಗಳೂರನ್ನು ಕಳೆದುಕೊಂಡ ಮೇಲೆ ಮಾಗಡಿ ಮತ್ತು ಕುಣಿಗಲ್ ಸೀಮೆಗೆ ಬಂದು ನೆಲೆಸಬೇಕಾಯಿತು. ಇದರಿಂದಾಗಿ ಕುರುಚಲು ಕಾಡು ಮತ್ತು

ಹಳ್ಳದಿಣ್ಣೆಗಳಿಂದ ಕೂಡಿದ ಈ ಸೀಮೆಗಳನ್ನು ಕೃಷಿಯೋಗ್ಯ ಭೂಮಿಯನ್ನಾಗಿ ಪರಿವರ್ತಿಸಲು ಶ್ರಮಿಸಿದರು. ಅದಕ್ಕಾಗಿ ಮಾಗಡಿ ಮತ್ತು ಕುಣಿಗಲ್ ಪರಿಸರದಲ್ಲಿ ಕೆಲವು ದೊಡ್ಡ ಕೆರೆಗಳನ್ನು ನಿರ್ಮಿಸಿದರು. ಅದಕ್ಕೂ ಮೊದಲು ಬೆಂಗಳೂರು ಪರಿಸರದಲ್ಲಿ ಅನೇಕ ಹಿರಿಯ ಕೆರೆಗಳನ್ನು ನಿರ್ಮಿಸಿದ್ದರು. ಮುಖ್ಯವಾಗಿ, ಕೆಂಪಾಂಬುದಿ ಕೆರೆ, ಕಾರಂಜಿಕೆರೆ, ಧರ್ಮಾಂಬುಧಿ ಕೆರೆ, ಗಿಡ್ಡಪ್ಪನ ಕೆರೆ, ಸಂಪಂಗಿಕೆರೆ ಮುಂತಾದ ಕೆರೆಗಳನ್ನು ನಿರ್ಮಾಣ ಮಾಡಿಸಿ ಕೃಷಿಯನ್ನು ಅಭಿವೃದ್ಧಿ ಪಡಿಸಿದರು. ಮಾಗಡಿ ಮತ್ತು ಕುಣಿಗಲ್ ತಾಲ್ಲೂಕಿನಲ್ಲಿ ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಕೆಲವು ಕೆರೆಗಳು ನಿರ್ಮಾಣವಾದವು. ಅವುಗಳಲ್ಲಿ ಮಾಗಡಿಯ ದಕ್ಷಿಣದಲ್ಲಿ ಭರ್ಗಾವತಿ ಕೆರೆ, ಮಾಗಡಿ–ಹುಲಿಯೂರು ದುರ್ಗ ರಸ್ತೆಯಲ್ಲಿ ಕೆಂಪಸಾಗರ ಕೆರೆ ಮತ್ತು ದೀಪಾಂಬುದಿ ಕೆರೆ, ಹುಲಿಯೂರು ಸಮೀಪ ಶೃಂಗಾರಿ ಕಟ್ಟೆ, ಹಂದಲಗೆರೆ ಕೆರೆ ಮುಂತಾದ ಸಣ್ಣಮಟ್ಟ ಕೆರೆಗಳಿಂದ ಹಿಡಿದು ದೊಡ್ಡ ದೊಡ್ಡ ಕೆರೆಗಳನ್ನು ನಿರ್ಮಿಸಿದರು.  ಇದರಿಂದ ಕೃಷಿ ವಿಸ್ತರಣೆ ಸಾಧ್ಯವಾಯಿತು.

#### 4.2.2.2 ಪ್ರಮುಖ ಬೆಳೆಗಳು

ಒಣಭೂಮಿಯಾದ್ದರಿಂದ ಮಳೆ ಆಶ್ರಿತ ಬೆಳೆಗಳನ್ನೆ ಪ್ರಧಾನವಾಗಿ ಬೆಳೆಯಲಾಗುತ್ತಿತ್ತು. ಮುಖ್ಯವಾಗಿ ರಾಗಿ, ಒಣಭೂಮಿಯಲ್ಲಿ ಬೆಳೆಯುವ ಭತ್ತ, ತೊಗರಿ, ಅವರೆ, ಜೋಳ, ಸಾಸಿವೆ, ಹುಚ್ಚೆಳು, ಆರ್ಕ, ನವಣೆ, ಬರಗು, ಊದಲು ಮೊದಲಾದ ಆಹಾರ ಧಾನ್ಯಗಳನ್ನು ಬೆಳೆಯುತ್ತಿದ್ದರು. ಅಡಿಕೆ, ತೆಂಗು, ಬಾಳೆ, ಮಾವು, ಹಲಸು ಮುಂತಾದವುಗಳನ್ನು ಹೆಚ್ಚಾಗಿ ಬೆಳೆಯುತ್ತಿದ್ದರು. ಮಾವಿನ ತೋಪುಗಳ ಪ್ರಸ್ತಾಪ ಜಾನಪದಗಳಲ್ಲಿ ಬರುತ್ತವೆ. ತೊಗರಿಗಾಗಿ ಮಾಗಡಿ ಸಮೀಪದ ಗ್ರಾಮವೊಂದನ್ನು ಪೆನುಗೊಂಡೆಯ ಮಠವೊಂದಕ್ಕೆ ದಾನವಾಗಿ ಬಿಡಲಾಗಿತ್ತೆಂದು ಶಾಸನವೊಂದು ತಿಳಿಸುತ್ತದೆ.

ಶಾಸನಗಳಲ್ಲಿ ತೋಟ, ತುಡಿಕೆಗಳ ಪ್ರಸ್ತಾಪವಿದೆ. 5000 ಅಡಿಕೆ ಮರಗಳ ತೋಟವನ್ನು ಬ್ರಾಹ್ಮಣರಿಗೆ ದಾನವಾಗಿ ನೀಡುವ ಮಟ್ಟಿಗೆ ಯಲಹಂಕ ಪ್ರಭುಗಳು ಆರ್ಥಿಕ ಸದೃಢತೆ ಸಾಧಿಸಿದ್ದರು. ಅನೇಕ ಬ್ರಾಹಣರಿಗೆ ಅಗ್ರಹಾರಗಳನ್ನು ಮಾಡಿಸಿ ಅನೇಕ ವೃತ್ತಿಯ ಭೂಮಿಯನ್ನು ದಾನ ಬಿಟ್ಟ ಉಲ್ಲೇಖಗಳು ಶಾಸನಗಳಲ್ಲಿ ಕಂಡುಬರುತ್ತವೆ. ಮಾಗಡಿಯ ಸಮೀಪದಲ್ಲಿ ತಿಗಳರು ಇರುವುದನ್ನು ಕಾಣಬಹುದು. ಈ ಸಮುದಾಯವೂ ಒಕ್ಕಲ ಸಮುದಾಯದಂತೆ ತೋಟಗಾರಿಕೆಯಲ್ಲಿ ಅತ್ಯಂತ ನಿಪುಣಾಗಿದ್ದರು. ಇದೇ ತಿಗಳರನ್ನು ಮಾಗಡಿ ಪರಿಸರಕ್ಕೂ ಕರೆತಂದು ತೋಟಗಾರಿಕೆಯನ್ನು ಅಭಿವೃದ್ಧಿಪಡಿಸಿದರು. ಹೊಂಬಾಳಮ್ಮನ ಕೆರೆಯ ಮೇಲಿರುವ ಹೊಂಬಾಳಮ್ಮನ ಪೇಟೆಯಲ್ಲಿ ತಿಗಳರು ಹೆಚ್ಚಿನ ಸಂಖ್ಯೆಯಲ್ಲಿ ನೆಲೆಸಿದ್ದಾರೆ.

### 4.2.2.3 ನಾಣ್ಯ ವ್ಯವಸ್ಥೆ

ಯಲಹಂಕ ನಾಡಪ್ರಭುಗಳು ಸ್ವತಂತ್ರ ನಾಣ್ಯಗಳನ್ನು ಮುದ್ರಿಸಿದಂತೆ ಉಲ್ಲೇಖಗಳಿವೆ. ಆ ನಾಣ್ಯಗಳನ್ನು 'ವೀರಭದ್ರ ವರಹ' ಮತ್ತು 'ಭೈರವ' ನಾಣ್ಯಗಳು ಎನ್ನಲಾಗುತ್ತಿತ್ತು. ಹಿರಿಯ ಕೆಂಪೇಗೌಡನ ಕಾಲದಲ್ಲಿ ನಡೆದು, ಅವನ ಬಂದನ ಕೂಡ ಆಗಿತ್ತು. ಆನಂತರದಲ್ಲಿ ವಿಜಯನಗರ ಸಾಮ್ರಾಜ್ಯ ದುರ್ಬಲವಾದ್ದರಿಂದ ಇಮ್ಮಡಿ ಹಿರಿಯ ಕೆಂಪೆಗೌಡ 'ಕುಣಿಗಲ್ ಹಣ' ಎಂಬ ನಾಣ್ಯವನ್ನು ಟಂಕಿಸಿದಂತೆ ಕಾಣುತ್ತದೆ.[50] ವಿಜಯನಗರದ ಅಧಿಪತ್ಯ ತಪ್ಪಿ ಆದಿಲ್ ಶಾಹಿಗಳ ನಿಯಂತ್ರಣಕ್ಕೆ ಹೋದಾಗ ಅವರ ನಾಣ್ಯಗಳನ್ನು ಯಲಹಂಕ ನಾಡಿನಲ್ಲಿ ತಂದಂತೆ ಕಾಣುತ್ತದೆ. ಎಸ್.ಕೆ. ಅರುಣಿ ಅವರು ಹುತ್ರಿದುರ್ಗದಲ್ಲಿ ಕ್ಷೇತ್ರ ಕಾರ್ಯ ನಡೆಸುವಾಗ ಬಿಜಾಪುರದ ಆದಿಲ್‌ಶಾಹಿಗಳ ನಾಣ್ಯವನ್ನು ಪತ್ತೆ ಮಾಡಿದರು. ಅದರ ಜೊತೆಯಲ್ಲಿಯೇ ಮತ್ತೊಂದು ನಾಣ್ಯ ಕೂಡ ಸಿಕ್ಕಿದ್ದಾಗಿ ದಾಖಲಿಸಿದ್ದಾರೆ. ಆದರೆ ಅದು ಯಾವುದೆಂದು ಗುರುತಿಸಲು ಸಾಧ್ಯವಾಗಿಲ್ಲ. ಬಹುಶಃ ಅದು 'ಕುಣಿಗಲ್ ಹಣ' ಇರಬಹುದೆ ಎಂಬ ಅನುಮಾನ ಮೂಡುತ್ತದೆ.

## 4.3 ಉಪಸಂಹಾರ

ಈವರೆಗಿನ ಅಧ್ಯಯನಗಳಿಂದ ಗಂಗರ ಕಾಲದಿಂದ ವಿಜಯನಗರ ಕಾಲಘಟ್ಟದವರೆಗೆ ಹೇಗೆ ಆಡಳಿತ ವ್ಯವಸ್ಥೆಯಲ್ಲಿ ಬದಲಾವಣೆಗಳು ಆಗುತ್ತಾ ಬಂದಿವೆ ಎಂಬುದನ್ನು ಗ್ರಹಿಸಲಾಗಿದೆ. ಆನಂತರ ವಿಜಯನಗರ ಕಾಲಘಟ್ಟ ಮತ್ತು ಆನಂತರದ ಕಾಲಘಟ್ಟದಲ್ಲಿ ಸ್ಥಳೀಯ ಪ್ರಭುತ್ವಗಳ ಆಡಳತದಲ್ಲಿ ಉಂಟಾದ ಗಮನಾರ್ಹ ಬೆಳವಣಿಗೆಗಳನ್ನು ದಾಖಲಿಸಲಾಗಿದೆ. ಸ್ಥಳೀಯ ಆಡಳಿತದ ಘಟಕಗಳಾದ ಗ್ರಾಮ, ಸೀಮೆ, ನಾಡು ಮುಂತಾದವುಗಳ ಕಾರ್ಯವೈಖರಿಯನ್ನು ವಿವರಿಸಲು ಪ್ರಯತ್ನ ನಡೆಸಲಾಗಿದೆ.

ರಾಜ್ಯಕ್ಕೆ ಆಡಳಿತದಷ್ಟೇ ಆರ್ಥಿಕತೆ ಕೂಡ ಮುಖ್ಯವಾದ ಭಾಗವಾಗಿದೆ. ಇಲ್ಲಿ ಬೆಂಗಳೂರು ಪೇಟೆ ಪ್ರದೇಶದಲ್ಲಿ ನೆಲೆಸಿರುವ ವಿವಿಧ ವೃತ್ತಿಶ್ರೇಣಿಯ ಜನರನ್ನು ಪರಿಚಯಿಸಲಾಗಿದೆ. ಬೆಂಗಳೂರು ಆಕ್ರಮಣದ ನಂತರ ಇಮ್ಮಡಿ ಕೆಂಪೇಗೌಡನು ಮಾಗಡಿ ಮತ್ತು ಕುಣಿಗಲ್ ಪ್ರಾಂತ್ಯಕ್ಕೆ ಹೋಗಿ ನೆಲಸಬೇಕಾಗಿ ಬಂದಿದ್ದರಿಂದ ಕೃಷಿ ಬೆಳವಣಿಗೆ ದೊಡ್ಡ ಕೆರೆಗಳ ನಿರ್ಮಾಣಕ್ಕೆ ಪೂರಕವಾಯಿತು. ಪ್ರಮುಖ ಬೆಳೆಗಳು ಮತ್ತು ನಾಣ್ಯ ವ್ಯವಸ್ಥೆ ಕುರಿತು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

## ಟಿಪ್ಪಣಿಗಳು

1. **ಎ.ಕ.(ರೈ)9:** ಹೊಸಕೋಟೆ–37.
2. **ಎ.ಕ.(ರೈ)9:** ನೆಲಮಂಗಲ–25, ದೇವನಹಳ್ಳಿ–75, ಚನ್ನಪಟ್ಟಣ–128.
3. **ಎ.ಕ.(ರೈ)9:** ಹೊಸಕೋಟೆ–111.
4. **ಎ.ಕ.(ರೈ)9:** ನೆಲಮಂಗಲ–7 ಎ.
5. ರಾಜೇಶ್ ಹಂ.ಗು. **"**ಬದಲಾವಣೆಯತ್ತ ಆರಂಭಿಕ ಮಧ್ಯಕಾಲೀನ ಬೆಂಗಳೂರು ಪರಿಸರ: ಹೊಸ ಪರಿವೀಕ್ಷಣೆಗಳ ವಿಶ್ಲೇಷಣೆ**"**, 2013: 18.
6. **ಎ.ಕ.(ರೈ)9:** ಹೊಸಕೋಟೆ–111.
7. **ಎ.ಕ.(ರೈ)9:** ನೆಲಮಂಗಲ–1.
8. **ಎ.ಕ.(ರೈ)9:** ಬೆಂಗಳೂರು–85 ಸಿ.
9. **ಎ.ಕ.(ರೈ)9:** ನೆಲಮಂಗಲ–84.
10. **ಎ.ಕ.(ರೈ)9:** ಹೊಸಕೋಟೆ–159.
11. **ಎ.ಕ.(ರೈ)9:** ದೊಡ್ಡಬಳ್ಳಾಪುರ–31.
12. **ಎ.ಕ.(ರೈ)9:** ನೆಲಮಂಗಲ–67.
13. **ಎ.ಕ.(ರೈ)9:** ಹೊಸಕೋಟೆ–75.
14. **ಎ.ಕ.(ರೈ)9:** ಹೊಸಕೋಟೆ–43.
15. **ಎ.ಕ.(ರೈ)9:** ನೆಲಮಂಗಲ–12.
16. **ಎ.ಕ.(ರೈ)9:** ಹೊಸಕೋಟೆ–104.
17. **ಎ.ಕ.(ರೈ)9:** ಮಾಗಡಿ–59).
18. **ಎ.ಕ.(ರೈ)9:** ದೇವನಹಳ್ಳಿ–20.
19. **ಎ.ಕ.(ರೈ)9:** ಬೆಂಗಳೂರು–112.
20. **ಎ.ಕ.(ರೈ)9:** ಬೆಂಗಳೂರು–47,
21. ಮಾಲಿನಿ ಅಡಿಗ 2006: 164.
22. **ಎ.ಕ.(ರೈ)9:** ದೇವನಹಳ್ಳಿ–60.
23. ಗೋವರ್ಧನ ಸುಂಕಂ, **"**ಬೆಂಗಳೂರು ಪರಿಸರದ ರಾಜಕೀಯ ಅವಲೋಕನ (ಹೊಯ್ಸಳೋತ್ತರ ಯುಗದಿಂದ ನಾಡಪ್ರಭುಗಳ ಆಗಮನದವರೆಗೆ)**"**, 2018: 85–86.
24. ಸೀಮೆ, ವಳಿತ, ಪಟ್ಟಡಿ, ವೇಂಠೆ, ಚಾವಡಿಗಳ ಬಗೆಗಿನ ವಿವರಣಾತ್ಮಕ ಮಾಹಿತಿಗಾಗಿ ನೋಡಿ : ಪಿ.ವಿ. ಕೃಷ್ಣಮೂರ್ತಿ, 2011, **ಶಾಸನ ಮಂಥನ,** ತುಮಕೂರು ವಿಶ್ವವಿದ್ಯಾನಿಲಯ: ತುಮಕೂರು.
25. ಗೋವರ್ಧನ ಸುಂಕಂ, **ಪೂರ್ವೋಕ್ತ,** 2018: 86.
26. **ಅದೇ**.
27. ಶ್ರೀನಿವಾಸನ್, **"**ಯಲಹಂಕ ನಾಡಪ್ರಭುಗಳ ಆಡಳಿತ ವ್ಯವಸ್ಥೆ**"**, 1996:93

28. **ಎ.ಕ.(ರೈ)12:** ತುಮಕೂರು–39

29. ರಾಜಶೇಖರ್ ಕೆ.ಎಲ್., **"**ಯಲಹಂಕ ನಾಡಪ್ರಭುಗಳ ನ್ಯಾಯಾಡಳಿತ**"**, 2008: 322–23.

30. ಶ್ರೀನಿವಾಸನ್, **"**ಯಲಹಂಕ ನಾಡಪ್ರಭುಗಳ ಆಡಳಿತ ವ್ಯವಸ್ಥೆ**"**, 1996:98–99.

**31**. **ಅದೇ**.

32. **ಅದೇ**. 1996: 95.

33. ಕಾವಲಮ್ಮ ಆರ್. **ಮಧುಗಿರಿ ಮಹಾನಾಡು ಪ್ರಭುಗಳು**, ಬೆಂಗಳೂರು, 2005.

34. **ಎ.ಕ. (ಅನು.) 9**.: ಬೆಂಗಳೂರು ಶಾ.ಸಂ.165.

35. **ಎ.ಕ. (ರೈ) 9**.: ದೇವನಹಳ್ಳಿ ಶಾ.ಸಂ.60,

36. **ಎ.ಕ. (ರೈ) 9**.: ಬೆಂಗಳೂರು ಶಾ.ಸಂ.129.

37. ಮಂಜುನಾಥ ಎಂ.ಜಿ. **ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ,** ಬೆಂಗಳೂರು, 2006 ಪ್ರಸ್ತಾವನೆ: 26.

38. ಶ್ರೀನಿವಾಸನ್, **"**ಯಲಹಂಕ ನಾಡಪ್ರಭುಗಳ ಆಡಳಿತ ವ್ಯವಸ್ಥೆ**"**, 1996:101.

39. ಸುಂದರರಾವ್, ಬ.ನ., **'ಬೆಂಗಳೂರಿನ ಇತಿಹಾಸ',** ಅಂಕಿತ, ಬೆಂಗಳೂರು, 2011(1985):54.

40. **ಅದೇ.:** 56.

41. ರಾಜಶೇಖರ್ ಕೆ.ಎಲ್., **"**ಯಲಹಂಕ ನಾಡಪ್ರಭುಗಳ ನ್ಯಾಯಾಡಳಿತ**"**, 2008: 322–23.

42. **ಅದೇ.:** 324.

43. **ಅದೇ.:** 327–28.

44. ಮಂಜುನಾಥ, **'ಬೆಂಗಳೂರಿನ ಬಖೈರುಗಳು'** 2006ಎ:41–42.

45. **ಎ.ಕ.(ರೈ)9:** ಬೆಂಗಳೂರು–1.

46. ಯಶೋಧ ಪಿ. **'ಬೆಂಗಳೂರಿನ ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ (1977–1947)',** 2016: 57.

47. ಕೃಷ್ಣಮೂರ್ತಿ ಪಿ.ವಿ., **'ಬೆಂಗಳೂರು ಪರಿಸರದ ಜನಸಮುದಾಯಗಳು– ಒಂದು ಚಾರಿತ್ರಿಕ ಅವಲೋಕನ',** 2011: 36.

48. **ಅದೇ.:** 37.

49. **ಅದೇ.:** 38.

50. Hayavadana Rao, **Mysore Gazetteer, Vol.2 Part.4,** Pp:94.

# ಅಧ್ಯಾಯ–5

# ಸಾಮಾಜಿಕ ಮತ್ತು ಧಾರ್ಮಿಕ ವ್ಯವಸ್ಥೆ

## 5.1 ಸಾಮಾಜಿಕ ವ್ಯವಸ್ಥೆ

ಯಲಹಂಕ ನಾಡಪ್ರಭುಗಳು ಧರ್ಮಸಹಿಷ್ಣುಗಳು ಮತ್ತು ಸಾಮಾಜಿಕವಾಗಿ ಎಲ್ಲರನ್ನು ಒಳಗೊಳ್ಳುವಂತಹ ಸ್ವಭಾವವನ್ನು ಹೊಂದಿರುವುದು ವಿಶೇಷ. ಬೆಂಗಳೂರಿನ ಪೇಟೆಗಳಲ್ಲಿ ಅನೇಕ ವೃತ್ತಿ ಮತ್ತು ಜಾತಿಯಾಧಾರಿತ ಪೇಟೆಗಳನ್ನು ರಚಿಸಿ, ಎಲ್ಲಾ ಸಮುದಾಯದವರನ್ನು ಒಟ್ಟಿಗೆ ಕರೆದೊಯ್ಯುವ ಮೂಲಕ ಬಹುತ್ವದ ಸಮಾಜವನ್ನು ನಿರ್ಮಾಣ ಮಾಡಲು ಮುಂದಡಿ ಇಟ್ಟವರು. ಬೆಂಗಳೂರಿನ ಪೇಟೆಗಳೇ ಹೇಳುವಂತೆ ನಗರ್ತಪೇಟೆ, ಕುಂಬಾರಪೇಟೆ, ಗಾಣಿಗರಪೇಟೆ, ದೇವಾಂಗಪೇಟೆ ಮುಂತಾದವು ಜಾತಿ ಸೂಚಕವಾಗಿವೆ. ಸಮೃದ್ಧ ಸಮಾಜವನ್ನು ನಿರ್ಮಿಸಲು ಎಲ್ಲಾ ಸಮುದಾಯದವರ ಅಗತ್ಯವಿರುವುದನ್ನು ಮನಗಂಡು ಎಲ್ಲರಿಗೂ ಸಮಾನ ಅವಕಾಶಗಳನ್ನು ಕಲ್ಪಿಸಿಕೊಟ್ಟವರು. ಇಂತಹ ಯಲಹಂಕ ನಾಡಪ್ರಭುಗಳಿಗೆ ಸಂಬಂಧಿಸಿದ ಲಾವಣಿಗಳನ್ನು ಜಾನಪದ ಕಥನಗಳನ್ನು ಗಮನಿಸಿದಾಗ ಜಾತಿಯ ಪ್ರಶ್ನೆ ಬಹು ಮುನ್ನೆಲೆಗೆ ಬರುತ್ತದೆ. ಅಂದಿನ ಸಮಾಜದಲ್ಲಿನ ಶೋಷಕ ವರ್ಗವಾದ ಬ್ರಾಹ್ಮಣರ ಶೋಷಣೆಯ ಕರಾಮತ್ತುಗಳನ್ನು ಜನಪದರು ಹಸಿಹಸಿಯಾಗಿಯೇ ಕಥನಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. ಜಾನಪದಗಳು ಕೂಡ ಇತಿಹಾಸದ ಬಹುಮುಖ್ಯ ಆಕರವಾಗಿದ್ದು, ಅದರಲ್ಲಿನ ಚಾರಿತ್ರಿಕ ಅಂಶಗಳನ್ನಷ್ಟೆ ಎಚ್ಚರಿಕೆಯಿಂದ ಶೋಧಿಸಿ ತೆಗೆದಾಗ, ಆಶಯ ರೂಪದಲ್ಲಿರುವ ಚಾರಿತ್ರಿಕ ಅಂಶಗಳನ್ನು ಗುರುತಿಸಿದಾಗ  ಚರಿತ್ರೆಗೆ ಬಹಳ ದೊಡ್ಡ ಆಕರವು ಸಿಕ್ಕಂತಾಗುತ್ತದೆ. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಸಾಂಪ್ರದಾಯಕ ವಿಧಾನಗಳ ಬದಲು ಸಮೃದ್ಧವಾದ ಜನಪದ ಸಾಹಿತ್ಯವನ್ನು ಚಾರಿತ್ರಿಕ ಆಕರವಾಗಿ ಬಳಸಿಕೊಳ್ಳುವ ಮೂಲಕ ಜನಪದರ ಲೋಕದೃಷ್ಟಿಯ ಸಮಾಜವನ್ನು ಅರಿಯುವ ಪ್ರಯತ್ನವನ್ನು ನಡೆಸಲಾಗಿದೆ. ಎರಡನೆಯ ಭಾಗದಲ್ಲಿ ಯಲಹಂಕ ನಾಡಪ್ರಭುಗಳ ಕಾಲದ ಧಾರ್ಮಿಕ ವಿಚಾರಗಳನ್ನು ಕುರಿತು ಚರ್ಚಿಸಲು ಪ್ರಯತ್ನಿಸಲಾಗಿದೆ.

### 5.1.1 ಸ್ಥಿತ್ಯಂತರದಲ್ಲಿ ಸಾಮಾಜಿಕ ವ್ಯವಸ್ಥೆ

ಕರ್ನಾಟಕದ ಇತಿಹಾಸದಲ್ಲಿ 16, 17, 18ನೆಯ ಶತಮಾನಗಳು ರಾಜಕೀಯವಾಗಿ ಬಹು ಸಂಕೀರ್ಣವಾದ ಕಾಲಘಟ್ಟವಾಗಿದೆ. ವಿಜಯನಗರೋತ್ತರ ಕಾಲಘಟ್ಟದಲ್ಲಿ ಉಂಟಾದ ರಾಜಕೀಯ ಅರಾಜಕತೆಯ ಲಾಭವನ್ನು ಪಡೆದ ಅನೇಕ ಸಾಮಂತರು ಸ್ವತಂತ್ರರಾಗಲು ಹವಣಿಸುತ್ತಿದ್ದರೆ,

ಮತ್ತೊಂದು ಕಡೆ ದಖನಿ ಸುಲ್ತಾನರು, ಮರಾಠರು, ಮೊಘಲರು ಮತ್ತು ಮೈಸೂರು ಒಡೆಯರು ರಾಜಕೀಯ ಮೇಲ್ಮೆಗಾಗಿ ಪರಸ್ಪರ ಸಂಘರ್ಷದಲ್ಲಿ ತೊಡಗಿದ್ದರು. ಈ ಕಾಲಘಟ್ಟದಲ್ಲಿ ತನ್ನ ಉಚ್ಛ್ರಾಯತೆ ಮತ್ತು ಅವನತಿ ಎರಡನ್ನೂ ಕಂಡ ಸ್ಥಳೀಯ ಮನೆತನಗಳಲ್ಲಿ ಯಲಹಂಕ ನಾಡಪ್ರಭುಗಳು ಕೂಡ ಒಂದಾಗಿದೆ. ಯಲಹಂಕ ನಾಡಪ್ರಭುಗಳ ಆಳ್ವಿಕೆಯ ಪ್ರದೇಶವು ರಾಜಕೀಯವಾಗಿ ಮತ್ತು ಆಡಳಿತಾತ್ಮಕವಾಗಿ ಮಾತ್ರವಲ್ಲದೆ ಸಾಮಾಜಿಕ ಸಂರಚನೆಯಲ್ಲಿಯೂ ದಖನಿ ಸುಲ್ತಾನರು, ಮರಾಠರು ಮತ್ತು ಮೈಸೂರು ಒಡೆಯರ ಪ್ರಭಾವವನ್ನು ಗುರುತಿಸಬಹುದು. ಈ ಕಾಲದ ಸಾಮಾಜಿಕ ಸಂರಚನೆ/ಜಾತಿಗಳನ್ನು ರೂಪಿಸುತ್ತಿದ್ದ ಪ್ರಧಾನ ಅಂಶಗಳೆಂದರೆ, ವೃತ್ತಿಗಳು ಹಾಗೂ ಧಾರ್ಮಿಕ ಪಂಥಗಳೊಂದಿಗಿನ ಸಂಬಂಧಗಳಾಗಿದ್ದು, ಈ ಕಾಲದಲ್ಲಾಗುತ್ತಿದ್ದ ಆರ್ಥಿಕ ಮತ್ತು ಧಾರ್ಮಿಕ ಕ್ಷೇತ್ರಗಳ ಬದಲಾವಣೆಗಳು, ವಲಸೆ ಪ್ರಕ್ರಿಯೆಗಳು ಆ ಕಾಲದ ಸಾಮಾಜಿಕ ವ್ಯವಸ್ಥೆಯನ್ನು ಬದಲಾವಣೆಗೆ ಒಳಪಡಿಸಬಲ್ಲವಾಗಿದ್ದವು ಎಂದು ಕೆ. ಸದಾಶಿವ ಅವರು ಅಭಿಪ್ರಾಯ ಪಡುತ್ತಾರೆ.[1] ಸಾಮಾಜಿಕ ವ್ಯವಸ್ಥೆಯು ರೂಪುಗೊಳ್ಳಲು ಆಳುವ ವರ್ಗದ ಪಾತ್ರ ಬಹುಮುಖ್ಯವಾದುದಾಗಿದೆ. ಆದ್ದರಿಂದ ಸಾಮಾಜಿಕ ಸಂರಚನೆ, ಬದಲಾವಣೆ ಹಾಗೂ ಸುಧಾರಣೆಗಳಲ್ಲಿ ನಾಡಪ್ರಭುಗಳ ಪಾತ್ರ ಗಣನೀಯವಾಗಿರುತ್ತದೆ. ಯಲಹಂಕ ನಾಡಪ್ರಭುಗಳು 'ಮೊರಸು ಒಕ್ಕಲಿಗರು' ಎಂಬ ವಿಶಿಷ್ಟ ಜಾತಿ / ಸಾಮಾಜಿಕ ಗುಂಪಾಗಿ ರೂಪುಗೊಳ್ಳುವ ಮೂಲಕ ಸ್ಥಿತ್ಯಂತರ ಸ್ಥಿತಿಯ ಸಾಮಾಜಿಕ ಸಂರಚನೆಗೆ ಚಾಲನೆ ನೀಡಿದರೆಂದು ವಿದ್ವಾಂಸರು ದಾಖಲಿಸುತ್ತಾರೆ.[2] 8ನೆಯ ಶತಮಾನದಿಂದಲೂ ಅಸ್ತಿತ್ವದಲ್ಲಿದ್ದ ಮೊರಸು ನಾಡಿಗೆ ಕ್ರಿ.ಶ. 10ನೆಯ ಶತಮಾನದ ನಂತರ ರಾಜಕೀಯ ಪ್ರವರ್ಧಮಾನಕ್ಕೆ ಬಂದ ಚೋಳ ಹಾಗೂ ಹೊಯ್ಸಳರು ಮೊರಸುನಾಡನ್ನು ಒಳಗೊಂಡ ಗಂಗವಾಡಿಯನ್ನು ತಮ್ಮ ರಾಜ್ಯದ ಗಡಿಯಾಗಿ ಮಾರ್ಪಡಿಸಿಕೊಂಡರು. ರಾಜಕೀಯವಾಗಿ ನಿರ್ಲಕ್ಷ್ಯಕ್ಕೆ ಒಳಗಾದಂತೆ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಯನ್ನು ಸಹ ಈ ಪ್ರದೇಶ 10ನೇ ಶತಮಾನದವರೆಗೂ ವಿಶೇಷ ಬದಲಾವಣೆಯನ್ನೇನೂ ಕಾಣಲಿಲ್ಲವೆಂದೂ, 10ನೇ ಶತಮಾನದ ನಂತರ ಈ ಪ್ರದೇಶದಲ್ಲಿ ವಿಶೇಷವಾಗಿ ವೃದ್ಧಿಯಾಗುವ ಶಾಸನಗಳು ಆ ಅವಧಿಯಲ್ಲಾದ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಗಳಿಗೆ ನಿದರ್ಶನವಾಗಿವೆ ಎಂದು ಕೆ. ಮಹೇಶ್ ಅವರು ಅಭಿಪ್ರಾಯ ಪಡುತ್ತಾರೆ.[3] ಚೋಳರ ಆಕ್ರಮಣದ ನಂತರ ಈ ಬದಲಾವಣೆಗಳು ತೀವ್ರಗೊಂಡವು. ಒಂದನೇ ರಾಜ ರಾಜನ ಜೊತೆಗೆ ಈ ಪ್ರದೇಶಕ್ಕೆ ದಾಳಿ ಮಾಡಿದ ರಾಜನ ಬಲಗೈ ಸೈನ್ಯದವರು ಅಂದರೆ ಕೃಷಿಕರು ಈ ಪ್ರದೇಶದಲ್ಲಿ ಬಂದು ನೆಲಸಿ ತಮ್ಮಲ್ಲಿದ್ದ ಕಂದಾಯ ವ್ಯವಸ್ಥೆಯನ್ನು ಈ ಪ್ರದೇಶದಲ್ಲಿ ಜಾರಿಗೊಳಿಸಿದ ವಿವರಗಳಿವೆ. ಹಾಗೆಯೇ 11 ಮತ್ತು 12ನೇ ಶತಮಾನದಲ್ಲಿ ಮೊರಸು ನಾಡು

ಪ್ರದೇಶಕ್ಕೆ ವಲಸೆ ಬಂದ ತಮಿಳು ಕೃಷಿಕರು ಆವನಿ, ನಂದಿ ಹಾಗೂ ಸೀತಿ ಬೆಟ್ಟ ಪ್ರದೇಶಗಳಲ್ಲಿ ಶೈವ ದೇವಾಲಯಗಳನ್ನು ಕಟ್ಟಿಸಿ ಅವುಗಳಿಗೆ ವಿಪುಲವಾಗಿ ದಾನ ಮಾಡಿದ ವಿವರಗಳು ಶಾಸನಗಳಲ್ಲಿ ದೊರೆಯುತ್ತವೆ. ಹಾಗೆಯೇ ತಮಿಳು ಬ್ರಾಹ್ಮಣರು ಹಾಗೂ ವರ್ತಕರೂ ತಮಿಳುನಾಡಿನ ತೊಂಡೈಮಂಡಲಮ್ ಪ್ರದೇಶದಿಂದ ಮೊರಸು ನಾಡು ಪ್ರದೇಶಕ್ಕೆ ಬಂದುದನ್ನು ತಮಿಳು ಶಾಸನಗಳು ಪ್ರಸ್ತಾಪಿಸುತ್ತವೆ ಎನ್ನುತ್ತಾರೆ ಮಹೇಶ್ ಅವರು.[4] ಆದರೆ ಚೋಳರ ಆಕ್ರಮಣದ ಜೊತೆಗೆ ಬಂದ ಸೈನಿಕರು ಮತ್ತು ರಾಮಾನುಜಾಚಾರ್ಯರ ಅನುಚರರಾಗಿ ಬಂದ ಬ್ರಾಹ್ಮಣರು ಸ್ಥಳೀಯ ಸಾಮಾಜಿಕ ವ್ಯವಸ್ಥೆಯ ಮೇಲೆ ಪ್ರಭಾವಿಸಿರುವುದನ್ನು ಅಲ್ಲಗಳೆಯಲಾಗದಿದ್ದರೂ, ಇವರು ಬೇರೆ ಬೇರೆ ಕಾಲಘಟ್ಟದಲ್ಲಿ ಬಂದವರು. ಯಲಹಂಕ ನಾಡಪ್ರಭುಗಳ ಪೂರ್ವಿಕರು ಬಂದದ್ದು 14ನೆಯ ಶತಮಾನದಲ್ಲಿ ಆದ್ದರಿಂದ ಪೂರ್ವದಲ್ಲಿಯೇ ಈ ಪ್ರದೇಶಕ್ಕೆ ಬಂದವರ ಪ್ರಭಾವವಾಗಿದೆ ಎಂಬ ವಿಚಾರವನ್ನು ಮರುಪರಿಶೀಲಿಸುವ ಅಗತ್ಯವಿದೆ. ಹಿಂದಿನ ಅಧ್ಯಾಯದಲ್ಲಿ ನೋಡಿದಂತೆ ಚೋಳರ ಆಡಳಿತಾತ್ಮಕ ಪ್ರಭಾವವನ್ನು ವಿಜಯನಗರದ ದೊರೆಗಳು ಅಳಿಸಿ ಹಾಕಿ, ಕನ್ನಡಮಯ ವಾತಾವರಣವನ್ನು ಸೃಷ್ಟಿಸಿದರು. ಆದ್ದರಿಂದ ಮೊದಲು ಬಂದವರು ಆನಂತರ ಬಂದವರ ಮೇಲೆ ಪ್ರಭಾವವನ್ನು ಬೀರಿದರು ಎಂಬುದು ಸೂಕ್ತವಾಗಿ ತೋರುವುದಿಲ್ಲ. ಸಾಮಾನ್ಯ ಹೊರಗಿನಿಂದ ಬಂದವರು ಸ್ಥಳೀಯ ಸಂಸ್ಕೃತಿಯ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರುವ ಸಾಧ್ಯತೆಗಳಿರುತ್ತವೆ. ಮೊರಸು ಒಕ್ಕಲಿಗರು ಕಂಚಿ ಬಳಿಯ ದೇವಾಲಯಕ್ಕೆ ಭೇಟಿ ಕೊಡುತ್ತಾರೆ. ಹಾಗೆಯೇ ಮಾಲೂರು ತಾಲ್ಲೂಕಿನ ಜಡಿಗೆನಹಳ್ಳಿ ಜಾತ್ರೆಗೆ ತಮಿಳು ಪ್ರದೇಶದ ಭಕ್ತರು ಬಂದು ಸೇವೆ ಸಲ್ಲಿಸುತ್ತಾರೆ ಎನ್ನುವ ಮತ್ತೊಂದು ವಿಚಾರವನ್ನು ಮಹೇಶ್ ಅವರು ಪ್ರಸ್ತಾಪಿಸುತ್ತಾರೆ.[5] ಈ ಕುರಿತು ಸಾಂಸ್ಕೃತಿಕ ಅಧ್ಯಯನಗಳು ನಡೆಯುವ ಅಗತ್ಯತೆ ಇದೆ.

### 5.1.2 ಜನಪದ ಸಾಹಿತ್ಯದಲ್ಲಿ ಅಭಿವ್ಯಕ್ತವಾದ ಸಮಾಜ

ಯಾವುದೇ ಒಂದು ಸಾಹಿತ್ಯ ಕೃತಿಯಲ್ಲಿ; ಸಹಜವಾಗಿಯೇ ಆ ಕೃತಿಯು ರೂಪುಗೊಳ್ಳುವ ಪ್ರಕ್ರಿಯೆಯಲ್ಲಿ ಸಾಮಾಜಿಕ ಸಂಗತಿಗಳು ಮೇಳೈಸಿರುತ್ತವೆ. ಕೃತಿಯೊಂದರಲ್ಲಿ ಈ ಬಗೆಯ ಅಂಶಗಳನ್ನು ಗುರುತಿಸುವುದು ಸಮಾಜಶಾಸ್ತ್ರೀಯ ಅಧ್ಯಯನ ಸ್ವರೂಪವನ್ನು ಕೃತಿಗೆ ತಂದುಕೊಟ್ಟಂತಾಗುತ್ತದೆ. ಅಂತೆಯೇ ಕೆಂಪೇಗೌಡರ ಲಾವಣಿಗಳಲ್ಲಿ ಸಮಕಾಲೀನ ಸಾಮಾಜಿಕತೆಯನ್ನು ಕಾಣಬಹುದು. ಸಾಹಿತ್ಯ "ಜನಜೀವನದ ಪ್ರತಿಬಿಂಬ ಹಾಗೂ ಗತಿಬಿಂಬವೇ" ಆಗಿರುತ್ತದೆ. ಹಾಗಾಗಿ ಈ ನಿಟ್ಟಿನಲ್ಲಿ ಕೆಂಪೇಗೌಡರ ಲಾವಣಿಗಳಲ್ಲಿ ಬಂದಿರುವ ಜಾತಿ – ಜಾತಿ ಪದ್ಧತಿ, ಸಂಘರ್ಷಗಳು, ವರ್ಗಭೇದ ಧೋರಣೆಗಳು, ಮನೆ ದೇವರ ಆರಾಧನೆ, ಮೌಢ್ಯಗಳು,

ವಿವಾಹ–ಕುಟುಂಬ–ಮಕ್ಕಳು, ಸ್ತ್ರೀ ಅಸ್ಮಿತೆ ಮುಂತಾದವುಗಳ ವಿಶ್ಲೇಷಣೆಯನ್ನು ಪ್ರಕೃತ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಮೇಲ್ನೋಟಕ್ಕೆ ಕೆಲವು ಸಂಗತಿಗಳು ಆಶಯ ರೂಪದಲ್ಲಿದ್ದರೂ ಅವುಗಳ ಆಂತರ್ಯದಲ್ಲಿರುವ ಸಾಮಾಜಿಕ ಆಯಾಮಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಹಲವು ಇತಿಹಾಸಕಾರರು ಕೆಂಪೇಗೌಡನ ವಂಶೀಯರನ್ನು ಮೊರಸು ಒಕ್ಕಲಿಗ ಜಾತಿಗೆ ಸೇರಿದವರೆಂದು ಅಭಿಪ್ರಾಯಿಸಿರುತ್ತಾರೆ.[6] ಆದರೆ ತಿಗಳರು ಕೆಂಪೇಗೌಡ ತಮ್ಮ ಸಮುದಾಯದವನೆಂದು ಹೇಳಿಕೊಳ್ಳುವುದೂ ಇದೆ.[7] ಕೆಂಪೇಗೌಡನ ಕೆಲವು ಲಾವಣಿಗಳಲ್ಲಿ ಇದಕ್ಕೆ ಖಚಿತವಾದ ಆಧಾರ ದೊರೆತಿದೆ. ಈ ಲಾವಣಿಗಳಲ್ಲಿ ಸ್ಪಷ್ಟವಾಗಿ ಮಾಗಡಿ ಕೆಂಪೇಗೌಡನು ಮೊರಸು ಒಕ್ಕಲು ಜಾತಿಯವನೆಂದು ಹೇಳಲಾಗಿದೆ. ಇತಿಹಾಸಕ್ಕೆ ಈ ಜಾನಪದ–ಲಾವಣಿಗಳು ಒಳ್ಳೆಯ ಕೊಡುಗೆ ಕೊಟ್ಟಂತಾಯಿತು. ಏಕೆಂದರೆ ಕೆಲವರು ಕೆಂಪೇಗೌಡರು ಮೊರಸು ಒಕ್ಕಲಿಗರ ಜಾತಿಯವರಲ್ಲ ಎಂಬ ವಿವಾದವನ್ನು ಹುಟ್ಟು ಹಾಕಿದ್ದರು. ಇದಕ್ಕೆ ಪರಿಹಾರವಾಗಿ ಈ ಲಾವಣಿಗಳು ಆತ ಮೊರಸು ಒಕ್ಕಲಿಗ ಜಾತಿಯವನೆಂದು ಪದೇ ಪದೇ ಹೇಳುವ ಮೂಲಕ ಖಚಿತತೆಯನ್ನು ಒದಗಿಸಿವೆ ಇದನ್ನು ಹೇಳುವ ಲಾವಣಿಯ ಸಾಲುಗಳು ಇಂತಿವೆ.[8]

ಉತ್ತುರ ಹುಲಿಯೂರು ದುರ್ಗ ಹುಲಿಯ ಮಾಗಡಿಕೋಟೆ
ಹುಲಿಯ ಮಾಗಡಿ ಕೋಟೆ ಕೊನೆಯ ಗೊಂಬಿನ ಮ್ಯಾಲೆ
ಮಾಗುಡಿ ಪಟ್ಟಣದಲ್ಲಿ ಗಜಮುತ್ತೀನರಮನೆ
ಗಜಮುತ್ತೀನರಮನೆಯಲ್ಲಿ ಗಾಜಿನ ಕಲುಕಂಬ
ಗಾಜೀನ ಕಲುಕಂಬ ರಾಜಣ ಕೆಂಪೇಗೌಡ
ರಾಜುಣ ಕೆಂಪೇಗೌಡ ದೊರೆಯಾಪ್ತಿ ಮಾಡುತಾನೆ
ದೊರೆಯಾಪ್ತಿ ಮಾಡುತಾನೆ ಸಿರಿಯಾಪ್ತಿ ಮಾಡುತಾನೆ
ಮೊರಸು ಒಕ್ಕಲಮಗ ಮಾಗಡಿಯ ಕೆಂಪೇಗೌಡ

ಮತ್ತೊಂದು ಲಾವಣಿಯಲ್ಲಿ ಮಾಗಡಿಯ ಕೆಂಪೇಗೌಡ ರಾಜ್ಯಭಾರ ಮಾಡುವ ವಿಚಾರವನ್ನು ತಿಳಿಸುವ ಜನಪದ ಕಾವ್ಯಭಾಗದಲ್ಲಿ ಅವರ ಜಾತಿ ಮೊರಸು ಒಕ್ಕಲಿಗ ಜಾತಿ ಎಂದು ಉಕ್ತವಾಗಿದೆ. ಒಂದು ಅಕ್ಷರವು (ಭಾಷಾ ವೈಜ್ಞಾನಿಕವಾಗಿ 'ಅಕ್ಷರ ಪಲ್ಲಟ'ದ ಕ್ರಿಯೆ) ಸ್ಥಿತ್ಯಂತರವಾಗಿದ್ದರೂ ಸಹ ಆ ಪದ ಮರಸು/ ಮೊರಸು ಎಂಬ ರೂಪವನ್ನೇ ಸೂಚಿಸುತ್ತಿದೆ.[9]

ಅಯ್ಯ–ಮೊಸರು ಒಕ್ಕಲ ಮಗ ಮಾಗಡಿಯ ಕೆಂಪೇಗೌಡ
ಆಗ–ಇಪ್ಪತ್ತು ನಾಕೋರಸ ರಾಜ್ಯಭಾರನಾಳುತ್ತಾನೆ.

ಅವ್ನ–ಸಿರಿಸಂಪತ್ತಾದಾರೆ ಎಷ್ಟೊಂದು ಹೇಳಲಪ್ಪ
ಆಗ–ತನ್ನಯ ಅರಮಲ್ಲಿ ಸುಖದಿಂದ ಇರುತ್ತಾನೆ
ಸುಖದಿಂದ ರಾಜ್ಯಭಾರ ಆಳುತ್ತಾನೆ ಕೆಂಪೇಗೌಡ.

"ಬ್ರಾಮಾರ ಮನೆಯ ಬೋಮಾನ್ಕೆ ಒಲುಕೊಂಡ" ಎಂಬ ಲಾವಣಿಯಲ್ಲಿ ಹರಿಯಮ್ಮ ಹಾರುವರ ಮನೆಯಲ್ಲಿದ್ದ ಕೆಂಪಣ್ಣನನ್ನು ಹುಡುಕಿಕೊಂಡು ಬರುವ ಸಂದರ್ಭದಲ್ಲಿ ಕೆಲವು ಜಾತಿಗಳು ಉಲ್ಲೇಖಗೊಂಡಿವೆ.[10] ಆಯಾ ಜಾತಿಗಳಿಗೆ ಸೇರಿದವರು ಪ್ರತ್ಯೇಕವಾಗಿ ಒಂದೊಂದು ಕಡೆ ನೆಲೆಸಿದ್ದುದು ಸಮಕಾಲೀನ ಸಮಾಜದ ಜಾತೀಯತೆಯ, ವರ್ಗಭೇದ ನೀತಿಗಳ ದ್ಯೋತಕವಾಗಿದೆ. ಕುಂಬಾರರ ಬೀದಿ, ಕುರುಬರ ಬೀದಿ, ಒಕ್ಕಲುಗರ ಬೀದಿ, ವಸ್ಟುಮರ ಬೀದಿ, ಲಿಂಗವಂತ ಬೀದಿ, ಈಡಿಗರ ಬೀದಿ, ಕೋಮ್ಟಿಗರ ಬೀದಿ ಈ ಉಲ್ಲೇಖಗಳು ಇದಕ್ಕೆ ಸಾಕ್ಷಿಯಾಗಿವೆ.

**5.1.3 ಜಾತಿ ಸಂಘರ್ಷ ಮತ್ತು ಶೋಷಣೆಯ ನೆಲೆಗಳು**

ಈ ಜಾತಿಸಂಘರ್ಷ ಮತ್ತು ಶೋಷಣೆಯ ನೆಲೆಗಳನ್ನು ಯಲಹಂಕ ನಾಡಪ್ರಭುಗಳ ಜಾನಪದ ಸಾಹಿತ್ಯದಲ್ಲಿ ವಿಶೇಷವಾಗಿ ಗುರುತಿಸಬಹುದು. ಉದಾಹರಣೆಗೆ–ಕೆಂಪೇಗೌಡನು ಏಳು ವರ್ಷದ ಬಾಲಕನಾಗಿದ್ದಾಗ ಮಾಗಡಿಯ ಬೀದಿಯಲ್ಲಿ ಮಕ್ಕಳಾಡುವುದನ್ನು ಕಂಡು ತಾನು ಆಡಲು ಇಚ್ಛಿಸುವ ಸಂದರ್ಭ. ಮೊದ ಮೊದಲು ಗೆಲ್ಲುವ ಕೆಂಪೇಗೌಡನ ಅಂದ ಚಂದ, ಚುರುಕುತನವನ್ನು ಅಣ್ಣೋಜಿ, ತಮ್ಮೋಜಿ ಎಂಬ ಬ್ರಾಹ್ಮಣರು ನೋಡುವರು. ಚಂದ್ರಹಾಸನ ಹಾಗೆ ಕಂಡ ಕೆಂಪಣ್ಣನನ್ನು ಮನೆಗೆ ಕರೆದೊಯ್ದರೆ ಅವನನ್ನು ಆಳಾಗಿ ದುಡಿಸಿಕೊಳ್ಳಬಹುದು ಎಂದು ಕುತಂತ್ರ ಹೂಡುತ್ತಾರೆ.[11]

ಆಸ್ತಿ ಎಷ್ಟಿದ್ದರೇನು ಗೇಯೋರು ಇಲ್ಲವಲ್ಲ
ಹೊಲಗದ್ದೆ ತೋಟವೆಲ್ಲ ಹಾಳು ಬಿದ್ದು ಹೋಯಿತಲ್ಲ...
ಆಟ ಮುಗಿಸಿಕೊಂಡು ಇಲ್ಲಾಸಿ ಬರುತಾನೆ
ಅವ್ನ–ನಾವು ಕರಿಯಬೇಕು ಮಾತನಾಡಿಸಬೇಕು
ಅಯ್ಯ–ಅರ್ಥ ಗಳುಗೇಲಿ ಧಣಧಣ ಅನುಕೊಂಡು
ಅಯ್ಯೊ–ಬರುತಾನೆ ಕೆಂಪಣ್ಣ ಆ ಬೀದಿಯೊಳುಗಾದ್ರೆ

ಬರುವಂತ ಹೊತ್ತಿನಲ್ಲಿ ಇವುರಾದ್ರೆ ನೋಡುವುದೆ ಅವನನ್ನು ಕಂಡ ತಕ್ಷಣವೆ ಅಣ್ಣೋಜಿ, ತಮ್ಮೋಜಿಯರು ಅವನನ್ನು ಪ್ರೀತಿಯಿಂದ "ಕೋಪ ಮಾಡಿಕೊಳ್ಳದೆ ನಮ್ಮ ಹತ್ತಿರ ಬಾರಪ್ಪ,

ಮಕ್ಕಳಿಲ್ಲದವರಪ್ಪ ನಾವು" ಎಂದೆನ್ನುತ್ತ ಹಾಲು ಸಕ್ಕರೆ ಕೊಡುತ್ತಾರೆ. ಎರಡು ತಿಂಗಳ ಹಿಂದೆ ತಮ್ಮ ಮಗ ಸತ್ತು ಹೋಗಿರುವುದಾಗಿಯೂ ಅವನಂತೆಯೇ ಈತನು ಇರುವುದಾಗಿಯೂ ಹೇಳುತ್ತಾರೆ. ನಿನ್ನನ್ನು ಮಗನಂತೆ ಸಾಕುತ್ತೇವೆ ಎಂದು ಆಸೆ ತೋರಿಸುತ್ತಾರೆ. ಅಣ್ಣೋಜಿಯ ಹೆಂಡತಿ ಕೆಂಪಣ್ಣನನ್ನು ಎತ್ತಿ ಮುದ್ದಾಡುತ್ತಾಳೆ. ತಾನು ಒಕ್ಕಲಿಗ ಎಂದರೆ ಬಿಡುವುದಿಲ್ಲ. ತಾಯಂದಿರನ್ನು ಕೇಳಿ ಬರುವುದಾಗಿ ಹೇಳಿದಾಗ, ಅವನ ಜೇಬಿಗೆ ಕಡಲೆ ಕೊಬ್ಬರಿ ಬೆಲ್ಲ ತುಂಬಿ ಕಳಿಸಿಕೊಡುತ್ತಾರೆ. ಆ ಮೂಲಕ ಅವನು ಮತ್ತೆ ಇಲ್ಲಿಗೆ ಹಿಂದಿರುಗಲೆಂದು ಆಮಿಷವೊಡ್ಡುತ್ತಾರೆ.

ಕೆಂಪಣ್ಣ ಗುಡಿಸಲಿಗೆ ಬಂದು ವಿಷಯ ತಿಳಿಸುತ್ತಾನೆ. ಬ್ರಾಹ್ಮಣರ ಮನೆಗೆ ಕಳುಹಿಸಲು ಕುಪ್ಪಮ್ಮ ಮತ್ತು ಹರಿಯಲೆ ಒಪ್ಪುವುದಿಲ್ಲ. ಆದರೆ ಕೆಂಪಣ್ಣನ ಮಾತುಗಳನ್ನು ಕೇಳಿ ಆ ತಾಯಂದಿರು ದುಃಖಿಸುತ್ತಾರೆ. ಮತ್ತೆ ಆಗ ಬೀದಿಯ ಕಡೆಗೆ ಆಡಲು ಬಂದಾಗ, ಅಣ್ಣೋಜಿ–ತಮ್ಮೋಜಿಯರು ಅವನನ್ನು ಬಲವಂತವಾಗಿ ತಮ್ಮ ಮನೆಗೆ ಕರೆದುಕೊಂಡು ಹೋಗಿ, ಸ್ನಾನ ಮಾಡಿಸಿ, ಹೊಸ ಬಟ್ಟೆ ಕೊಟ್ಟು ಪುಷ್ಕಳವಾಗಿ ಊಟ ಮಾಡಿಸಿ ಪ್ರೀತಿಯ ನಟನೆ ಮಾಡುತ್ತಾರೆ. ಅವನು ಹೊರಡಲು ಅನುವಾದಾಗ ಅಂಗಿ ಮತ್ತು ಚೆಡ್ಡಿ ಜೇಬುಗಳಿಗೆ ತಿಂಡಿ ತುಂಬಿ ತಿನ್ನಲು ಹೇಳುತ್ತಾರೆ. ಹಾರುವರ ಹೆಂಡತಿ ದೇವಿತಾಯಮ್ಮ ಪ್ರೀತಿಯಿಂದ ಕೆಂಪಣ್ಣನ್ನು ಮುದ್ದಾಡುವುದನ್ನು ಕಂಡು ನೆರೆಮನೆಯವಳು ಹಂಗಿಸುತ್ತಾಳೆ.[12]

ಅಯ್ಯೋ– ನಿನಗೇನು ಬಂತೆ ಕುಲಗೆಟ್ಟು ಹೋದ್ಯಲ್ಲೆ<br>
ಅಯ್ಯೋ– ಎಂತೆ ಕಲಿಕಾಲ ಬಂತು ಛೀ ಛೀ ಅನುತಾಳೆ<br>
ಬಾಡು ಬಳ್ಳೆ ತಿನ್ನುವಂತ ಒಕ್ಕಲುಗ್ರ ಮಗನಲ್ಲೆ<br>
ಆ ಸೂದ್ರಮುಂಡೆ ಗಂಡನ್ನ ಆಚೆಗೆ ಓಡಿಸಮ್ಮ

ಆದರೂ ದೇವಿತಾಯಮ್ಮನು ತನ್ನ ಪ್ರಾಣ ಬೇಕಾದರೂ ಬಿಡಲು ಕೆಂಪೇಗೌಡನನ್ನು ಬಿಡಲಾರೆನೆಂದು ಮಾರುತ್ತರ ನೀಡುತ್ತಾಳೆ. ಅಷ್ಟಕ್ಕೆ ಸುಮ್ಮನಾಗದ ನೆರೆ ಮನೆಯಾಕೆ (ಬಹುತೇಕ ಅವಳು ಬ್ರಾಹ್ಮಣ ಸ್ತ್ರೀಯೇ ಆಗಿದ್ದಿರಬೇಕು.) " ಜಾತಿ ನೀತಿಯ ನೀವು ಬಿಟ್ಟು ಬಿಟ್ಟಿರಲ್ಲಮ್ಮ" ಎಂದು ಚುಚ್ಚಿ ಮಾತಾಡುತ್ತಾಳೆ. ಆಗ ದೇವಿತಾಯಮ್ಮ ಹೇಳುವ ಮಾತುಗಳಲ್ಲಿ ತಾಯ್ತನ, ಮಾನವೀಯತೆ, ವಾತ್ಸಲ್ಯಗಳು ಅಭಿವ್ಯಕ್ತವಾಗಿವೆ.[13]

ಅಮ್ಮ – ಜಾತಿ ನೀತಿಯ ಯಾರು ಮಾಡಿದರಮ್ಮ<br>
ಅಮ್ಮ – ನಮ್ಮಿಂದ ನಾವ್ ಮಾಡ್ದ ಜಾತಿ ಅಲ್ಲವೇನೆ<br>
ಅಮ್ಮ – ಜಾತಿಹೀನ ಮನೆಯ ಜ್ಯೋತಿಯು ಹೀನವೆ

ಅಮ್ಮ– ಅಂತೆ ಜ್ಯೋತಿ ನಮ್ಮ ಮನೆಗಾದ್ರು ಬಂದ್ಯೆತೆ
ಅಮ್ಮ– ಜಾತೀಯ ಹೆಸರೇಳಿ ಜ್ಯೋತಿಯ ನೂಕಬೇಕೆ
ಅಮ್ಮ – ಜಾತಿ ಮನೆ ಅಲ್ಲಿ ಹಾಳಾಗಿ ಹೋಗಲಮ್ಮ
ಆ – ಕಂದಾನ ನಾವಾದ್ರೆ ಸಾಕಿಕೊಳ್ಳುವೆವು.

ಈ ಘಟನೆ ಮತ್ತು ಮೌಲ್ಯಗಳ ಸಂಘರ್ಷ ಇಲ್ಲಿ ನಿಲ್ಲುವುದಿಲ್ಲ. ಒಬ್ಬ ತಲೆಮುಣ್ಣ ಅಜ್ಜಿಯು {ತಲೆಬೋಳಿಸಿಕೊಂಡ (ಗಂಡನಿಲ್ಲದ) } ಹಿರಿಯ ಮುದುಕಿ ದೇವಿತಾಯಮ್ಮನ ಬಳಿಗೆ ಬಂದು

"ಮಗು ಮಗು ಅನುತೀಯೆ ಯಾರ ಮಗು ಹೇಳಮ್ಮ...
ಅಬ್ಬಬ್ಬ ಅವನನ್ನು ತಗುದಾಚ್ಕೆ ನೂಕಿರಮ್ಮ
ನನ್ನ ಮಡಿಯಾದ್ರೆ ಕೆಟ್ಹೋಯ್ತು ಆಚೆಗೆ ತಳ್ಳಿರಮ್ಮ
ಏನುಬಂತೆ ನಿನಗೆ ಭೂತ ಹಿಡಿದೀತೇನೆ
ನೆನ್ನೆ ಮೊನ್ನೆಯಲ್ಲ ಚೆನ್ನಾಗಿ ಇದ್ಯಲ್ಲೆ
ರಂಗಧಾಮ್ನ ಗುಡಿಗೆ ನೆನ್ನೆ ಬಂದಿದ್ದೆಲ್ಲೆ
ಅಲ್ಲಿ – ಹರಿಕೀರ್ತನೆಗಳನ್ನೆಲ್ಲ ಕೇಳಿ ಬಂದ್ಯಲ್ಲೆ
ಅಲ್ಲಿ – ವೇದಪುರಾಣಗಳ ಕೇಳಿ ಬಂದ್ಯಲ್ಲೆ[14]

ಈ ಮಾತುಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು. ಮಧ್ಯಕಾಲೀನ ಭಾರತೀಯ ಸಮಾಜದಲ್ಲಿ ಜಾತಿ ಪದ್ಧತಿಯು ಅದೆಷ್ಟು ಆಳವಾಗಿ ಬೇರೂರಿತ್ತು. ಹಾಗೂ ಒಂದು ವೇಳೆ ಯಾರಾದರೂ "ಜಾತಿ ನೀತಿಗಳನ್ನು ಮೀರಿದರೆ ಅವರಿಗೆ ಆ ಸಮುದಾಯದಿಂದ ನಿಷ್ಠೂರವಾಗಿ ಬಹಿಷ್ಕಾರ ಹಾಕಲಾಗುತ್ತಿತ್ತು ಎಂಬುದಕ್ಕೆ ಈ ಘಟನೆ ಒಳ್ಳೆಯ ಉದಾಹರಣೆಯಾಗಿದೆ.

ಈ ಪ್ರಸಂಗದ ನಂತರ ನಿರೂಪಿತವಾಗಿರುವ ಕೆಂಪೇಗೌಡನ ಮಾತುಗಳಲ್ಲಿ ಒಡೆಯರನ್ನು ನಂಬಿದ್ದ ಅಥವಾ ಅವರೊಂದಿಗೆ ಒಡನಾಡಿಗಳೋ ಸೇವಕರೋ ಆಗಿದ್ದ ತಳಸಮುದಾಯದ ಜನರ ಸ್ವಾಮಿನಿಷ್ಠೆಯು ಹೃದಯಂಗಮವಾಗಿ ಹೊಮ್ಮಿದೆ.[15]

"ಯವ್ವ–ನೀನು ಬಾ ಅಂದರೆ ಬಂದೋಗುತೀನವ್ವ
ಯವ್ವ–ಅನ್ನವಿಕ್ಕಿದ ತಾಯಿ ನೀವಲ್ಲವೇನವ್ವ
ಯವ್ವ–ಕಡ್ಲೆ ಬೆಲ್ಲ ತಿನಿಸಿದ ತಾಯಿ ನೀವಲ್ಲವೇನವ್ವ
ಯವ್ವ–ಬರುತೀನಿ ಎಂಬುದಾಗಿ ಭಾಷೆ ಕೊಟ್ಹೋಗಪ್ಪ
ಅಯ್ಯೋ–ಕೆಂಪಣ್ಣ ಮಗುವಾದ್ರೆ ಭಾಷೆಯ ಕೊಡುತಾನೆ"

ತಾಯಿ ಮಗುವಿನ ಮಮತೆಗಳ ಛಾಯೆಯ ಹಿಂದೆ ಬಹಳ ಸೂಕ್ಷ್ಮವಾಗಿ ಮೇಲ್ವರ್ಗದ (ಅನ್ನ-ನೀರು ನೀಡಿದ) ಬಗ್ಗೆ ತಳಸಮುದಾಯದ ಜನರ ಮುಗ್ಧತೆ ಹಾಗೂ ಪ್ರಾಮಾಣಿಕತೆ, ಕೃತಜ್ಞತೆಗಳು ಸೊಗಸಾಗಿ ಇಲ್ಲಿ ಬಿಂಬಿತವಾಗಿವೆ.

ಮುಂದೆ ಅಣ್ಣೋಜಿಯು ಕೆಂಪೇಗೌಡನ ಜೊತೆಯಲ್ಲಿ ಕುಳಿತು ಊಟ ಮಾಡುವಾಗ ನಮ್ಮ ಮನೆಯಲ್ಲಿ ಇರಲು ಹಿಕಮತ್ತು ಮಾಡುತ್ತಾನೆ. ಹೊಟ್ಟೆಯಲ್ಲಿ ಹುಟ್ಟಿದ ತಮ್ಮ ಮಗನಿಗಿಂತ ಚೆನ್ನಾಗಿ ನಿನ್ನನ್ನು ನೋಡಿಕೊಳ್ಳುವೆವು ಎಂದು ಹೇಳುತ್ತಾನೆ.

ಆದರೆ ಕೆಂಪೇಗೌಡ ತನ್ನ ತಾಯಂದಿರ ಕಷ್ಟವನ್ನು ಅರುಹಿ ಅವರನ್ನು ಒಂದು ಮಾತು ಕೇಳಿಕೊಂಡು ಬರುವುದಾಗಿ ತಿಳಿಸುವ ಘಟನೆಯಲ್ಲಿ ಪುರೋಹಿತಶಾಹಿ ಮೇಲ್ವರ್ಗವು ಕೆಳವರ್ಗದವರನ್ನು ಹೇಗೆ ತಲೆಕೆಡಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದರೆಂಬುದನ್ನು ಕಾಣಬಹುದು. ತನ್ನ ತಾಯಿ ಕುಪ್ಪಮ್ಮನಿಗೆ ಎರಡು ಕಣ್ಣು ಕಾಣದು, ಇನ್ನು ಚಿಕ್ಕ ತಾಯಿ ಹರಿಯಲೆಯು ಈಚಲ ಬರಲನ್ನು ಮಾರಿ ದುಡ್ಡು ಸಂಪಾದಿಸಿ ತರುತ್ತಾಳೆ. ಏಳುದುಡ್ಡಿಗೆ ಒಂದು ಸೇರು ಜೋಳ ತಂದು ಬೇಯಿಸಿ ನಮ್ಮನ್ನು ಸಾಕುತ್ತಿದ್ದಾಳೆ. ಜೋಳ ಬೇಯಿಸಲು ಉಪ್ಪು ಸಹ ಇಲ್ಲದ ಸ್ಥಿತಿಯಲ್ಲಿ ತಾವಿದ್ದೇವೆ ಎಂದು ಕೆಂಪಣ್ಣ ತಿಳಿಸಿದರೆ, ಆ ಅಣ್ಣೋಜಿಯು – ನೋಡು ನೀನು ನಮ್ಮ ಮನೆಯಲ್ಲಿ ಇದ್ದು, ಇಲ್ಲೆ ಊಟ ಮಾಡು ಆಗ ನಿನ್ನ ಚಿಕ್ಕ ತಾಯಿ ಸೇರು ಜೋಳದ ಬದಲಿಗೆ ಮೂರ ಪಾವು ತಂದರೆ ಸಾಕಾಗುತ್ತದೆ. ಉಳಿಯುವ ಇನ್ನೊಂದು ಪಾವಿನ ದುಡ್ಡಿನಲ್ಲಿ ಉಪ್ಪು ತಂದು ಅಂಬಲಿ ಕಾಯಿಸಿ ಅವರು ಕುಡಿಯಲಿ ಎನ್ನುತ್ತಾನೆ. ಒಟ್ಟಿನಲ್ಲಿ ನಿಮ್ಮ ತಾಯಂದಿರು ಹೇಗಾದರೂ ಸಾಯಲಿ ಒಟ್ಟು ನೀನು ಮಾತ್ರ ಇಲ್ಲಿದ್ದು ಬಿಡು ಎಂದು ಹೇಳುವ ಅಮಾನವೀಯತೆ ಇಲ್ಲಿ ಇಡಿಕಿರಿದಿರುವುದು ಲಕ್ಷ್ಯಾರ್ಹ. ಕಡೆಗೂ ಅವನಿಂದ ಕಿತ್ತುಕೊಂಡು ಹೀಗೆ ಹೇಳುತ್ತಾಳೆ–[16]

> ಹೆಣ್ಣೆ–ನಮ್ಮ ಜಾತಿಯಾದಾಗ ಬ್ರಾಮಾರ ಜಾತೀಯ
> ಹೆಣ್ಣೆ–ಎಲ್ಲಾ ಎಲ್ಲಾ ಜಾತ್ಗು ಮೇಲಾದ ಜಾತಿಯಲ್ಲೆ
> ದೇವ ಬ್ರಾಮಣರೆಂಬ ಹೆಸರು ನಮಗಲ್ಲೆ
> ನಮ್ಮ–ದೇವ ಬ್ರಾಮಣರೆಂಬ ಹೆಸರನ್ನು ಕಳೀತೀಯ
> ಇಂತೆ ಕೆಟ್ಟ ಜಾತಿ ಮಕ್ಕಳನ್ನು ತರಬವುದೆ ನೀನೀಗ
> ಸರಾದ್ರೂಮುಂಡೇ ಮಗನ ಮೊದಲಾಚೆಗೆ ನೂಕೆ

ಆಚೆಗೆ ನೂಕಮ್ಮ ಮಡಿಯಾದ್ರೆ ಮಾಡಮ್ಮ

ನಿನ್ಗೆ – ಹೇಳೋರು ಕೇಳೋರು ಇಲ್ಲವಾದರೇನೆ

ಹಿರಿಯರು, ಅನುಭವಸ್ಥರು, ಜೀವನದ ಕಷ್ಟ ಸುಖಗಳನ್ನು ಕಂಡವರು ಆಡುವ ಮಾತುಗಳೇ ಇವು?! ಎನಿಸುತ್ತದೆ. ಆದರೆ ಜಾನಪದರು ಅಜ್ಜಿಯ ಪಾತ್ರ ಮತ್ತು ಪ್ರತಿಮೆಯ ಮೂಲಕ ಪರಂಪರಾಗತವಾಗಿ ನಮ್ಮ ಸಮಾಜದಲ್ಲಿ ಬೇರೂರಿರುವ ಜಾತಿ ಪ್ರಜ್ಞೆಯನ್ನು ಜಾತಿಯ ಸಂಕೋಲೆಯಿಂದ ಬಿಡಿಸಿಕೊಳ್ಳಲು ಆಗದಂತ ಸ್ಥಿತಿಯ ಅನಿವಾರ್ಯತೆಯನ್ನು ಅದರ ದುಷ್ಟ ಪರಿಣಾಮ ಪ್ರಭಾವಗಳನ್ನು ಏನೇ ಆದರೂ ಜಾತಿಯ ಬೇರಿನಿಂದ ಕಿತ್ತುಕೊಂಡು ಹೋಗಬಾರದೆನ್ನುವ ಬಂಧನದ ಸ್ವರೂಪವನ್ನು, ಅಜ್ಞಾನದ ಅಂಧಕಾರದಲ್ಲಿ ಶೂದ್ರರನ್ನು ಉಳಿಸಿ ಅವರಿಗೆ ಸಮಾಜದಲ್ಲಿ ನಮಗೆ ಸಮಾನವಾದ ಸ್ಥಾನಮಾನಗಳು ಸಿಗಬಾರದೆನ್ನುವ ಪುರೋಹಿತಶಾಹಿಯ ಸ್ವಾರ್ಥ, ದುರ್ಬುದ್ಧಿ ಹಾಗೂ ಹೊಟ್ಟೆ ಉರಿಗಳನ್ನು ವ್ಯಕ್ತಪಡಿಸುತ್ತಿದ್ದಾರೆಂದು ತೋರುತ್ತದೆ.

ದೇವಿತಾಯಮ್ಮ ಮತ್ತು ಅಜ್ಜಿಯು ವಾದ ಮಾಡುತ್ತಿರುವುದನ್ನು ಕಂಡ ಮಗು ಕೆಂಪೇಗೌಡನು "ನಿಮ್ಮ ಜಗಳ ಬಿಡಿರಮ್ಮ ನಾನಾದ್ರೆ ಹೋಗುತ್ತೀನಿ ನನಗಾಗಿ ನೀವ್ಯಾಕೆ ಜಗಳಾವ ಕಾಯುತ್ತೀರಿ" ಎಂದು ನುಡಿಯುತ್ತಾನೆ. ಇಂತಹವರು ಸಾವಿರ ಜನ ಬಂದು ಹೇಳಿದರೂ ತಾನು ಕೆಂಪೇಗೌಡನನ್ನು ಕಳುಹಿಸುವುದಿಲ್ಲವೆಂದು ದೇವಿತಾಯಮ್ಮ ನುಡಿಯುತ್ತಾಳೆ. ಆಗ ಅಜ್ಜಿ–

"ತಮ್ಮ ಮನೆಯಲ್ಲಿ ಇರುವುದಾಗಿ" ಭಾಷೆ ಮಾಡಿಸುತ್ತಾನೆ ಅಣ್ಣೋಜಿ, ಮುಗ್ಧಕಂದ ಕೆಂಪಣ್ಣ ತನ್ನ ತಾಯಂದಿರಿಗೆ ಈ ವಿಷಯ ತಿಳಿಸುತ್ತಾನೆ. ತಾಯಂದಿರು ಈ ಮಾತು ಕೇಳಿ ನೋಯುವವರು, ಬೇಯುವಂತು; ಅವನನ್ನು ತಡೆಯುವರು; ಬ್ರಾಹ್ಮಣರ ಮೋಸವನ್ನು ಬಗೆ ಬಗೆಯಾಗಿ ವಿವರಿಸುವರು. ನನ್ನ ಸಾಲ ಬೊಯ್ತಾರೆ ನಿನ್ನ ಸಾಲ ಹುಯ್ತಾರೆ ಏನೇ ಹೇಳಿದರೂ "ಕೊಟ್ಟ ಮಾತಿಗೆ ತಪ್ಪಲಾರೆನೆಂದು" ಕೆಂಪೇಗೌಡ ಬ್ರಾಹ್ಮಣರ ಮನೆಗೆ ಹಿಂದಿರುಗುವನು. ಅವರು ಪ್ರೀತಿಯಿಂದ ಸ್ವಾಗತಿಸುವರು. ಅವನಿಗೆ ಭಕ್ಷ್ಯ ಭೋಜನಗಳನ್ನು ಮಾಡಿ ಬಡಿಸಿ ಮಲಗಿಸಿದ ಮೇಲೆ, ಅಣ್ಣೋಜಿ ತನ್ನ ಹೆಂಡತಿಗೆ" ಅವನು ಸಾಯುವ ತನಯ ನಮ್ಮಲ್ಲೆ ಇರಬೇಕು. ಆ ರೀತಿ ಅವನ ದ್ರೋಹಾವ ಬರೆಸಿಕೊಳ್ಳಬೇಕು" ಎಂದು ಹೇಳಿ ಕುತಂತ್ರ ಮಾಡುತ್ತಾನೆ. ಕೆಂಪೇಗೌಡ ಎದ್ದ ನಂತರ, ಹಾಲು ಸಕ್ಕರೆ ಕೊಬ್ಬರಿ ಬೆಲ್ಲಗಳನ್ನು ಕೊಡುತ್ತ "ಸಾಯುವವರೆಗೂ ಅವನು ತಮ್ಮಲ್ಲಿಯೇ ಇರಬೇಕು" ಎಂದು ಪತ್ರ ಬರೆಸಿಕೊಳ್ಳುತ್ತಾಳೆ. ಕೆಂಪೇಗೌಡನಿಗೆ ತಿಂಡಿ– ತಿನಿಸುಗಳ ಆಸೆ ಆಮಿಷಗಳನ್ನೊಡ್ಡಿ, ನಟನಾತ್ಮಕವಾದ ಭಾವನಾತ್ಮಕತೆಯ ಬಂಧನದಲ್ಲಿರಿಸುತ್ತಾರೆ. ಇಲ್ಲಿ 'ಲಿಪಿ

ಪತ್ರ' ಎಂಬ ಉಲ್ಲೇಖವು ಜೀತಪತ್ರವೇ ಸರಿ "ತಮ್ಮ ಮನೆಯಲ್ಲೇ ಇರು" ಎಂಬ ಮಾತು ಆತನ ಕಡೆಯವರೆಗೂ ಜೀತ ಮಾಡಿಕೊಂಡು ಇರಬೇಕೆಂಬುದನ್ನು ಧ್ವನಿಸುತ್ತದೆ. ಮಧ್ಯಕಾಲೀನ ಸಮಾಜದ ಜೀತಪದ್ಧತಿಯ ಕರಾಳ ಛಾಯೆಯ ಒಂದು ರೂಪವನ್ನಿಲ್ಲಿ ಕಾಣಬಹುದು.

ಇತ್ತ ಕೆಂಪಣ್ಣ ಗುಡಿಸಲಿಗೆ ಹಿಂದಿರುಗದೆ ಇದ್ದುದರಿಂದ ಕುಪ್ಪಮ್ಮ ಹರಿಯಮ್ಮರು ಅವನನ್ನು ಹುಡುಕಿಕೊಂಡು ಮಾಗಡಿ ಪಟ್ಟಣದೊಂದಿಗೆ ಬರುವರು. ಅಣ್ಣೋಜಿಯ ಮನೆಯನ್ನು ಹುಡುಕಿ ತಮ್ಮ ಮಗನನ್ನು ಕಳುಹಿಸಿ ಕೊಡಲು ಕೇಳಿದರು. ಆದರೆ ಆ ಹಾರುವರು–[17]

ಅಯ್ಯೋ – ಸೂದ್ರು ಮುಂಡೆ ಮಗಳೆ ಇಲ್ಲಗ್ಯಾಕೆ ಬಂದೆ
ಏಯ್ – ಹೊರಡು ಹೊರಡು ಎಂದು ನೂಕೊಂಡೆ ಬರುತಾನೆ
ನಿನ ಮಗನು ಅವನಲ್ಲ ನಮ್ಮ ಮಗ ಕಾಣೆ
ಹಂಗಂತ ಅವನು ಲಿಪಿಯ ಬರದವುನೆ
ಲಿಪಿಯ ಬರೆದಾ ಮೇಲೆ ಅವನು ನಮ್ಮವನು
ಅಮ್ಮ – ಜನುವಾರ ಹಾಕಿ ಸಾಕುತೀವಿ ಹೋಗಮ್ಮ
ಅವನೀಗೆ ಉಪನಯನ ಮಾಡುತ್ತೀವಮ್ಮ"

ಎಂದು ಹೇಳುವರು. ಕುಪ್ಪಮ್ಮ ಹರಿಯಮ್ಮ ಹಲವು ಬಗೆಯಲ್ಲಿ ಕಾಡಿ ಬೇಡಿ ಗೋಳಾಡಿದರೂ ಕೆಂಪೇಗೌಡ ಗುಡಿಸಲಿಗೆ ಬರುವುದಿಲ್ಲವೆಂದು ಹಾರುವರು ಅವನನ್ನು ಕಳುಹಿಸುವುದಿಲ್ಲವೆಂದರು. ಹೆತ್ತ ಮಗನು ದೂರಾದ ಸಂಗತಿಯಿಂದ ಕುಪ್ಪಮ್ಮನಿಗೆ ಬರ ಸಿಡಿಲು ಎರಗಿದಂತಾ ಗುತ್ತದೆ. ಆಕೆ ಕಂದ ಕಂದ ಎನ್ನುತ್ತಲೇ ಅವರ ಮನೆಯ ಹೊಸ್ತಿಲ ಮೇಲೆ ಬಿದ್ದು ಬಿಡುತ್ತಾಳೆ. ತಾಯಿ ಬಿದ್ದುದ್ದನ್ನು ಕಂಡು ಕೆಂಪಣ್ಣ ಓಡಿ ಬಂದು ಸಂತೈಸುತ್ತಾನೆ; ತಾನು ಬರಲು ಸಾಧ್ಯವಿಲ್ಲವೆಂದು ಖಡಾ ಖಂಡಿತವಾಗಿ ನುಡಿಯುತ್ತಾನೆ. ಅಷ್ಟರಲ್ಲಿ ತಮ್ಮೋಜಿಯು ತಡಬಡನೆ ಬಂದು–[18]

"ಛೀ ಇದು ಎಂತೆ ಅನಿಷ್ಟ ಕುರುಡಾರು ಮನೆ ಮುಂದೆ...."
ಏಯ್ – ಬಾಯ್‌ಬಡುಕಿ ಮುಂಡೇರ ಮನೆ ಮುಂದೆ ಸುಬ್ಯಾಡಿ
ಹೋದಿರೋ ಇಲ್ಲಾವೋ ಬಾರುಗೋಲ ತರಬೇಕೋ
ಲಿಪಿ ಬರೆದು ಕೊಟ್ಟ ಮೇಲೆ ಅವನ ನಮ್ಮ ಹುಡುಗ
ಅವನಿಗೂ ನಿಮಗೂ ಸಂಬಂಧವಿನ್ನಿಲ್ಲ"

ಎಂದು ಧಾರ್ಷ್ಟ್ಯದಿಂದ ಹೇಳುತ್ತಾರೆ. ಉಗ್ರ ಕೋಪದಿಂದ ಬಾರುಗೋಲಿನಿಂದ ಕುಪ್ಪಮ್ಮ ಹರಿಯಮ್ಮರಿಗೆ ಬಾರಿಸುತ್ತಾನೆ. ಮೇಲ್ವರ್ಗದವರ ಗರ್ವ, ಅಹಂಕಾರ, ನೀಚತನ,

ಅಭಾವುಕತೆಗಳಿಗೆ, ಅಮಾನವೀಯತೆಗಳಿಗೆ ಈ ಘಟನೆಯು ಸಾಕ್ಷೀಭೂತವಾಗಿದೆ ಎನ್ನಬಹುದು. ಜೊತೆಗೆ ಒಕ್ಕಲು ಮಕ್ಕಳ ಅನಾಥಭಾವ, ಅಸಹಾಯಕತೆಗಳು ಇಲ್ಲಿ ಸೂಚ್ಯವಾಗಿವೆ.

ಈ ಎಲ್ಲ ಘಟನೆಗಳಲ್ಲೂ ಜಾತಿ ಸಂಘರ್ಷ, ಶೋಷಣೆಯ ನೆಲೆಗಳನ್ನು ನಿಚ್ಚಳವಾಗಿ ಕಾಣಬಹುದು. ಎಲ್ಲಕ್ಕಿಂತ ಮಿಗಿಲಾಗಿ ಕೆಂಪೇಗೌಡನನ್ನು ಮತಾಂತರ ಮಾಡುವ ಉಲ್ಲೇಖವು ಸಮಕಾಲೀನ ಸಮಾಜದಲ್ಲಿ ನಡೆಯುತ್ತಿದ್ದ ಮತಾಂತರ ಪ್ರಕ್ರಿಯೆಗೆ ಹಿಡಿದ ಕನ್ನಡಿಯಾಗಿದೆ.

### 5.1.4 ವರ್ಗಭೇದ ಧೋರಣೆ

ಯಲಹಂಕ ನಾಡಪ್ರಭುಗಳ ಲಾವಣಿಗಳಲ್ಲಿ ಮತ್ತು ಕಥೆಗಳಲ್ಲಿ ವರ್ಗಭೇದ ಧೋರಣೆಯ ಹಲವು ಮುಖಗಳನ್ನು ಗುರುತಿಸಬಹುದು. ಮಾಗಡಿಯ ಬೀದಿ ಬೀದಿಗಳಲ್ಲಿ ಮಕ್ಕಳು ಆಡುವುದನ್ನು ಕಂಡ ಕೆಂಪೇಗೌಡ ತಾನು ಆಟವಾಡಲು ಬಯಸುತ್ತಾನೆ. ಆ ಹುಡುಗರು ಕೇಕೆ ಹಾಕುವುದು, ಕಿಲ ಕಿಲ ಎಂದು ನಗುವುದು, ನಾನು ಗೆದ್ದೆ ನಾನು ಗೆದ್ದೆ ಎಂದು ಕಿರುಚುವುದನ್ನು ಕಂಡು ತನ್ನನ್ನು ಆಟಕ್ಕೆ ಸೇರಿಸಿಕೊಳ್ಳುವಂತೆ ಬೇಡಿಕೊಳ್ಳುತ್ತಾನೆ.[19]

"ನಾನಾದ್‌ರೆ ಬರುತೀನಿ ಕರುಕೋಣ್ತೆರೇನ್ರಯ್ಯ
ನಾನು – ಇಪ್ಪೆ ತೋಪಲ್ಲಿರುವ ಗುಡಿಸಲ ಹುಡುಗಾನು
ಅಯ್ಯ – ಆಗ ಇಬ್ಬರು ಅಲ್ಲಿ ಏನಂತ ಹೇಳುತಾರೆ
ಏಯ್ – ನೀನು ನಮ್ಮಂತೋರ್ ಜೊತೆಯಲ್ಲಿ ಆಡೋದು ಪರವಲ್ಲ
ಏಯ್ – ನೀನು ನಮ್ಮಂತೋರ್ ಜೊತೆಯಲ್ಲಿ ಆಡೋದು ಪರವಲ್ಲ
ಏಯ್ – ಹೋಗಾಲ ಹೋಗಾಲ ಪರದೇಸಿ ಅನುತಾರೆ !

ಮೊದಮೊದಲು ಕೆಂಪಣ್ಣನನ್ನು ಆಟಕ್ಕೆ ಸೇರಿಸಿಕೊಳ್ಳುವುದಿಲ್ಲ; ಆ ನಂತರ ಅವನ ಬಲವಂತ ತಾಳಲಾರದೆ ಆಟಕ್ಕೆ ಸೇರಿಸಿಕೊಳ್ಳುತ್ತಾರೆ. ಆದರೂ ಆ ಎಳೆಯ ಮನಗಳಲ್ಲಿ ಕೆಂಪಣ್ಣ ಕೀಳು; ಗುಡಿಸಲಿನಲ್ಲಿರುವಾತ; ನಾವಾದರೊ ಅವನೊಂದಿಗೆ ಆಡಕೂಡದು ಎಂಬ ತರತಮಭಾವ ಹಾಸು ಹೋಕ್ಕಾಗಿರುವುದನ್ನು ಅವಲೋಕಿಸಿದರೆ ಅಂದಿನ ಸಮಾಜದ ವರ್ಗಭೇದ ನೀತಿಯನ್ನು ಜಾನಪದ ಕವಿ ಮನೋಜ್ಞವಾಗಿ ಪ್ರತಿಮಾತ್ಮಕವಾಗಿ ನಮ್ಮ ಮುಂದಿಟ್ಟಿದ್ದಾನೆ.

### 5.1.5 ಸಾರ್ವಜನಿಕ ಕಾರ್ಯಗಳು

ಯಲಹಂಕ ನಾಡಪ್ರಭುಗಳಿಗೆ ಸಂಬಂಧಿಸಿದ ಜನಪದ ಸಾಹಿತ್ಯದಲ್ಲಿ ಸಾಮಾಜಿಕ ಆಸ್ಥೆವುಳ್ಳ ಸಾರ್ವಜನಿಕ ಕಾರ್ಯಗಳ ವಿಷಯ ನಿರೂಪಿತವಾಗಿರುವುದನ್ನು ಕಾಣಬಹುದು. ಹೆಣ್ಣು

ಸಂತಾನವನ್ನು ಒಲ್ಲದ ಪುತ್ರ ಸಂತಾನಕ್ಕಾಗಿಯೇ ಹಪಿಹಪಿಸುತ್ತಿರುವ ಹಂಬಲಿಸುತ್ತಿರುವ ತನ್ನ ಪತಿ ಬೋರೆಗೌಡನಿಗೆ ಕುಪ್ಪಮ್ಮ "ದಾನಧರ್ಮ ಮಾಡಬೇಕು ಪುಣ್ಯ ಕೆಲ್ಸ ಮಾಡಬೇಕು" ಆಗ ಮಾತ್ರ ಮಕ್ಕಳ ಭಾಗ್ಯ ದೊರೆಯುತ್ತದೆಂದು ಹೇಳುತ್ತಾಳೆ. ಆಗ ಬೋರೇಗೌಡನು

ಕಾಸಿಗೋಗ ದಾರಿಯಲ್ಲಿ ಕಲ್ಲುಮುಳ್ಳೆ ಗುಡಿಸ್ಯಾನು
ಕಾಸಿಗೋಗ ದಾರಿಯಲ್ಲಿ ಅನ್ನಛತ್ರ ನಡಿಸ್ಯಾನು
ಊರ ಮುಂಭಾಗದಲ್ಲಿ ಮಾವುನ್ ತೋಟ ಹಾಕಿಸ್ಯಾನು
ದನಕರ ಕುಡಿಯೋಕೆ ಕೆರೆ ಬಾವಿ ಕಟ್ಟಿಸ್ಯಾನು
ಆಗ ಬೇಕಾದಷ್ಟು ಪುಣ್ಯ ಛತ್ರ ನಡಿಸ್ಯಾನು
ಏನು ಕೆಲ್ಸ ಮಾಡ್ಸಿದರು ಮಕ್ಕಳೊಂದು ಆಗಲಿಲ್ಲ
ಆಗ ತಾಯಿ ತಂದೆ ಇಲದಂತೆ ತಬ್ಬಲಿಯ ಮಕ್ಕಳಿಗೆ

ಆಗ–ಬೋರೆಗೌಡ ಬೇಗುದಿಂದ ಲಗ್ನವಾದ್ರೆ ಮಾಡಿಸ್ಯಾನು ಯಾವ ಜನೋಪಕಾರಿ ಕೆಲಸಗಳನ್ನು ಮಾಡಿದರೂ ಮಕ್ಕಳ ಭಾಗ್ಯ ದೊರೆಯದಾದಾಗ ತನ್ನ ಮನೆದೈವ ರಂಗಧಾಮವನ್ನು ಪ್ರಾರ್ಥಿಸುತ್ತಾನೆ. ರಂಗಧಾಮನ ಕೃಪೆಯಿಂದ ಆತನಿಗೆ ಗಂಡು ಮಗುವು ಜನಿಸುತ್ತದೆ. ಆ ಸಂತೋಷ – ಸಂಭ್ರಮದಲ್ಲಿ ಇನ್ನಷ್ಟು ಪುಣ್ಯ ಕಾರ್ಯಗಳನ್ನು ನೆರವೇರಿಸುತ್ತಾನೆ.[20]

ರಾಮ–ಭೀಮ ಎಂಬ ದುಡ್ಡೀನ ಕಣಜಾವ
ದುಡ್ಡೀನ ಕಣಜಾವ ಕೀಳುತಾನೆ ಬೋರೆಗೌಡ
ಅನ್ನದಾನ ಮಾಡುತಾನೆ ಹೊನ್ನುದಾನ ಮಾಡುತಾನೆ
ಚಿನ್ನದಾನ ಮಾಡುತಾನೆ ವಸ್ತದಾನ ಮಾಡುತಾನೆ
ಭೂದಾನ ಮಾಡುತಾನೆ ಗೋದಾನ ಮಾಡುತಾನೆ
ಹೀಗೆ ಹಲವು ದಾನಧರ್ಮಗಳನ್ನು ಮಾಡುತ್ತಾನೆ ಬೋರೇ ಗೌಡ.

ಮಾಗಡಿ ಕೆಂಪೇಗೌಡರನ್ನು ಕುರಿತ ಮೂರನೆಯ ಕಾವ್ಯದಲ್ಲಿ ಕೆಂಪೇಗೌಡನು ತನಗೆ ದೊರೆತನ ದೊರಕಿದ ಮೇಲೆ ಎಲ್ಲೆಲ್ಲೂ ಅನ್ನದ ಛತ್ರಗಳನ್ನು ನಿರ್ಮಿಸಿದನು; ಮಂಟಪಗಳನ್ನು ಕಟ್ಟಿಸಿದನು. ಎಂದು ಹೇಳುವುದು ಅರಸನು ತಾನು ನಿಜವಾಗಿ ಪಟ್ಟ ಪಾಡಿಗಾಗಿ ನಡೆಸಿದ ಧಾರ್ಮಿಕ ಕರ್ತವ್ಯವಾಗಿದೆ. ಇದು ಆತನ ಪ್ರಜಾವಾತ್ಸಲ್ಯ, ಜನಾನುರಾಗಗಳನ್ನು ರಾಜಕೀಯ ಕಾರಣಗಳ ಆಚೆಗೂ ಪ್ರತಿಧ್ವನಿಸುತ್ತದೆ.

ಬಂಡಿ ಬೋರೆಗೌಡ ಅಸುನೀಗಿದ ಸಂದರ್ಭದಲ್ಲಿ ಮಡದಿ ಕುಪ್ಪಮ್ಮ ಮತ್ತು ಸೊಸೆ (ಸಾಕು ಮಗನ ಹೆಂಡತಿ) ಹರಿಯಲ ದೇವಿಯು ದುಃಖಿತಪ್ತರಾಗಿದ್ದಾಗ ಅವರ ಶೋಕದಲ್ಲಿ ಊರ ಜನರು ಆತ್ಮೀಯವಾಗಿ ಪಾಲ್ಗೊಂಡ ಬಗೆ ಅತ್ಯಂತ ಹೃದ್ಯವಾಗಿ ಈ ಕಾವ್ಯದಲ್ಲಿ ನಿರೂಪಿತವಾಗಿದೆ. ನಂಜಯ್ಯ, ಚನ್ನಯ್ಯ, ಬೋರಯ್ಯ, ನಿಂಗಯ್ಯ, ಮಟರಣ್ಣ ಮೊದಲಾದ ಜನರು ಬಂದು ಬೋರೇಗೌಡನನ್ನು ಸ್ಮರಿಸಿಕೊಂಡು ಅಳತೊಡಗುತ್ತಾರೆ. ಪರಸ್ಪರರು ಸಮಾಧಾನವನ್ನು ಮಾಡಿಕೊಳ್ಳುತ್ತಾರೆ. ಬೋರೇಗೌಡನೊಂದಿಗೆ ತಮ್ಮ ನಿಷ್ಕಲ್ಮಶವೂ ನಿಸ್ವಾರ್ಥವೂ ಆದ ವಾತ್ಸಲ್ಯ ಮಮತೆಗಳನ್ನು ನೆನೆದು ಕೃತಜ್ಞತಾ ಭಾವವನ್ನು ವ್ಯಕ್ತಪಡಿಸುತ್ತಾರೆ. ಅವರಲ್ಲಿ ಒಬ್ಬ ಮಟರಣ್ಣ ಎಂಬಾತ ಬೋರೆಗೌಡನಿಂದ ತಾನು ಉಪಕೃತನಾದ ಬಗೆಯನ್ನು ಹೇಳಿಕೊಳ್ಳುತ್ತಾನೆ.

ಅಪ್ಪ– ನಾನಾದ್ರೆ ಪರದೇಸಿ ಬಡಸ್ತಾನದಲ್ಲಿ ಇದ್ದೆ<br>
ಅಯ್ಯ – ಈ ಊರೆ ತಂದೋರು ಅವುರೆ ಕಾಣಪ್ಪ ನನ್ನ<br>
ಅಯ್ಯ– ಅವರಿಂದೆ ನಾನಾದ್ರೆ ಹೆಂಡತೀಯ ಕಟುಕೊಂಡೆ<br>
ಅಯ್ಯ– ಅವರಿಂದ ನಾನಪ್ಪ ಮನೆಯನ್ನೇ ಕಟುಕೊಂಡೆ<br>
ಅವರಿಂದಲಾದರೆ ಹೊಲಿಂಗದ್ದೆ ತಕ್ಕೊಂಡೆ

ಈ ಭಾಗದೊಂದಿಗೆ ಇನ್ನು ಮುಂದುವರಿದಿರುವ ಸಾಲುಗಳು ಮತ್ತೂ ಬೋರೇಗೌಡನ ಜನಾನುರಾಗವನ್ನು ಸೊಗಸಾಗಿ ಹೊರಗೆಡಹುತ್ತವೆ. ಒಮ್ಮೆ ಮಟರಣ್ಣನ ಹೆಂಡತಿ ಹುಳ್ಳಿಕಾಳನ್ನು ಹುರಿಯುತ್ತಿದ್ದಳಂತೆ. ಆಗ ಅಲ್ಲಿಗೆ ಬಂದ ಬೋರೆಗೌಡ "ಏನಿದು ಕಂಟು" ಎಂದು ಕೇಳಿದನಂತೆ. ರಾಗಿ ಇಲ್ಲದ್ದರಿಂದ ತನ್ನ ಹೆಂಡತಿ ಹುಳ್ಳಿಕಾಳು ಹುರಿಯುತ್ತಿರುವುದಾಗಿ ಮಟರಣ್ಣ ತಿಳಿಸಿದಾಗ, ಮನನೊಂದ ಬೋರೆಗೌಡ, ಯಾರನ್ನಾದರೂ ಮನೆಗೆ ಕಳಿಸಿದ್ದರೆ ಸಾಕಿತ್ತಲ್ಲ. ನಾನೇ ನಿನಗೆ ರಾಗಿಯನ್ನು ಕೊಡುತ್ತಿದ್ದೆ ಎಂದು ದೊಡ್ಡತನ ತೋರಿದನಂತೆ, ಅಂತಹ ಉದಾರ ಮನಸ್ಕನನ್ನು ಈಗ ಮಟರಣ್ಣ ನೆನೆಸಿಕೊಂಡು ಅಳುತ್ತಿರುತ್ತಾನೆ.

ಮತ್ತೊಬ್ಬ ನಿಂಗಣ್ಣ ಎಂಬುವವನು, ಅವನ ತಂದೆ ತೀರಿ ಕೊಂಡಾಗ, ಅಂತ್ಯಕಾರ್ಯಗಳನ್ನು ಮಾಡಲು ದುಡ್ಡಿಲ್ಲದೆ ಪರದಾಡುತ್ತಿದ್ದಾಗ ಬೋರೆಗೌಡ ಅಲ್ಲಿಗೆ ಧಾವಿಸಿ ಹೋಗಿ ತಿಥಿಕಾರ್ಯಗಳು ನೆರವೇರುವಂತೆ ಮಾಡಿದನಂತೆ. ಬೋರಣ್ಣ ಎಂಬಾತನಿಗೆ ದುಡಿಯಲು ಭೂಮಿಯನ್ನು ದಾನ ಮಾಡಿದ್ದ. ನಂಜಣ್ಣ ಎಂಬುವವನು ಇರಲು ಸೂರಿಲ್ಲದೆ ನಲಗುತ್ತಿದ್ದಾಗ ಅವನಿಗೆ ಮನೆಯನ್ನು ಕಟ್ಟಿಸಿಕೊಟ್ಟ. ಹೀಗೆ ಬೇರೆಗೌಡ ಕಷ್ಟದಲ್ಲಿದ್ದವರಿಗೆ ಅವರು ಸಹಾಯ ಕೇಳಲಿ ಬಿಡಲಿ, ತಾನೇ ಅದರ ಸ್ಥಿತಿಯನ್ನು ಅರಿತು ಸಹಾಯ ಮಾಡುತ್ತಿದ್ದ.

ಹರುಕರು, ತಿರಕರು ಬಂದು ಬೋರೆಗೌಡನನ್ನು ನೆನೆದು ಅವನು ಮರಣ ಹೊಂದಿದ್ದಕ್ಕಾಗಿ ಬಹುವಾಗಿ ದುಃಖಿಸುತ್ತಾರೆ. ದೊಂಬಿದಾಸರು ಬಂದು ಬೋರೇಗೌಡನ ಮನೆ ಮುಂದೆ ದುಃಖಭರಿತವಾಗಿ ಗೌಡರನ್ನು ಹಾಡಿ ಹೊಗಳುತ್ತಾರೆ. ಅಂದರೆ ಸಾಮಾನ್ಯಾತಿಸಾಮಾನ್ಯರಿಗೂ ಬೋರೆಗೌಡ ಎಷ್ಟು ಹತ್ತಿರವಾಗಿದ್ದ ಎಂಬುದು ವೇದ್ಯವಾಗುತ್ತದೆ. ಇನ್ನೊಂದು ಮುಖ್ಯಾಂಶವೆಂದರೆ, ದೊಂಬಿದಾಸರು ಇಲ್ಲಿ ಪಾತ್ರವಾಗಿ ಬಂದು ಹೋಗಿರುವುದು. ಯಲಹಂಕ ನಾಡ ಪ್ರಭುಗಳ ಕಥೆಯನ್ನು ಮೌಖಿಕವಾಗಿ ಉಳಿಸಿಕೊಂಡು ಬಂದಿರುವ ದೊಂಬಿದಾಸರು, ಹೆಳವರು, ಬುಡ್ಗಜಂಗಮರು ಮೂಲತಃ ಬೇಹುಗಾರರು, ರಾಜಮಹಾರಾಜರು ಬೇಹುಗಾರಿಕೆಯನ್ನು ವಿಶೇಷವಾಗಿ ಬಳಸಿಕೊಳ್ಳುತ್ತಿದ್ದರು.

ಪಾಳೆಯಗಾರರೂ ಅದೇ ಕ್ರಮವನ್ನು ಮುಂದುವರಿಸಿದರು. ಬೇಹುಗಾರರು ಭಿಕ್ಷುಕ ವೇಷದಲ್ಲಿ ಊರೂರು ಸುತ್ತಿ, ಪರರಾಜ್ಯಗಳಿಗೂ ಹೋಗಿ ವಿಷಯ ಸಂಗ್ರಹಿಸಿ, ತಮ್ಮ ಆಶ್ರಯದಾತರ ಕುಲವನ್ನು ಕೊಂಡಾಡುವುದು, ಕಥೆ ಕಟ್ಟಿ ಪ್ರಚಾರ ಮಾಡುವುದು ಸಾಮಾನ್ಯವಾಗಿತ್ತು. ಬೇಹುಗಾರರಿಗೆ ನಾಡ ಪ್ರಭುಗಳು ಉದಾರವಾಗಿ ಸಹಾಯ ಮಾಡುತ್ತಿದ್ದರು. ಬೇಹುಗಾರಿಕೆ ಜೊತೆಯಲ್ಲಿ ವೃತ್ತಿಗಾಯಕರಾಗಿದ್ದ ದೊಂಬಿದಾಸರು, ಹೆಳವರು, ಬುಡ್ಗ ಜಂಗಮರಿಗೆ ಯಲಹಂಕ ನಾಡಪ್ರಭುಗಳು ನಾನಾ ರೀತಿಯ ಸಹಾಯ ಮಾಡಿ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಕೆಂಪೇಗೌಡ ಮತ್ತು ಅವರ ವಂಶೀಯರ ಕಥೆಯನ್ನು ಹೇಳುವ ದೊಂಬಿದಾಸರೇ ತಮ್ಮ ಕಥಾ ನಿರೂಪಣೆಯಲ್ಲಿ ಒಂದು ಪಾತ್ರವಾಗಿ ಬಂದು ಹೋಗಿರುವುದು ಎಂದಿರುವ ವಿದ್ವಾಂಸರಾದ ಡಿ. ಲಿಂಗಯ್ಯನವರ ಮೇಲಿನ ಮಾತುಗಳಿಗೆ ಇಂತಹ ಘಟನೆಗಳು ಪ್ರಮುಖವಾಗಿ ಸಾಕ್ಷಿಯಾಗಿದೆ.

ಜೊತೆಗೆ ಮಟರಣ್ಣ, ನಿಂಗಣ್ಣ ಬೋರಣ್ಣ, ನಂಜಣ್ಣ ತಮಗೆ ಬೋರೆಗೌಡ ಸಹಾಯ ಮಾಡಿದುದನ್ನು ಹೇಳಿಕೊಂಡಿರುವ ಪ್ರಸಂಗವು ಪಾಳೆಯಗಾರರೂ ಅಥವಾ ಕೆಂಪೇಗೌಡನೋ ಅಥವಾ ಅವನ ವಂಶೀಯರೋ ಬೇಹುಗಾರರಾಗಿ ತಮ್ಮ ಪ್ರಜೆಗಳ ಕಷ್ಟ ಸುಖಗಳನ್ನು ಅರಿತು ನೆರವು ನೀಡುತ್ತಿದ್ದುದನ್ನು ಧ್ವನಿಸುತ್ತಿದೆ ಎನಿಸುತ್ತದೆ. "ಜನಪದ ಕಾವ್ಯದಲ್ಲಿ ಕೆಂಪೇಗೌಡನು ಕಂಬಳಿ ದಟ್ಟಿ ಧರಿಸಿದ್ದ ಎಂಬ ಉಲ್ಲೇಖವು ಬಹುಶಃ ಆತ ಮಾರುವೇಷದಲ್ಲಿ ಸಂಚರಿಸುತ್ತ ರಾಜ್ಯದಲ್ಲಿನ ಸ್ಥಿತಿಗತಿಗಳನ್ನು ಅರಿಯುತ್ತಿದ್ದುದನ್ನು ಸೂಚಿಸುತ್ತದೆ ಎಂದು ಹೇಳಬಹುದು" ಎಂಬ ಎಂ.ಜಿ. ನಾಗರಾಜ್ ಅವರ ಹೇಳಿಕೆಯನ್ನು ಇದಕ್ಕೆ ಪೂರಕವಾಗಿ ಗ್ರಹಿಸಬಹುದು.

### 5.1.6 ಪೆಣ್ಬುಯ್ಯಲ್

ಸಾಮಾನ್ಯವಾಗಿ ಶಾಸನ ಹಾಗು ಶಿಷ್ಟಸಾಹಿತ್ಯದಲ್ಲಿ ಕಾಣುವ ಪೆಣ್ಬುಯ್ಯಲ್ ಸಂಗತಿಯು ಜನಪದ ಲಾವಣಿಯಲ್ಲಿಯೂ ನಿರೂಪಿತವಾಗಿದೆ. ಮೈಸೂರಿನ ದಳವಾಯಿ ಮಾಗಡಿಯ ಪಟ್ಟಣಕ್ಕೆ ಹತ್ತುಲಕ್ಷ ದಂಡಿನ ಸಮೇತ ದಾಳಿಯಿಡುತ್ತಾನೆ. ಹೆಣ್ಣು ಗಂಡೆನ್ನದೆ ದಳವಾಯಿ ಸೈನ್ಯ ಆಕ್ರಮಣ ಮಾಡುತ್ತದೆ. ಆಗ ಕೆಂಪೇಗೌಡನ ಇಬ್ಬರು ಹೆಣ್ಣುಮಕ್ಕಳಾದ "ಹೊನ್ನಮ್ಮ ಚಿನ್ನಮ್ಮರನ್ನು ಸೈನಿಕರು ಹಿಡಿಯುತಾರೆ" ಎಂಬ ಮಾತುಗಳು ಪೆಣ್ಬುಯ್ಯಲ ಸನ್ನಿವೇಶವಾಗಿದೆ.

ಹೆಣ್ಣು ಮಕ್ಕಳ ಹಿಡಿಯುತಾರೆ
ಎಣ್ಣೆ ಸೀರೆ ಮಾಡಿಬಿಟ್ಟು
ಕಣ್ಣ ಮುಂದೆ ಸುಡುತಾರೆ

ಎಂಬ ಭಾಗವು ಗಮನಾರ್ಹ. ಮಾಗಡಿ ಕೆಂಪೇಗೌಡರನ್ನು ಕುರಿತ 6 ನೆಯ ಕಾವ್ಯದಲ್ಲಿಯೂ ಮೈಸೂರಿನ ಸೈನಿಕರು ಮಾಗಡಿಗೆ ಮುತ್ತಿಗೆ ಹಾಕಿ ಕೆಂಪೇಗೌಡನ ಹೆಣ್ಣುಮಕ್ಕಳನ್ನು ಹಿಡಿದು ಸೀಮೆಎಣ್ಣೆ ಸುರಿದು ಬೆಂಕಿಹಚ್ಚುತ್ತಾರೆ ಎಂದು ಉಲ್ಲೇಖಗೊಂಡಿದೆ. ಶತ್ರುಗಳಿಂದ ತಪ್ಪಿಸಿಕೊಳ್ಳಲಾಗದ ಹೆಣ್ಣುಮಕ್ಕಳು ತಮ್ಮ ಶೀಲರಕ್ಷಣೆಗಾಗಿಯೋ, ಪ್ರಾಣರಕ್ಷಣೆಗಾಗಿಯೇ ಗೋಳಾಡಿ, ಕಡೆಗೆ ಶತ್ರುಸೈನಿಕರಿಂದ ಸೀಮೆ ಎಣ್ಣೆ ಸುರಿಸಿಕೊಂಡು, ಬೆಂಕಿ ಹಚ್ಚಲ್ಪಟ್ಟು ಸುಟ್ಟು ಹೋಗುತ್ತಾರೆ. ಇಂಥ ಅಮಾನವೀಯ ಘಟನೆಯು ಕೆಲವೇ ಕೆಲವು ಪದಗಳಲ್ಲಿಯೇ ಆದರೂ ಅತ್ಯಂತ ತೀಕ್ಷ್ಣವೂ ಸೂಕ್ಷ್ಮವೂ ಆಗಿ ಪೆಣ್ಬುಯ್ಯಲನ್ನು ಸೂಚಿಸುತ್ತಿದೆ.

ಇನ್ನು ಕುಪ್ಪಮ್ಮ ಶತ್ರುಗಳಿಂದ ತಪ್ಪಿಸಿಕೊಳ್ಳಲು ಕೆರೆಗೆ ಬಿದ್ದರೆ, ಹರಿಯಲೆಯು ಬಾವಿಗೆ ಬೀಳುತ್ತಾಳೆ: ಕೆಂಪೇಗೌಡನ ಮಡದಿ ಕೆಂಪಮ್ಮ ಕೆಂಪಾಂಬುಧಿ ಕೆರೆಗೆ ಹಾರುತ್ತಾಳೆ. ಬಹುಶ: ಈ ಸ್ತ್ರೀಯರು ಸಹ ತಮ್ಮನ್ನು ತಾವು ರಕ್ಷಿಸಿಕೊಳ್ಳಲಾಗದೇ, ಶತ್ರುಗಳಿಗೆ ವಶವರ್ತಿಯರೂ ಆಗದೆ ಆತ್ಮಾರ್ಪಣೆ ಮಾಡಿಕೊಂಡ ಈ ಉಲ್ಲೇಖಗಳು ಸಹ ಪೆಣ್ಬುಯ್ಯಲನ್ನು ಸೂಚಿಸುತ್ತಿದೆ. ಕಾವ್ಯದಲ್ಲಿ ಇದು ಕೆಂಪೇಗೌಡನ ಮಾಗಡಿ ಪಟ್ಟಣದ ಮೇಲೆ ಆಕ್ರಮಣದ ಫಲದಂತೆ ನಿರೂಪಿತವಾಗಿದ್ದರು ಸಹ ಸಮಕಾಲೀನ ಸಮಾಜದಲ್ಲಿ ಮಾನರಕ್ಷಣೆಗಾಗಿ ಸ್ತ್ರೀಯರು ಅನುಭವಿಸುತ್ತಿದ್ದ ಗೋಳಿನ ಸನ್ನಿವೇಶವನ್ನು ಈ ರೀತಿ ಪ್ರತಿಮಾತ್ಮಕವಾಗಿ ದಾಖಲಿಸಿದೆ ಎಂದು ತೋರುತ್ತದೆ. ಎಷ್ಟೋ ವೇಳೆ ರಾಜಕೀಯ ಪ್ರೇರಿತ ಆಕ್ರಮಣಗಳಲ್ಲಿಯೂ ಅಂದರೆ ಮಾಗಡಿಯ ಮೇಲೆ ನಡೆದ ದಾಳಿಯ ಸಂದರ್ಭದಲ್ಲಿಯೂ ನಡೆದಿರಬಹುದಾದ ಪೆಣ್ಬುಯ್ಯಲಿನ ಚಿತ್ರಣವನ್ನು ಸಹ ಈ ಜಾನಪದ ಲಾವಣಿಯು ಹೇಳುತ್ತಿರಲೂಬಹುದು ! ಮಾಗಡಿಯ ದಂಡು ಬಂದು ದಾಳಿಯಿಟ್ಟಾಗ

"ಧರಣಿಯಲ್ಲಿ ಕಾಕ ಮಾತನಾಡುತವೆ" ಎಂಬ ಮಾತು ಊರು ನಾಶವಾದ" ಊರಳಿವಿನ ಪರಿಕಲ್ಪನೆಯನ್ನು ಧ್ವನಿಸುತ್ತಿದೆ ಎನ್ನಬಹುದು. ಹೀಗೆ ಜಾನಪದ ಸಾಹಿತ್ಯದೊಳಗಿನ ಚಾರಿತ್ರಿಕ ಸಂಗತಿಗಳನ್ನು ಶೋಧಿಸಿ ತೆಗೆಯವುದು ಅವಶ್ಯವಿದೆ.

### 5.1.7 ಲಿಖಿತ ಮತ್ತು ಮೌಖಿಕ ಸಂಕಥನಗಳ ಹಿನ್ನೆಲೆಯಲ್ಲಿ ನಾಡಪ್ರಭುಗಳ ಮನೆತನದ ಮಹಿಳೆಯರು

ಮಧ್ಯಕಾಲೀನ ಕರ್ನಾಟಕದಲ್ಲಿ ಪ್ರವರ್ಧಮಾನರಾದ ಪಾಳೆಯಗಾರರ ಪೈಕಿ ಯಲಹಂಕ ನಾಡಪ್ರಭುಗಳೆಂದು ತಮ್ಮನ್ನು ತಾವು ಕೊನೆಯವರೆಗೂ ಕರೆದುಕೊಂಡು ಬಂದ ಕೆಂಪೇಗೌಡರ ವಂಶೀಯರು ಅತ್ಯಂತ ಪ್ರಮುಖರು. ಇವರು ಬೆಂಗಳೂರು ಪರಿಸರದ ಪ್ರಮುಖ ರೂವಾರಿಗಳು. ಇವರು ವಿಜಯನಗರದ ಅರಸರಿಂದ ಅಮರನಾಯಕರಾಗಿ ಮುನ್ನೆಲೆಗೆ ಬಂದು ನಂತರ ತಮ್ಮ ಅಸಾಧಾರಣ ಕಾರ್ಯಪ್ರವೃತ್ತಿಯಿಂದ ಜನಮಾನಸದಲ್ಲಿ ಕರಗಿಹೋದರು. ಬೆಂಗಳೂರಿನ ನಿರ್ಮಾಣದಲ್ಲಿ ಮಾತ್ರವಲ್ಲ, ಒಂದು ಕಾಲದ ಜನಪದರ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಇವರ ಪಾತ್ರ ದೊಡ್ಡದು. ಆರಂಭದಲ್ಲಿ ಇವರು ಯಲಹಂಕದಲ್ಲಿ ತಮ್ಮ ಕೇಂದ್ರವನ್ನು ಹೊಂದಿದ್ದರು. ನಂತರ ಬೆಂಗಳೂರು ಪರಿಸರದಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡು ನಂತರ ಮಾಗಡಿಯ ಕಡೆಗೆ ವಲಸೆ ಹೋದರು. ಇಲ್ಲೆಲ್ಲಾ ಇವರ ಬಗ್ಗೆ ಅನೇಕ ಶಾಸನಗಳು, ಕೈಫಿಯತ್ತುಗಳು, ಬಖೈರುಗಳು, ಜನಪದ ಸಾಹಿತ್ಯವು ರೂಪುಗೊಂಡು ಇವರ ಆಡಳಿತ ಹಾಗೂ ಸಾಮಾಜಿಕ, ಧಾರ್ಮಿಕ, ಸಾರ್ವಜನಿಕ ಸೇವೆಗಳಲ್ಲಿ ತಮ್ಮನ್ನು ತಾವು ಗುರುತಿಸಿಕೊಂಡಿದ್ದಾರೆ. ಈ ವಂಶೀಯರ ಇಷ್ಟೊಂದು ಸಾಧನೆಗಳೊಂದಿಗೆ ಇವರ ಮನೆತನದ ಮಹಿಳೆಯರ ಕೊಡುಗೆಯೇನೂ ಕಡಿಮೆಯಿಲ್ಲ ಎಂದು ತಿಳಿಯಬೇಕಾಗಿದೆ.

ನಾಡಪ್ರಭುಗಳಿಂದ ವಿಶೇಷವಾಗಿ ಉನ್ನತಕ್ಕೇರಿದ ಮಹಿಳೆಯರ ಸ್ಥಾನಮಾನಗಳನ್ನು ಕುರಿತು ಯೋಚಿಸುವುದು ನಾಡಪ್ರಭುಗಳ ಕಾಲದಲ್ಲಿ ಪ್ರಚಲಿತವಾಗಿದ್ದ ಹಾಗೂ ಮಧ್ಯಕಾಲದಲ್ಲಿ ಹೆಣ್ಣಿಗೆ ಇದ್ದ ಸ್ಥಾನಮಾನಗಳನ್ನು ಅರ್ಥ ಮಾಡಿಕೊಂಡಂತೆಯೇ ಎಂದು ತಿಳಿಯಬೇಕಾಗುತ್ತದೆ. ನಾಡಪ್ರಭುಗಳಿಗೆ ಸಂಬಂಧಿಸಿದ ಶಾಸನಗಳಲ್ಲಿ ಎಲ್ಲೋ ಕ್ವಚಿತ್ತಾಗಿ ಉಲ್ಲೇಖಗಳು ಬರುವುದಾದರೂ, ಕಾವ್ಯಗಳಲ್ಲಿ ಅಲ್ಪಸ್ವಲ್ಪ ಮಾಹಿತಿ ದೊರಕಿದರೆ, ಜನಪದ ಸಾಹಿತ್ಯದಲ್ಲಿ ಮಾತ್ರ ಇವರ ಮನೆತನದ ಕೆಲವು ಹೆಂಗಸರ ಸ್ಥಾನಮಾನದ ಬಗ್ಗೆ ಅನೇಕ ಉದಾಹರಣೆಗಳು ದೊರೆಯುತ್ತವೆ.

### 5.1.7.1 ವೆಂಕಟಕೃಷ್ಣಾಜಮ್ಮ

ವೆಂಕಟಕೃಷ್ಣಾಜಮ್ಮಳು ಯಲಹಂಕ ನಾಡಪ್ರಭುಗಳಲ್ಲಿ ಪ್ರಸಿದ್ಧರಾದ ಮಾಗಡಿ ಕೆಂಪೇಗೌಡನ ಮಗನಾದ ಇಮ್ಮಡಿ ಹಿರಿಯ ಕೆಂಪೇಗೌಡನ ಪತ್ನಿ. ಈಕೆಯನ್ನು ಶಾಸನವು "ಯಲಹಂಕ ನಾಡಪ್ರಭು ಯಿಂಮಡಿ ಹಿರೀಕೆಂಪ್ಪಯ ಗೌಡರೈಯ್ಯನವರ ಪುಂಣ್ಯಸ್ತ್ರೀ" ಎಂದು ಉಲ್ಲೇಖಿಸಿದೆ.[21] ಈಕೆಯು ತನ್ನ ಮಾವನಾದ ಇಮ್ಮಡಿ ಕೆಂಪೇಗೌಡರಿಗೂ, ಅತ್ತೆಯವರಾದ ಲಿಂಗಾಜಮ್ಮನವರಿಗೂ ಪುಣ್ಯವಾಗಲಿ ಎಂದು ದಾನ ಕೊಟ್ಟ ವಿವರವನ್ನು ಕುಣಿಗಲ್ಲಿನ ಕೃಷ್ಣಸಾಗರದ ಶಾಸನವೊಂದು ತಿಳಿಸುತ್ತದೆ. ಈ ಶಾಸನದ ಕಾಲವನ್ನು ರೈಸ್ ಅವರು 1599 ಎಂದು ಅಂದಾಜಿಸಿದ್ದಾರೆ. ಆದರೆ ವಾಸ್ತವವಾಗಿ ಇದರ ಕಾಲ 1659. ಈ ಶಾಸನದನ್ವಯ ವೆಂಕಟಕೃಷ್ಣಾಜಮ್ಮನವರು ಕುಣಿಗಲ್ಲಿಗೆ ಪಶ್ಚಿಮ ದಿಕ್ಕಿನಲ್ಲಿದ್ದ ಗ್ರಾಮವನ್ನು ತನ್ನ ಹೆಸರಿನಲ್ಲಿ ವೆಂಕಟಕೃಷ್ಣಸಾಗರ ಎಂಬ ಅಗ್ರಹಾರವನ್ನಾಗಿ ಮಾಡಿ ಅಲ್ಲಿ ಹತ್ತೊಂಬತ್ತು ವೃತ್ತಿಯನ್ನು ಮಾಡಿ ಅಷ್ಟೂ ಜನ ಬ್ರಾಹ್ಮಣರಿಗೆ ದಾನವನ್ನು ನೀಡಿರುವ ಸಂಗತಿಯನ್ನು ಇಲ್ಲಿ ವಿವರಿಸಲಾಗಿದೆ. ಅಷ್ಟೂ ಜನ ಬ್ರಾಹಣರ ಹೆಸರುಗಳನ್ನು ಶಾಸನವು ತಿಳಿಸುತ್ತದೆ. ಆಕೆ ದಾನವಾಗಿ ಕೊಟ್ಟ ಭೂಮಿಯು 30 ಖಂಡುಗ ಬೀಜವರಿ ಹೊಲ ಹಾಗೂ ದೊಡ್ಡಕೆರೆಯ ಕೆಳಗಡೆ ಇದ್ದ 20 ಖಂಡುಗ ಬೀಜವರಿ ಗದ್ದೆಯ ಭೂಮಿಯಾಗಿತ್ತು. ನಾವು ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಇಮ್ಮಡಿ ಹಿರಿಯ ಕೆಂಪೇಗೌಡನ ಪತ್ನಿಯಾದ ಈಕೆಯು ತನ್ನ ಹೆಸರಿನಲ್ಲಿ ಒಂದು ಅಗ್ರಹಾರವನ್ನು ಮಾಡಿ ಇಷ್ಟೊಂದು ವೃತ್ತಿಯ ಭೂಮಿಯನ್ನು ದಾನವಾಗಿ ನೀಡುವಷ್ಟು ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಸುಭದ್ರಳಿದ್ದಳು.

### 5.1.7.2 ಪಟ್ಟದ ನಾಟಕ ಶಾಲೆಯ ಶೃಂಗಾರಮ್ಮ

ಶೃಂಗಾರಮ್ಮನನ್ನು ಕುಣಿಗಲ್ಲು ತಾಲ್ಲೂಕಿನ ಹುಲಿಯೂರುದುರ್ಗ ಹೋಬಳಿಯ ಶೃಂಗಾರಸಾಗರದ ಶಾಸನಗಳಲ್ಲಿ "ಎಲಂಕನಾಡ ಪ್ರಭು ಯಿಂಮಡಿ ಹಿರೀ ಕೆಂಪಯಗೌಡರವರ ಪಟ್ಟದ ನಾಟಕ ಸಾಲೆಯ ಶೃಂಗಾರಮ್ಮ" ಎಂದು ಉಲ್ಲೇಖಿಸಿವೆ.[22] ಕ್ರಿ.ಶ. 1659ಕ್ಕೆ ಸೇರಿದ ಈ ಶಾಸನಗಳು[23] ಪಟ್ಟದ ನಾಟಕ ಸಾಲೆಯ ಶೃಂಗಾರಮ್ಮನು ತನ್ನ ಹೆಸರಿನಲ್ಲಿ ಶೃಂಗಾರ ಸಾಗರ ಎಂಬ ಅಗ್ರಹಾರವನ್ನು ಮತ್ತು ಕೆರೆಯನ್ನು ನಿರ್ಮಿಸಿದ ಸಂಗತಿಯನ್ನು ತಿಳಿಸುತ್ತವೆ. ಈ ಶಾಸನಗಳು ಕೇವಲ "ಕೆಂಪಯಗೌಡರವರ ಪಟ್ಟದ ನಾಟಕ ಸಾಲೆಯ ಶೃಂಗಾರೆಂಮ" ಎಂದಷ್ಟೆ ತಿಳಿಸಿದೆ. ಆದರೂ ಈಕೆಯನ್ನು ವಿದ್ವಾಂಸರು ಉಪಪತ್ನಿ ಎಂದು ಗುರುತಿಸಿದ್ದಾರೆ.

ವಾಸ್ತವದ ಸಂಗತಿಯೆಂದರೆ ವೆಂಕಟಕೃಷ್ಣಾಜಮ್ಮ ಹಾಗೂ ಶೃಂಗಾರಮ್ಮ ಇಬ್ಬರೂ ತಮ್ಮ ತಮ್ಮ ಹೆಸರಿನಲ್ಲಿ ಒಂದೇ ವರ್ಷದಲ್ಲಿ ಅಗ್ರಹಾರಗಳನ್ನು ನಿರ್ಮಿಸಿ ಬ್ರಾಹ್ಮಣರಿಗೆ ದಾನಗಳನ್ನು ನೀಡಿರುವರಾದರೂ ಎರಡೂ ಶಾಸನಗಳ ಕಂಡರಣೆಯಲ್ಲಿಯೇ ಅಜಗಜಾಂತರ ವ್ಯತ್ಯಾಸವಿದೆ. ವಾಸ್ತವವಾಗಿ ದಾನ ನೀಡಿದ ಮೊದಲಿಗಳು ಶೃಂಗಾರಮ್ಮನೇ. ಶಾಸನದ ಕಾಲದ ಪ್ರಕಾರ ಈಕೆ ದಾನ ನೀಡಿದ 10 ದಿನಗಳ ನಂತರ ವೆಂಕಟಕೃಷ್ಣಾಜಮ್ಮನು ದಾನವನ್ನು ನೀಡಿದ್ದಾಳೆ. ಶೃಂಗಾರಮ್ಮ ನೀಡಿರುವ ದಾನದಲ್ಲಿ ಯಾವುದೇ ವಿವರಗಳಾಗಲೀ ಉದ್ದೇಶಗಳಾಗಲೀ ದಾಖಲಾಗಿಲ್ಲದಿದ್ದರೆ ವೆಂಕಟಕೃಷ್ಣಾಜಮ್ಮನು ಈ ಶಾಸನ ಹಾಕಿಸಿದ ಸಂದರ್ಭದಲ್ಲಿ ಬಹುಶಃ ಹಾಜರಿದ್ದು ಈಕೆಯ ಶಾಸನದ ಕೊರತೆಯನ್ನು ನೀಗಿಸಿಕೊಂಡು ತನ್ನ ಹೆಸರಿನಲ್ಲಿ ದಾನವನ್ನು ನೀಡುವಾಗ ಬ್ರಾಹ್ಮಣರ ಹೆಸರುಗಳೊಡನೆ ವೃತ್ತಿಗಳನ್ನು ವಿಂಗಡಿಸಿ ಅತ್ಯಂತ ದೊಡ್ಡದಾದ ರೀತಿಯಲ್ಲಿ ದಾನವನ್ನು ನೀಡಿರುವುದು ಈ ಇಬ್ಬರು ಹೆಂಗಸರಲ್ಲಿ ಇದ್ದ ಸಾಮಾಜಿಕ ಅಂತರವನ್ನು ಎತ್ತಿ ತೋರಿಸುತ್ತದೆ.

### 5.1.7.3 ಅರಸಿ ನಾಗಮ್ಮ

ಶಿವಗಂಗೆ ಬೆಟ್ಟದ ಮೇಲಿನ ನಂದಿಮಂಟಪದ ಪಕ್ಕದಲ್ಲಿರುವ ಭಕ್ತ ವಿಗ್ರಹವೊಂದರ ಮುಂದಿರುವ ಶಾಸನವನ್ನು[24] ಎಂ.ಜಿ. ಮಂಜುನಾಥ್‌ರವರು "ಪ್ರಾಯಶಃ ಆಕೆಯು ಯಲಹಂಕ ನಾಡಪ್ರಭುಗಳ ವಂಶಕ್ಕೆ ಸೇರಿದ ರಾಜನೊಬ್ಬನ ಪತ್ನಿಯಾಗಿದ್ದಿರಬಹುದೆಂದು ತೋರುತ್ತದೆ" ಎಂದಿದ್ದಾರೆ. ಒಟ್ಟೂ ಶಾಸನವು ತೃಟಿತವಾಗಿದ್ದರೂ ಈ ಶಾಸನದಲ್ಲಿ ಓದಬಹುದಾದ ಭಾಗವೆಂದರೆ 'ಅರಸಿ ನಾಗಮ್ಮ'. ಈ ಶಾಸನದ ಕಾಲವನ್ನು ಇವರು ಲಿಪಿಯ ಆಧಾರದ ಮೇಲೆ ಸುಮಾರು ಕ್ರಿ.ಶ. 1600 ಎಂದು ಊಹಿಸಿದ್ದಾರೆ. ಯಲಹಂಕ ನಾಡಪ್ರಭುಗಳ ಕಾಲದಲ್ಲಿ ನಿರ್ಮಾಣವಾದ ಬಹುತೇಕ ದೇವಾಲಯಗಳಲ್ಲಿ ದೇವಾಲಯಗಳ ನಿರ್ಮಾತೃಗಳ ಶಿಲ್ಪಗಳನ್ನು ಬಿಡಿಸುವುದು ವಿಜಯನಗರ ಕಾಲದಲ್ಲಿ ಬಳಕೆಯಿದ್ದ ಪದ್ದತಿಯಾದುದರಿಂದಲೂ ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ನಿರ್ಮಾಣದಲ್ಲಿ ಕೆಂಪೇಗೌಡರ ವಂಶೀಯರ ಸಂಬಂಧವು ಗಾಢವಾಗಿರುವುದರಿಂದಲೂ ಈ ಊಹೆಯನ್ನು ಪುರಸ್ಕರಿಸಬಹುದಾಗಿದೆ. ಆದರೆ ಈ ನಾಗಮ್ಮನು ಯಾವ ಅರಸನ ರಾಣಿಯಾಗಿದ್ದಳು ಎಂದು ತೀರ್ಮಾನಿಸಬೇಕಾಗಿದೆ.

### 5.1.7.4 ಅಗಜಮ್ಮ

ಯಲಹಂಕ ನಾಡಪ್ರಭುಗಳಾದ ಕೆಂಪೇಗೌಡನ ಸೋದರ ಸಂಬಂಧಿಗಳಾದ ಜುಟ್ಟನಹಳ್ಳಿಯ ಶಾಖೆಯ ಗಿರಿಯಪ್ಪ ಗೌಡರ ಮಗ ಚಿಕ್ಕಹೊನ್ನೇಗೌಡನ ಪುಣ್ಯಾರ್ಥಿಯಾದ ಅಗಜಮ್ಮನು ಶಿವಗಂಗೆಯ ಗಂಗಾಧರೇಶ್ವರ ದೇವರಿಗೆ ಕಂಚಿನ ಘಂಟೆಯೊಂದನ್ನು

ನಿರ್ಮಿಸಿಕೊಟ್ಟ ಸಂಗತಿಯನ್ನು ಶಿವಗಂಗೆಯಲ್ಲಿರುವ ಘಂಟೆಯ ಶಾಸನವೊಂದು ತಿಳಿಸುತ್ತದೆ.[25] ಇಲ್ಲಿ ಅಗಜಮ್ಮನನ್ನು ಪುಣ್ಯಾರ್ಥಿಯೆಂದಿರುವುದು ವಿಶೇಷವಾಗಿದೆ. ಅರ್ಧಾಂಗಿ ಎಂಬ ಕವಿಸಮಯಕ್ಕೆ ಪರ್ಯಾಯವಾಗಿ ಪುಣ್ಯಾರ್ಥಿಯೆಂಬ ಪದವನ್ನು ಪತ್ನಿಗೆ ಸಮನಾಗಿ ಬಳಸಿರುವುದು ವಿಶೇಷವಾದ ಸಂಗತಿಯಾಗಿದೆ.

### 5.1.7.5 ವೀರಭದ್ರ ವಿಜಯ ಕಾವ್ಯೋಕ್ತ ರಾಣಿಯರು

ಮಾಗಡಿಯನ್ನಾಳಿದ ಮುಮ್ಮಡಿ ಕೆಂಪೇಗೌಡ ಮತ್ತು ಅವನ ಮಗನಾದ ದೊಡ್ಡವೀರಪ್ಪ ಗೌಡರಲ್ಲಿ ಆಸ್ಥಾನ ಕವಿಯಾಗಿದ್ದ ಏಕಾಮ್ರ ದೀಕ್ಷಿತನು ರಚಿಸಿರುವ **'ವೀರಭದ್ರ ವಿಜಯ'** ಕಾವ್ಯವು ಪೌರಾಣಿಕ ಕಾವ್ಯವಾಗಿದ್ದರೂ ಇದರ ಒಡಲಲ್ಲಿ ಯಲಹಂಕ ನಾಡಪ್ರಭುಗಳ ಬಗೆಗಿನ ಹಲವಾರು ಐತಿಹಾಸಿಕ ವಿವರಗಳಿರುವುದರಿಂದ ಇದೊಂದು ಅಧಿಕೃತವಾದ ಇತಿಹಾಸವೆಂದು ಪರಿಗಣಿಸಬಹುದಾಗಿದೆ. ಹಿರಿಯ ಕೆಂಪೇಗೌಡನಿಂದ ಆರಂಭಿಸಿ ದೊಡ್ಡ ವೀರಪ್ಪಗೌಡನವರೆಗೆ ಈ ವಂಶೀಯರ ಹಲವು ಪ್ರತಾಪಗಳನ್ನು ವಿವರಿಸಿರುವುದರಿಂದಲೂ, ವೀರಭದ್ರನು ಸಾವನದುರ್ಗದ ಪರಿಸರದಲ್ಲಿ ಬಂದು ನೆಲೆಸಿದ ಪ್ರಸಂಗವನ್ನು ವಿವರಿಸುವುದರಿಂದಲೂ ಈ ಕಾವ್ಯಕ್ಕೆ ಸ್ಥಳೀಯ ಸ್ಪರ್ಶ ತಟ್ಟಿದೆ. ಈ ಕಾವ್ಯದ ಹಲವು ವಿಶೇಷಗಳಲ್ಲಿ ಕೆಂಪೇಗೌಡರ ಮನೆತನದ ಮಹಿಳೆಯರ ಹೆಸರುಗಳನ್ನು ಅರಿಯುವುದರಲ್ಲಿಯೂ ಇದು ವಿಶೇಷವಾಗಿ ಸಹಕಾರಿಯಾಗಿದೆ. ದುರದೃಷ್ಟವಶಾತ್ ಈ ಹೆಂಗಸರ ಬಗ್ಗೆ ನಮಗೆ ಬೇರೆ ಮೂಲಗಳಲ್ಲಿ ಹೆಚ್ಚಿನ ರೀತಿಯ ಮಾಹಿತಿಯು ದೊರಕುತ್ತಿಲ್ಲ.

ಈ ಕಾವ್ಯವು ತಿಳಿಸುವಂತೆ ಇಮ್ಮಡಿ ಕೆಂಪೇಗೌಡರ ಇಬ್ಬರು ಪತ್ನಿಯರ ಹೆಸರುಗಳು ಕೆಂಪಮ್ಮ ಹಾಗೂ ಲಿಂಗಮ್ಮ ಎಂದಾಗಿದೆ. ಮುಮ್ಮಡಿ ಕೆಂಪೇಗೌಡ ಹಾಗೂ ಹಲಸ ಎಂಬುವವರು ಕೆಂಪಮ್ಮನ ಮಕ್ಕಳಾದರೆ ಇಮ್ಮಡಿ ಹಿರಿಯ ಕೆಂಪೇಗೌಡನು ಲಿಂಗಮ್ಮನ ಮಗನಾಗಿರುತ್ತಾನೆ. ವೆಂಕಟಕೃಷ್ಣಾಜಮ್ಮಳು ತನ್ನ ಮಾವನಾದ ಇಮ್ಮಡಿ ಕೆಂಪೇಗೌಡನಿಗೂ, ಅತ್ತೆ ಲಿಂಗಾಜಮ್ಮನಿಗೂ ಪುಣ್ಯವಾಗಲಿ ಎಂದು ದಾನ ಕೊಟ್ಟ ವಿವರವನ್ನು ಕುಣಿಗಲ್ಲಿನ ಕೃಷ್ಣಸಾಗರದ ಶಾಸನವೊಂದು ತಿಳಿಸುವುದನ್ನು ಗಮನಿಸಿದ್ದೇವೆ. ಈ ಶಾಸನದಲ್ಲಿ ಉಲ್ಲೇಖವಾಗಿರುವ ಲಿಂಗಾಜಮ್ಮನೇ 'ವೀರಭದ್ರ ವಿಜಯ'ದಲ್ಲಿ ಉಲ್ಲೇಖವಾಗಿರುವ ಲಿಂಗಮ್ಮಳಾಗಿದ್ದಾಳೆ. ಕೆಂಪಮ್ಮಳನ್ನು ಕುರಿತು ಜಾನಪದದಲ್ಲಿ ಒಂದು ಉಲ್ಲೇಖ ಸಿಗುತ್ತದೆ.[26] ಆದರೆ ಅದು ಕಾಲ, ಸಂದರ್ಭ ಮತ್ತು ಸ್ಥಳ ಮೂರು ವ್ಯತ್ಯಾಸಗಳಾಗಿರುವುದು ಕಂಡು ಬರುತ್ತದೆ. ಜಾನಪದ ಕಾವ್ಯದ ಪ್ರಕಾರ ಮೈಸೂರು ದಳವಾಯಿ ಸೈನ್ಯವು ಮಾಗಡಿಯ ಮೇಲೆ ದಂಡೆತ್ತಿ ಬಂದಾಗ ಮಾಗಡಿಯಲ್ಲಿ

ರಕ್ತದ ಕೋಡಿ ಹರಿದು ರಣಹದ್ದು ಬೀಳುತಾವೆ. ಹೆಣ್ಣು ಗೋಳು, ಗಂಡು ಗೋಳು ಹೇಳತೀರದಾಗಿರುತ್ತದೆ. ಕೆಂಪೇಗೌಡನ ಹೆಣ್ಣು ಮಕ್ಕಳನ್ನು ಶತ್ರುಗಳು ಹಿಡಿಯುತ್ತಾರೆ. ಕೆಂಪೇಗೌಡನ ಹೆಂಡತಿ ಕೆಂಪಮ್ಮನು ನೋಡಲಾಗದೆ ಕೆಂಪಾಂಬುಧಿ ಕೆರೆಗೆ ಆಹುತಿ ಆಗುತ್ತಾಳೆ. ಮೊದಲಿಗೆ ಮೈಸೂರು ಸೈನ್ಯ ಕೆಂಪೇಗೌಡನ ವಿರುದ್ಧ ಮತ್ತು ಮಾಗಡಿಯ ಜನತೆಯ ವಿರುದ್ಧ ಇಷ್ಟು ಕ್ರೌರ್ಯವಾಗಿ ನಡೆದುಕೊಂಡಿತೆ ಎಂಬುದನ್ನು ಪರಿಶೀಲಿಸಬೇಕು. ಈ ಕಥನದಲ್ಲಿ ಕೆಂಪಮ್ಮ ಕೆಂಪಾಂಬುಧಿ ಕೆರೆಗೆ ಆಹುತಿಯಾದಳು ಎಂದರೆ ಈ ಘಟನೆ ಮಾಗಡಿಯಲ್ಲಿ ನಡೆದಿರಲು ಸಾಧ್ಯವಿಲ್ಲ. ಕೆಂಪಾಂಬುಧಿ ಕೆರೆ ಇರುವುದು ಬೆಂಗಳೂರಿನಲ್ಲಿ, ಗವಿಗಂಗಾಧರೇಶ್ವರ ದೇವಾಲಯದ ಸಮೀಪದಲ್ಲಿ. ಬಹುಶಃ ಈ ಘಟನೆಯು 1638ರಲ್ಲಿ ಬಿಜಾಪುರದ ಆದಿಲ್‌ಶಾಹಿ ಸೈನ್ಯವು ರಣದುಲ್ಲಾಖಾನ್ ಮತ್ತು ಷಹಜಿಯ ನೇತೃತ್ವದಲ್ಲಿ ಬೆಂಗಳೂರಿನ ಮೇಲೆ ದಾಳಿ ಮಾಡಿದ ಸಂದರ್ಭದ್ದಾಗಿರಬಹುದು. ಬಿರುಗಾಳಿಯಂತೆ ಸೈನ್ಯ ಬೆಂಗಳೂರಿನ ಮೇಲೆರಗಿತು ಎಂದು **'ಕಂಠೀರವ ನರಸರಾಜ ವಿಜಯ'**ದಲ್ಲಿ ಹೇಳಿದೆ. ಲಾವಣಿಯಲ್ಲಿಯೂ ಕೂಡ ಗಂಡು, ಹೆಣ್ಣುಗಳ ಮೇಲೆ ಸೈನ್ಯ ನಡೆಸಿದ ದೌರ್ಜನ್ಯವನ್ನು ವಿವರಿಸಿದೆ. ಕೆಂಪೇಗೌಡನ ಹೆಣ್ಣುಮಕ್ಕಳಿಗೆ ನೀಡಿದ ಹಿಂಸೆಯ ವಿವರ ಕೂಡ ಇದೆ. ಇಮ್ಮಡಿ ಕೆಂಪೇಗೌಡನು ಮಗನೊಬ್ಬನನ್ನು ಕೈಸೆರೆಗಟ್ಟಿದ ಎಂಬ ವಿವರವೂ ಇತಿಹಾಸದಲ್ಲಿ ದಾಖಲಾಗಿದೆ. ಈ ಸಂದರ್ಭದಲ್ಲಿ ಕೆಂಪಮ್ಮ ಬೆಂಗಳೂರಿಗೆ ಮತ್ತು ಮನೆತನಕ್ಕೆ ಬಂದೆರಗಿದ ದುಸ್ಥಿತಿಯನ್ನು ನೋಡಲಾಗದೆ ಕೆಂಪಾಂಬುಧಿ ಕೆರೆಗೆ ಹಾರಿ ಆತ್ಮಹತ್ಯೆ ಮಾಡಿಕೊಂಡಿರುವ ಸಾಧ್ಯತೆಗಳಿವೆ.

ಮುಮ್ಮಡಿ ಕೆಂಪೇಗೌಡನಿಗೆ ಬಸವಮ್ಮಾಂಬೆ, ತೋಟದಾಂಬೆ, ಬೈಯ್ಯಮ್ಮಾಂಬೆ ಎಂಬ ಮೂವರು ಮಡದಿಯರಿದ್ದರು. ಇಮ್ಮಡಿ ಕೆಂಪವೀರಪ್ಪಗೌಡ ಹಾಗೂ ದೊಡ್ಡ ವೀರಪ್ಪಗೌಡರು ಬಸವಮ್ಮಾಂಬೆಯ ಮಕ್ಕಳಾದರೆ, 2ನೆಯ ಹಲಸನು ತೋಟದಾಂಬೆಯ ಮಗನಾಗಿದ್ದನು ಹಾಗೂ ಚನ್ನವೀರನು ಬೈಯ್ಯಾಂಬೆಯ ಮಗನಾಗಿದ್ದನು. ದೊಡ್ಡ ವೀರಪ್ಪ ಗೌಡನ ಹೆಂಡತಿಯ ಹೆಸರು ಮುದ್ದು ವೀರಮ್ಮ ಎಂಬುದಾಗಿತ್ತು. ಏಕಾಮ್ರ ದೀಕ್ಷಿತನು ನೇರವಾಗಿ ಮುಮ್ಮಡಿ ಕೆಂಪೇಗೌಡ ಮತ್ತು ಅವನ ಮಗನಾದ ದೊಡ್ಡವೀರಪ್ಪ ಗೌಡರ ಆಸ್ಥಾನದಲ್ಲೇ ಇದ್ದುದರಿಂದ ಇವನು ನೀಡುವ ಮಾಹಿತಿಯು ಅಧಿಕೃತವೆಂದೇ ತಿಳಿಯಬೇಕು. ಆದರೆ ಯಾವುದೇ ಶಾಸನಗಳಲ್ಲೂ ಈ ಹೆಸರುಗಳ ಉಲ್ಲೇಖವು ಆಗದೇ ಇರುವುದು ಸೋಜಿಗದ ಸಂಗತಿಯಾಗಿದೆ.

### 5.1.7.6 ಲಕ್ಷ್ಮೀದೇವಿ ಆತ್ಮ ಬಲಿದಾನ ಪ್ರಕರಣ– ಚಾರಿತ್ರಿಕ ಪರಿಶೀಲನೆ

ಬೆಂಗಳೂರು ಕೋಟೆಯ ನಿರ್ಮಾಣದ ಸಂದರ್ಭದಲ್ಲಿ ನಡೆದುದನ್ನೆಲ್ಲಾದ ಒಂದು ಆತ್ಮಬಲಿದಾನದ ಪ್ರಕರಣ ಬಹು ಜನಪ್ರಿಯವಾಗಿದೆ. ಹಾಗೆ ಆತ್ಮಬಲಿದಾನ ಮಾಡಿಕೊಂಡಳೆನ್ನಲಾದ ಹೆಣ್ಣುಮಗಳು ಹಿರಿಯ ಕೆಂಪೇಗೌಡನ ಸೊಸೆ ಲಕ್ಷ್ಮೀದೇವಿ ಎಂದು ಹೇಳಲಾಗುತ್ತದೆ. ಇದು ಜಾನಪದ ಲಾವಣಿಯ ರೂಪದಲ್ಲಿಯೂ ಜನಪ್ರಿಯವಾಗಿದೆ.[27] ಆದರೆ ಈ ಘಟನೆಯ ಐತಿಹಾಸಿಕ ಸತ್ಯಾಸತ್ಯತೆಯನ್ನು ಪರಿಶೀಲಿಸುವುದು ಅವಶ್ಯವಿದೆ.

ಈ ಘಟನೆ ನಡೆಯಲು ಕೆಲವು ಐತಿಹಾಸಿಕ ಸಂಗತಿಗಳು ರುಜುವಾತಾಗಬೇಕು. ಆ ಸಂಗತಿಗಳನ್ನು ಪ್ರಶ್ನಾರ್ಥಕವಾಗಿ ಕೇಳಿಕೊಳ್ಳುವುದಾದರೆ: ಮುಖ್ಯವಾಗಿ, ಕೆಂಪೇಗೌಡನ ಸೊಸೆ ಆತ್ಮಾರ್ಪಣೆ ಮಾಡಿಕೊಳ್ಳಬೇಕಿದ್ದರೆ ಕೋಟೆ ಕಟ್ಟುವ ಕಾಲಕ್ಕಾಗಲೇ (1538) ಕೆಂಪೇಗೌಡನ ಮಗ ವಯಸ್ಸಿಗೆ ಬಂದಿದ್ದನೇ? ಅವನು ಆ ಹೊತ್ತಿಗೆ ಮದುವೆಯಾಗಿದ್ದನೇ? ಅವನ ಮಡದಿ ಲಕ್ಷ್ಮಮ್ಮ / ಲಕ್ಷ್ಮೀದೇವಿಯೇ? ಈ ಕಥನವನ್ನು ಮೌಖಿಕ ನಿರೂಪಣೆಗಳಲ್ಲಲ್ಲದೆ ಬೇರೆ ಯಾವುದಾದರೂ ಆಧಾರಗಳು ಸಮರ್ಥಿಸುತ್ತವೆಯೇ? ಘಟನೆಯ ಸಮಕಾಲೀನ ಆಧಾರಗಳು ಯಾವುದಾದರೂ ಇವೆಯೇ? ಇಲ್ಲವಾದರೆ ಏಕೆ ಇಲ್ಲ? ಹೀಗೆ ಕೆಲವು ಮೂಲಭೂತ ಪ್ರಶ್ನೆಗಳನ್ನು ಅಧ್ಯಯನದ ಚೌಕಟ್ಟಿನ ಒಳಗೆ ಕೇಳಿಕೊಂಡು, ಅವುಗಳಿಗೆ ಉತ್ತರವನ್ನು ಕಂಡುಕೊಳ್ಳುವ ಮೂಲಕ ಲಕ್ಷ್ಮೀದೇವಿಯ ಪ್ರಕರಣವನ್ನು ವಿಮರ್ಶಾತ್ಮಕ ಅಧ್ಯಯನದ ಮೂಲಕ ಚಾರಿತ್ರಿಕ ಪರೀಕ್ಷೆಗೆ ಒಳಪಡಿಸುವುದು ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ.

ಲಕ್ಷ್ಮೀ ಪ್ರಕರಣವನ್ನು ಕುರಿತು ಮೊದಲು ದಾಖಲಿಸಿದವರು ಬಹುಶಃ ವಿ.ಎಸ್. ಸ್ವಾಮಿನಾಥ ಮೊದಲಿಯಾರ್. ಇವರು 1906ರಲ್ಲಿ ಅಲಸೂರು ದೇವಾಲಯದ ಬಗ್ಗೆ ಪ್ರಕಟಿಸಿದ ಕನ್ನಡದ ಕರಪತ್ರದಲ್ಲಿ ದಾಖಲಿಸಿರುವುದನ್ನು ಬಿ. ಪುಟ್ಟಯ್ಯ ಅವರು ಒಂದು ಕಡೆ ಉಲ್ಲೇಖಿಸಿದ್ದಾರೆ.[28] ಕೆಂಪೇಗೌಡ ಆಕೆಯ ಹೆಸರಿನಲ್ಲಿ ಕೋರಮಂಗಲದಲ್ಲಿ ಆಕೆಯ ಪ್ರತಿಮೆಯನ್ನು ಮಾಡಿಸಿ, ದೇವಾಲಯವನ್ನು ನಿರ್ಮಿಸಿ ಪೂಜೆಗೆ ವ್ಯವಸ್ಥೆ ಮಾಡಿದನು. ಇಂದಿಗೂ ಆಕೆಯ ಆರಾಧನೆ ನಡೆಯುತ್ತಿದೆ ಎಂದು ಸಾಮಿನಾಥ ಮೊದಲಿಯರ್ ಅವರು ದಾಖಲಿಸಿರುವ ಅಂಶಗಳನ್ನೆ ಉಲ್ಲೇಖಿಸಿದ್ದಾರೆ. ಆ ನಂತರ ಎಸ್.ಕೆ. ನರಸಿಂಹಯ್ಯ. ಅವರು 1922ರಲ್ಲಿ ಪ್ರಕಟಿಸಿದ ತಮ್ಮ **ಮಾಗಡಿ ಕೆಂಪೇಗೌಡ: ಬೆಂಗಳೂರು ಸ್ಥಾಪಕ ಮತ್ತು ಆತನ ಪೂರ್ವೀಕರು** ಎಂಬ ಕೃತಿಯಲ್ಲಿ ಹೀಗೆ ದಾಖಲಿಸುತ್ತಾರೆ:[29]

ಗೌಡನು ಕೋಟೆಯನ್ನು ಕಟ್ಟಿ ಬಾಗಿಲನ್ನು ಇಡುತ್ತಿರುವಾಗ ಅದು ನಿಲ್ಲದೆ ಪ್ರತಿನಿತ್ಯವೂ ಬಿದ್ದು ಹೋಗುತ್ತಿದ್ದತು. ಇದರಿಂದ ಭಗ್ನಮನೋರಥನಾಗಿ ಚಿಂತಿಸುತ್ತಿರುವಾಗ ಕೆಲವರು, ಗರ್ಭಿಣಿ ಸ್ತ್ರೀಯನ್ನು ಬಲಿಕೊಟ್ಟರೆ ಕಾರ್ಯವು ನೆರವೇರುವುದೆಂದು ಅರಿಕೆ ಮಾಡಿದರು. ಗೌಡನು ಸ್ತ್ರೀಹತ್ಯಕ್ಕೆ ಒಡಂಬಡದೆ ಪುನಃ ಕೆಲಸಕ್ಕೆ ಪ್ರಾರಂಭಮಾಡಲು, ಹಿಂದಿನಂತೆಯೇ ನಿಲ್ಲದೆ ಹೋಯಿತು. ಇದನ್ನು ತಿಳಿದು ವ್ಯಸನಾಕ್ರಾಂತನಾಗಿರುವಾಗ ತನ್ನ ಸೊಸೆಯಾದ ಲಕ್ಷ್ಮಮ್ಮ ಎಂಬಾಕೆಯು ಬಂದು ವಿನಯದಿಂದ ಗೌಡನನ್ನು ಕುರಿತು "ಮಾವನವರೇ, ಚಿಂತಿಸಲೇಕೆ? ತಾವು ಮಾಡುತ್ತಿರುವ ಪಟ್ಟಣಾಭಿವೃದ್ಧಿಯ ಮಹತ್ಕಾರ್ಯಕ್ಕೆ ಒಬ್ಬ ಸ್ತ್ರೀಯಿಂದ ವಿಘ್ನಬಂದಿರುವುದಲ್ಲವೆ? ನನ್ನನ್ನು ಬಲಿಕೊಡಿಸಿ ನಿಮ್ಮ ಉದ್ದೇಶದಂತೆ ಕೋಟೆ ಕೊತ್ತಲಗಳನ್ನು ಭದ್ರಪಡಿಸಬಹುದು" ಎಂದು ಬೇಡಿಕೊಂಡಳು. ಗೌಡನು ಸೊಸೆಯನ್ನು ಕುರಿತು, "ಅಮ್ಮಾ, ನಾನು ಆವ ಅಲ್ಪಪ್ರಾಣಿಯನ್ನೂ ಬಲಿಕೊಡಲು ಒಪದೆ ಇರುವಾಗ ಲಕ್ಷ್ಮಿಗೆ ಸಮಾನಳಾದ ನಿನ್ನನ್ನು ಬಲಿಕೊಡುವುದಕ್ಕೆ ಒಪ್ಪುವೆನೇ? ನಿನ್ನ ಮನೋದಾರ್ಢ್ಯಕ್ಕೂ ದೇಶವಾತ್ಸಲ್ಯಕ್ಕೂ ಮೆಚ್ಚಿದೆನು. ನೀನು ದೀರ್ಘಾಯುವಾಗಿ ಬಾಳು" ಎಂದು ಆಶೀರ್ವದಿಸಿದನು.

ಆ ಬಳಿಕ ಎಷ್ಟು ದಿನಗಳಾದರೂ ಕೋಟೆಯ ಕೆಲಸವು ಪೂರೈಸದೆ ನಿತ್ಯವೂ ಹಗಲೆಲ್ಲಾ ಮಾಡಿದ ಕೆಲಸವು ರಾತ್ರಿಯಲ್ಲಿ ಬಿದ್ದುಹೋಗಿ ತನ್ನ ಮಾವನಿಗೆ ನಷ್ಟವೂ ವ್ಯಥೆಯೂ ಹೆಚ್ಚುತ್ತ ಬಂದುದನ್ನು ನೋಡಿ ಲಕ್ಷ್ಮಮ್ಮನು ಸಹಿಸಲಾರದೆ, ಒಂದು ದಿನ ರಾತ್ರಿ ಆರಿಗೂ ತಿಳಿಯದಂತೆ ಕೋಟೆಯ ಮಹಾದ್ವಾರದ ಬಳಿಗೆ ಬಂದು ದೃಢಭಕ್ತಿಯಿಂದ "ನನ್ನ ದೇಹವನ್ನು ನಿನಗರ್ಪಿಸುವೆನು. ಈ ಕೋಟೆಯ ಮಹಾದ್ವಾರವನ್ನು ನಿಲ್ಲಿಸಿ ನನ್ನ ಮಾವನಿಗೆ ಸತ್ಕೀರ್ತಿಯನ್ನು ದಯೆಪಾಲಿಸು" ಎಂದು ದೇವತೆಯನ್ನು ಪ್ರಾರ್ಥಿಸಿ ಶಿರವನ್ನು ತರಿದುಕೊಂಡು ಪ್ರಾಣ ಬಿಟ್ಟಳಂತೆ!

ಬೆಳಗಾಗುತ್ತಲೇ ಆಳುಗಳು ಬಂದು ಮಹಾದ್ವಾರವು ನಿಂತಿರುವುದನ್ನು ದೂರದಿಂದ ನೋಡಿ ಆಶ್ಚರ್ಯದಿಂದ ಓಡಿಹೋಗಿ ದೊರೆಗೆ ಅರಿಕೆ ಮಾಡಿದರು. ಕುತೂಹಲದಿಂದ ದೊರೆಯು ಬಂದು ನೋಡುವಲ್ಲಿ ಕುಲದೀಪಕಳಾದ ಲಕ್ಷ್ಮಮ್ಮನ ರುಂಡವೂ, ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು ಬಿದ್ದಿದ್ದ ಮುಂಡವೂ ಮಹಾದ್ವಾರದ ಮುಂದೆ ಕಾಣಿಸಿದುವು. ಅದರಿಂದ ಬಹು ಚಿಂತಾಕ್ರಾಂತನಾಗಿ ದಃಖರೆಯು ಮೀರಿಹೋದುದಕ್ಕೆ ಉಪಾಯಕಾಣದೆ ಸಮಾಧಾನವನ್ನು ತಂದುಕೊಂಡು

*ತಮ್ಮ ಕುಲದೇವತೆಯಂತೆ ಪೂಜ್ಯಳಾದ ಲಕ್ಷ್ಮಮ್ಮನ ಕೀರ್ತಿಯು ಸ್ಥಿರವಾಗಿರಬೇಕೆಂದು ಬೆಂಗಳೂರಿಗೆ ಪೂರ್ವದಿಕ್ಕಿನಲ್ಲಿರುವ ಕೋರಮಂಗಲ ಗ್ರಾಮಮಧ್ಯದಲ್ಲಿ ಗುಡಿಯನ್ನು ಕಟ್ಟಿ ಅವಳ ವಿಗ್ರಹವನ್ನಿಟ್ಟು ಅದಕ್ಕೆ ಪೂಜಾದಿಗಳು ನಡೆಯುವಂತೆ ಏರ್ಪಡಿಸಲ್ಪಡುತ್ತಿವೆ. ಅಂದಿನಿಂದ ಕೋಟೆಯ ದ್ವಾರವು ಭದ್ರವಾಗಿ ನಿಂತು ಕೆಂಪೇಗೌಡನ ಮುಂದಿನ ಮಹತ್ಕಾರ್ಯಗಳಿಗೆ ನಿರ್ವಿಘ್ನತೆಯುಂಟಾಯಿತು.*

ಈ ಕಥನವನ್ನು ನಂತರದ ಲೇಖಕರು ಉಲ್ಲೇಖಿಸುತ್ತಾ ಬಂದಿದ್ದಾರೆ ಮತ್ತು ಹೆಚ್ಚು ಜನಪ್ರಿಯಗೊಳಿಸಿದ್ದಾರೆ. ಈ ಕಥನದ ಜನಪ್ರಿಯತೆಯಿಂದಾಗಿ ಇಂದು ಬೆಂಗಳೂರು ಬೃಹತ್ ಮಹಾನಗರ ಪಾಲಿಕೆ ಕಚೇರಿಯ ದ್ವಾರದ ಎದುರಿಗೆ ಲಕ್ಷ್ಮಮ್ಮನ ಹೆಸರಿನಲ್ಲಿ ದೊಡ್ಡ ಪ್ರತಿಮೆಯನ್ನೇ ಪ್ರತಿಷ್ಠಾಪಿಸಿದ್ದಾರೆ (ಚಿತ್ರ–6).

ಲಕ್ಷ್ಮೀದೇವಿಯ ಪ್ರಕರಣದ ಬಗೆಗೆ 19ನೇ ಶತಮಾನದಲ್ಲಿ ಬಂದಿರುವ ವಸಾಹತು ಬರಹಗಾರರ ಬರವಣಿಗೆಗಳಲ್ಲಿ ಎಲ್ಲಿಯೂ ಉಲ್ಲೇಖಗಳು ಕಂಡು ಬರುವುದಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ಎಂ.ಜಿ. ಮಂಜುನಾಥ ಅವರು ಸಂಪಾದಿಸಿರುವ **ಬೆಂಗಳೂರಿನ ಬಖೈರುಗಳು** ಕೃತಿಯಲ್ಲಿ ಬೆಂಗಳೂರಿನ ನಿರ್ಮಾಣದ ಬಗೆಗೆ ಇದೆ. ಅಪ್ಪಿತಪ್ಪಿಯೂ ಲಕ್ಷ್ಮಮ್ಮನ ಪ್ರಕರಣದ ಬಗೆಗೆ ಪ್ರಸ್ತಾಪವಿಲ್ಲ. ಈ ಪ್ರಕರಣದ ಅನುಪಸ್ಥಿತಿಯನ್ನು ಪ್ರಧಾನ ಸಂಪಾದಕರಾದ ಎಂ. ಜಮುನ ಅವರು ಪ್ರಸ್ತಾಪಿಸುತ್ತಾ, **"**ಬಹಳಷ್ಟು ಜನರಿಗೆ ತುಂಬಾ ಆಕರ್ಷಣೀಯವಾಗಿರುವ ಈ ಕಥೆ ಈ ಬಖೈರಿನಲ್ಲಿ ಪ್ರಸ್ತಾಪವಾಗದೆ ಇರುವುದು ಕುತೂಹಲಕಾರಿಯಾಗಿದೆ. ಲಕ್ಷ್ಮಮ್ಮನನ್ನು ತ್ಯಾಗಮೂರ್ತಿಯಾಗಿ ಚಿತ್ರಿಸಿರುವ ಈ ಕಥೆಯು ಬಹುಶಃ ಬಖೈರು ರಚನೆಯಾದ ನಂತರದಲ್ಲಿ ಹುಟ್ಟಿರುವ ಸಾಧ್ಯತೆ ಇದೆ**"** ಎಂದಿದ್ದಾರೆ.[30] ಈ ಬಖೈರುಗಳು 19ನೇ ಶತಮಾನದ ಮೊದಲ ದಶಕದಲ್ಲಿ ರಚಿಸಲ್ಪಟ್ಟಿವೆ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು.

ಲಕ್ಷ್ಮೀದೇವಿಯ ಪ್ರಕರಣವನ್ನು ಕುರಿತು **ಬೆಂಗಳೂರಿನ ಬಖೈರುಗಳು** ಕೃತಿಯ ಸಂಪಾದಕರಾದ ಎಂ.ಜಿ. ಮಂಜುನಾಥ ಅವರು ತಮ್ಮ ಪ್ರಸ್ತಾವನೆಯಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ:[31]

*"ಈ ಹೇಳಿಕೆಗಳಿಗೆ ಯಾವ ಆಧಾರಗಳೂ ಇರಲಿಲ್ಲ. ಕೋರಮಂಗಲದ ಲಕ್ಷ್ಮೀದೇವಾಲಯವು ಕೆಂಪೇಗೌಡನ ಕಾಲದಲ್ಲಿ ನಿರ್ಮಾಣವಾದ ದೇವಾಲಯವಲ್ಲ. ಆ ಕಾಲದ ವಾಸ್ತು ಶೈಲಿಯನ್ನು ಅದು ಹೊಂದಿಲ್ಲ.*

*ತೀರಾ ಇತ್ತೀಚೆಗೆ ಅದು ನಿರ್ಮಾಣವಾಗಿದೆ ಎಂದು ಆ ದೇವಾಲಯದ ವಾಸ್ತುಶಿಲ್ಪದ ಆಧಾರದಿಂದ ಹೇಳಬಹುದು. ಕ್ರಿ.ಶ. 1900 ರಿಂದ ಈಚೆಗೆ ಆ ದೇವಾಲಯ ನಿರ್ಮಾಣಗೊಂಡಿದೆಯೆಂದು ತೋರುತ್ತದೆ. 'ಬೆಂಗಳೂರಿನ ದೇವಾಲಯಗಳು' ಎಂಬ ಬಖೈರಿನಲ್ಲಿ ಈ ದೇವಾಲಯದ ಉಲ್ಲೇಖವೇ ಇಲ್ಲ. ಆ ಬಖೈರು ರಚಿತವಾದ ಕ್ರಿ.ಶ. 1805ರ ಕಾಲಘಟ್ಟದಲ್ಲಿ ಕೆಂಪೇಗೌಡನ ಸೊಸೆ ಆತ್ಮಾರ್ಪಣೆ ಮಾಡಿಕೊಂಡ ವಿಚಾರವಾಗಲಿ ಆಗ ಕೆಂಪೇಗೌಡನು ಸೊಸೆಯ ಸ್ಮಾರಕವಾಗಿ ಲಕ್ಷ್ಮೀದೇವಾಲಯವನ್ನು ನಿರ್ಮಿಸಿದ ಎಂಬ ಕತೆಯೂ ಆಗ ಹುಟ್ಟಿರಲಿಲ್ಲ ಎಂಬ ಅಂಶ ಗಮನಾರ್ಹ".*

ಮೇಲಿನ ವಿದ್ವಾಂಸರ ಅಭಿಪ್ರಾಯವನ್ನು ಸಮರ್ಥಿಸುವ ರೀತಿಯಲ್ಲಿಯೇ ಜಾನಪದ ವಿದ್ವಾಂಸರಾದ ಪಿ.ಕೆ. ರಾಜಶೇಖರ್ ಜಾನಪದ ಐತಿಹ್ಯಗಳ ಚಾರಿತ್ರಿಕ ಸಂಗತಿಗಳ ಬಗೆಗೆ ಹೀಗೆ ಅನುಮಾನ ವ್ಯಕ್ತಪಡಿಸಿದ್ದಾರೆ:[32]

"...ಕೆಂಪೇಗೌಡನನ್ನು ಕುರಿತ ಜಾನಪದ ಕಾವ್ಯ ಒಬ್ಬ ಕೆಂಪೇಗೌಡನ ಕಥೆಯಾಗಿರದೆ, ಒಬ್ಬನೇ ಕೆಂಪೇಗೌಡನಿಗೆ ಆರೋಪಿಸಿ ಹೇಳಿರುವ ಮೊರಸು ಒಕ್ಕಲು ಅರಸು ಸಂತತಿಯವರ ಜೀವಿತದ ಘಟನಾವಳಿಗಳಾಗಿವೆ. ಅಲ್ಲದೆ ಈ ಕಾವ್ಯದ ವಿವರಗಳೆಲ್ಲ ಐತಿಹಾಸಿಕ ಸತ್ಯವಾಗಿರಲೂ ಸಾಧ್ಯವಿಲ್ಲ. ಜನಪದ ಗಾಯಕರು ಹೇಳಿರುವಂತೆ ನಡೆದಿರಲೂ ಸಾಧ್ಯವಿಲ್ಲ. ಏಕೆಂದರೆ ಇಲ್ಲಿ ಜನಪದರ ನಂಬಿಕೆಗಳು, ಕಲ್ಪನೆಗಳು ಹಾಗೂ ಉತ್ಪ್ರೇಕ್ಷೆಗಳು ಅನೇಕ ತಲೆಮಾರುಗಳ ಮೂಲಕ ಹರಿದು ಬರುವಾಗ ಎಷ್ಟೆಷ್ಟೋ ಬದಲಾವಣೆಗಳು ಹಾಗೂ ರಂಜನೀಯ ಅಂಶಗಳು ಸೇರ್ಪಡೆಯಾಗಿರಲೂ ಸಾಧ್ಯವಿದೆ. ಇಂಥ ಕಾಲಾನು ಕಾಲದ ನಂಬಿಕೆಗಳು ಕಲ್ಪನೆಗಳು ಉತ್ಪ್ರೇಕ್ಷೆಗಳು ಇತ್ಯಾದಿಗಳನ್ನು ತೆಗೆದು ಹಾಕಿದರೆ ಉಳಿದದ್ದು ಮಾತ್ರ ಇತಿಹಾಸವಾದೀತು."

ಒಟ್ಟಾರೆಯಾಗಿ ಹೇಳುವುದಾದರೆ, ಲಕ್ಷ್ಮೀದೇವಿಯ ಪ್ರಕರಣವನ್ನು ಸಮರ್ಥಿಸುವ ಆಧಾರಗಳು 20ನೇ ಶತಮಾನಕ್ಕೆ ಮೊದಲು ದಾಖಲಾಗಿರುವ ನಿದರ್ಶನಗಳಿಲ್ಲ. ಆದರೆ, ಈ ಪ್ರಕರಣ ಘಟಿಸಿರಬಹುದಾದ ಸಾಧ್ಯತೆಗಳನ್ನು ಮತ್ತು ಸಮಕಾಲೀನ ಆಕರಗಳನ್ನು ಚಾರಿತ್ರಿಕ ಪರಿಪ್ರೇಕ್ಷೆಯೊಳಗೆ ಪರಿಶೀಲಿಸಬೇಕಾಗಿದೆ.

ಬೆಂಗಳೂರು ನಗರದ ಸ್ಥಾಪಕನಾದ ಕೆಂಪೇಗೌಡನ ಕಾಲದ ಬಗೆಗೆ, ನಂತರ ಅವನ ಪುತ್ರರ ಬಗೆಗೆ ತಿಳಿಯುವುದು ಅವಶ್ಯ. ಕೆಂಪೇಗೌಡನ ಹುಟ್ಟಿನ ವರ್ಷದ ಬಗೆಗೆ ನಿಕರವಾದ ಮಾಹಿತಿ ಲಭ್ಯವಿಲ್ಲ. ಆದರೆ, ಆತ 1510ರಲ್ಲಿ ಜನಿಸಿದನೆಂದು ಸಾಮಾನ್ಯವಾಗಿ ನಂಬಲಾಗಿದೆ. ಅವನು 1609ರವರೆಗೂ ಬದುಕಿದ್ದನೆಂಬುದಕ್ಕೆ ಶಿವಗಂಗೆಯ ಅವನದೇ ಪ್ರತಿಮೆಯ ಮೇಲಿನ ಶಾಸನವು ಸುಳಿವನ್ನು ನೀಡುತ್ತದೆ.[33] ಇದರಿಂದ ಹಿರಿಯ ಕೆಂಪೇಗೌಡ ಶತಾಯುಷಿಯಾಗಿದ್ದನೆಂದು ತೀರ್ಮಾನಿಸಬಹುದು. ಕೆಂಪೇಗೌಡನಿಗೆ ವಿಜಯನಗರದ ಅಚ್ಯುತರಾಯನು 1532ರಲ್ಲಿ ನಾಯಕತನ ನೀಡಿದನೆಂದು ಕೆ.ಆರ್.ಪುರಂ ಹೋಬಳಿಯ ದಾಸರಹಳ್ಳಿಯ ಶಾಸನವು ತಿಳಿಸುತ್ತದೆ.[34] ಅಂದರೆ, 1510ರಲ್ಲಿ ಜನಿಸಿದ ಹಿರಿಯ ಕೆಂಪೇಗೌಡನು ತನ್ನ 22ನೇ ವಯಸ್ಸಿನಲ್ಲಿ (1532ರಲ್ಲಿ) ಅಧಿಕಾರಕ್ಕೆ ಬಂದನು. ಆತ ಬೆಂಗಳೂರು ನಗರ ನಿರ್ಮಾಣವನ್ನು ಆರಂಭಿಸಿದ ವರ್ಷ 1537–38 ಎಂದು ಇಟ್ಟುಕೊಂಡರೆ ಆಗ ಅವನಿಗೆ ಕೇವಲ 28 ವರ್ಷ ವಯಸ್ಸು. ಸಾಮಾನ್ಯವಾಗಿ ಕೋಟೆಯ ಬುನಾದಿಯು ನಿರ್ಮಾಣವಾದ ಆರಂಭದಲ್ಲಿಯೇ ದ್ವಾರಸ್ತಂಬಗಳನ್ನು ನಿಲ್ಲಿಸುವುದು ವಾಡಿಕೆ. ಈ ಹಂತಕ್ಕೆ ಬರಲು ಒಂದೆರಡು ವರ್ಷಗಳು ಉರುಳಿರಬಹುದು. ಅಂದರೆ ಹಿರಿಯ ಕೆಂಪೇಗೌಡನಿಗೆ ಬಹುಶಃ 30 ವರ್ಷ ವಯಸ್ಸಾಗಿದ್ದಾಗ ಕೋಟೆಯ ದಕ್ಷಿಣ ದ್ವಾರ ಕುಸಿದು ಬೀಳುವ ಪ್ರಕರಣ ನಡೆದಿದೆ ಎಂದಿಟ್ಟುಕೊಂಡರೆ, ಈ ದ್ವಾರವು ಸ್ಥಿರವಾಗಿ ನಿಲ್ಲಲು ಅವನ ಸೊಸೆ ಗರ್ಭಿಣಿ ಲಕ್ಷ್ಮಮ್ಮ ಅತ್ಮಾರ್ಪಣೆ ಮಾಡಿಕೊಂಡಳೆನ್ನುವುದಾದರೆ, ಕೆಂಪೇಗೌಡನು ತನ್ನ 30ನೇ ವಯಸ್ಸಿಗಾಗಲೇ ತನ್ನ ಮಗನಿಗೆ ಮದುವೆ ಮಾಡಿದ್ದ, ಅವನ ಮಡದಿ ಗರ್ಭವತಿಯಾಗಿದ್ದಳೆಂದಾಗಬೇಕು. ಹಾಗೆ ಆದಲ್ಲಿ ಬಹುಶಃ ಕೆಂಪೇಗೌಡ ತನ್ನ 14ನೇ ವಯಸ್ಸಿಗೆ ಮದುವೆಯಾಗಿರಬೇಕಾಗುತ್ತದೆ. ಆತನ ಮಡದಿ ಒಂದೇ ವರ್ಷದಲ್ಲಿ ಗಂಡು ಮಗುವನ್ನು ಹಡೆದಳೆಂದಿಟ್ಟುಕೊಂಡರೆ, ಆ ಮಗು 14ನೇ ವಯಸ್ಸಿಗೆ ಬಂದಾಗಲೇ ಅವನಿಗೂ ಕೆಂಪೇಗೌಡ ಮದುವೆ ಮಾಡಿರಬೇಕಾಗುತ್ತದೆ. ಅವನ ಹೆಂಡತಿ ಒಂದೇ ವರ್ಷದಲ್ಲಿ ಗರ್ಭಿಣಿಯಾಗಿರಬೇಕಾಗುತ್ತದೆ. ಹಿರಿಯ ಕೆಂಪೇಗೌಡನು 30ರ ವಯಸ್ಸಿಗೆ ಬರುವ ಹೊತ್ತಿಗೆ ತನ್ನ ಮದುವೆ–ಮಕ್ಕಳು–ಸೊಸೆ ಇತ್ಯಾದಿಗಳನ್ನು ಕಂಡಿರುವ ಸಾಧ್ಯತೆಗಳು ಬಹಳ ಕಡಿಮೆಯೇ ವಿನಃ ಅಸಂಭವವೇನೂ ಅಲ್ಲ ಎಂದೇ ಇಟ್ಟುಕೊಳ್ಳೋಣ. ಆದರೆ ಇದನ್ನು ಸಮರ್ಥಿಸಲು ಯಾವ ಆಧಾರಗಳೂ ಇಲ್ಲ. ಬದಲಿಗೆ ಇದಕ್ಕೆ ವ್ಯತಿರಿಕ್ತವಾದ ಆಧಾರಗಳೇ ಕಂಡುಬರುತ್ತವೆ. 1588ರ ಶಿವಗಂಗೆಯ ಗಂಟೆಯ ಮೇಲಿನ ಶಾಸನವೊಂದಲ್ಲಿ "ಯೆಲಹಂಕನಾಡಪ್ರಭು ಕೆಂಪನಂಜೆಗೌಡರ ಮಕ್ಕಳೂ ಕೆಂಪೇಗೌಡರೂ ತಮಗೆ ಪುತ್ರ ಪೌತ್ರ ಪಾರಂಪರೆಯಾಭಿಉ್ರದ್ಧಿಯಾಗಲಿಯೆಂದು ತಂಮ ಪಿತ್ರು ಮಾತ್ರುಗಳಿಗೆ ಮೋಕ್ಷವಾಗಲಿ..."

ಎಂದಿದೆ.[35] ಈ ಶಾಸನವನ್ನು ವಿಶ್ಲೇಷಿಸಿರುವ ಕರ್ಲಮಂಗಲಂ ಶ್ರೀಕಂಠಯ್ಯನವರ ಪ್ರಕಾರ:[36] "ಬಹಳ ವರ್ಷಗಳು ಮಕ್ಕಳಿದ್ದಿರಲಿಲ್ಲದುದರಿಂದಲೋ ಏನೋ ಈ ಹಿರಿಯ ಕೆಂಪೇಗೌಡನು ಈ ದಾನಶಾಸನದಲ್ಲಿ 'ಪುತ್ರಪೌತ್ರಾಭಿವೃದ್ಧಿ'ಯನ್ನು ಕೋರಿಕೊಂಡಿದ್ದಾನೆ. ಇಷ್ಟು ಹೊತ್ತಿಗೆ ಇಮ್ಮಡಿ ಕೆಂಪೇಗೌಡನು ಹುಟ್ಟಿದ್ದರೂ ಬಹಳ ಕಾಲಕ್ಕಾದ ತನ್ನ ಏಕಪುತ್ರನ ಮತ್ತು ಅವನ ಪೀಳಿಗದ ಶ್ರೇಯಸ್ಸನ್ನು ಬಯಸಿ ಈ ಹಿರಿಯ ಕೆಂಪರಸನು ಹೀಗೆ ಬರೆಸಿದ್ದರೂ ಇರಬಹುದು" ಎಂದಿದ್ದಾರೆ. ಈ ಕುರಿತು ಹಂ.ಗು. ರಾಜೇಶ್ ಅವರು "ಕೆಂಪಾಪರ ಸಮಾಧಿಯ ಕೆಂಪೇಗೌಡ ಯಾರು?" ಎಂಬ ಸಂಶೋಧನಾ ಬರಹದಲ್ಲಿ ಹಿರಿಯ ಕೆಂಪೇಗೌಡನ ಮಗ ಇಮ್ಮಡಿ ಕೆಂಪೇಗೌಡನು ಅಧಿಕಾರಕ್ಕೆ ಬಂದ ಕಾಲದ ಬಗೆಗೆ ವಿಸ್ತೃತ ಚರ್ಚೆಯನ್ನು ನಡೆಸಿದ್ದಾರೆ.[37] ಇಮ್ಮಡಿ ಕೆಂಪೇಗೌಡನು 1597ರಲ್ಲಿ ಅಧಿಕಾರ ವಹಿಸಿಕೊಂಡನೆಂದು **ಕೆಂಪೇಗೌಡ ಜಯಪ್ರಶಸ್ತಿ** ಮತ್ತು ಶಾಸನಗಳನ್ನು ಆಧರಿಸಿ ಶ್ರೀಕಂಠಯ್ಯ ನಿಶ್ಚಯಿಸುತ್ತಾರಾದರೂ, **ವೀರಭದ್ರ ವಿಜಯ, ಕಂಠೀರವ ನರಸರಾಜ ವಿಜಯ** ಮೊದಲಾದ ಕೃತಿಗಳನ್ನಾಧರಿಸಿ 1597ರಿಂದ 1656ರವರೆಗೂ ತನ್ನ ನಾಡನ್ನು ಆಳಿಕೊಂಡಿದ್ದನೆಂದು ಊಹಿಸುತ್ತಾರೆ.[38] ಒಟ್ಟಾರೆ, ಹಿರಿಯ ಕೆಂಪೇಗೌಡನಿಗೆ ಪುತ್ರಸಂತಾನವು ಬಹಳ ತಡವಾಗಿ ಆಗಿದೆ ಎಂಬುದಂತೂ ಸ್ಪಷ್ಟ. ಬಹುಶಃ ಇಮ್ಮಡಿ ಕೆಂಪೇಗೌಡನು 1570ರ ದಶಕದ ಕೊನೆಯ ಭಾಗದಲ್ಲಿ ಜನಿಸಿದ್ದಾನೆ. ವಸ್ತುಸ್ಥಿತಿ ಹೀಗಿರುವಾಗ ಹಿರಿಯ ಕೆಂಪೇಗೌಡನು ತನ್ನ 30ನೇ ವಯಸ್ಸಿನಲ್ಲಿಯೇ ಮಗ ಮತ್ತು ಸೊಸೆಯನ್ನು ಹೊಂದಿದ್ದ ಎಂಬ ವಾದದಲ್ಲಿ ಯಾವುದೇ ಉರುಳಿಲ್ಲ.

ಇಲ್ಲಿ ಇನ್ನೂ ಕೆಲವು ಸಂಶಯಗಳು ಮೂಡುವುದುಂಟು. ಹಿರಿಯ ಕೆಂಪೇಗೌಡ ಬೆಂಗಳೂರು ನಗರ ನಿರ್ಮಾಣ ಮಾಡಿಸುತ್ತಿದ್ದ ಕಾಲದಲ್ಲಿ ಯಲಹಂಕವೇ ರಾಜಧಾನಿಯಾಗಿತ್ತು. ಕೋಟೆ ಕಟ್ಟುತ್ತಿದ್ದ ಪ್ರದೇಶ ಕಾಡಿನಿಂದ ಕೂಡಿದ ನಿರ್ಜನ ಪ್ರದೇಶ. ಅಂತಹ ಪ್ರದೇಶಕ್ಕೆ ಸುಮಾರು 15 ಕಿ.ಮೀ. ದೂರದ ಯಲಹಂಕದಿಂದ ಅರಸು ಮನೆತನದ ಬಸುರಿ ಹೆಣ್ಣುಮಗಳೊಬ್ಬಳು ಇರುಳಿನಲ್ಲಿ ಬಂದು ಅತ್ಮಾರ್ಪಣೆ ಮಾಡಿಕೊಂಡಳು ಎಂಬುದು ವಾಸ್ತವತೆಗೆ ದೂರವಾದ ವಿಚಾರ. ಎಲ್ಲಕ್ಕೂ ಮಿಗಿಲಾಗಿ ಹತ್ತಾರು ದೇವಾಲಯಗಳನ್ನು ಕಟ್ಟಿಸಿದ ಕೆಂಪೇಗೌಡನು ನಾಡಿಗಾಗಿ ಪ್ರಾಣಾರ್ಪಣೆ ಮಾಡಿದ ಸ್ವಂತ ಸೊಸೆಗೆ ಭವ್ಯವಾದ ದೇವಾಲಯವೊಂದನ್ನು ಕಟ್ಟಿಸದೆ ಹೋಗುವಷ್ಟು ಜಿಪುಣನೇ? ಅವಳ ಹೆಸರಿನಲ್ಲಿ ಶಾಸನವೊಂದನ್ನು ಹಾಕಿಸದಷ್ಟು ಅವಿವೇಕಿಯೇ? ಕೋಟೆಗಾಗಿ ಪ್ರಾಣ ಅರ್ಪಿಸಿಕೊಂಡವಳನ್ನು ಕೋಟೆಯ ಒಳಗಡೆಯೇ ಸಮಾಧಿ ಮಾಡಬಹುದಿತ್ತಲ್ಲವೇ? ಹೀಗೆ ಮೊದಲಾದ ಪ್ರಶ್ನೆಗಳು ಉದ್ಭವಿಸುತ್ತವೆ.

ಬೆಂಗಳೂರಿನ ಕೋಟೆಯ ನಿರ್ಮಾಣ ಕಾಲದಲ್ಲಿ ಹೆಬ್ಬಾಗಿಲಿಗೆ ಹಿರಿಯ ಕೆಂಪೇಗೌಡನ ಸೊಸೆ ಲಕ್ಷ್ಮಮ್ಮ ಆತ್ಮಾರ್ಪಣೆ ಮಾಡಿಕೊಂಡಳು ಎಂಬ ವಾದವು ಚಾರಿತ್ರಿಕವಾಗಿ ಮತ್ತು ತಾರ್ಕಿಕವಾಗಿ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಹಿರಿಯ ಕೆಂಪೇಗೌಡನಿಗೆ ಬಹುಕಾಲ ಪುತ್ರ ಸಂತಾನವಿರಲಿಲ್ಲ ಎಂಬುದರ ಸುಳಿವನ್ನು ಶಾಸನಗಳು ನೀಡುತ್ತವೆ. ಮಿಗಿಲಾಗಿ ಕೆಂಪೇಗೌಡನು 30ನೇ ವಯಸ್ಸಿಗೆ ಬರುವ ಹೊತ್ತಿಗೆ ಮಗ, ಸೊಸೆ ಇದ್ದರು ಎಂಬುದು ಕೂಡ ಒಪ್ಪಬಹುದಾದ ವಿಚಾರವಲ್ಲ. ಇಮ್ಮಡಿ ಕೆಂಪೇಗೌಡನಿಗೆ ಕೆಂಪಮ್ಮ ಮತ್ತು ಲಿಂಗಮ್ಮ ಹೆಸರಿನ ಇಬ್ಬರು ಮಡದಿಯರಿದ್ದರೆಂದೂ, ಇವರಿಗೆ ಮುಮ್ಮಡಿ ಕೆಂಪೇಗೌಡ, ಹಲಸ ಮತ್ತು ಇಮ್ಮಡಿ ಹಿರಿಯ ಕೆಂಪೇಗೌಡ ಎಂಬ ಮೂವರು ಮಕ್ಕಳಿದ್ದರೆಂದು 'ವೀರಭದ್ರ ವಿಜಯ'ದಲ್ಲಿಯೇ ಪ್ರಸ್ತಾಪವಾಗಿದೆ. ಇಂದು ಹೆಚ್ಚು ಜನಪ್ರಿಯತೆಯನ್ನು ಪಡೆದಿರುವ ಈ ಪ್ರಕರಣಗಳ ಬಗೆಗೆ ಏಕೆ ಸಮಕಾಲೀನ ಆಕರಗಳು ಮೌನವಹಿಸುತ್ತವೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಮಿಗಿಲಾಗಿ, ಈ ಪ್ರಕರಣದ ಬಗೆಗೆ 19ನೇ ಶತಮಾನದ ಮೊದಲ ದಶಕದಲ್ಲಿ ರಚಿಸಲ್ಪಟ್ಟ ಬಖೈರುಗಳು ಕೂಡ ಮೌನವಹಿಸುವುದನ್ನು ನೋಡಿದರೆ ವಿದ್ವಾಂಸರಾದ ಎಂ. ಜಮುನ ಮತ್ತು ಮಂಜುನಾಥ ಅವರು ಹೇಳುವಂತೆ ಇದು ಆನಂತರದ ವರ್ಷಗಳಲ್ಲಿ ಹುಟ್ಟಿಕೊಂಡಿರುವ ಕಥನವೇ ಆಗಿದೆ. ಈ ರೀತಿಯ ಕಥನ ಯಾವಾಗ ಹುಟ್ಟಿಕೊಂಡಿತು? ಯಾಕೆ ಹುಟ್ಟಿಕೊಂಡಿತು? ಈ ಲಕ್ಷ್ಮಿದೇವಿ ಯಾರು? ಎಂಬಿತ್ಯಾದಿ ಪ್ರಶ್ನೆಗಳಿಗೆ ಹೆಚ್ಚಿನ ಅಧ್ಯಯನಗಳು ನಡೆಯಬೇಕಿದೆ.

### 5.1.8 ಯಲಹಂಕ ನಾಡಪ್ರಭುಗಳು ನಿರ್ಮಿಸಿದ ಬಹುತ್ವದ ಸಮಾಜ

ಫ್ರಾನ್ಸಿಸ್ ಬುಕಾನನ್ ತನ್ನ ವರದಿಯಲ್ಲಿ ದಾಖಲಿಸಿರುವಂತೆ ಬೆಂಗಳೂರಿನಲ್ಲಿ 18 ಪಣದವರು ಅಥವಾ ವೃತ್ತಿಯ ಜಾತಿಯವರಿದ್ದರು. ಆ ಬಣಗಳೆಂದರೆ: 1) ಬಣಜಿಗರು– ಪಂಚಮ ಬಣಜಿಗರು, ತೆಲಿಗ ಬಣಜಿಗರು 2) ಒಕ್ಕಲಿಗರು 3)ಜ್ಯೋತಿಫಣ 4) ರಂಗಾರು 5)ಲಾಡರು (ಮುಸ್ಲಿಂ ವರ್ತಕರು) 6)ಗುಜರಾತಿ ವರ್ತಕರು 7) ಕೊಮ್ಮಟಿಗರು 8) ಜೈನರು 9)ಕುರುಬರು 10) ಕುಂಬಾರರು 11)ಅಗಸರು 12) ಬೆಸ್ತರು 13)ಪದ್ಮಶಾಲಿ 14) ನಾಯಿಂದರು 15) ಉಪ್ಪಾರರು 16)ಚಿತ್ರಗಾರರು 17)ಗೊಲ್ಲರು 18) ಹೊಲೆಯರು ಹೀಗೆ 18 ವೃತ್ತಿಯಾಧಾರಿತ ಸಮುದಾಯಗಳು ಬೆಂಗಳೂರಿನ ಪೇಟೆಯಲ್ಲಿದ್ದರು. ಅದೇ ರೀತಿ ರಂಗನಾಥ ದೇವಾಲಯದ ಮೇಲಿರುವ ತೆಲುಗು ಶಾಸನವನ್ನು ಅವಲೋಕಿಸಿದಾಗ ಅನೇಕ ವ್ಯಾಪಾರಿ ವರ್ಗ ಬೆಂಗಳೂರಿನಲ್ಲಿ ಇತ್ತು. ಕೇವಲ ಸ್ಥಾಪನೆಯಾದ 90 ವರ್ಷಗಳಲ್ಲಿಯೇ ಬಹುತ್ವದ ಸಮಾಜವೊಂದನ್ನು ರೂಪಿಸಿದ

ಕೀರ್ತಿ ಯಲಹಂಕದ ನಾಡಪ್ರಭುಗಳಿಗೆ ಸಲ್ಲುತ್ತದೆ. ಇದರಿಂದ ಅವರ ಆಶಯವೇ ಸಾಮಾಜಿಕ ಒಳಗೊಳ್ಳುವಿಕೆಯಾಗಿತ್ತೆಂದು ತೀರ್ಮಾನಿಸಬಹುದಾಗಿದೆ.

## 5.2 ಧಾರ್ಮಿಕ ವ್ಯವಸ್ಥೆ

ಯಲಹಂಕ ನಾಡಪ್ರಭುಗಳ ಮನೆತನದವರು ಧಾರ್ಮಿಕವಾಗಿ ಶ್ರದ್ಧಾವಂತರಾಗಿದ್ದರು. ಇವರು ದೇವಾಲಯಗಳನ್ನು ಮತ್ತು ಅಪಾರ ಪ್ರಮಾಣದಲ್ಲಿ ಬ್ರಾಹ್ಮಣರಿಗೆ ಅಗ್ರಹಾರಗಳನ್ನು ಮಾಡಿಸಿ ಕೊಟ್ಟಿರುವ ಉಲ್ಲೇಖಗಳು ಶಾಸನ ಮತ್ತು ಬಖೈರುಗಳಲ್ಲಿ ಕಂಡುಬರುತ್ತವೆ. ಯಲಹಂಕ ನಾಡಪ್ರಭುಗಳು ಬೆಂಗಳೂರಿನಿಂದ ಆಳುವ ಸಂದರ್ಭದಲ್ಲಿ ಶೈವ ಮತ್ತು ವೈಷ್ಣವ, ಸ್ಮಾರ್ಥ, ಮಾಧ್ವ ಪಂಥಗಳಿಗೂ ಸಮಾನವಾಗಿ ಆದ್ಯತೆಯನ್ನು ನೀಡಿರುವುದನ್ನು ಕಾಣಬಹುದು. "ಬೆಂಗಳೂರಿನ ದೇವಾಲಯಗಳು" ಬಖೈರನ್ನು ಅವಲೋಕಿಸಿದರೆ ಬೆಂಗಳೂರಿನ ನಾಲ್ಕು ಪೇಟೆಗಳಲ್ಲಿ 44 ದೇವಾಲಯಗಳು ಇದ್ದವೆಂದು ತಿಳಿದು ಬರುತ್ತದೆ.[39] ಆದರೆ ಮಾಗಡಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ನಂತರ ಶೈವ ದೇವಾಲಯ ಮತ್ತು ಮಠಗಳಿಗೆ ಹೆಚ್ಚಿನ ಆದ್ಯತೆಗಳನ್ನು ನೀಡಿರುವುದು ಕಂಡುಬರುತ್ತದೆ. ಇವರ ರಾಜ್ಯದ ವ್ಯಾಪ್ತಿಯಲ್ಲಿದ್ದ ಶಿವಗಂಗೆ, ಗುಮ್ಮಳಾಪುರ ಶೈವರ ಪ್ರಮುಖ ಕೇಂದ್ರಗಳಾಗಿದ್ದವು. ವೀರ ಶೈವಗುರುಗಳ ಪ್ರಭಾವಕ್ಕೆ ಯಲಹಂಕ ನಾಡಪ್ರಭುಗಳು ಒಳಗಾಗಿದ್ದರೆಂದು ಸಾಹಿತ್ಯ ಕೃತಿಗಳಿಂದ ತಿಳಿದು ಬರುತ್ತದೆ.

### 5.2.1 ಶೈವಧರ್ಮ

ಯಲಹಂಕ ನಾಡಪ್ರಭುಗಳು ಮೂಲತಃ ಸೀತಿಯ ಭೈರವನ ಆರಾಧಕರಾಗಿದ್ದರೆಂದು ತಿಳಿದು ಬರುತ್ತದೆ. ಕೆಂಪಮ್ಮ ಕುಲದೇವತೆ ಎಂದು ಹೇಳಲಾಗುತ್ತದೆ. ಹಿರಿಯ ಕೆಂಪೇಗೌಡನು ಬೆಂಗಳೂರಿನಲ್ಲಿ ದೊಡ್ಡಬಸವಣ್ಣ ದೇವಾಲಯ, ಗವಿಗಂಗಾಧರೇಶ್ವರ ದೇವಾಲಯದ ಮುಖಮಂಟಪ, ಬಂಡಿಮಹಾಕಾಳಿ ದೇವಾಲಯ, ದೊಡ್ಡ ಬಸವಣ್ಣನ ಗುಡಿ, ದೊಡ್ಡ ಗಣೇಶ ಮಾಡಿಸಿದನೆಂದು ಹೇಳಲಾಗುತ್ತದೆ. ಅಲಸೂರಿನ ಸೋಮೇಶ್ವರ ದೇವಾಲಯವನ್ನು ಇಮ್ಮಡಿ ಕೆಂಪೇಗೌಡನು ನಿರ್ಮಾಣ ಮಾಡಿಸಿದನೆಂದು ಬಖೈರು ಉಲ್ಲೇಖಿಸುತ್ತದೆ.[40] "ಬೆಂಗಳೂರಿನ ದೇವಾಲಯಗಳು" ಎಂಬ ಬಖೈರು ಪ್ರಕಾರ ಬೆಂಗಳೂರಿನ ನಗರ್ತಪೇಟೆ, ದೊಡ್ಡಪೇಟೆ, ಅರಳೇಪೇಟೆ ಈ ಮೂರು ಪೇಟೆಗಳಲ್ಲಿಯೇ 43 ದೇವಾಲಯಗಳು ಇದ್ದವೆಂದು ತಿಳಿದು ಬರುತ್ತದೆ.[41] ಅವುಗಳಲ್ಲಿ 21 ಶೈವ ದೇವಾಲಯಗಳನ್ನು ವಿವಿಧ ಜಾತಿ ಮತ್ತು ವೃತ್ತಿಯ ಜನರು ಕಟ್ಟಿಕೊಂಡಿದ್ದರೆಂದು ತಿಳಿಯುತ್ತದೆ. ಇವಲ್ಲದೆ ಕೆಲವು ಶಕ್ತಿ ದೇವತೆಗಳ ದೇವಾಲಯಗಳು ಕೂಡ

ಇದ್ದವೆಂದು ತಿಳಿಯುತ್ತದೆ. ಅಂದರೆ ಶೈವಧರ್ಮಿಯರ ಸಂಖ್ಯೆ ಬೆಂಗಳೂರಿನಲ್ಲಿ ಪ್ರಧಾನವಾಗಿತ್ತೆಂದು ತಿಳಿಯಬಹುದಾಗಿದೆ.

ಬಖೈರಿನಲ್ಲಿ ಒಂದು ಕಡೆ ಕೆಂಪೇಗೌಡನು ಗುಪ್ತವಾಗಿ ಶೈವಧರ್ಮವನ್ನು ಪಾಲಿಸುತ್ತಿದ್ದನೆಂದು ದಾಖಲಿಸಿದೆ. ಆದರೆ ಯಾವ ಕೆಂಪೇಗೌಡನೆಂದು ಸ್ಪಷ್ಟವಿಲ್ಲ. ಕೆಂಪೇಗೌಡನು ಪ್ರತಿದಿನವೂ ಶಿವಗಂಗೆಯ ತೀರ್ಥಪ್ರಸಾದವನ್ನು ಸೇವಿಸದೆ ಆಹಾರವನ್ನು ಸ್ವೀಕರಿಸೆನೆಂದೂ ಇದಕ್ಕೆ ಎಂದಾದರೂ ತಪ್ಪಿದರೆ ದೇವರ ಹೆಸರಿನಲ್ಲಿ ದೇಹ ತ್ಯಾಗ ಮಾಡುವೆನೆಂದೂ ತನ್ನ ಗುರುವಿನ ಸಾನ್ನಿಧ್ಯದಲ್ಲಿ ಪ್ರತಿಜ್ಞೆ ಮಾಡಿದ್ದನು. ಒಮ್ಮೆ ಅವನ ರಾಜಧಾನಿ ಮತ್ತು ಶಿವಗಂಗೆಯ ನಡುವೆ ಜೋರು ಮಳೆ ಮತ್ತು ಬಿರುಗಾಳಿಯು ಉಂಟಾಗಿ ಆ ರಾತ್ರಿ ಶಿವಗಂಗೆಯ ತೀರ್ಥಪ್ರಸಾದವು ತಪ್ಪಿಹೋಯಿತು. ಕೆಂಪೇಗೌಡನು ತನ್ನ ಪ್ರತಿಜ್ಞೆಯಂತೆ ದೇಹತ್ಯಾಗ ಮಾಡಲು ನಿರ್ಧರಿಸಿದಾಗ ದೇವರು ಕನಸಿನಲ್ಲಿ ಪ್ರತ್ಯಕ್ಷನಾಗಿ "ಶೋಕಿಸಬೇಡ ಇನ್ನು ಮುಂದೆ ನಿನ್ನ ಹತ್ತಿರವೇ ಇರುವ ವನ ಪ್ರದೇಶದಲ್ಲಿ ನೆಲೆಸುತ್ತೇನೆ. ನೀನು ತಕ್ಷಣವೇ ಅಲ್ಲಿಗೆ ಹೋಗಿ ಬ್ರಾಹ್ಮಣರು ವೇದೋಕ್ತವಾಗಿ ನನ್ನ ಪೂಜೆ ಮಾಡುವಂತೆ ಏರ್ಪಡಿಸು. ನಂತರ ನಿನಗೆ ತೊಂದರೆಯಿಲ್ಲದಂತೆ ನನ್ನ ತೀರ್ಥ ಪ್ರಸಾದ ನಿತ್ಯವೂ ದೊರಕುವುದು. ತೀರ್ಥ ಪ್ರಸಾದವನ್ನು ಸ್ವೀಕರಿಸಿದ ಮೇಲೆ ಗವಿಯಲ್ಲಿ ಒಂದು ವಿಶೇಷವಾದ ದೇವಸ್ಥಾನವನ್ನು ಅದರ ಸುತ್ತಲೂ ಗ್ರಾಮವನ್ನು ಕಟ್ಟಿಸು ಎಂದು ಹೇಳಿದನಂತೆ. ಅದರಂತೆ ಗವಿಗಂಗಾಧರೇಶ್ವರ ದೇವಾಲಯವನ್ನು, ಅದರ ಸುತ್ತ ಗವಿಗಂಗಾಧರಪುರವನ್ನು ಕಟ್ಟಿಸಿದನೆಂದು "ಬೆಂಗಳೂರಿನ ಬಳಿಯ ಕೆಲವು ವಿಶೇಷಗವಿಗಳು ಮತ್ತು ಪೂಜಾ ಸ್ಥಾನಗಳು" ಎಂಬ ಬಖೈರಿನಲ್ಲಿ ದಾಖಲಿಸಿದೆ.[42]

**'ನಿರಂಜನ ವಂಶರತ್ನಾಕರ'** ಎಂಬ ಕೃತಿಯಲ್ಲಿ ಕಲ್ಯಾಣ ಬಸವ ಪರಂಪರೆಯ 22ನೇಯ ಗುರುಗಳಾದ 'ಗಗನದಾಯ'ರು ಮಾಗಡಿಗೆ ಬಂದಾಗ ಕೆಂಪೇಗೌಡನು (ಬಹುಶಃ ಮುಮ್ಮಡಿ ಕೆಂಪೇಗೌಡ) ಗುರುವಿನಿಂದ ಲಿಂಗಧಾರಣೆ ಮಾಡಿಸಿಕೊಂಡುದು ಮಾತ್ರವಲ್ಲ, ಮಾಗಡಿಯ ಸುತ್ತಮುತ್ತ 66 ವಿರಕ್ತ ಮಠಗಳನ್ನು ಕಟ್ಟಿಸಿದನೆಂದು ದಾಖಲಿಸುತ್ತದೆ. ಅಲ್ಲದೆ, ಗಗನದಾರ್ಯನು ಕುದೂರು ಸಮೀಪದ ಬೈರನದುರ್ಗದಲ್ಲಿ ಶಿವೈಕ್ಯನಾದನೆಂದೂ, ಅಲ್ಲಿಯೇ ಅವನ ಗದ್ದುಗೆ ಮಾಡಿಸಿದನೆಂದು ಹೇಳಲಾಗುತ್ತದೆ.[43]

ವಿರೂಪಾಕ್ಷ ಪಂಡಿತನ **'ಚನ್ನಬಸವ ಪುರಾಣ'**ದಲ್ಲಿ ಇಮ್ಮಡಿ ಕೆಂಪೇಗೌಡನ ಸಮಕಾಲೀನರಾದ ಬಿಜ್ಜಾವರದ ಚಿಕ್ಕಣ್ಣಗೌಡ, ಸುಗಟೂರು ತಮ್ಮಣ್ಣಗೌಡ ಮೊದಲಾದವರ ಜೊತೆ ಯಲಹಂಕದ ದೊರೆಗಳು ವೀರಶೈವಭಕ್ತರಾಗಿ ಜಂಗಮ ದಾಸೋಹ ಮಾಡುತ್ತಿದ್ದರೆಂದು

ಉಲ್ಲೇಖಿಸಿದೆ.[44] ಹೀಗೆ ಯಲಹಂಕ ನಾಡಪ್ರಭುಗಳು ಶೈವಧರ್ಮವನ್ನು ಸ್ವೀಕರಿಸಿ, ಅದಕ್ಕೆ ಹೆಚ್ಚಿನ ಉತ್ತೇಜನ ನೀಡಿದರು.

### 5.2.2 ಮಠಗಳು ಮತ್ತು ದೇವಾಲಯಗಳಿಗೆ ಕೊಡುಗೆ

ಯಲಹಂಕ ನಾಡಪ್ರಭುಗಳು ಅನೇಕ ಶೈವ ಮತ್ತು ವೈಷ್ಣವ ಮಠಗಳಿಗೆ ಮತ್ತು ಇತರ ಮಠಗಳಿಗೂ ಉದಾರವಾಗಿ ಕೊಡುಗೆಗಳನ್ನು ನೀಡಿದ್ದಾರೆ. ಅದು ಅವರ ಶಾಸನಗಳಲ್ಲಿಯೂ, ಸಾಹಿತ್ಯದಲ್ಲಿಯೂ, ಜನಪದದಲ್ಲಿಯೂ ಅಭಿವ್ಯಕ್ತವಾಗಿದೆ. ಇಮ್ಮಡಿ ಕೆಂಪೇಗೌಡನು ಸೋಸಲೆಯ ವ್ಯಾಸರಾಯ ಮಠದ ಲಕ್ಷ್ಮೀಕಾಂತ ಒಡೆಯರ ಶಿಷ್ಯರಾದ ಶ್ರೀಪತಿ ಒಡೆಯರ ಶಿಷ್ಯರಾದ ರಾಮಚಂದ್ರ ಒಡೆಯರ ಮಠದ ಗೋಪಾಲಕೃಷ್ಣಸ್ವಾಮಿಯ ನೈವೇದ್ಯ, ದೀಪಾರಾಧನೆ, ಶಾಸ್ತ್ರ ಪುರಾಣಗಳ ವ್ಯಾಖ್ಯಾನ ಮಾಡಿಕೊಂಡಿರುವುದಕ್ಕಾಗಿ ಬೆಂಗಳೂರು ಸೀಮೆಯ ಸೊಂಡೇಕೊಪ್ಪ ಹೋಬಳಿಯ ಗೋಣಿಪುರ, ಹಂಪಾಪುರ, ಮಂಚನಾಯಕನಹಳ್ಳಿ, ಹೆಜ್ಜಾಲ, ಮೊದಲಾದ ಐದು ಗ್ರಾಮಗಳ ಮಧ್ಯದ ಭೂಮಿಯನ್ನು ವ್ಯಾಸರಾಯ ಸಮುದ್ರ ಎಂಬ ಗ್ರಾಮವನ್ನಾಗಿ ಮಾಡಿ ಆ ಸ್ಥಳದಲ್ಲಿ ಒಂದು ಕೆರೆಯನ್ನು ಕಟ್ಟಿಸಿ ಕೊಡಲು ಸೋಮೇಶ್ವರನ ಸನ್ನಿಧಿಯಲ್ಲಿ ದಾನವಾಗಿ ಕೊಟ್ಟಬಗ್ಗೆ 1627ರ ಸೋಸಲೆ ತಾಮ್ರ ಶಾಸನ ದಾಖಲಿಸುತ್ತದೆ.[45] ಕಂಚುಗಾರ್ರಹಳ್ಳಿ, ಹಾಲಸಿಂಗನಹಳ್ಳಿ ಗ್ರಾಮಗಳನ್ನು ಮಾಗಡಿಯ ರಾಮೇಶ್ವರ ದೇವಾಲಯದ ನಿತ್ಯಪಡಿತರ, ದೀಪಾರಾಧನೆ, ಮಹಾರಥೋತ್ಸವ ಮುಂತಾದ ಕಾರ್ಯಗಳ ವೆಚ್ಚಕ್ಕಾಗಿ ಸರ್ವಮಾನ್ಯವಾಗಿ 1630ರಲ್ಲಿ ದಾನ ನೀಡಲಾಗುತ್ತದೆ.[46] 1634–35ರಲ್ಲಿ ಇಮ್ಮಡಿ ಕೆಂಪೇಗೌಡನು ಸೊಳ್ಳೆಪುರವನ್ನು ಪಚ್ಚೆನ್ನಯನ ಮಠದ ಗುರುಗಳಿಗೆ ದಾನವಾಗಿ ನೀಡುತ್ತಾನೆ.[47] ಇದೇ ಇಮ್ಮಡಿ ಕೆಂಪೇಗೌಡನು ವಿಭೂತಿಪುರದ ಮಠಕ್ಕೂ ದಾನ ಕೊಟ್ಟಿದ್ದಾನಲ್ಲದೆ ಮಡದಿಯ ಜೊತೆಗೆ ತನ್ನ ಪ್ರತಿಮೆಯನ್ನು ಪ್ರತಿಷ್ಠಾಪಿಸಿದ್ದಾನೆ. 1667ರ ಅಳಲಕುಪ್ಪೆ ಶಿಲಾಶಾಸನದ ಪ್ರಕಾರ ಮುಮ್ಮಡಿ ಕೆಂಪೇಗೌಡನು ಕಾಸಿಯಲ್ಲಿ ಮಠವನ್ನು ಕಟ್ಟಿಸಿ, ಅಳಲಕುಪ್ಪೆ ಗ್ರಾಮವನ್ನು ದಾನವಾಗಿ ನೀಡಿದನು.[48] 1667ರ ಮಾಗಡಿಯ ತಾಮ್ರ ಶಾಸನವೊಂದರಲ್ಲಿ ಇಮ್ಮಡಿ ಕೆಂಪೇಗೌಡನು (?) ಮಾಗಡಿಯ ವೀರೇಶ್ವರ ದೇವಾಲಯದ ನಿತ್ಯಗಟ್ಟೆ ಪಡಿತರ, ದೀಪಾರಾಧನೆ, ರಥೋತ್ಸವ ಮುಂತಾದ ಪೂಜಾ ಉತ್ಸವಗಳಿಗಾಗಿ ಮಾಗಡಿ ಸೀಮೆಯ ಹಂಚಿಕುಪ್ಪೆ, ವೋತ, ಅತ್ತಿಮಗೆರೆ, ಕೆಂಪಾಪುರ ಗ್ರಾಮಗಳನ್ನು ಸರ್ವಮಾನ್ಯವಾಗಿ ಕೊಟ್ಟಬಗ್ಗೆ ತಿಳಿಸುತ್ತದೆ.[49] 1688ರಲ್ಲಿ ಮುಮ್ಮಡಿ ದೊಡ್ಡವೀರಪ್ಪಗೌಡನು ಮೇಲುಕೋಟೆಯ ಚಲುವನಾರಾಯಣಸ್ವಾಮಿ ದೇವಾಲಯ, ಮಹಾಲಕ್ಷ್ಮಿ ದೇವಾಲಯ ಹಾಗೂ ಮಾಗಡಿಯ ತಿರುವೆಂಗಳನಾಥ ದೇವಾಲಯಗಲ ಉತ್ಸವಗಳ ಕರ್ಚಿಗಾಗಿ

ಮಾಗಡಿ ಸೀಮೆಯ ಬೇಡರಹಳ್ಳಿ ಮತ್ತು ತಿರುಮಲೆಗ್ರಾಮಕ್ಕೆ ಸೇರಿದ ಹಳ್ಳಿಗಳಿಂದ ಬರುವ ಎಲ್ಲಾ ಆದಾಯಗಳನ್ನು ತಿರುಮಲಯ್ಯ ಎಂಬುವರಿಗೆ ದಾನವಾಗಿ ನೀಡಲಾಯಿತು.[50] 1698ರಲ್ಲಿ ಮುಮ್ಮಡಿ ದೊಡ್ಡವೀರಪ್ಪಗೌಡನು ಕುಕ್ಕೆಯ ಸುಬ್ರಹ್ಮಣ್ಯ ದೇವಾಲಯಕ್ಕೆ ಮಾಗಡಿ ಸೀಮೆಯ ಹೊನ್ನಪ್ಪನ ಬೇಡರಹಳ್ಳಿಗೆ ಪ್ರತಿನಾಮಧೇಯವಾದ ಸುಬ್ಬರಾಯಪುರ ಎಂಬ ಗ್ರಾಮವನ್ನು ದಾನವಾಗಿ ಕೊಟ್ಟನು.[51] ಹೀಗೆ ಯಲಹಂಕ ನಾಡಪ್ರಭುಗಳು ಎಲ್ಲಾ ಧರ್ಮಗಳನ್ನು ಸಮಾನವಾಗಿ ಕಂಡು ಗೌರವಿಸಿರುವುದು ಶಾಸನಗಳಿಂದ ವ್ಯಕ್ತವಾಗುತ್ತದೆ.

ಇದನ್ನು ವಿದ್ವಾಂಸರು ಹೀಗೆ ವಿಶ್ಲೇಷಿಸುತ್ತಾರೆ: ನಾಡಪ್ರಭುಗಳು ವೈಯಕ್ತಿಕವಾಗಿ ತಮ್ಮ ಸಾಮಾಜಿಕ ಸ್ಥಾನಮಾನ ಹೆಚ್ಚಿಸಿಕೊಳ್ಳಲು ಹಾಗೂ ಸಮಾಜ ಮತ್ತು ಅಧಿಕಾರ ಶಕ್ತಿಗಳ ಮೇಲೆ ಹತೋಟಿ ಹೊಂದಲು ಅಂದಿನ ಪ್ರಭಾವಿ ಮಠಗಳು ಹಾಗೂ ಧಾರ್ಮಿಕ ಶಕ್ತಿ ಕೇಂದ್ರಗಳಾದ ಶೃಂಗೇರಿ, ಕಾಶಿ, ಕುಕ್ಕೆ,

ಮುಂತಾದವುಗಳಿಗೆ ದಾನ ನೀಡಿದ್ದು ಗಮನ ಸೆಳೆಯುತ್ತದೆ. ಅಂದಿನ ದಾನ ಶಾಸನಗಳಲ್ಲಿ ನಾಡಪ್ರಭುಗಳ ಗೋತ್ರ "ಸದಾಶಿವ ಗೋತ್ರ" ಎಂದು ಉಲ್ಲೇಖಗೊಳ್ಳುವುದು ಅವರ ಹೊಸ ಗೋತ್ರದ ಸಾಮಾಜಿಕ ಅಂಗೀಕಾರಕ್ಕಾಗಿ ಇರಬಹುದು ಎಂದು ಅಭಿಪ್ರಾಯ ಪಡುತ್ತಾರೆ.[52] ಈ ಅಭಿಪ್ರಾಯ ವಾಸ್ತವವಾಗಿಯೇ ಇದೆ ಎಂದು ತೋರುತ್ತದೆ.

### 5.2.3 ಧಾರ್ಮಿಕ ಸಂಘರ್ಷ

ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಮಾಗಡಿ ಕೇಂದ್ರಿತವಾದ ಧರ್ಮಾಧಾರಿತವಾದ ರಾಜಕೀಯ ಸಂಘರ್ಷವೊಂದು ನಡೆದಿರುವ ಸುಳುಹುಗಳು ಜಾನಪದ ಮತ್ತು ಶಾಸನಗಳ ಹಿನ್ನೆಲೆಯಲ್ಲಿ ಗುರುತಿಸಲು ಸಾಧ್ಯವಿದೆ. ಆದರೆ ಈ ಘಟನೆ ಯಾರ ಕಾಲದಲ್ಲಿ ನಡೆಯಿತೆಂದು ಹೇಳುವುದು ಕಷ್ಟ. ಚಾರಿತ್ರಿಕವಾಗಿ ಯಲಹಂಕ ನಾಡಪ್ರಭುಗಳ ಮನೆತನದಲ್ಲಿ ಕೆಂಪೇಗೌಡ ಹೆಸರಿನ ಎಂಟು ಮಂದಿ ಬರುತ್ತಾರೆ. ಆದರೆ ಲಾವಣಿಗಳಲ್ಲಿ ಇವರೆಲ್ಲರ ಕಾಲದ ಘಟನೆಗಳನ್ನು ಒಬ್ಬನೇ ಕೆಂಪೇಗೌಡನಿಗೆ ಆರೋಪಿಸಿ ಹೇಳುತ್ತಾರೆ. ಇದರಿಂದ ಗೊಂದಲ ಮೂಡುವುದು ಸಹಜ. ಈ ಗೊಂದಲದ ಸಿಕ್ಕಿನಲ್ಲಿ ಸಿಲುಕಿರುವ ಚಾರಿತ್ರಿಕ ಸಂಗತಿಗಳನ್ನು ಸೂಕ್ಷ್ಮ ಅಧ್ಯಯನದ ಮೂಲಕ ಶೋಧಿಸುವುದೇ ಸವಾಲಿನ ಕೆಲಸ. ಕೆಂಪೇಗೌಡನ ಅಂತ್ಯದ ಹಿಂದೆ ಧಾರ್ಮಿಕ ಸಂಘರ್ಷ ಏರ್ಪಟ್ಟ ಕುರಿತು ಲಾವಣಿಗಳಲ್ಲಿ ನಿರೂಪಿತವಾಗಿರುವ ಕಥಾಸಾರ ಹೀಗಿದೆ: "ಮಾಗಡಿಯ ರಂಗಧಾಮ (ತಿರುಮಲೆ ರಂಗನಾಥ) ಕೆಂಪೇಗೌಡನ ಮನೆದೇವರು. ಕೆಂಪೇಗೌಡನಿಗೆ ಗಂಡು ಸಂತಾನವಿಲ್ಲದಿದ್ದಾಗ ಮನೆದೇವರಾದ ರಂಗಧಾಮನಲ್ಲಿ ಮೊರೆಯಿಟ್ಟು ಪ್ರಸಾದ ಸ್ವೀಕರಿಸುತ್ತಾನೆ.

ಪ್ರಸಾದದಲ್ಲಿ ಬಿಳಿಯ ಕೂದಲು ಸಿಗುತ್ತದೆ. ಇದರ ಅರ್ಥವೇನೆಂದು ಮಂತ್ರಿ ಪ್ರಧಾನಿಗಳನ್ನು ಕೇಳುತ್ತಾನೆ. ಅದಕ್ಕೆ ಅವರು ಕೆಂಪೇಗೌಡನಿಗೆ ಮಕ್ಕಳ ಫಲ ಕೊಡುವುದಕ್ಕೆ ರಂಗಧಾಮ ಮುದುಕನಾದ, ಆದ್ದರಿಂದ ನೀವು ಸೋಮೇಶ್ವರನಲ್ಲಿ ಬೇಡಿಕೊಳ್ಳಿ ಎಂದು ಸಲಹೆ ನೀಡುತ್ತಾರೆ. ಅದರಂತೆ ಸೋಮೇಶ್ವರ ದೇವಸ್ಥಾನವನ್ನು ಮಾಗಡಿಯಲ್ಲಿ ಮಾಡಿಸಿದ. ಹೀಗೆ ಕೆಂಪೇಗೌಡನಿಂದ ಕಡೆಗಣನೆಗೆ ಒಳಗಾದ ರಂಗಧಾಮ ಅವನ ವಿರುದ್ಧ ಕುಪಿತಗೊಂಡು ಪ್ರತಿಕಾರಕ್ಕಾಗಿ ತಂತ್ರ ರೂಪಿಸಿದ. ಅದರಂತೆ, 'ಮಾಗಡಿ ಸೀಮೆ ಸಂಪದ್ಭರಿತವಾಗಿದೆ. ಅದರ ಮೇಲೆ ಆಕ್ರಮಣ ಮಾಡು ಬಾ, ನಿನ್ನ ಬೆಂಬಲಕ್ಕೆ ನಾನಿದ್ದೇನೆ' ಎಂದು ರಂಗಧಾಮನು ಮೈಸೂರಿನ ದಳವಾಯಿಯನ್ನು ಆಹ್ವಾನಿಸಿದ." ಜೀ.ಶಂ.ಪರಮಶಿವಯ್ಯ (ಜೀ.ಶಂ.ಪ) ಸಂಗ್ರಹದ ಆವೃತ್ತಿಯಲ್ಲಿ ಮೈಸೂರ ದಳವಾಯಿ ದೊಡ್ಡಯ್ಯ ಎಂದು ತಿಳಿದು ಬರುತ್ತದೆ. "ಸೈನ್ಯ ಸಹಿತ ದಂಡೆತ್ತಿ ಬಂದ ದಳವಾಯಿಗೂ ಕೆಂಪೇಗೌಡನಿಗೂ ಕದನ ಜರುಗಿತು. ರಂಗಧಾಮನ ಸಹಾಯದಿಂದ ದಳವಾಯಿ ಸೈನ್ಯ ಮೇಲುಗೈ ಸಾಧಿಸಿತು. ವೀರನಾದ ಕೆಂಪೇಗೌಡ ಸೋಲನ್ನಪ್ಪುವ ಮುನ್ನ ತನ್ನನ್ನು ತಾನು ಇರಿದುಕೊಂಡು ಆತ್ಮಹತ್ಯೆ ಮಾಡಿಕೊಂಡ." ಅವನ ಅಂತ್ಯದ ಬಗ್ಗೆ ಪಿ.ಕೆ.ರಾಜಶೇಖರ್ (ಪಿ.ಕೆ.ಆರ್) ಸಂಗ್ರಹಿಸಿದ ಲಾವಣಿಯ ಸಾಲುಗಳು ಹೀಗಿವೆ:[52]

> ಆಗ ಮಾಗಡಿ ಕೆಂಪೆಗೌಡ ಏನೋಚನೆ ಮಾಡುತ್ತಾನೆ
> ...............................................
> ಅವ್ನು–ಸೊಂಟದಲ್ಲಿದ್ದ ಬಾಕ ಕೈಗಾದ್ರೆ ತಕ್ಕೊಂಡ
> ಅವ್ನು–ಎದೆಗಾದ್ರೆ ತಾಟಿಕೊಂಡು ಕುಂತು ಪ್ರಾಣಬಿಟ್ಟನಲ್ಲೊ
> ಕೈಯಾರ ಪ್ರಾಣುವನ್ನೆ ಕಳುಕೊಂಡ ಕೆಂಪೆಗೌಡು
> ಎಂತೆ ದೊರೆಮಗನೀಗೆ ಎಂತೆಕಾಲ ಕೂಡಿತಪ್ಪ
> ಮೈಸೂರು ದಳವಾಯಿ ಕೆಂಪೇಗೌಡ್ನ ನೋಡಿದ
> ತನ್ನ ತೊಡೆ ಮ್ಯಾಲುಕಾದ್ರೆ ಅವನ ತಲೆ ಇಟುಕೊಂಡ
> ಮಾವೀನ ತೋಪಿನಲ್ಲಿ ಅವನ ಗೋರಿ ಮಾಡಿಸಿದ.

ಪಿ.ಕೆ.ಆರ್ ಮತ್ತು ಜೀ.ಶಂ.ಪ ಅವರು ಸಂಗ್ರಹಿಸಿದ ಲಾವಣಿಗಳಲ್ಲಿನ ಮೂಲ ಕಥಾಹಂದರ ಒಂದೇ ಆಗಿದ್ದು, ಕಥಾನಿರೂಪಣೆಯಲ್ಲಿ ಸಣ್ಣಪುಟ್ಟ ವ್ಯತ್ಯಾಸಗಳಿವೆ. ಮೇಲೆ ಹೇಳಿದ ಕಥಾಸಾರದಲ್ಲಿ ಕೆಂಪೇಗೌಡನ ಅನಾದರಕ್ಕೆ ಒಳಗಾದ ರಂಗಧಾಮ ಮಾಗಡಿಯ ಮೇಲೆ ಆಕ್ರಮಣ ಮಾಡುವಂತೆ ಮೈಸೂರು ದಳವಾಯಿಗೆ ಆಹ್ವಾನವಿತ್ತ ಎಂಬುದು ಅಧ್ಯಯನ ಯೋಗ್ಯ ಚಾರಿತ್ರಿಕ ಸಂಗತಿಯಾಗಿದೆ. ಈ ಸಂಗತಿಯನ್ನು ಸೂಕ್ಷ್ಮ ವಿಮರ್ಶೆಗೆ ಒಳಪಡಿಸಿದಾಗ ಅದರ ಒಳಾರ್ಥದ

ಅರಿವಾಗುತ್ತದೆ. ಅದನ್ನು ಹೀಗೆ ವಿಶ್ಲೇಷಿಸಬಹುದು. ವೈಷ್ಣವ ದೇವರಾದ ರಂಗಧಾಮನಿಗೆ ನೀಡುತ್ತಿದ್ದ ದಾನದತ್ತಿಗಳನ್ನು ನಿಲ್ಲಿಸಿದ ಕೆಂಪೇಗೌಡನು ತನ್ನ ಒಲವನ್ನು ಶೈವದೇವರಾದ ಸೋಮೇಶ್ವರನ ಕಡೆಗೆ ಬದಲಿಸಿದ. ಇದು ಸಹಜವಾಗಿ ವೈಷ್ಣವರನ್ನು ಕೆರಳಿಸಿತು. ವೈಷ್ಣವರು ಗುಪ್ತವಾಗಿ ಮೈಸೂರಿನ ದಳವಾಯಿಯನ್ನು ಸಂಪರ್ಕಿಸಿ, ಮಾಗಡಿಯ ಸಿರಿವಂತಿಗೆಯನ್ನು ಹೊಗಳಿ ಅದರ ಮೇಲೆ ಆಕ್ರಮಣ ನಡೆಸಲು ಆಹ್ವಾನಿಸಿರುವಂತೆ ಕಾಣುತ್ತದೆ. ಇದಕ್ಕೆ ಪೂರಕವಾಗಿ ಎಸ್.ಕೆ. ನರಸಿಂಹಯ್ಯ ಹೀಗೆ ದಾಖಲಿಸುತ್ತಾರೆ: "ಮುಮ್ಮಡಿ ಕೆಂಪೇಗೌಡನ ಕಾಲಕ್ಕೆ ವಿಷ್ಣು ದ್ವೇಷವಂಕುರಿಸಿ ಶೈವರಲ್ಲಿ ಅನುರಾಗವೂ ಇತರರಲ್ಲಿ ಔದಾಸೀನ್ಯವೂ ಹೆಚ್ಚಿತು. ಮುಖ್ಯಾಧಿಕಾರಿಗಳಲ್ಲಿ ಕೆಲವರಿಗೆ ವೈಮನಸ್ಯವುಂಟಾಯಿತು."[53] ಈ ಅಭಿಪ್ರಾಯಕ್ಕೆ ಬರಲು ನರಸಿಂಹಯ್ಯನವರು ಯಾವುದೇ ಆಧಾರಗಳನ್ನು ನೀಡುವುದಿಲ್ಲವಾದರೂ, ಶಾಸನಗಳನ್ನು ಅವಲೋಕಿಸಿದಾಗ ಮುಮ್ಮಡಿ ಕೆಂಪೇಗೌಡನ ಕಾಲದಲ್ಲಿ ಶೈವಧರ್ಮಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆತಿರುವುದು ಕಂಡುಬರುತ್ತದೆ.

ಲಾವಣಿಗಳ ಹಿನ್ನೆಲೆಯಲ್ಲಿ ಚಾರಿತ್ರಿಕವಾಗಿ ಎರಡು ಅಂಶಗಳನ್ನು ಗುರುತಿಸಬಹುದು. **ಒಂದು–** ಲಾವಣಿಗಳಲ್ಲಿ ದಳವಾಯಿಯ ಉಲ್ಲೇಖವಾಗಿರುವುದರಿಂದ ಈ ಘಟನೆಯು 1614ರ ನಂತರದಲ್ಲಿ ಸಂಭವಿಸಿರಬಹುದೆಂದು ಖಚಿತವಾಗಿ ತೀರ್ಮಾನಿಸಬಹುದು. **ಎರಡು–** 17ನೆಯ ಶತಮಾನದ ಪೂರ್ವಾರ್ಧದ ಹೊತ್ತಿಗೆ ಒಡೆಯರ್ ಮನೆತನದವರು ವೈಷ್ಣವ ಧರ್ಮವನ್ನು ಸಾಕಷ್ಟು ಪೋಷಿಸುತ್ತಿದ್ದರು.[54] ಈ ಕಾಲದ ಮಾಗಡಿ ತಾಲ್ಲೂಕಿನ ಧಾರ್ಮಿಕ ಶಾಸನಗಳ ಲೆಕ್ಕಾಚಾರ ಕೂಡ ಇದಕ್ಕೆ ಆಧಾರವನ್ನೊದಗಿಸುತ್ತದೆ. ಮಾಗಡಿ ತಾಲ್ಲೂಕಿನಲ್ಲಿರುವ ಕ್ರಿ.ಶ. 1510–1670ರವರೆಗಿನ ಶಾಸನಗಳನ್ನು ಅವಲೋಕಿಸಿದಾಗ 18 ಶಾಸನಗಳಲ್ಲಿ ಧಾರ್ಮಿಕ ಸಂಗತಿಗಳಿವೆ. ಇವುಗಳಲ್ಲಿ 1510–60ರವರೆಗಿನ 50 ವರ್ಷಗಳ ಅವಧಿಯಲ್ಲಿ 4 ಶೈವದೇವಾಲಯಗಳಿಗೂ, 6 ವೈಷ್ಣವ ದೇವಾಲಯಗಳಿಗೂ ದಾನ, ದತ್ತಿಗಳು ಲಭಿಸಿದೆ. 1560 ರಿಂದ 1620ರವರೆಗಿನ 60 ವರ್ಷಗಳಲ್ಲಿ ಯಾವ ದೇವಾಲಯಗಳಿಗೂ ದಾನ, ದತ್ತಿ ದೊರೆತಿಲ್ಲ. ಆದರೆ, 1621 ರಿಂದ 1670ರವರೆಗೆ 6 ಶೈವದೇವಾಲಯಗಳಿಗೆ ಮತ್ತು ಶೈವ ಮಠಗಳಿಗೆ ದತ್ತಿಬಿಟ್ಟ ವಿವರಗಳಿವೆ. ಆದರೆ, ಈ ಅವಧಿಯಲ್ಲಿ ಒಂದೂ ವೈಷ್ಣವ ದೇವಾಲಯಕ್ಕೆ ದಾನ ಅಥವಾ ದತ್ತಿ ಬಿಟ್ಟ ಸಂಗತಿಗಳಿಲ್ಲ. ಬಹುಶಃ ಎರಡನೇ ಕೆಂಪೇಗೌಡನ ಕಾಲದಲ್ಲಿ ತೀವ್ರಗೊಂಡ ಶೈವಧರ್ಮದ ಕಡೆಗಿನ ಒಲವು ನಂತರದ ಕಾಲದಲ್ಲಿ ಸಹಜವಾಗಿ ವೈಷ್ಣವರನ್ನು ಕೆರಳಿಸಿದೆ. ಈ ಹೊತ್ತಿಗಾಗಲೆ ಶಿವಗಂಗೆಯು ಪ್ರಮುಖ ಶೈವಕೇಂದ್ರವಾಗಿ ದಕ್ಷಿಣ ಕರ್ನಾಟಕದಲ್ಲಿ ಬೆಳವಣಿಗೆ ಹೊಂದುತ್ತಿದ್ದುದನ್ನು ಕಾಣಬಹುದು.[55] ಅದರ ಅಭಿವೃದ್ಧಿಗೆ ಯಲಹಂಕ ಪ್ರಭುಗಳ ಕಾಣಿಕೆಯೂ ಪ್ರಮುಖವಾದುದು.

### 5.2.4 ಧಾರ್ಮಿಕ ಆಚರಣೆಗಳು

ಯಲಹಂಕ ನಾಡಪ್ರಭುಗಳು ಬೆಂಗಳೂರಿನಲ್ಲಿ ಕೆಲವು ಧಾರ್ಮಿಕ ಆಚರಣೆಗಳಿಗೆ ಪ್ರೋತ್ಸಾಹ ನೀಡಿದ್ದರು. ಅವುಗಳಲ್ಲಿ ಒಂದು ಕರಗ ಉತ್ಸವ, ಮತ್ತು ದಸರಾ ಉತ್ಸವ. ಇವು ಧಾರ್ಮಿಕ ಭಾವೈಕ್ಯತೆ ಮತ್ತು ಸೌಹಾರ್ದತೆಯ ಸಂಕೇತಗಳಾಗಿದ್ದವು. ಆದರೆ ಇಂದು ದರಸಾ ಉತ್ಸವ ಆಚರಣೆಯಲ್ಲಿ ಇಲ್ಲ. ಆದರೆ ವೈಭವದ ಕರಗ ಉತ್ಸವ ನಡೆಯುತ್ತದೆ.

#### 5.2.4.1 ಕರಗ ಉತ್ಸವ

ಪ್ರಧಾನವಾಗಿ ತಿಗಳ ಸಮುದಾಯದವರು ಆಚರಿಸುವ ಈ ಉತ್ಸವವು ಬೆಂಗಳೂರಿನ ಆಕರ್ಷಣೆಯ ಉತ್ಸವಗಳಲ್ಲಿ ಒಂದು. ಇದು ಸರ್ವ ಧರ್ಮಗಳ ಭಾವೈಕ್ಯತೆಯ ದ್ಯೋತಕವಾಗಿ ನಡೆಯುತ್ತದೆ. 'ಕರಗ' ಎಂದರೆ ಗಡಿಗೆ, ಕಳಶ, ಕುಂಭ ಎಂಬ ಅರ್ಥಗಳನ್ನು ನೀಡುತ್ತದೆ. ಪೌರಾಣಿಕವಾಗಿ ದೌಪದಿಯ ಹಿನ್ನೆಲೆಯಲ್ಲಿ ಈ ಸಂಪ್ರದಾಯ ಹುಟ್ಟಿಕೊಂಡಿದೆ ಎಂದು ಹೇಳಲಾಗುತ್ತದೆ.[56] ಮೂಲತಃ ತಮಿಳುನಾಡಿನಲ್ಲಿ ಕರಗ ಆರಾಧನೆಯು ಜನಪ್ರಿಯವಾಗಿದೆ. ದ್ರೌಪದಿಯ ದೇವಾಲಯಗಳು ಪಾಂಡಿಚೇರಿಯಿಂದ ಆರ್ಕಾಟ್‌ವರೆಗೂ ವ್ಯಾಪಿಸಿವೆ. ದಕ್ಷಿಣ ಆರ್ಕಾಟ್ ಜಿಲ್ಲೆಯು ದ್ರೌಪದಿಯ ಆರಾಧನೆಯ ಕೇಂದ್ರಸ್ಥಾನವಾಗಿದೆ.[57] ಇದು ಒಂದು ರೀತಿಯಲ್ಲಿ ಶಕ್ತಿ ಅಥವಾ ಮಾತೃದೇವತೆಯ ಆರಾಧನೆಯ ಮತ್ತೊಂದು ಸ್ವರೂಪವಾಗಿದೆ. ಕುಂಭ ಎಂಬುದು ಗರ್ಭದ ಸೂಚಕವಾಗಿದೆ. ಲಿಂಗ ಪುರುಷ ಸಂಕೇತವಾದರೆ, ಕುಂಭ ಅಥವಾ ಕರಗ ಸ್ತ್ರೀಫಲವತ್ತತೆಯ ಸಂಕೇತವಾಗಿದೆ. ತೋಟಗಾರಿಕೆ ಅಥವಾ ಕೃಷಿ ಮೂಲ ಸಂಸ್ಕೃತಿಯ ಜನರಾದ ತಿಗಳರು ಫಲವತ್ತತೆಯ ಸಂಕೇತವಾದ ಈ ದೇವಿಯನ್ನು ಆರಾಧಿಸುವುದು ಸಹಜವಾಗಿದೆ.

ಬೆಂಗಳೂರು ಕರಗ ಆಚರಣೆಯ ಆರಂಭವನ್ನು ಬೆಂಗಳೂರು ಸ್ಥಾಪನೆಯೊಂದಿಗೆ ಸಮೀಕರಿಸಬಹುದು. ಬೆಂಗಳೂರು ನಗರ ನಿರ್ಮಾಪಕ ಕೆಂಪೇಗೌಡರು ತೋಟಗಾರಿಕೆಗೆ ಅಥವಾ ಕೃತಿ ಹೆಸರುವಾಸಿಗಳಾಗಿದ್ದ ಅಗ್ನಿಕುಲಕ್ಷತ್ರಿಯ ಅಥವಾ ತಿಗಳ ಸಮುದಾಯದವರನ್ನು ನಗರದ ಪೂರ್ವದ ಅಂಚಿನ ಅಲಸೂರು ದ್ವಾರದ ಬಳಿಯ ಪ್ರದೇಶದಲ್ಲಿ ನೆಲೆಯೂರಲಿ ಅವಕಾಶ ಮಾಡಿಕೊಟ್ಟನು. ಅದರಂತೆ ಬೆಂಗಳೂರಿನ ಪೂರ್ವದ ಸಂಪಂಗಿಕೆರೆ ಹಾಗೂ ಗ್ರಾಮದ ಜಮೀನಗಳನ್ನು ಅವರಿಗೆ ಉಂಬಳಿಯಾಗಿ ನೀಡಿದನು. ಇದರೊಂದಿಗೆ ತಿಗಳರು ಬೆಂಗಳೂರಿನಲ್ಲಿ ನೆಲೆಯೂರಿ ಕರಗದಂತಹ ಉತ್ಸವ ಆಚರಣೆಗಳನ್ನು ಜಾರಿಗೆ ತಂದರೆಂದು ಎಸ್.ಕೆ. ಅರುಣಿ ಅವರು ಅಭಿಪ್ರಾಯ ಪಡುತ್ತಾರೆ.[58]

ಬೆಂಗಳೂರಿನಲ್ಲಿ ಕರಗದ ಉತ್ಸವವು ಯುಗಾದಿಯ ನಂತರ ಚೈತ್ರಮಾಸದ ಸಪ್ತಮಿ ದಿನದಂದು ಒಂಬತ್ತು ದಿನಗಳ ಕರಗ ಉತ್ಸವ ಪ್ರಾರಂಭವಾಗುತ್ತದೆ. ಪ್ರತಿದಿನ ವಿಶೇಷ ಪೂಜೆ ಮತ್ತು ಆಚರಣೆಗಳು ನಡೆಯುತ್ತವೆ. ಇವುಗಳಲ್ಲಿ 'ಧ್ವಜಾರೋಹಣ', 'ಆರತಿ' 'ಹಸಿಕರಗ', 'ಪೊಂಗಲಸೇವೆ', 'ಪೇಟೆಕರಗ', ಹಾಗೂ ರಥೋತ್ಸವಗಳು ಪ್ರಮುಖ ಹಂತಗಳಾಗಿವೆ. ಈ ಉತ್ಸವದ ರೂವಾರಿ ಕರಗ ಹೊತ್ತುಕೊಳ್ಳುವ ಪೂಜಾರಿ. ಸಂಪ್ರದಾಯದ ಪ್ರಕಾರ ಪೂಜಾರಿ ವಿವಾಹಿತನಾಗಿರಬೇಕು. ಪೂಜಾರಿ ಆದಿಶಕ್ತಿ ರೂಪಿಣಿಯಾಗಿ ಬದಲಾವಣೆಯಾಗುವ ಸಂಕೇತವೇ ಈ ಸಂಪ್ರದಾಯವಾಗಿದೆ. ಕಳಸರೂಪದ ಕರಗವನ್ನು ತ್ರಯೋದಶಿಯಂದು ರಾತ್ರಿ ಸಂಪಂಗಿ ಕೆರೆಯ ಅಂಗಳದಲ್ಲಿ ವಿಶೇಷ ಪೂಜೆಗೈಯುವುದನ್ನು ಹಸಿಕರಗ ಉತ್ಸವ ಎಂದು ಕರೆಯುತ್ತಾರೆ.[59] ಹುಣ್ಣಿಮೆಯ ರಾತ್ರಿಯಂದು ಪೇಟೆಕರಗ ನಡೆಯುತ್ತದೆ. ಕರಗದ ಪೂಜಾರಿ ಅಂದು ಸಂಪೂರ್ಣವಾಗಿ ಶಕ್ತಿರೂಪಿಣಿಯಾಗಿ ಮಾರ್ಪಟ್ಟು ಕಳಸದ ಕರಗವನ್ನು ತನ್ನ ಶಿರದ ಮೇಲಿಟ್ಟುಕೊಂಡು ಮಲ್ಲಿಗೆ ಹೂಗಳನ್ನು ಅಲಂಕಾರಗೊಳಿಸಿ ಕೈಯಲ್ಲಿ ಕಠಾರಿ ಹಿಡಿದು ವೀರಕುಮಾರರ ಬೆಂಗಾವಲಿನಲ್ಲಿ ನಡೆಯುತ್ತದೆ. ಧರ್ಮರಾಯಸ್ವಾಮಿ ದೇವಾಲಯದಿಂದ ಆರಂಭವಾಗುವ ಈ ಕರಗದ ಮೆರವಣಿಗೆಯು ಪೇಟೆಯ ಮುಖ್ಯ ಬೀದಿಗಳಲ್ಲಿ ಸಾಗಿ, ಕೋಟೆ ಆಂಜನೇಯ, ಅಣ್ಣಮ್ಮನ ದೇವಸ್ಥಾನ, ಯಲಹಂಕ ಬಾಗಿಲು ಆಂಜನೇಯ ಹಾಗೂ ಹಜರತ್ ತವಕಲ್ ಮಸ್ತಾನ ದರ್ಗಾಗಳಿಗೆ ಭೇಟಿ ನೀಡಿ ಮೆರೆವಣಿಗೆಯು ಮುಂಜಾನೆಯ ಹೊತ್ತಿಗೆ ಹಿಂತಿರುಗುತ್ತದೆ.[60] ಬೆಂಗಳೂರಿನ ಕರಗ ಉತ್ಸವವು ಕೋಮು ಸೌಹಾರ್ದತೆ ಮತ್ತು ಭಾವೈಕ್ಯತೆಯ ಸಂಕೇತವಾಗಿದೆ. ಕರಗದ ಉತ್ಸವ ಮತ್ತು ಸಂಪ್ರದಾಯಗಳು ಮೊರಸು ಒಕ್ಕಲಿಗರಲ್ಲಿರುವ ಹೊಸದೇವರು ಆಚರಣೆಯ ಜೊತೆಗೆ ಹೋಲಿಸಿ ನೋಡಲು ಅವಕಾಶವಿದೆ. ಅಲ್ಲಿಯೂ ಕರಗ ಅಥವಾ ಕುಂಭ ಪ್ರಧಾನವಾಗಿದೆ.

### 5.2.4.2 ದಸರಾ ಆಚರಣೆ

ವಿಜಯನಗರದ ಅರಸರಂತೆಯೇ ಯಲಹಂಕ ನಾಡಪ್ರಭುಗಳು ಕೂಡ ದಸರಾ ಉತ್ಸವವನ್ನು ಆಚರಿಸುತ್ತಿದ್ದರೆಂದು ಎಸ್.ಕೆ. ಅರುಣಿ ಅವರು ಬೆಳಕಿಗೆ ತಂದಿದ್ದಾರೆ. ಮೈಸೂರು ಅರಸರು ಹೇಗೆ ವಿಜಯನಗರದ ದಸರಾ ಉತ್ಸವವನ್ನು ಮುಂದುವರೆಸಿದರೊ ಹಾಗೆಯೇ ಯಲಹಂಕ ನಾಡಪ್ರಭುಗಳು ಕೂಡ ದಸರಾ ಉತ್ಸವವನ್ನು ಆಚರಿಸುತ್ತಿದ್ದರೆಂದು ತೋರಿಸಿಕೊಟ್ಟಿದ್ದಾರೆ.[61] ವಿಜಯನಗರದ ಅರಸರು ಒಳಗೊಂಡಂತೆ ಸಂಸ್ಥಾನಿಕ ಅರಸರು ದಸರಾ ಇಲ್ಲವೆ ವಸಂತೋತ್ಸವವನ್ನು ಸಾರ್ವತ್ರಿಕ ಹಬ್ಬಗಳಾಗಿ ಮತ್ತು ನಾಡಹಬ್ಬಗಳಾಗಿ ಆಚರಿಸುವ

ಸಂಪ್ರದಾಯ ತಂದರು. ಈ ಸಂಪ್ರದಾಯವನ್ನು ನಾಡಿನ ಬಹುತೇಕ ಸಂಸ್ಥಾನಿಕ ಅರಸರು ಹಾಗೂ ನಾಡಪ್ರಭುಗಳು ತಮ್ಮ ತಮ್ಮ ರಾಜ್ಯಗಳಲ್ಲಿ ಅನುಸರಿಸಲಾರಂಭಿಸಿದರು. ಅವರಲ್ಲಿ ಮೈಸೂರು, ಸುರಪುರ, ಕನಕಗಿರಿ ಮುಂತಾದ ರಾಜ್ಯಗಳು ಆಚರಿಸುತ್ತಿದ್ದವೆಂದು ಅರುಣಿ ಅವರು ಅಭಿಪ್ರಾಯ ಪಡುತ್ತಾರೆ.[62] ಮಧುಗಿರಿ ಬೆಟ್ಟದಲ್ಲಿಯೂ ಮಹಾನವಮಿ ದಿಬ್ಬ ಇರುವುದನ್ನು ಕಾಣಬಹುದು.

ಅರುಣಿ ಅವರು ಹೇಳುವ ಪ್ರಕಾರ ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪಗಳಲ್ಲಿ ಹಜಾರ ಪರಿಕಲ್ಪನೆ ಪ್ರಧಾನವಾಗಿದೆ. ಈ ಹಜಾರಗಳನ್ನು ಮಹಾನವಮಿ ದಿಬ್ಬದ ಜೊತೆಗೆ ಹೋಲಿಸಿದ್ದಾರೆ. ಅವರು ಹೇಳುವಂತೆ ಯಲಹಂಕ ನಾಡಪ್ರಭುಗ ಕೆಂಪೇಗೌಡ ಹಜಾರ ಮಂಟಪಗಳು ವಿಜಯನಗರದ ಮಹಾನವಮಿ ದಿಬ್ಬದ ಮಾದರಿಯಲ್ಲಿ ವಿಶಾಲ ಅಂಗಳಕ್ಕೆ ಹೊಂದಿಕೊಂಡಿದೆ. ಇವು ಕೂಡ ವೇದಿಕೆ ಅಥವಾ ಛಾವಡಿಯ ಮಾದರಿಯಲ್ಲಿವೆ. ಶಿಲ್ಪಗಳ ಅಥವಾ ಅಲಂಕಾರಿಕ ಪಟ್ಟಿಕೆಗಳ ಕೆತ್ತನೆಯನ್ನು ಈ ಮಂಟಪಗಳಲ್ಲಿ ಕಾಣುತ್ತೇವೆ ಎನ್ನುತ್ತಾರೆ.[63] ಈ ಹಜಾರಗಳನ್ನು ಮಾಗಡಿಯ ಸೋಮೇಶ್ವರ ದೇವಾಲಯ, ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ಬಲಕ್ಕೆ, ಸಾವನದುರ್ಗ, ಹುತ್ರಿದುರ್ಗಗಳಲ್ಲಿ ಕಾಣಬಹುದಾಗಿದೆ. ಬೆಂಗಳೂರಿನಲ್ಲಿ ಜಂಬೂಸಾವರಿ ದಿಣ್ಣೆ ಎಂಬ ಹೆಸರಿನ ಸ್ಥಳ ಕೂಡ ಇರುವುದನ್ನು ಈ ಹಿನ್ನೆಲೆಯಲ್ಲಿ ಪರಿಶೀಲಿಸುವ ಅಗತ್ಯವಿದೆ.

### 5.2.4.3 ಬೆರಳು ಕೊಡುವ ಆಚರಣೆ

ಮೊರಸು ಒಕ್ಕಲಿಗರಲ್ಲಿ ಮನೆಯ ಹಿರಿಮಗಳ ಮದುವೆಯ ಸಂದರ್ಭದಲ್ಲಿ ತಾಯಿಯಾದವಳು ತನ್ನ ಕಿರುಬೆರಳು ಮತ್ತು ಉಂಗರಬೆರಳಿನ ಕೊನೆಯ ಗಿಣ್ಣುಗಳನ್ನು ದೇವರಿಗೆ ಅರ್ಪಿಸುವ ಸಂಪ್ರಾಯವಿತ್ತು. ಆದರೆ ಕೆಂಪೇಗೌಡನು ದೇಶದ ಪ್ರಭುಗಳ ಘನತೆ ಗೌರವಗಳಿಗೆ ಕುಂದುಂಟು ಮಾಡುವಂತಹ ಅದುವರೆಗೂ ಅಸ್ತಿತ್ವದಲ್ಲಿದ್ದ ಅವನ ಕುಟುಂಬದಲ್ಲಿನ ಹಳೆಯ ಮೂಡನಂಬಿಕೆಯ ಸಂಪ್ರದಾಯವಾದ ಸ್ತ್ರೀಯರ ಎರಡು ಬೆರಳುಗಳನ್ನು ಕತ್ತರಿಸುವ ಪರಿಪಾಠವನ್ನು ಕೊನೆಗಾಣಿಸಿದನು. ದೇವರ ಹೆಸರಿನಲ್ಲಿ ನಡೆಯುತ್ತಿದ್ದ ಈ ಹಳೆಯ ಧಾರ್ಮಿಕ ಆಚಾರವು ಕೆಂಪೇಗೌಡನಿಂದ ನಿಲ್ಲಿಸಲ್ಪಟ್ಟಿತು. ಅದರ ಬದಲಿಗೆ ಚಿನ್ನ ಬೆಳ್ಳಿಯ ಬೆರಳುಗಳನ್ನು ಸಮರ್ಪಿಸುವ ಪದ್ದತಿಯು ಬಳಕೆಗೆ ಬಂದಿತು.[64]

### 5.2.4.4 ಹೊಸದೇವರು ಆಚರಣೆ

ಮೊರಸು ಒಕ್ಕಲಿಗರಲ್ಲಿ ಪ್ರಧಾನವಾದ ಆಚರಣೆಗಳಾಗಿವೆ. ಹೊಸದೇವರು ಎಂದರೆ ಫಸಲು ಕಚ್ಚುವ ಸಂದರ್ಭದಲ್ಲಿ ದೀಪಾವಳಿಯ ಸಂದರ್ಭದಲ್ಲಿ ಮಹಿಳೆಯರೇ ಸೇರಿ ಮಾಡುವ

ಆಚರಣೆಯಾಗಿದೆ. ಒಕ್ಕಲಿಗರು ತಾವು ಬೆಳೆದ ಬೆಳೆಯನ್ನು ಕುಯ್ಲಿಗೆ ಮುನ್ನ ಸಾಂಕೇತಿಕವಾಗಿ ಪೂಜಿಸುವ ವಿಧಾನವಾಗಿದೆ. ಶ್ರಮವಹಿಸಿ ಬೆವರು ಸುರಿಸಿ ದುಡಿದ ಪಸಲಿನ ರೂಪದ ಎಲಕಾಂಡು ಹೂ ಹಣ್ಣು ತೆನೆ ಇತ್ಯಾದಿಗಳನ್ನು ತಂದು ಭಕ್ತಿಯಿಂದ ಪೂಜಿಸುತ್ತಾರೆ. ಈ ಪದ್ಧತಿಯ ಹಿನ್ನೆಲೆ ನೋಡಿದರೆ ಇತಿಹಾಸ ಪೂರ್ವ ಕಾಲಕ್ಕೆ ಹೋಗುತ್ತದೆ. ದಂತಕತೆಯ ಪ್ರಕಾರ: "ಬೇಡಜನಾಂಗಕ್ಕೆ ಸೇರಿದವರು ಈ ಹೊಸದೇವರನ್ನು ಪೂಜಿಸುತ್ತಿದ್ದರು. ಒಮ್ಮೆ ಇದ್ದಕ್ಕಿದ್ದಂತೆ ಬರಗಾಲ ಉಂಟಾಗಿ ಆಹಾರಕ್ಕಾಗಿ ಅವರು ಪರಿತಪಿಸುವಂತಾಯಿತು. ಉಪವಾಸ, ಅರೆಹೊಟ್ಟೆಯಿಂದ ನರಳಬೇಕಾಯಿತು. ಅದೇ ವೇಳೆಗೆ ಅಲೆಮಾರಿ ಬದುಕು ತೊರೆದು ಕೃಷಿಗೆ ಪದಾರ್ಪಣೆ ಮಾಡಿ ಸ್ಥಿರಬದುಕು ಕಂಡಿದ್ದ ಒಕ್ಕಲಿಗರಲ್ಲಿ ಧವಸಧಾನ್ಯ ಸಮೃದ್ಧವಾಗಿತ್ತು. ಈ ಕಷ್ಟದ ಸಂದರ್ಭದಲ್ಲಿ ಅವರ ನೆರವಿಗೆ ಬಂದು ಬೇಡರಿಗೆ ದವಸಧಾನ್ಯ ಕೊಟ್ಟರು. ಅವರಿಂದ ಹೊಸದೇವರನ್ನು ಒಕ್ಕಲಿಗರು ಪಡೆದರು".[65] ಅಂದಿನಿಂದ ಭಕ್ತಿಯಿಂದ ಪೂಜಿಸುತ್ತಾ ಬರುತ್ತಿದ್ದಾರೆ.

ಇದು ಸ್ತ್ರೀಪ್ರಧಾನ ಆಚರಣೆಯಾಗಿದೆ. ಪ್ರತಿವರ್ಷ ಹೊಸಬೆಳೆ ಬೆಳೆದಾಗ ಅದನ್ನು ಕೊಯ್ಯುವ ಮೊದಲು ಅದಕ್ಕೆ ಪೂಜೆಸಲ್ಲಿಸಬೇಕು. ಪೂಜೆ ಸಲ್ಲಿಸದೇ ಹೋದರೆ ತಿನ್ನುವ ಹಕ್ಕಿಲ್ಲ ಎಂಬ ನಂಬಿಕೆ ಮೊರಸು ಒಕ್ಕಲಿಗರದಾಗಿದೆ. ಇದು ಮೂರು ದಿವಸದ ಆಚರಣೆಯಾಗಿದ್ದು, ಕರಗದ ಪೂಜೆ ಪ್ರಧಾನವಾಗಿದೆ. ಹೊಸದಾಗಿ ಮನೆಗೆ ಬಂದ ಸೊಸೆಗೆ ಹೊಸದೇವರನ್ನು ನೀಡಿ ಕುಲದೊಳಗೆ ಸೇರಿಸಿಕೊಳ್ಳುತ್ತಾರೆ. ಇದೂ ಕೂಡ ಕರಗ ಉತ್ಸವದ ಮತ್ತೊಂದು ರೂಪವಾಗಿದ್ದು, ಫಲವತ್ತತೆಯ ಸಂಕೇತವಾಗಿರುವುದನ್ನು ಗುರುತಿಸಬಹುದು.

### 5.3 ಉಪಸಂಹಾರ

ಯಲಹಂಕ ನಾಡಪ್ರಭುಗಳು ಕೃಷಿ ಮೂಲದವರಾಗಿದ್ದು, ಸಮಾಜದಲ್ಲಿ ಎಲ್ಲಾ ವರ್ಗದವರನ್ನು ಸಮಾನವಾಗಿ ಕಾಣುವ ಔದಾರ್ಯವುಳ್ಳವರು. ಏಕೆಂದರೆ ಕೃಷಿಗೆ ಪ್ರತಿಯೊಂದು ಕಸುಬಿನ ಜನರು ಮತ್ತು ಜಾತಿಯ ಜನರ ನೆರವು ಬೇಕಾಗುತ್ತದೆ. ಕೃಷಿಗೆ ಕಮ್ಮಾರ, ಬಡಗಿ, ಕುಂಬಾರ, ಮೇದ ಹೀಗೆ ವಿವಿಧ ವೃತ್ತಿ ಕೌಶಲ್ಯದ ಜನರ ಸಹಕಾರ ಬೇಕಾಗುತ್ತದೆ. ಅದೇ ರೀತಿ ತಳಸಮುದಾಯದ ಜನರ ಸೇವೆಯೂ ಬೇಕಾಗುತ್ತದೆ. ಸುಗ್ಗಿಯ ಸಂದರ್ಭದಲ್ಲಿ ಕಣಕ್ಕೆ ವಿವಿಧ ವೃತ್ತಿಯವರನ್ನು ಕರೆದು ಹಡದೆಯನ್ನು ನೀಡುವುದು ಅವರ ಸೇವೆಯನ್ನು ಪಡೆದುದಕ್ಕೆ ನೀಡುವ ಪ್ರತಿಫಲವಾಗಿರುತ್ತದೆ. ಅಂದರೆ ಕೃಷಿ ಎಂಬುದು ಕೇವಲ ಒಂದು ಸಮುದಾಯದವರಿಂದ ಮಾಡುವುದೂ ಅಲ್ಲ ಮತ್ತು ನಿರ್ವಹಿಸುವುದೂ ಅಲ್ಲ. ಅಲ್ಲಿ ಉತ್ಪಾದನೆಯ ಹಂಚಿಕೆ ಪ್ರಧಾನವಾಗಿರುತ್ತದೆ. ಆದ್ದರಿಂದ ಸಹಬಾಳ್ವೆಯ ಗುಣ ಅವರಲ್ಲಿ ನೋಡಲು ಸಾಧ್ಯ. ಆದರೆ

ಪುರೋಹಿತ ವರ್ಗ ಅದಕ್ಕೆ ಭಿನ್ನವಾದ ನೆಲೆಯಲ್ಲಿ ಶೋಷಣೆಯನ್ನೆ ಪ್ರಧಾನವಾಗಿ ಹೊಂದಿದ್ದು, ಎಲ್ಲವನ್ನು ಆವಾಹನೆ ಮಾಡಲು ಹಪಹಪಿಸುತ್ತಿರುತ್ತದೆ. ಇದನ್ನು ನಮ್ಮ ಜನಪದರು ಬಹಳ ವಿಶಿಷ್ಟವಾದ ರೂಪಗಳು ಮತ್ತು ಆಶಯಗಳ ಮೂಲಕ ಸಾಮಾಜಿಕ ವ್ಯವಸ್ಥೆಯನ್ನು ಜನಪದ ಕಾವ್ಯಗಳ ಒಳಗೆ ತಂದಿದ್ದಾರೆ. ಅವುಗಳನ್ನು ಕೆಂಪೇಗೌಡನಿಗೆ ಸಂಬಂಧಿಸಿದ ಜನಪದ ಕಾವ್ಯಗಳು ನೇರವಾಗಿ ಕೆಂಪೇಗೌಡನಿಗೆ ಸಂಬಂಧಿಸಿಲ್ಲದಿರಬಹುದು. ಆದರೆ ಅವುಗಳಲ್ಲಿ ಒಂದು ಸಾಮಾಜಿಕ ಮೌಲ್ಯಗಳು ಇವೆ. ಹಲವು ಕೆಂಪೇಗೌಡರಿಗೆ ಸಂಬಂಧಿಸಿದ ಕಥನಗಳು ಮೇಳೈಸಿ ಒಬ್ಬನೇ ಕೆಂಪೇಗೌಡನಿಗೆ ಆರೋಪಿಸಿ ಹೇಳಬಹುದು. ಆದರೆ ಅವುಗಳಲ್ಲಿ ಚಾರಿತ್ರಿಕ ಅಂಶಗಳಿವೆ. ಅವುಗಳನ್ನು ವಿಶೇಷ ಅಧ್ಯಯನ ಮತ್ತು ವಿಮರ್ಶೆಯ ಮೂಲಕವೇ ಗುರುತಿಸಿ ಚಾರಿತ್ರಿಕ ಸಂಗತಿಗಳನ್ನು ಹೆಕ್ಕಿತೆಗೆಯಬೇಕಿದೆ. ಇದು ಬಹು ಸವಾಲಿನ ಕೆಲಸವಾದರೂ, ವಿಶಿಷ್ಠ ಅನುಭವವನ್ನು ತಂದು ಕೊಡುತ್ತದೆ.

ಮೈಸೂರಿನ ಸೇನೆಯು ಮಾಗಡಿಯನ್ನು ಮತ್ತಿದಾಗ ಕೆಂಪೇಗೌಡನ ಹೆಂಡತಿ ಕೆಂಪಮ್ಮ ಕೆಂಪಾಂಬುದಿ ಕೆರೆಗೆ ಹಾರಿ ಆತ್ಮಹತ್ಯೆ ಮಾಡಿಕೊಂಡ ಪ್ರಸಂಗ ಜನಪದ ಸಾಹಿತ್ಯದಲ್ಲಿದೆ. ಇಲ್ಲಿ ಸ್ಥಳ, ಕಾಲ, ಸಂದರ್ಭ ಮೂರೂ ವ್ಯತ್ಯಾಸವಾಗಿವೆ. ಆದರೆ ಯಾವುದೊ ಒಂದು ಘಟನೆ ಘಟಿಸಿದೆ. ಅದು ಯಾವುದು ಎಂಬುದನ್ನು ಡೀಕೋಡ್ ಮಾಡಬೇಕು. ಜಾನಪದದಲ್ಲಿ ಈ ಡೀಕೋಡಿಂಗ್ ಬಹಳ ಮುಖ್ಯವಾದ ಅಂಶವಾಗಿದೆ. ಘಟನೆ ನಡೆದಿರುವುದು ಜಾನಪದ ಕಾವ್ಯದ ಪ್ರಕಾರ ಮಾಗಡಿ. ಆದರೆ ಕೆಂಪಾಂಬುದಿ ಕೆರೆ ಇರುವುದು ಬೆಂಗಳೂರಿನಲ್ಲಿ. ಕೆಂಪಮ್ಮ ಎರಡನೇ ಕೆಂಪೇಗೌಡನ ಮಡದಿ. ಹಾಗಾದರೆ ಬೆಂಗಳೂರಿನ ಮೇಲೆ ಮೈಸೂರು ದೊರೆಗಳ ಆಕ್ರಮಣಕ್ಕೆವಾಗಿರುವ ನಿದರ್ಶನಗಳಿಲ್ಲ. ಜನರ ಮೇಲೆ ಅವರು ನಡೆಸಿರು ಕ್ರೌರ್ಯದ ನಿದರ್ಶನಗಳೂ ನಮ್ಮ ಮುಂದೆ ಇಲ್ಲ. ಇದು ರಣದುಲ್ಲಾಖಾನ್ ಬೆಂಗಳೂರಿನ ಮೇಲೆ ನಡೆಸಿದ ಆಕ್ರಮಣಕ್ಕೆ ಸರಿ ಹೊಂದುವಂತಿದೆ. ಹೀಗೆ ಜಾನಪದ ಆಶಯಗಳನ್ನು ನಿಧಾನವಾಗಿ ಡೀಕೋಡ್ ಮಾಡುತ್ತಾ ಹೋಗಬೇಕಾಗುತ್ತದೆ. ಇವು ಒಂದು ರೀತಿಯಲ್ಲಿ ಸಂಶೋಧನೆಯಲ್ಲಿನ ಒಗಟುಗಳಿದ್ದಂತೆ.

ಧಾರ್ಮಿಕವಾಗಿ ಯಲಹಂಕ ನಾಡಪ್ರಭುಗಳು ಧರ್ಮಸಹಿಷ್ಣುಗಳು ಮತ್ತು ಸರ್ವಧರ್ಮಗಳನ್ನು ಸಮಭಾವದಿಂದ ಕಂಡವರು. ಅದು ಅವರು ಎಲ್ಲಾ ದೇವಾಲಯಗಳಿಗೆ, ಮಠಗಳಿಗೆ ದಾನದತ್ತಿ ನೀಡಿರುವ ವಿಚಾರದಿಂದಲೇ ವೇದ್ಯವಾಗುತ್ತದೆ. ಅದೇರೀತಿ ಕರಗದಂತಹ ಉತ್ಸವ ಮತ್ತು ಹೊಸದೇವರು ಆಚರಣೆಗಳು ಕೃಷಿ ಮೂಲ ಸಂಸ್ಕೃತಿಯ ಜನರ ಆಚರಣೆಗೆ

ನಿದರ್ಶನವಾಗಿವೆ. ಇವುಗಳ ನಡುವೆ ಸಾಮ್ಯತೆಗಳಿರುವುದನ್ನು ನೋಡಬಹುದು. ದಸರಾ ಉತ್ಸವ ಕೂಡ ಬೆಳೆಯ ಸಮೃದ್ಧಿಯ ಕಾಲದಲ್ಲಿಯೇ ಬರುವುದು ಸಹ ಒಂದು ರೀತಿಯಲ್ಲಿ ಕೃಷಿ ಸಂಸ್ಕೃತಿಯ ಜೊತೆಗೆ ತಳಕು ಹಾಕಿಕೊಂಡಿರುವುದನ್ನು ಕಾಣಬಹುದು.

* * * * *

## ಅಡಿ ಟಿಪ್ಪಣಿಗಳು

1. ಸದಾಶಿವ ಕೆ., **"ನಾಡಪ್ರಭುಗಳ ಕಾಲದ ಸ್ಥಿತ್ಯಂತರ ಸ್ಥಿತಿಯ ಸಾಮಾಜಿಕ ವ್ಯವಸ್ಥೆ"**, 2010: 170.
2. **ಅದೇ.**
3. ಮಹೇಶ್ ಕೆ., **"ಮೊರಸು ನಾಡು ಮತ್ತು ಮೊರಸು ಒಕ್ಕಲಿಗರು"**, 1996: 138.
4. **ಅದೇ.**
5. **ಅದೇ.**
6. ನರಸಿಂಹಯ್ಯ ಎಸ್.ಕೆ., **'ಮಾಗಡಿ ಕೆಂಪೇಗೌಡ'**, 1924(1922): 3–4; Suryanath Kamath, **'Karnataka State Gazetteer -Bangalore District'**, 1990: 61; ರಾಮಕೃಷ್ಣನ್ ಆರ್. "ಯಲಹಂಕ ನಾಡಪ್ರಭುಗಳು: ಉಗಮ", 1996: 3; ರಾಜೇಗೌಡ ಹ.ಕ., "ಯಲಹಂಕ ನಾಡ ಪ್ರಭುಗಳು" 2001: 281. ಮುಂತಾದವರು.
7. ಜಗದೀಶ್ (59), ಉಪನ್ಯಾಸಕರು, ತಿಗಳ ಗುಡ್ಡೇಮಾರನಹಳ್ಳಿ ಹ್ಯಾಂಡ್‌ಪೋಸ್ಟ್. ಇವರ ಸಂದರ್ಶನ ದಿನಾಂಕ: 22.04.2019.
8. ಲಿಂಗಯ್ಯ ಡಿ., **ಯಲಹಂಕ ನಾಡಪ್ರಭುಗಳು: ಜಾನಪದ ಸಂಪುಟ,** 2005:124.
9. **ಅದೇ:** 131.
10. **ಅದೇ.:** 89.
11. **ಅದೇ.:** 71.
12. **ಅದೇ.:**78.
13. **ಅದೇ.**
14. **ಅದೇ.**
15. **ಅದೇ.:** 80.
16. **ಅದೇ.:** 79.
17. **ಅದೇ.:** 91.
18. **ಅದೇ.:** 93.
19. **ಅದೇ.:** 14
20. **ಅದೇ.:** 55

21. **ಎ.ಕ.(ರೈ)9**: ಕುಣಿಗಲ್–12.

22. **ಎ.ಕ.(ಪ)24**: ಕುಣಿಗಲ್–81 & 82.

23. ರೈಸ್ ಮತ್ತು ಶ್ರೀನಿವಾಸ ರಿತ್ತಿ ಅವರು ಈ ಶಾಸನಗಳ ಕಾಲವನ್ನು ತಪ್ಪಾಗಿ ನಿರ್ಧರಿಸಿದ್ದಾರೆ. ಸಂತ್ಸರದ ಮೇಲೆ ವರ್ಷವನ್ನು ಅಂದಾಜಿಸಿರುವುದರಿಂದ ಈ ರೀತಿಯ ಪ್ರಮಾದವಾಗಿದೆ. ವಾಸ್ತವವಾಗಿ ಈ ಶಾಸನಗಳ ಕಾಲ 1659ಕ್ಕೆ ಸರಿ ಹೊಂದುತ್ತದೆ.

24. **ಯ.ನಾ.ಶಾ.ಸಂ:** ಶಾ.ಸಂ 47.

25. **ಅದೇ.:** 41.

26. ಲಿಂಗಯ್ಯ ಡಿ., **ಪೂರ್ವೋಕ್ತ,** 2005: 208.

27. **ಅದೇ.:** 129–130.

28. Puttaiya B., "**The Kempe Gowda Chiefs",** 1923:724.

29. ನರಸಿಂಹಯ್ಯ ಎಸ್.ಕೆ., **'ಮಾಗಡಿ ಕೆಂಪೇಗೌಡ',** 1924 (1922): 22–23.

30. ಮಂಜುನಾಥ ಎಂ.ಜಿ., **'ಬೆಂಗಳೂರಿನ ಬಖೈರುಗಳು',** 2006ಎ: xiii.

31. **ಅದೇ.:** 10.

32. ರಾಜಶೇಖರ್ ಪಿ.ಕೆ., **"**ಜಾನಪದದಲ್ಲಿ ಯಲಹಂಕ ನಾಡಪ್ರಭುಗಳು**",** 1994: 75.

33. **ಎ.ಕ.(ಅ)9**: ನೆಲಮಂಗಲ– 107.

34. **ಎ.ಕ.(ರೈ)9:** ಬೆಂಗಳೂರು–57.

35. **ಎ.ಕ.(ಅ)9**: ನೆಲಮಂಗಲ– 109.

36. ಶ್ರೀಕಂಠಯ್ಯ ಕರ್ಲಮಂಗಲ, **'ಗೌಡಕುಲ ವಿಭೂಷಣ ಕೆಂಪೇಗೌಡನ ಜಯ ಪ್ರಶಸ್ತಿ',** 1961: 34–35.

37. ರಾಜೇಶ್ ಹಂ.ಗು., **"**ಕೆಂಪಾಪುರ ಸಮಾಧಿಯ ಕೆಂಪೇಗೌಡ ಯಾರು?**",** 2016: 67–68.

38. ಶ್ರೀಕಂಠಯ್ಯ ಕರ್ಲಮಂಗಲಂ, **ಪೂರ್ವೋಕ್ತ,** 1961: 3–4, 20 ಮತ್ತು 53 ನೋಡಿ.

39. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 60–62.

40. **ಅದೇ.:** 45.

41. **ಅದೇ.:** 60–62.

42. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 66–68.

43. ಶ್ರೀಕಂಠಯ್ಯ ಕರ್ಲಮಂಗಲಂ, **ಪೂರ್ವೋಕ್ತ,** 1961: ಮುನ್ನುಡಿ 40.

44. ವಿರೂಪಾಕ್ಷ ಪಂಡಿತ, **'ಚನ್ನಬಸವ ಪುರಾಣ',** ಕಾಂಡ–5, ಸಂಧಿ 10–55–56.

45. **ಎ.ಕ.(ಪ)5:** ಟಿ.ನರಸೀಪುರ– 109.

46. **ಎ.ಕ.(ರೈ)9:** ಮಾಗಡಿ–1.

47. ಮಹಾದೇವಯ್ಯ, ಮುನಿನಗರ., **"ಮುನಿನಗರದ ಅಪ್ರಕಟಿತ ಶಾಸನ ಮತ್ತು ಪ್ರಾಚೀನ ಅವಶೇಷಗಳು".** 2002: 78–79.

48. **ಎ.ಕ.(ರೈ)9:** ಮಾಗಡಿ–35.

49. **ಎ.ಕ.(ರೈ)9:** ಮಾಗಡಿ–2.

50. **ಎಂ.ಎ.ಆರ್.,** 1922: 14.

51. **ಎಂ.ಎ.ಆರ್.**, 1943: ಶಾಸನ ಸಂಖ್ಯೆ–51.

52. ಸದಾಶಿವ ಕೆ., **ಪೂರ್ವೋಕ್ತ,** 2010: 174.

53. ಲಿಂಗಯ್ಯ ಡಿ., **ಪೂರ್ವೋಕ್ತ,** 2005: 153.

54. ನರಸಿಂಹಯ್ಯ ಎಸ್.ಕೆ., 1924: 41.

55. Caleb Simmon, 2014, 'The Goddess and Vaiṣṇavism in Search for Regional Supremacy: Woḍeyar Devotional Traditions During the Reign of Rāja woḍeyar (1578-1617 CE)', Pp.27-46.

56. ಕಲಬುರ್ಗಿ ಎಂ.ಎಂ., **ಮಾರ್ಗ–4,** 2005(2004):313–316.

57. ಸುಮಿತ್ರ ಎಂ., **'ಕರಗ ಸಂಪ್ರದಾಯ',** 2002: 39.

58. **ಅದೇ.:** 41.

59. ಅರುಣಿ ಎಸ್.ಕೆ., **'ಬೆಂಗಳೂರು ಪರಂಪರೆ',** 2019:177–178.

60. **ಅದೇ.:** 179.

61. **ಅದೇ.:** 179–180.

62. **ಅದೇ.:** 168–175.

63. **ಅದೇ.:** 170.

64. **ಅದೇ.:** 171.

65. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 44.

66. ನಾಗರಾಜ್ ಎಂ.ಎಚ್., **ಮೊರಸು ಒಕ್ಕಲಿಗರು ಒಂದು ಸಾಂಸ್ಕೃತಿಕ ಅಧ್ಯಯನ,** 2011: 221.

# ಅಧ್ಯಾಯ–6

# ಯಲಹಂಕ ನಾಡಪ್ರಭುಗಳು: ಕಲೆ–ವಾಸ್ತುಶಿಲ್ಪ ಹಾಗೂ ಸಾಹಿತ್ಯ

ವಿಜಯನಗರೋತ್ತರ ಕಾಲದ ಕಲೆ ಮತ್ತು ವಾಸ್ತುಶಿಲ್ಪದ ಮೇಲೆ ವಿಜಯನಗರ ಕಾಲದ ಕಲೆ ಮತ್ತು ವಾಸ್ತುಶಿಲ್ಪದ ಗಾಢ ಪ್ರಭಾವವಿರುವುದು ಸಾಮಾನ್ಯವಾಗಿದೆ. ಈ ಪ್ರಭಾವವನ್ನು ವಿದ್ವಾಂಸರು 'ವಿಶಾಲ ವಿಜಯನಗರ ವಾಸ್ತುಶಿಲ್ಪ' ಎಂದು ಗುರುತಿಸುತ್ತಾರೆ. ಹೀಗಿದ್ದರೂ ಸಹ ವಿಜಯನಗರ ಕಾಲದ ಕಲಾ ವೈಭವವನ್ನು ಪಾಳೆಯಗಾರರು ಮತ್ತು ನಾಡಪ್ರಭುಗಳ ಕಾಲದ ವಾಸ್ತುಶಿಲ್ಪದಲ್ಲಿ ಕಾಣಲು ಸಾಧ್ಯವಿಲ್ಲ. ಆದರೆ, ಕೆಲವೊಂದು ಕಡೆಗಳಲ್ಲಿ ಸಣ್ಣಪ್ರಮಾಣದಲ್ಲಿ ಅನುಕರಿಸುತ್ತಾ ಹೋಗಿರುವುದನ್ನು ಕಾಣಬಹುದು. ಸಾಮಾನ್ಯವಾಗಿ ಸ್ಥಳೀಯವಾಗಿಯೇ ಲಭ್ಯವಾಗುವ ಒರಟಾದ ಗ್ರಾನೈಟ್ ಶಿಲೆಗಳಿಂದಲೇ ಈ ವಾಸ್ತುಶಿಲ್ಪಗಳನ್ನು ರಚನೆ ಮಾಡಿರುವುದನ್ನು ಕಾಣಬಹುದು.

ಯಲಹಂಕ ನಾಡಪ್ರಭುಗಳ ಆಳ್ವಿಕೆಯ ಪ್ರದೇಶಗಳಾದ ಬೆಂಗಳೂರು ಮತ್ತು ಕೋಲಾರಗಳ ಆಸುಪಾಸಿನ ಪ್ರದೇಶಗಳಲ್ಲಿ ಸುಮಾರು ನಲವತ್ತು ದೇವಾಲಯಗಳನ್ನು ನಿರ್ಮಿಸಿದ್ದಾರೆ. ಅದರಲ್ಲಿ ಹೆಚ್ಚಿನ ದೇಗುಲಗಳು ವಿಜಯನಗರ ಪೂರ್ವ ಮತ್ತು ವಿಜಯನಗರ ಕಾಲದ್ದಾಗಿದ್ದು, ಅವುಗಳಿಗೆ ಯಲಹಂಕ ನಾಡಪ್ರಭುಗಳು ರಂಗಮಂಟಪ, ಮಹಾರಂಗಮಂಟಪ, ಪಾತಾಳಾಂಕಣ, ಪ್ರಾಕಾರ, ರಾಯಗೋಪುರ ಗಳನ್ನು ನಿರ್ಮಿಸಿದ್ದಾರೆ. ಇನ್ನು ಹಲವುದೇಗುಲಗಳನ್ನು ಜೀರ್ಣೋದ್ದಾರಗೊಳಿಸಿರುವುದು ಕಂಡುಬರುತ್ತದೆ.

ಯಲಹಂಕ ನಾಡಪ್ರಭುಗಳ ಆಡಳಿತದ ಪ್ರದೇಶವನ್ನು ಅರ್ಕಾವತಿ ಕಣಿವೆಗೆ ಸೀಮಿತವಾಗಿತ್ತೆಂದು ಗುರುತಿಸಬಹುದಾಗಿದೆ. ಆದ್ದರಿಂದ ಇಲ್ಲಿನ ಪ್ರಾದೇಶಿಕ ಸಂಸ್ಕೃತಿ ಹಾಗೂ ಕಲಾ ಶೈಲಿಗಳು ಇತರ ಆಡಳಿತದ ಪ್ರದೇಶಗಳ ಕಲೆ ಮತ್ತು ವಾಸ್ತುಶೈಲಿಗಿಂತ ಅತ್ಯಂತ ವಿಭಿನ್ನವಾಗಿವೆ ಎನ್ನಬಹುದು. ಜೊತೆಗೆ ನಾಡಪ್ರಭುಗಳ ಸ್ಮಾರಕಗಳಿರುವ ಸ್ಥಳಗಳು ಆನಂತರ ಆಳ್ವಿಕೆ ನಡೆಸಿದ ಅರಸರ ಅಧೀನಕ್ಕೆ ಒಳಪಟ್ಟು ಹಲವಾರು ಮಾರ್ಪಾಟುಗಳನ್ನು ಒಳಗೊಂಡಿವೆ. ಇಲ್ಲಿ ಆಳಿದಂತಹ ನೊಳಂಬ, ಹೊಯ್ಸಳ ಮತ್ತು ವಿಜಯನಗರ ಕಲಾ ಪ್ರಭಾವವನ್ನು ಮೈಗೂಡಿಸಿಕೊಂಡು ಒಂದು ಭಿನ್ನ ಶೈಲಿಯಾಗಿ ಗುರುತಿಸಿಕೊಂಡಿರುವುದು ಕಂಡುಬರುತ್ತದೆ. ಇವರ ಆಶ್ರಯದಲ್ಲಿ ಮುನ್ನೆಲೆಗೆ ಬಂದ ಕಲೆಯ ಮತ್ತು ವಾಸ್ತುಶಿಲ್ಪ ವಿಷಯಗಳಲ್ಲಿ

ದೇವಾಲಯಗಳು, ನಗರಗಳು, ಅರಮನೆಗಳು, ಕೋಟೆಗಳು ಎಂದು ಮುಂತಾಗಿ ವಿಭಾಗಿಸಿ ಅಧ್ಯಯನ ಮಾಡಬಹುದಾಗಿದೆ.

"ವಿಜಯನಗರ ಕಲೆಯ ನೇರ ಪ್ರಭಾವ ಇವರ ವಾಸ್ತು ಮತ್ತು ಶಿಲ್ಪ ಕಲೆಯ ಮೇಲೆ ಕಂಡುಬಂದರೂ ಸ್ಥಳೀಯ ವೈಶಿಷ್ಟ್ಯ ಸೇರ್ಪಡೆಗಳಿಂದಾಗಿ ಒಂದು ವಿಶಿಷ್ಟ ಪ್ರಾದೇಶಿಕ ಶೈಲಿ ಇವರ ಕಲೆಯಲ್ಲಿ ಕಂಡುಬರುತ್ತದೆ. ಅಲ್ಲದೇ, ಇವರ ಕಲೆಯನ್ನು 'ವಿಜಯನಗರೋತ್ತರ ದಕ್ಷಿಣ ಭಾರತದ ಪಾಳೆಗಾರರ' ಅಥವಾ 'ನಾಯಕ ಕಲೆ' ಎಂದು ಗುರುತಿಸಬಹುದಾದ ಲಕ್ಷಣಗಳಿವೆ"[1] ಎಂಬ ಎಸ್.ಕೆ. ಅರುಣಿ ಅವರ ಮಾತುಗಳು ಅತ್ಯಂತ ಉಲ್ಲೇಖನೀಯವಾದವು.

## 6.1 ದೇವಾಲಯಗಳು

ಯಲಹಂಕ ನಾಡಪ್ರಭುಗಳ ಕಾಲಘಟ್ಟದ ದೇವಾಲಯಗಳು ಅನೇಕ ವೈಶಿಷ್ಟ್ಯಗಳಿಂದ ಕೂಡಿವೆ. ಅವುಗಳೆಂದರೆ–

1. ಈ ಆಲಯಗಳು ಸಾಂಧಾರ ಮತ್ತು ನಿರಂಧಾರ ರಚನಾಶೈಲಿಗಳೆರಡನ್ನೂ ಸಹ ಒಳಗೊಂಡಿವೆ.
2. ಈ ದೇವಾಲಯಗಳು ಗರ್ಭಗುಡಿ, ಅಂತರಾಳ, ಅರ್ಧಮಂಟಪ, ನವರಂಗ ಮತ್ತು ತೆರೆದ ಮುಖಮಂಟಪಗಳಿಂದ ಕೂಡಿವೆ.
3. ಸಾಂಧಾರ ದೇವಾಲಯಗಳಲ್ಲಿ ಪ್ರದಕ್ಷಿಣಾಪಥವನ್ನು ಅಳವಡಿಸಿರುವುದನ್ನು ಕಾಣುತ್ತೇವೆ. ಉದಾಹರಣೆಗೆ ಬೆಂಗಳೂರಿನ ರಂಗನಾಥ, ಅಲಸೂರಿನ ಸೋಮೇಶ್ವರ ದೇವಾಲಯಗಳು.
4. ದೇವಾಲಯಗಳು ಗರ್ಭಗುಡಿ ಮತ್ತು ಅಂತರಾಳಗಳನ್ನು ಚೌಕಾಕಾರ ವಿನ್ಯಾಸದಲ್ಲಿ ಕಟ್ಟಲಾಗಿದೆ.
5. ಅರ್ಧಮಂಟಪ ಆಯತಾಕಾರದಲ್ಲಿದ್ದು ಇದು ನವರಂಗಕ್ಕೆ ತೆರೆದುಕೊಂಡಿವೆ.
6. ನವರಂಗಗಳು ಚೌಕಾಕಾರದಲ್ಲಿದ್ದು ಮಧ್ಯದಲ್ಲಿ ನಾಲ್ಕು ಉಬ್ಬುಶಿಲ್ಪಗಳಿಂದ ಅಲಂಕರಿಸಿದ ಕಂಬಗಳನ್ನು ಹೊಂದಿವೆ.
7. ಶಿಲ್ಪಗಳ ಸುತ್ತಲೂ ವಿನ್ಯಾಸಕ್ಕಾಗಿ ಕಮಾನು ಕೆತ್ತನೆಯನ್ನು ನಾಡಪ್ರಭುಗಳ ಕಾಲದ ಶಿಲ್ಪಕಲೆಯಲ್ಲಿ ಪ್ರಯೋಗಾತ್ಮಕವಾಗಿ ತರಲಾಗಿದೆ. ಈ ಕಮಾನು ವಿನ್ಯಾಸದ ಬಳಕೆಯನ್ನು

ನಾಡಪ್ರಭುಗಳ ಕಾಲದ ದೇವಾಲಯದ ಕೋಷ್ಠಕಗಳು, ಶಿಲ್ಪಗಳ ಹಿಂದಿನ ಮೇಲ್ಭಾಗದಲ್ಲಿ ಅಲಂಕಾರಿಕವಾಗಿ ತರಲಾಗಿದೆ. ಮಾಗಡಿ ಸೋಮೇಶ್ವರ, ಅಲಸೂರು ಸೋಮೇಶ್ವರ, ನಂದಿ ಅರುಣಾಚಲೇಶ್ವರ ಮೊದಲಾದ ದೇವಾಲಯಗಳಲ್ಲಿ ಕಾಣಬಹುದಾಗಿದೆ.[2]

8. ಬಹುಸಂಖ್ಯೆಯ ನವರಂಗಗಳಿಗೆ ಸಾಮಾನ್ಯವಾಗಿ ಏಕ ದ್ವಾರವನ್ನು ಕಲ್ಪಿಸಿರುವುದನ್ನು ಕಾಣಬಹುದು. ಆದರೂ ಕೆಲವು ನವರಂಗಗಳಿಗೆ ಎರಡು ದ್ವಾರಗಳನ್ನು ನಿರ್ಮಿಸಿರುವುದು ಸಹ ಕಾಣಬಹುದು.

9. ನವರಂಗಗಳಿಗೆ ಹೊಂದಿಕೊಂಡಂತೆ ನಿರ್ಮಿಸಲಾದ ತೆರೆದ ಮಂಟಪಗಳನ್ನು ಆಯತಾಕಾರದಲ್ಲಿ ನಿರ್ಮಿಸಲಾಗಿದೆ. ಈ ತೆರೆದ ಮುಖಮಂಟಪಗಳು ಜಗಲಿಗಳಂತೆ ಎತ್ತರದ ವೇದಿಕೆಗಳಿಂದ ಕೂಡಿವೆ. ವೇದಿಕೆಯ ಮುಂದಿನ ಸಾಲಿನಲ್ಲಿ ಯಾಳಿಯ ಶಿಲ್ಪಗಳಿರುವ ಕಂಬಗಳನ್ನು ನೋಡಬಹುದು. ದೇವನಹಳ್ಳಿಯ ವೇಣುಗೋಪಾಲಸ್ವಾಮಿ ಮತ್ತು ಶಿವಗಂಗೆಯ ಗಂಗಾಧರೇಶ್ವರ ದೇಗುಲಗಳು ಇದಕ್ಕೆ ಉತ್ತಮ ಉದಾಹರಣೆಗಳು.

10. ಮುಖಮಂಟಪಗಳು ಕಟಕವೃತ್ತ ಕುಮುದ ಮತ್ತು ಕಪೋತಗಳಿಂದ ಕೂಡಿದ ಅಧಿಷ್ಠಾನಗಳಿಂದ ಕೂಡಿವೆ.

11. ಹಲಸೂರಿನ ಸೋಮೇಶ್ವರ ಆಲಯದ ಮುಖಮಂಟಪವು ಅತ್ಯಂತ ಸುಂದರವಾದ ರಚನೆಯಾಗಿದ್ದು ಇಲ್ಲಿನ ಕಂಬಗಳು ವೈವಿಧ್ಯತೆಯಿಂದ ಕೂಡಿವೆ. ಇವು ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪದ ಗಮನಾರ್ಹ ಉದಾಹರಣೆಯಾಗಿದೆ. ಮಾಗಡಿಯ ಸೋಮನಾಥ ದೇವಾಲಯದ ಮುಖಮಂಟಪವು ಸುತ್ತಲೂ ಕಕ್ಷಾಸನದಂತಹ ರಚನೆಯನ್ನು ಒಳಗೊಂಡು ಉಳಿದ ದೇವಾಲಯಗಳಿಗಿಂತ ಭಿನ್ನವಾಗಿದೆ.

12. ಮುಖ್ಯ ಗರ್ಭಗುಡಿಯ ಪಾರ್ಶ್ವದಲ್ಲಿ ಅಮ್ಮನವರ ಗುಡಿಗಳನ್ನು ನಿರ್ಮಿಸುವ ಸಂಪ್ರದಾಯವು ಇವರ ಕಾಲದಲ್ಲಿ ಮುಂದುವರಿದಿರುವುದನ್ನು ಕಾಣಬಹುದು.

13. ವಿಜಯನಗರ ದೇವಾಲಯಗಳಂತೆ ಗೋಪುರ ದ್ವಾರಗಳನ್ನು ಇವರ ಕಾಲದಲ್ಲಿಯೂ ಸಹ ನಿರ್ಮಿಸಲಾಗಿದೆ. ಈ ದ್ವಾರಗಳು ಗಾತ್ರದಲ್ಲಿ ಕಿರಿದಾಗಿದ್ದರೂ ಅದರ ಭಿತ್ತಿಗಳು ಶಿಲೆಯಿಂದ ರೂಪುಗೊಂಡಿವೆ. ಅವುಗಳ ಮೇಲೆ ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿಸಿದ ಮೂರರಿಂದ ಐದಂತಸ್ತಿನ ಗೋಪುರವನ್ನು ಕಟ್ಟಲಾಗಿದೆ. ಈ ಗೋಪುರಗಳ ರಚನೆಯಲ್ಲಿ ವಿಜಯನಗರ ಶೈಲಿಯ ಅನುಕರಣೆಯು ದಟ್ಟವಾಗಿದೆ.

14. ದೇಗುಲಗಳ ಆವರಣದಲ್ಲಿ ಧ್ವಜಸ್ಥಂಭ ಮತ್ತು ವಾಹನಮಂಟಪಗಳ ರಚನೆಗಳಿವೆ.

15. ಇವರ ಕಾಲದಲ್ಲಿ ಪೂರ್ಣ ಪ್ರಮಾಣದ ಶಾಸ್ತ್ರಬದ್ಧ ದೇವಾಲಯಗಳ ನಿರ್ಮಾಣ ಬಹಳ ಕಡಿಮೆ ಸಂಖ್ಯೆಯಲ್ಲಿ ನಡೆದಿದೆ. ಬೆಂಗಳೂರಿನ ಅಲಸೂರಿನ ಸೋಮೇಶ್ವರ ದೇಗುಲವು ಮೂಲತಃ ಚೋಳರ ರಚನೆಯಾಗಿದ್ದು ಗರ್ಭಗುಡಿ, ಅಂತರಾಳ, ನವರಂಗಗಳನ್ನು ಹೊಂದಿದೆ. ನಂತರದ ಕಾಲದಲ್ಲಿ ಸುತ್ತಲೂ ಪರಿವಾರ ಆಲಯಗಳ ರಚನೆ, ಕಿರಿದಾದ ಪ್ರದಕ್ಷಿಣಾ ಪಥ, ಧಾರ್ಮಿಕ ವಿಗ್ರಹಗಳನ್ನು ನಿರ್ಮಿಸಲಾಗಿದೆ. ಆ ನಂತರದ ಕಾಲದಲ್ಲಿ ರಂಗಮಂಟಪ, ಪ್ರಾಕಾರ, ಯಾಗಮಂಟಪ, ಅಮ್ಮನವರ ಗುಡಿಗಳನ್ನು ಹಾಗೂ ಬಲಿಪೀಠ, ಧ್ವಜಸ್ಥಂಭಗಳು ಸೇರ್ಪಡೆಗೊಂಡು ಪೂರ್ಣಪ್ರಮಾಣದಲ್ಲಿ ದೇವಾಲಯದ ರೂಪ ಪಡೆದಕೊಂಡಿದೆ.

### 6.1.1 ದೇವಾಲಯಗಳ ಅಂಗಗಳು

ಯಲಹಂಕ ನಾಡಪ್ರಭುಗಳ ಕಾಲದ ದೇಗುಲಗಳ ಅಂಗಗಳಲ್ಲಿ ಪ್ರಧಾನವಾಗಿ ಅಧಿಷ್ಠಾನಗಳು, ಭಿತ್ತಿಗಳು, ಕಂಬಗಳು, ಬಲಿಪೀಠ, ಮಂಟಪಗಳ ರಚನೆಗಳನ್ನು ಗಮನಿಸಬಹುದು.

#### 6.1.1.1 ಅಧಿಷ್ಠಾನಗಳು

ಯಲಹಂಕ ನಾಡಪ್ರಭುಗಳ ದೇಗುಲ ನಿರ್ಮಾಣಗಳಲ್ಲಿ ಅಧಿಷ್ಠಾನಗಳನ್ನು ಸರಳಸುಂದರವಾಗಿ ರಚಿಸಲಾಗಿದೆ. ಇವುಗಳನ್ನು ಮಂಚಬಂಧ ಅಧಿಷ್ಠಾನ ಎಂದು ಕರೆಯುತ್ತೇವೆ. ಇಲ್ಲಿಯೂ ಸಹ ವಿಜಯನಗರ ಶೈಲಿಯಂತೆ ನಾವು ಉಪಾನ, ಜಗತಿ, ಕುಮುದ, ಕಪೋತಗಳನ್ನು ಕಾಣಬಹುದಾಗಿದೆ. ಅಲಸೂರಿನ ಸೋಮೇಶ್ವರ, ಬೆಂಗಳೂರಿನ ಕೋಟೆ ವೆಂಕಟರಮಣ, ಶಿವಗಂಗೆಯ ಗಂಗಾಧರೇಶ್ವರ ದೇಗುಲಗಳ ಅಧಿಷ್ಠಾನಗಳು ಹೆಚ್ಚು ಅಲಂಕೃತಗೊಂಡಿವೆ. ಉಳಿದ ದೇಗುಲಗಳ ಅಧಿಷ್ಠಾನಗಳು ಸರಳವಾಗಿವೆ. ಮಾಗಡಿಯ ಸೋಮನಾಥನ ದೇಗುಲದ ಅಧಿಷ್ಠಾನವು ಕಪೋತ ಬಂಧ ಅಧಿಷ್ಠಾನವಾಗಿದೆ. ಇದು ಕೆಂಪು ಗ್ರಾನೈಟ್ ಕಲ್ಲಿನಿಂದ ರಚಿಸಲ್ಪಟ್ಟಿದೆ. ಕಪೋತವು ನಾಸಿಗಳಿಂದ ಅಲಂಕೃತವಾಗಿದೆ. ಇದರ ಗರ್ಭಗೃಹದ ಬಲಭಾಗದಲ್ಲಿರುವ ಮೃಣಾಳಿಕಾ ಪ್ರನಾಳವು ಈ ಕಾಲಘಟ್ಟದ ಅತ್ಯಂತ ಸುಂದರವಾದ ಪ್ರನಾಳವಾಗಿದೆ. ಶಿವಗಂಗೆಯ ಗಂಗಾಧರೇಶ್ವರ ದೇಗುಲದ ಅಧಿಷ್ಠಾನವು ಶ್ರೀಬಂಧ ಅಧಿಷ್ಠಾನವಾಗಿದೆ. ಇದರ ಊರ್ಧ್ವಮುಖ ರಚನೆಯ ಪ್ರತಿಯೊಂದು ಪಟ್ಟಿಕೆಯಲ್ಲಿಯೂ ಪದ್ಮದಳಗಳನ್ನು ಸುಂದರವಾಗಿ ಕೆತ್ತಲಾಗಿದೆ.

### 6.1.1.2 ಭಿತ್ತಿಗಳು

ಯಲಹಂಕ ನಾಡಪ್ರಭುಗಳ ದೇವಾಲಯಗಳ ಭಿತ್ತಿಗಳು ಸಹ ಸರಳವಾದ ರಚನೆಗಳಾಗಿವೆ. ಕೆಲವು ದೇವಾಲಯಗಳ ಹೊರಭಿತ್ತಿಯಲ್ಲಿ ಹೊಯ್ಸಳರ ಅಥವಾ ವಿಜಯನಗರ ದೇವಾಲಯಗಳ ಅರ್ಧ ಕಂಬಗಳು, ಕೋಷ್ಠಗಳು, ಕುಂಬಪಂಜರಗಳು ಇತ್ಯಾದಿ ಅಲಂಕರಣಗಳನ್ನು ಗುರುತಿಸಬಹುದು. ಆದರೆ ಇತರ ಕೆಲವು ದೇಗುಲಗಳಲ್ಲಿ ಸಾಲು ಸಾಲು ಶಿಲ್ಪಗಳನ್ನು ಅಲಂಕರಿಸಲಾಗಿದೆ. ಉದಾಹರಣೆಗೆ ಹಲಸೂರಿನ ಸೋಮೇಶ್ವರ ದೇಗುಲ. ಈ ಬಗೆಯ ಅಲಂಕಾರಿಕ ಶಿಲ್ಪಗಳು ಸಮಕಾಲೀನ ಪಾಳೆಯಗಾರರ ದೇವಾಲಯಗಳ ಭಿತ್ತಿಯಲ್ಲಿ ಕಂಡುಬರುವುದಿಲ್ಲ. ಕೆಲವು ಕಡೆಗಳಲ್ಲಿ ಬ್ರಹ್ಮಕಾಂತ ಭಿತ್ತಿರಚನೆಗಳು ಕಂಡುಬರುತ್ತವೆ. ಯಲಹಂಕ ನಾಡಪ್ರಭುಗಳ ಶಿಲ್ಪಪಟ್ಟಿಕೆಯ ಅಲಂಕಾರಿಕ ಭಿತ್ತಿ ರಚನೆಗಳು ವಿಜಯನಗರ ಶೈಲಿಯ ಸ್ಪಷ್ಟ ಅನುಕರಣೆಯಾಗಿವೆ. ಆದರೂ ಅಲ್ಲಲ್ಲಿ ಕೆಲವು ಕಥನ ಶಿಲ್ಪಗಳನ್ನು ರಚಿಸಿ ಅನನ್ಯತೆಯನ್ನು ಕಾಣಬಹುದಾಗಿದೆ. ರಾಮಾಯಣ ಮತ್ತು ಗಿರಿಜಾ ಕಲ್ಯಾಣದ ಹಲವು ಶಿಲ್ಪಗಳು ಅತ್ಯಾಕರ್ಷಕವಾಗಿ ನೋಡುಗರ ಹೃನ್ಮನವನ್ನು ಸೆಳೆಯುವಂತಿವೆ.

### 6.1.1.3 ಕಂಬಗಳು

ಯಲಹಂಕ ನಾಡಪ್ರಭುಗಳ ದೇವಾಲಯಗಳಲ್ಲಿನ ಕಂಬಗಳನ್ನು ಯಾಳಿ ಶಿಲ್ಪಗಳ ಕಂಬಗಳು, ಕುದುರೆ ಶಿಲ್ಪಗಳ ಕಂಬಗಳು, ಸ್ಥಾನಿಕ ಸಿಂಹ ಶಿಲ್ಪಗಳ ಕಂಬಗಳು, ಆಸೀನಸಿಂಹ ಶಿಲ್ಪ ಕಂಬಗಳು, ಸಂಯುಕ್ತ ಕಂಬಗಳು, ವರ್ತುಲಾಕಾರದ ಕಂಬಗಳು ಮತ್ತು ಚಿತ್ರಕಂಡ ಶೈಲಿ ಕಂಬಗಳು ಎಂದು ಏಳು ಭಾಗಗಳನ್ನಾಗಿ ವಿಂಗಡಿಸಬಹುದು.

ದೇವಸ್ಥಾನದ ತೆರೆದ ಮುಖಮಂಟಪದಲ್ಲಿ ಯಾಳಿ ಮತ್ತು ಕುದುರೆ ಶಿಲ್ಪದ ಕಂಬಗಳನ್ನು ಕಾಣಬಹುದಾಗಿದ್ದು ಇವು ವಿಜಯನಗರ ಶೈಲಿಯ ಅನುಕರಣೆಗಳಾಗಿವೆ. ಯಾಳಿಶಿಲ್ಪಗಳನ್ನು ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ಮುಖಮಂಟಪದಲ್ಲಿ, ಕೆಂಪೇಗೌಡ ಹಜಾರದ ಮುಖಮಂಟಪಗಳಲ್ಲಿ, ಮಾಗಡಿಯ ಸೋಮೇಶ್ವರ ದೇವಾಲಯದಲ್ಲಿ ಕಾಣಬಹುದಾಗಿದ್ದು, ಆಕರ್ಷಕವಾಗಿವೆ.

ಅಕ್ಕಪಕ್ಕದ ಕುದುರೆ ಶಿಲ್ಪಗಳಲ್ಲಿ ಒಂದರ ಸವಾರ ದೇಶಿ ಸಾಂಪ್ರದಾಯಿಕ ಉಡುಪುಗಳಾದ ಧೋತಿ, ಅಂಗವಸ್ತ್ರ, ಓಲೆಗಳು, ಆಭರಣಗಳನ್ನು ಧರಿಸಿರುವಂತೆ ರಚಿಸಿದ್ದರೆ, ಇನ್ನೊಂದು ಕುದುರೆಯ ಮೇಲಿನ ಸವಾರನನ್ನು ಗಡ್ಡಧಾರಿಯಾಗಿ, ಉದ್ದನೆಯ ನಿಲುವಂಗಿ, ಪೈಜಾಮ

ಧರಿಸಿದ ಪರ್ಶಿಯಾದ ಸವಾರನಂತೆ ತೋರಿಸಲಾಗಿದೆ. ಇದು ನಾಡಪ್ರಭುಗಳ ವಾಸ್ತುಶಿಲ್ಪಕಲೆಯ ಒಂದು ವಿಶಿಷ್ಟ ಅಂಶವಾಗಿದ್ದು, ಬೆಂಗಳೂರಿನ ರಂಗನಾಥ ದೇವಾಲಯದಲ್ಲಿ ಕಾಣಬಹುದು. ಬೆಂಗಳೂರಿನ ರಂಗನಾಥ ದೇವಾಲಯದ ತೆರೆದ ಮುಖಮಂಟಪದ ಮುಂದಿನ ಸಾಲಿನಲ್ಲಿ ಕುದುರೆಗಳು ತಮ್ಮ ಹಿಂದಿನ ಪಾದಗಳ ಮೇಲೆ ಎದ್ದು ನಿಂತಿದ್ದು ಇವುಗಳ ಮೇಲೆ ಸವಾರರು ಈಟಿಯಿಂದ ಕುದುರೆಯ ಕೆಳಗಿನ ಹುಲಿಯನ್ನು ಕೊಲ್ಲುತ್ತಿರುವಂತೆ ತೋರಿಸಲಾಗಿದೆ. ಇಲ್ಲಿ ಯಾಳಿಶಿಲ್ಪಗಳ ಬದಲಾಗಿ ಕುದುರೆ ಶಿಲ್ಪಗಳನ್ನು ರಚಿಸಿರುವುದು ನಾಡಪ್ರಭುಗಳ ವಾಸ್ತುಶಿಲ್ಪಗಳಲ್ಲಿನ ವಿಶೇಷವಾಗಿದೆ.

ಕರ್ನಾಟಕದಲ್ಲಿ ಕುದುರೆ ಶಿಲ್ಪಗಳ ಕಂಬಗಳು ಇದುವರೆಗೂ ದೊರೆತಿರುವ ಏಕೈಕ ಉದಾಹರಣೆ ಹಂಪಿ ವಿಠಲ ದೇವಸ್ಥಾನದ ಬಜಾರದ ಒಂದು ಮಂಟಪದಲ್ಲಿ ಮಾತ್ರ. ಈ ಮಂಟಪವನ್ನು ಕುದುರೆ ಗೊಂಬೆ ಮಂಟಪ ಎಂದು ಕರೆಯುತ್ತಾರೆ. ಉಳಿದಂತೆ ಬೇರೆಲ್ಲಿಯೂ ಕುದುರೆ ಕಂಬಗಳು ದೊರೆತಿರುವ ಉದಾಹರಣೆಗಳಿಲ್ಲ. ನಾಡಪ್ರಭುಗಳ ಕಾಲದ ಶಾಸನವಿರುವ ರಂಗನಾಥ ದೇವಾಲಯದಲ್ಲಿ ಕುದುರೆ ಶಿಲ್ಪಗಳಿರುವ ಕಂಬಗಳು ಕರ್ನಾಟಕದಲ್ಲಿ ಇದುವರೆಗೂ ದೊರೆತ ಎರಡನೆಯ ಉದಾಹರಣೆಯಾಗಿದೆ. ದೇವಾಲಯದ ಮುಖಮಂಟಪದಲ್ಲಿ ಕುದುರೆ ಶಿಲ್ಪಗಳ ಕಂಬಗಳಿರುವ ಉದಾಹರಣೆ ಇದೊಂದೆಯಾಗಿದೆ. ಆ ಕಾರಣದಿಂದ ನಾಡಿನ ವಾಸ್ತುಶಿಲ್ಪಕ್ಕೆ ಕುದುರೆ ಶಿಲ್ಪಗಳನ್ನು ಪರಿಚಯಿಸಿ ಪ್ರೋತ್ಸಾಹಿಸಿದ ಕೀರ್ತಿ ಯಲಹಂಕ ನಾಡಪ್ರಭುಗಳಿಗೆ ಸಲ್ಲುತ್ತದೆ.[3]

ಇನ್ನುಳಿದಂತೆ ವಿಜಯನಗರ ಕಾಲದ ದೇವಾಲಯಗಳಲ್ಲಿ ಕಂಡುಬರುವ ಸಂಗೀತದ ಕಂಬಗಳಿಗೆ ಸಮಾನವಾದ ಕಂಬಗಳು ಸಂಯುಕ್ತ ಕಂಬಗಳಾಗಿವೆ. ಏಕಶಿಲೆಯಲ್ಲಿ ಮುಖ್ಯ ಕಂಬವನ್ನು ಕಂಡರಿಸಿ ಇನ್ನುಳಿದ ಅರ್ಧಭಾಗದಲ್ಲಿ ಕಿರುಗಾತ್ರದ ಒಂದು ಅಥವಾ ಒಂದಕ್ಕಿಂತ ಹೆಚ್ಚು ಕಂಬಗಳನ್ನು ರಚಿಸಿದ್ದರೆ ಅದನ್ನು ಸಂಯುಕ್ತ ಕಂಬಗಳೆಂದು ಕರೆಯುತ್ತಾರೆ. ಯಲಹಂಕ ನಾಡಪ್ರಭುಗಳ ದೇವಾಲಯಗಳಲ್ಲಿ ಈ ಕಂಬಗಳು ಅತ್ಯಂತ ಅಲಂಕೃತವಾಗಿರದೆ ಸರಳವಾಗಿವೆ. ಈ ಬಗೆಯಕಂಬಗಳನ್ನು ಮುಖಮಂಟಪದಲ್ಲಿ ಕಾಣಬಹುದಾಗಿದೆ. ಉದಾಹರಣೆಗೆ ದೇವನಹಳ್ಳಿ, ಮಾಗಡಿ, ಅಲಸೂರು ದೇಗುಲಗಳ ಮುಖಮಂಟಪಗಳು.

ಯಲಹಂಕ ನಾಡಪ್ರಭುಗಳ ದೇವಾಲಯಗಳಲ್ಲಿ ಆಸೀನ ಮತ್ತು ಸ್ಥಾನಿಕ ಸಿಂಹ ಶಿಲ್ಪ ಎರಡೂ ವಿಧದ ಕಂಬಗಳು ಕಂಡುಬರುತ್ತವೆ. ಸ್ಥಾನಿಕ ಸಿಂಹದ ಕಂಬಗಳು ಯಾಳಿಶಿಲ್ಪದ ಕಂಬಗಳ ಮಾದರಿಯಲ್ಲಿವೆ. ತಮ್ಮ ಎರಡು ಹಿಂದಿನ ಕಾಲುಗಳ ಮೇಲೆ ಎತ್ತರವಾಗಿ

ನೆಗೆಯುವಂತೆ ಇವುಗಳನ್ನು ರಚಿಸಲಾಗಿದೆ. ಇವು ಕೆಳಗಡೆ ಆನೆಗಳ ಶಿಲ್ಪಗಳಿಂದ ಮೇಲ್ಭಾಗದಲ್ಲಿ ಮೊಗ್ಗೆಯಂತಹ ವಿನ್ಯಾಸಗಳಿಂದ ಕೂಡಿರುವುದನ್ನು ನೋಡಬಹುದು. ದೇವನಹಳ್ಳಿಯ ಮುಖಮಂಟಪದಲ್ಲಿ ಈ ಬಗೆಯ ಶಿಲ್ಪಗಳನ್ನು ಗುರುತಿಸಬಹುದು. ಆಸೀನ ಸಿಂಹ ಶಿಲ್ಪದ ಕಂಬಗಳು ಸಾಮಾನ್ಯವಾಗಿ ಉಪಕಂಬಗಳಲ್ಲಿ ಕಂಡುಬರುತ್ತವೆ. ಕಿರುಗಾತ್ರದ ಈ ಸಿಂಹ ಶಿಲ್ಪಗಳು ರಚನೆಯಲ್ಲಿ ಸರಳವಾದವುಗಳಾಗಿವೆ.

#### 6.1.1.4 ಬಲಿಪೀಠ

ಯಲಹಂಕ ನಾಡಪ್ರಭುಗಳ ದೇವಾಲಯಗಳ ರಚನೆಯಲ್ಲಿ ಬಲಿಪೀಠವು ಸಹ ಮುಖ್ಯವಾದುದು. ಇವು ಪ್ರಾಕಾರದ ಒಳಾಂಗಣದಲ್ಲಿ ದೀಪಸ್ಥಂಬದ ಸಮೀಪದಲ್ಲಿ ರಚನೆಗೊಂಡಿವೆ. ಬೆಂಗಳೂರಿನ ರಂಗನಾಥ ಮತ್ತು ಗವಿಗಂಗಾಧರೇಶ್ವರ ದೇವಾಲಯಗಳಲ್ಲಿನ ಬಲಿಪೀಠಗಳು ತಳಭಾಗದಲ್ಲಿ ಗಜಸ್ಥರ ಅಲಂಕಾರವನ್ನು ಹೊಂದಿವೆ. ಆದರೆ ಇಲ್ಲಿನ ಗಜಶಿಲ್ಪಗಳು ವಿಜಯನಗರ ಶೈಲಿಗಳಿಗಿಂತ ಸ್ವಲ್ಪ ಭಿನ್ನವಾಗಿರುವುದನ್ನು ಗುರುತಿಸಬಹುದು.

#### 6.1.1.5 ಏಕಶಿಲೆಯ ರಚನೆಗಳು

ಬೆಂಗಳೂರಿನ ಗವಿಗಂಗಾಧರೇಶ್ವರ ದೇಗುಲದ ಆವರಣದಲ್ಲಿರುವ ಬೃಹತ್ ಗಾತ್ರದ ಏಕಶಿಲೆಯಲ್ಲಿ ರಚಿಸಲಾದ ದರ್ಪಣಗಳು, ಪತಾಕೆಗಳು, ಸೂರ್ಯಪಾನ, ಚಂದ್ರಪಾನ ಫಲಕಗಳು ಹಾಗೂ ಛತ್ರಿಗಳು ಯಲಹಂಕ ನಾಡಪ್ರಭುಗಳು ನಾಡಿನ ವಾಸ್ತುಶಿಲ್ಪದ ಕಲಾತ್ಮಕತೆಗೆ ನೀಡಿರುವ ಪ್ರಮುಖ ಕಾಣಿಕೆಗಳಾಗಿವೆ. ಈ ಎಲ್ಲ ರಚನೆಗಳು ಏಕಶಿಲೆಯಲ್ಲಿ ನಿರ್ಮಾಣವಾಗಿದ್ದು ಅದ್ವಿತೀಯವಾದವುಗಳಾಗಿವೆ. ಇಲ್ಲಿನ ಡಮರು, ತ್ರಿಶೂಲ ಮತ್ತು ಛತ್ರಿಗಳ ಶಿಲ್ಪಗಳು ಕೂಡ ವಿಶಿಷ್ಟತೆಯನ್ನು ಪಡೆದಿವೆ. ಇವು ದೇವರಿಗೆ ಸಮರ್ಪಿಸುತ್ತಿದ್ದ ಅಷ್ಟಮಂಗಲದ ಸೂಚಕಗಳಾಗಿವೆ.

ಬೆಂಗಳೂರಿನ ದೊಡ್ಡಬಸವಣ್ಣ 11 ಅಡಿಗಳ ಎತ್ತರವಿದ್ದು, ಒಂದು ಕಲ್ಲಿನಲ್ಲಿ ಕಡೆದಿರುವ ಶಿಲ್ಪ ರಚನೆಯಾಗಿದೆ. ಕರ್ನಾಟಕದಲ್ಲಿರುವ ಬೃಹತ್ ಬಸವ(ನಂದಿ)ನ ಶಿಲ್ಪಗಳಲ್ಲಿ ಇದೂ ಒಂದು. ಅದೇರೀತಿ ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ಬಲಭಾಗದಲ್ಲಿರುವ ನಂದಿ ಶಿಲ್ಪವು ಎತ್ತರ ಮತ್ತು ಗಾತ್ರದಲ್ಲಿ ಬೆಂಗಳೂರಿನ ಬಸವಣ್ಣನ ಶಿಲ್ಪದಷ್ಟು ದೊಡ್ಡದಲ್ಲವಾದರೂ, ಅತ್ಯಂತ ಆಕರ್ಷಕವಾಗಿದೆ.

#### 6.1.1.6 ಮಂಟಪಗಳು

ಯಲಹಂಕ ನಾಡಪ್ರಭುಗಳ ದೇಗುಲಗಳ ಸಂಕೀರ್ಣದಲ್ಲಿ ನಾಲ್ಕು ಕಂಬಗಳಿಂದ ಕೂಡಿದ ಉಯ್ಯಾಲೆ ಮತ್ತು ತುಲಾಭಾರ ಮಂಟಪಗಳು ಸಹ ಸರಳ ರಚನೆಗಳಾಗಿವೆ. ದೇವನಹಳ್ಳಿಯ ವೇಣುಗೋಪಾಲಸ್ವಾಮಿ ಮತ್ತು ಆವತಿಯ ಚನ್ನಕೇಶವ ಹಾಗೂ ಸಾವನದುರ್ಗದ ವೀರಭದ್ರನ ಆಲಯಗಳಲ್ಲಿ ಈ ಬಗೆಯ ಮಂಟಪಗಳನ್ನು ಗುರುತಿಸಬಹುದಾಗಿದೆ. ಇವು ಗಾತ್ರದಲ್ಲಿ ಎತ್ತರದವುಗಳಾಗಿವೆ. ವಿಶೇಷವಾಗಿ ಈ ಮಂಟಪಗಳು ದೇಗುಲದ ಧಾರ್ಮಿಕ ಕೈಂಕರ್ಯಗಳಿಗೆಂದು ರಚನೆಯಾದವುಗಳಾಗಿವೆ. ಕೆಲವು ದೇಗುಲಗಳಲ್ಲಿ ತುಲಾಭಾರ ಮಂಟಪಗಳನ್ನು ಸಹ ಕಾಣಬಹುದು.

## 6.2 ಯಲಹಂಕ ನಾಡಪ್ರಭುಗಳ ಶಿಲ್ಪಕಲೆ

ಯಲಹಂಕ ನಾಡಪ್ರಭುಗಳ ಕಾಲದ ಶಿಲ್ಪಕಲೆಯ ಪ್ರಮುಖ ಉದಾಹರಣೆಗಳನ್ನು ಅವರು ನಿರ್ಮಿಸಿದ ದೇವಾಲಯಗಳಲ್ಲಿ, ಮಂಟಪಗಳಲ್ಲಿ, ಹಜಾರಗಳಲ್ಲಿ, ಗೋಪುರಗಳಲ್ಲಿ ಕಾಣುತ್ತೇವೆ. ಇವರ ಶಿಲ್ಪಕಲೆಯಲ್ಲಿ ಕಲ್ಲಿನ ಶಿಲ್ಪಗಳು, ಗಾರೆಶಿಲ್ಪಗಳು, ಲೋಹಶಿಲ್ಪಗಳನ್ನು ಗುರುತಿಸಬಹುದಾಗಿದೆ. ಬಹಳ ಪ್ರಧಾನವಾಗಿ ಕಲ್ಲಿನಲ್ಲಿ ರಚಿಸಿದ ಉಬ್ಬುಶಿಲ್ಪಗಳು ಯಲಹಂಕ ನಾಡಪ್ರಭುಗಳ ಕಾಲದಲ್ಲಿ ಹೆಚ್ಚಾಗಿ ಕಂಡುಬಂದಿವೆ. ಇಲ್ಲಿಯೂ ಸಹ ವಿಜಯನಗರ ಶಿಲ್ಪಕಲೆಯ ಗಾಢ ಪ್ರಭಾವವನ್ನು ಗುರುತಿಸಬಹುದು. ಯಲಹಂಕ ನಾಡಪ್ರಭುಗಳ ದೇವಾಲಯಗಳ ಅಧಿಷ್ಠಾನಗಳಲ್ಲಿ, ಭಿತ್ತಿಗಳಲ್ಲಿ, ವಿವಿಧ ಬಗೆಯ ಕಂಬಗಳಲ್ಲಿ, ಬೋದಿಗೆಗಳಲ್ಲಿ, ಭುವನೇಶ್ವರಿ ಇತ್ಯಾದಿಗಳೆಡೆಗಳಲ್ಲಿ ಈ ಬಗೆಯ ಉಬ್ಬುಶಿಲ್ಪಗಳನ್ನು ಕಾಣಬಹುದಾಗಿದೆ.

ಯಲಹಂಕ ನಾಡಪ್ರಭುಗಳ ದೇಗುಲಗಳ ಭಿತ್ತಿಗಳಲ್ಲಿ ಸಾಲು ಸಾಲಾಗಿ ಕಥನ ಶಿಲ್ಪಗಳನ್ನು ಕೆತ್ತಲಾಗಿದೆ. ಈ ವಿಷಯದಲ್ಲಿ ಯಲಹಂಕ ನಾಡಪ್ರಭುಗಳ ಕಥನ ಶಿಲ್ಪಕಲೆಯು ವಿಜಯನಗರ ಕಲೆಗಿಂತ ಭಿನ್ನವಾಗಿವೆ. ರಾಮಾಯಣ ಮತ್ತು ಗಿರಿಜಾಕಲ್ಯಾಣದ ಕಥನಗಳನ್ನು ಶಿಲ್ಪದಲ್ಲಿ ತೋರಿಸಿರುವುದು ನಾಡಿನ ಶಿಲ್ಪಕಲೆಯ ದೃಷ್ಟಿಯಿಂದ ಹೊಸ ಸೇರ್ಪಡೆಯಾಗಿವೆ. ಈ ಕಥನ ಶಿಲ್ಪಗಳನ್ನು ಹೊಯ್ಸಳರ ಅಧಿಷ್ಠಾನದ ಕಥನ ಶಿಲ್ಪಗಳಂತೆ ಒಂದೇ ಸಾಲಿನ ವೃತ್ತಾಂತ ಶಿಲ್ಪಗಳಾಗಿ ರಚಿಸಲಾಗಿದೆ. ಇವು ದೇಗುಲದ ಗರ್ಭಗುಡಿ, ಅಂತರಾಳ, ಅರ್ಧಮಂಟಪ ಮತ್ತು ನವರಂಗದ ಹೊರಭಿತ್ತಿಗಳಲ್ಲಿ ರಚಿಸಲಾಗಿದೆ. ಇದರಿಂದ ನೋಡುಗರಿಗೂ ಕಥಾವಿವರಗಳು ಸ್ಪಷ್ಟವಾಗಿ ದೊರೆಯುವಂತಾಗುತ್ತವೆ. ಶೈವ ಮತ್ತು ವೈಷ್ಣವ ಸಂಪ್ರದಾಯದ ವೃತ್ತಾಂತ ಕಥನ ಶಿಲ್ಪಗಳರಚನೆ ಸಮಸಂಖ್ಯೆಯಲ್ಲಿ ದೊರೆಯುವುದು ಇನ್ನೊಂದು ವಿಶೇಷ.

ಗಿರಿಜಾ ಕಲ್ಯಾಣದ ಶಿಲಾಪಟ್ಟಿಕೆಗಳು ನಾಡಿನ ಶಿಲ್ಪಕಲೆಯ ಚರಿತ್ರೆಯಲ್ಲಿ ಒಂದು ಹೊಸ ಪ್ರಯೋಗವಾಗಿದೆ. ಪಾರ್ವತಿಯು ಶಿವನನ್ನು ವರಿಸುತ್ತಿರುವ ಶಿಲ್ಪಗಳನ್ನು ದೇವಾಲಯಗಳ ಹೊರಭಿತ್ತಿಯಲ್ಲಿ ಕಾಣಬಹುದಾಗಿದೆ. ಈ ಶಿಲ್ಪಗಳನ್ನು ವಿದ್ವಾಂಸರು ಕಲ್ಯಾಣಸುಂದರಮೂರ್ತಿ ಎಂದು ಕೂಡ ಗುರುತಿಸಿದ್ದಾರೆ. ಪಾರ್ವತಿಯು ಶಿವನನ್ನು ವರಿಸುವುದಕ್ಕಾಗಿ ಕಠಿಣ ತಪಸ್ಸನ್ನು ಮಾಡಿ ಶಿವನ ಅನುಗ್ರಹಕ್ಕೆ ಪಾತ್ರಳಾದ ಕಥನವನ್ನು ಶಿಲ್ಪೀಕರಿಸಲಾಗಿದೆ. ವಿವಾಹ ಸಂದರ್ಭದಲ್ಲಿ ಉಪಸ್ಥಿತರಿದ್ದ ಋಷಿವರ್ಗದವರು, ಮಾತೃಕೆಯರು, ದೇವಾನುದೇವತೆಗಳು, ಸಿದ್ಧ ಮುನಿಗಳು, ಗಂಧರ್ವರು, ಕಿನ್ನರರು, ಅಷ್ಟದಿಕ್ಪಾಲಕರು, ಪಂಚಾನನರು ಮೊದಲಾದವರು ಭಾಗಿಯಾಗಿದ್ದುದನ್ನು ಶಿಲ್ಪದಲ್ಲಿ ತೋರಿಸಲಾಗಿದೆ. ಬೆಂಗಳೂರಿನ ಕೋಟೆ ವೆಂಕಟರಮಣ, ಅಲಸೂರಿನ ಸೋಮೇಶ್ವರ, ನಂದಿಯ ಭೋಗನಂದೀಶ್ವರ ದೇಗುಲದ ಅಮ್ಮನವರ ಆಲಯಗಳಲ್ಲಿ ಅನನ್ಯವಾದ ಗಿರಿಜಾಕಲ್ಯಾಣದ ಶಿಲ್ಪಗಳನ್ನು ನೋಡಬಹುದಾಗಿದೆ. ಈ ಹಿಂದಿನ ದೇವಾಲಯಗಳಲ್ಲಿ ಶಿವನ ಅನುಗ್ರಹ, ಸಂಹಾರ ಲೀಲೆಗಳನ್ನು ಮೂರ್ತಿಶಿಲ್ಪದಲ್ಲಿ ರಚಿಸಲಾಗಿದ್ದಿತ್ತು. ಇವುಗಳಲ್ಲಿ ಕಲ್ಯಾಣ ಸುಂದರ ಮೂರ್ತಿಗಳನ್ನು ದೀರ್ಘವಾಗಿ ನಿರ್ಮಿಸಿರುವುದು ಅತ್ಯಂತ ವಿಶೇಷವಾಗಿದೆ. ಈ ಹಿನ್ನೆಲೆಯಲ್ಲಿ ಹರಿಹರ ಕವಿಯ ಗಿರಿಜಾಕಲ್ಯಾಣದ ಪ್ರಭಾವವನ್ನು ವಿದ್ವಾಂಸರು ಗುರುತಿಸುವ ಪ್ರಯತ್ನಮಾಡಿದ್ದಾರೆ.

ರಾಮಾಯಣದ ಶಿಲ್ಪಗಳನ್ನು ಆವತಿಯ ತಿಮ್ಮರಾಯ ದೇವಾಲಯದ ಭಿತ್ತಿಯಲ್ಲಿ, ದೇವನಹಳ್ಳಿಯ ವೇಣುಗೋಪಾಲಸ್ವಾಮಿ ದೇವಾಲಯದ ಭಿತ್ತಿಯಲ್ಲಿ ಮತ್ತು ಶಿವಗಂಗೆಯ ಕಮಲ ತೀರ್ಥವೆಂದು ಕರೆಯುವ ಕಲ್ಯಾಣಿಯ ಭಿತ್ತಿಯಲ್ಲಿ ಶಿಲ್ಪೀಕರಿಸಲಾಗಿದೆ. ಈ ಶಿಲ್ಪಗಳಲ್ಲಿ ರಾಮಾಯಣದ ಕಥೆಯು ಶ್ರವಣಕುಮಾರನ ಮರಣದಿಂದ ಪ್ರಾರಂಭಿಸಿ, ಪುತ್ರಕಾಮೇಷ್ಟಿಯಾಗ, ಋಷ್ಯಶೃಂಗ ಮುನಿಯ ಆಗಮನ, ಅಹಲ್ಯೆಯ ಶಾಪವಿಮೋಚನೆ, ದಶರಥನ ಮರಣ, ರಾಮನ ವನವಾಸ, ಸೀತೆಯ ಅಗ್ನಿಪರೀಕ್ಷೆ ಹೀಗೆ ದೀರ್ಘವಾಗಿ ಕಥನರೂಪವನ್ನು ಶಿಲ್ಪಗಳಲ್ಲಿ ಬಿಡಿಬಿಡಿಯಾಗಿ ತೋರಿಸಲಾಗಿದೆ.

ಯಲಹಂಕ ನಾಡಪ್ರಭುಗಳ ಆಲಯಗಳಲ್ಲಿ ನರಸಿಂಹ ಅವತಾರದ ಶಿಲ್ಪಗಳು ಹಾಗೂ ಭಾಗವತದ ಶಿಲ್ಪಗಳನ್ನು ಸಹ ಭಿತ್ತಿಗಳಲ್ಲಿ ರಚಿಸಲಾಗಿದೆ. ತಿಮ್ಮರಾಯ ದೇವಾಲಯದ ಭಿತ್ತಿಯಲ್ಲಿ ನರಸಿಂಹನು ಪ್ರಹ್ಲಾದನ ಭಕ್ತಿಗೆ ಅನುಗ್ರಹಿಸಿ ಕಂಬದಿಂದ ಹೊರಬಂದು ಹಿರಣ್ಯಕಶ್ಯಪುವನ್ನು ಸಂಹರಿಸಿದ ಸನ್ನಿವೇಶದ ಶಿಲ್ಪಗಳು ಕೆತ್ತಲ್ಪಟ್ಟಿವೆ. ಜೊತೆಗೆ ಕೃಷ್ಣನ ಬಾಲಲೀಲೆಯ ಭಾಗವತದ

ಭಾಗಗಳನ್ನು ಸಹ ಕೆತ್ತಲಾಗಿದೆ. ದೇವನಹಳ್ಳಿಯ ವೇಣುಗೋಪಾಲಸ್ವಾಮಿಯ ಆಲಯದ ಭಿತ್ತಿಯಲ್ಲಿ ವಾಮನ ಬಲಿ ಚಕ್ರವರ್ತಿಯಲ್ಲಿ ದಾನ ಪಡೆದ ಕಥೆಯ ಶಿಲ್ಪವನ್ನು ರಚಿಸಲಾಗಿದೆ.

ಈ ಶಿಲ್ಪಗಳ ಆಸುಪಾಸಿನಲ್ಲಿ ಅಲ್ಲಲ್ಲಿ ಹಾವಾಡಿಗರು, ಕುಂಬಾರರು, ಪುರೋಹಿತರು, ಮಾವುತರು, ಸಿದ್ದರು ಮೊದಲಾದವರ ಶಿಲ್ಪಗಳನ್ನು ಸಹ ಕೆತ್ತಿರುವುದು ಜಾನಪದ ಶಿಲ್ಪಗಳಿಗೆ ದ್ಯೋತಕವಾಗಿದೆ. ಜೊತೆಗೆ ಇದು ಅಂದಿನ ಸಮಾಜದ ವಿವಿಧ ಕಸುಬುದಾರರ ಚಿತ್ರಣವನ್ನು ನಮ್ಮ ಕಣ್ಣುಮುಂದೆ ತರುತ್ತದೆ.

ಯಲಹಂಕ ನಾಡಪ್ರಭುಗಳ ಶಿಲ್ಪಕಲೆಯಲ್ಲಿ ಮತ್ತೊಂದು ಮುಖ್ಯ ಸಂಗತಿಯೆಂದರೆ, ಚೆಂಚುಲಕ್ಷ್ಮಿ ಮತ್ತು ನರಸಿಂಹರ ಶಿಲ್ಪಗಳು. ಆಂಧ್ರ ಮತ್ತು ಕರ್ಣಾಟಕ ರಾಜ್ಯಗಳ ಗಡಿಭಾಗದಲ್ಲಿ ಪ್ರಚಲಿತವಿರುವ ಜಾನಪದ ಕಥೆಯಾದ ಚೆಂಚು ಬುಡಕಟ್ಟಿನ ಕನ್ನೆಯ ಸೌಂದರ್ಯಕ್ಕೆ ಮರುಳಾಗಿ ನರಸಿಂಹ ಒಲಿದು ವಿವಾಹವಾದುದನ್ನು ವಿವಿಧೆಡೆ ಶಿಲ್ಪಗಳಲ್ಲಿ ಕಾಣಬಹುದಾಗಿದೆ. ಬೇಟೆಗಾರಿಕೆಯನ್ನು ವೃತ್ತಿಯಾಗಿರಿಸಿಕೊಂಡ ಚೆಂಚು ಸಮುದಾಯದವರು ಕಾಡುವಾಸಿಗಳಲ್ಲಿದ್ದ ಕನ್ನೆಯಾದವಳು ವಿವಾಹವಾದ ನಂತರ ಲಕ್ಷ್ಮಿಯೆಂದು ಕರೆಸಿಕೊಳ್ಳುತ್ತಾಳೆ. ಬೆಂಗಳೂರಿನ ರಂಗನಾಥ ದೇವಾಲಯದ ಮುಖಮಂಟಪದ ಕಂಬದ ಮೇಲೆ, ಅಲಸೂರಿನ ಸೋಮೇಶ್ವರ ದೇವಾಲಯದ ಮುಖಮಂಟಪದ ಕಂಬದ ಮೇಲೆ ಪ್ರಧಾನವಾಗಿ ಉದಾಹರಿಸಬಹುದಾಗಿದೆ. ಈ ಶಿಲ್ಪದಲ್ಲಿ ಈ ಕನ್ಯೆಯ ಕಾಲಿಗೆ ಚುಚ್ಚಿದ ಮುಳ್ಳನ್ನು ನರಸಿಂಹನು ತೆಗೆಯುತ್ತಿರುವುದನ್ನು ಕೆತ್ತಲಾಗಿದೆ. ಇದು ಸಮಕಾಲೀನ ಬೇಟೆಯ ಪ್ರವೃತ್ತಿಯ ಸ್ವರೂಪವನ್ನು ಸೂಚ್ಯವಾಗಿ ತಿಳಿಸುತ್ತದೆ ಎಂತಲೂ ಹೇಳಬಹುದಾಗಿದೆ. ಹಲವು ಇವರ ಕಾಲದ ದೇವಾಲಯಗಳಲ್ಲಿ ದ್ವಿಭುಜ ನರಸಿಂಹ, ಸ್ಥಾನಿಕ ನರಸಿಂಹರ ಶಿಲ್ಪಗಳು ಸಹ ಅತ್ಯಾಕರ್ಷಕವಾಗಿವೆ. ಬೇಡರ ಕಣ್ಣಪ್ಪ, ಸಿರಿಯಾಳ, ಭಕ್ತಕುಂಬಾರ ಮೊದಲಾದ ಶಿಲ್ಪಗಳನ್ನು ಸಹ ಇವರ ಕಾಲದ ಆಲಯಗಳಲ್ಲಿ ಗುರುತಿಸಬಹುದು.

ಕರ್ನಾಟಕದಲ್ಲಿ ನಾಥಪಂಥವು ಬಹಳ ಪ್ರಭಾವಶಾಲಿಯಾಗಿದ್ದ ಪಂಥವಾಗಿತ್ತು. ಇದು ವಿಜಯನಗರ ಮತ್ತು ವಿಜಯನಗರೋತ್ತರ ಕಾಲಾವಧಿಯಲ್ಲಿ ತನ್ನಪ್ರಭಾವ ವಿಸ್ತರಿಸಿಕೊಂಡಿತ್ತು ಎಂದು ಇತ್ತೀಚಿನ ಅಧ್ಯಯನಗಳು ಸಾಬೀತುಪಡಿಸಿವೆ.[4] ನಾಥಪಂಥದ ನವನಾಥರ ಶಿಲ್ಪಗಳು ಯಲಹಂಕ ನಾಡಪ್ರಭುಗಳ ದೇಗುಲಗಳಲ್ಲಿಯೂ ಸಹ ಕಂಡುಬರುತ್ತವೆ. ನವನಾಥರ ಶಿಲ್ಪಗಳು ರಚಿಸಿರುವ ಪ್ರಥಮ ಉದಾಹರಣೆ ಅಲಸೂರಿನ ಸೋಮೇಶ್ವರ ದೇವಸ್ಥಾನದ ಭಿತ್ತಿಯಲ್ಲಿ ಕಾಣುತ್ತೇವೆ. ಇಂತಹುದೇ ಒಂಬತ್ತು ನಾಥರ ಶಿಲ್ಪಗಳನ್ನು ಬೆಂಗಳೂರಿನ ಜಲಕಂಠೇಶ್ವರ ದೇಗುಲದ ತೆರೆದ ಮುಖಮಂಟಪದಲ್ಲಿ ಶೋಧಿಸಲಾಗಿದೆ.[5] ಮತ್ಸ್ಯೇಂದ್ರನಾಥ, ಗೋರಖ್ ನಾಥ,

ಜಾಲಿಂಧ್ರನಾಥ, ಕಾನಿಫ್ ನಾಥ, ಗೆಯನಿ ನಾಥ, ಭರತರಿನಾಥ, ದೇವಣಿನಾಥ, ನಾಗೇಶ್ ನಾಥ ಎಂಬ ನವನಾಥ ಮುನಿಗಳ ಶಿಲ್ಪಗಳನ್ನು ಒಂದೇ ಕಡೆ ಅಲಸೂರಿನ ಸೋಮೇಶ್ವರ ದೇಗುಲದ ತೆರೆದ ಮಹಾಮಂಟಪದ ಕಂಬಗಳಲ್ಲಿ ಕಾಣಬಹುದಾಗಿದೆ. ಸಾವನದುರ್ಗದ ವೀರಭದ್ರ ದೇವಸ್ಥಾನದ ಹೊರಮಂಟಪದಲ್ಲಿ ಸಹ ಆಯ್ದ ನಾಥಶಿಲ್ಪಗಳನ್ನು ಕಾಣಬಹುದಾಗಿದೆ.

**6.2.1 ನಾಡಪ್ರಭುಗಳ ಶಿಲ್ಪಗಳು**

ಯಲಹಂಕ ನಾಡಪ್ರಭುಗಳ ಶಿಲ್ಪಗಳನ್ನು ಗುರುತಿಸುವ ಪ್ರಯತ್ನವನ್ನು ವಿದ್ವಾಂಸರು ಮಾಡುತ್ತಾ ಬಂದಿದ್ದಾರೆ. ಪ್ರಮುಖವಾಗಿ ದೇವಾಲಯಗಳಲ್ಲಿನ ಕಂಬಗಳಲ್ಲಿ ಅರಸರ ಶಿಲ್ಪಗಳನ್ನು ಹಾಕಿಸಿರುವ ಉದಾಹರಣೆಗಳಿವೆ. ಅವುಗಳೆಂದರೆ–

1. ಆವತಿಯ ಹತ್ತಿರದ ತಿಮ್ಮರಾಯ ದೇವಸ್ಥಾನದ ನವರಂಗ ಮಂಟಪದ ಕಂಬದಲ್ಲಿ
2. ಅಲಸೂರಿನ ಸೋಮೇಶ್ವರ ದೇವಸ್ಥಾನದ ನವರಂಗದ ಎಡಬದಿಯ ಕಂಬದಲ್ಲಿ
3. ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ಸಭಾಮಂಟಪದ ಸಿಂಹದ್ವಾರವೆಂದು ಕರೆಯುವ ದ್ವಾರದ ಬಾಗಿಲವಾಡದಲ್ಲಿ
4. ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ಪೂರ್ವದ ಮುಖಮಂಟಪದ ಕಂಬದ ಮೇಲೆ
5. ಶಿವಗಂಗೆಯ ಕೆಂಪೇಗೌಡ ಹಜಾರದ ಬಳಿಯ ಮೆಟ್ಟಿಲುಗಳ ಬಳಿ
6. ವಿಭೂತಿಪುರದ ಮಠದ ಗೋಡೆಗೆ ಅಳವಡಿಸಿರುವ ಕಲ್ಲಿನ ಮೇಲೆ
7. ಮಾಗಡಿಯ ಸೋಮೇಶ್ವರ ದೇವಾಲಯದ ಕೆಂಪೇಗೌಡ ಹಜಾರದ ಕಂಬದ ಮೇಲೆ ಅಶ್ವರೂಢನಾಗಿ,
8. ಮಾಗಡಿಯ ರಾಮೇಶ್ವರ ದೇವಾಲಯದ ನವರಂಗದ ಕಂಬದ ಮೇಲೆ
9. ಸಾವನದುರ್ಗ ವೀರಭದ್ರ ದೇವಾಲಯದ ದ್ವಾರಕ್ಕೆ ನೇರವಾಗಿ ರಸ್ತೆಯ ಬಲಬದಿಗೆ ಇರುವ ಕಲ್ಲಿನ ಮೇಲೆ ಭಕ್ತಮುದ್ರೆಯಲ್ಲಿರುವ ಶಿಲ್ಪ

ಈ ಶಿಲ್ಪಗಳು ಅರಸರಂತೆಯೇ ನಾಜೂಕಾದ ಪೋಷಾಕನ್ನು ಹೊಂದಿವೆ. ಕಿರೀಟ, ಉದ್ದನೆಯ ಖಡ್ಗ, ವಿವಿಧ ಆಭರಣಗಳು ರಾಜಗಾಂಭೀರ್ಯವನ್ನು ಹೊರಸೂಸುತ್ತವೆ. ಶಿವಗಂಗೆಯಲ್ಲಿನ ಕಂಚಿನ ಶಿಲ್ಪವು ಕೆಂಪೇಗೌಡ ಅರಸನ ಶಿಲ್ಪಗಳ ಲಕ್ಷಣ ಹಾಗೂ ಶೈಲಿ

ಗುರುತಿಸಲು ಪ್ರಮುಖ ಉದಾಹರಣೆಯಾಗಿದೆ. ಅದರಂತೆ ಇದೇ ದೇಗುಲದ ದ್ವಾರಬಂಧದಲ್ಲಿನ ಶಾಸನವಿರುವ ಕೆಂಪೇಗೌಡ ಹಾಗೂ ಆತನ ರಾಣಿ ಮತ್ತು ಪುತ್ರ ಶಿಲ್ಪಗಳು ಮಹತ್ವದವುಗಳಾಗಿವೆ. ಶಿವಗಂಗೆಯ ಕಂಚಿನ ಶಿಲ್ಪದ ಗಾಂಭೀರ್ಯ, ಸದೃಢ ಬಾಹುಗಳನ್ನು ಗಮನಿಸಿದರೆ ಈ ಶಿಲ್ಪವು ಒಂದನೆಯ ಕೆಂಪೇಗೌಡರದೆಂದು ಊಹಿಸಲು ಸಾಧ್ಯವಿದೆ. ಅಲಸೂರಿನ ಸೋಮೇಶ್ವರದೇಗುಲದಲ್ಲಿನ ಅರಸನ ಶಿಲ್ಪವು ಯುವಕನಂತೆ ತೋರಿಸಲಾಗಿದ್ದು ಇದರಲ್ಲಿನ ತಲೆಯ ಮೇಲಿನ ಕಿರೀಟವು ವಿಶೇಷವಾಗಿದೆ. ಬಹುಶಃ ಇದನ್ನು ಎರಡನೆಯ ಕೆಂಪೇಗೌಡನದೆಂದು ಹೇಳಲು ಸಾಧ್ಯವಿದೆ. ಶಿವಗಂಗೆಯ ದ್ವಾರಬಂಧದಲ್ಲಿ ಇರುವ ರಾಣಿಯ ಶಿಲ್ಪದ ಪಕ್ಕದಲ್ಲಿ ಮಕ್ಕಳ ಶಿಲ್ಪಗಳನ್ನು ಹಾಗೂ ಪರಿವಾರದವರ ಶಿಲ್ಪಗಳನ್ನು ಕೆತ್ತಲಾಗಿದೆ. ಹಾಗಾಗಿ ಇದು ಇಮ್ಮಡಿ ಮತ್ತು ಮುಮ್ಮಡಿ ಕೆಂಪೇಗೌಡರ ಶಿಲ್ಪಗಳೆಂದು ಊಹಿಸಬಹುದು.

### 6.2.2 ಗಾರೆಶಿಲ್ಪಗಳು

ಯಲಹಂಕ ನಾಡಪ್ರಭುಗಳ ದೇಗುಲಗಳ ಹೊರಭಾಗದಲ್ಲಿನ ಕುಂಭಿ ಗೋಡೆಯ ಕೋಷ್ಠಗಳಲ್ಲಿ ಗಾರೆಶಿಲ್ಪಗಳನ್ನು ಕಾಣಬಹುದು. ವಿವಿಧ ಆಕಾರದ ವಿನ್ಯಾಸಗಳ ರಚನೆಯನ್ನು ಹಾಗೂ ದೇವಾನುದೇವತೆಗಳ ಶಿಲ್ಪಗಳನ್ನು ಗಾರೆಯಲ್ಲಿ ರಚಿಸಲಾಗಿದೆ. ಉಬ್ಬುಶಿಲ್ಪಗಳಂತೆ ಹೆಚ್ಚು ಪರಿಶ್ರಮ ಮತ್ತು ವೆಚ್ಚದ ಅವಶ್ಯಕತೆ ಈ ಶಿಲ್ಪಗಳ ರಚನೆಗೆ ಮುಖ್ಯವಾಗಿರುತ್ತದೆ. ನಾಡಪ್ರಭುಗಳ ಕಾಲದಲ್ಲಿ ಗಾರೆಶಿಲ್ಪಗಳು ಕಾಲಕಾಲಕ್ಕೆ ಜೀರ್ಣೋದ್ಧಾರಗೊಂಡಿರುವುದನ್ನು ಗಮನಿಸಬಹುದು. ಇವರ ಕಾಲಾವಧಿಯಲ್ಲಿ ನಿರ್ಮಾಣಗೊಂಡ ಗಾರೆಶಿಲ್ಪಗಳ ಮತ್ತು ವಿನ್ಯಾಸಗಳನ್ನು ಮಾಗಡಿಯ ಸೋಮೇಶ್ವರ ದೇವಸ್ಥಾನ, ಮಾಗಡಿ ಕೋಟೆ ಆವರಣದಲ್ಲಿರುವ ರಾಮೇಶ್ವರ ದೇವಾಲಯ ಮತ್ತು ಬೆಂಗಳೂರಿನ ಕಾಟನ್ ಪೇಟೆಯ ಅರಳೆಕಟ್ಟೆ-ಈಶ್ವರ ದೇವಾಲಯಗಳಲ್ಲಿ ಈಗಲೂ ಗುರುತಿಸಬಹುದಾಗಿದೆ. ಶಿವಗಂಗೆಯ ಕೆಂಪೇಗೌಡ ಹಜಾರದ ಹಿಂಭಾಗದಲ್ಲಿರುವ ಗಾರೆಬಸವಣ್ಣ ಒಂದು ಬೃಹತ್ತಾದ ಗಾರೆ ಶಿಲ್ಪವಾಗಿದ್ದು, ಯಲಹಂಕ ನಾಡಪ್ರಭುಗಳ ಕೊನೆಯ ಕಾಲಘಟ್ಟಕ್ಕೆ ಸೇರಿರುವ ಸಾಧ್ಯತೆಗಳಿವೆ.

### 6.2.3 ಲೋಹಶಿಲ್ಪಗಳು

ವಿಶೇಷವಾಗಿ ಕಂಚಿನ ಲೋಹಶಿಲ್ಪಗಳು ದಕ್ಷಿಣ ಭಾರತದಲ್ಲಿ ಪಲ್ಲವರ ಕಾಲದಿಂದಲೂ ಕಂಡುಬರುತ್ತವೆ. ಆದರೆ ಚೋಳರ ಕಾಲದಲ್ಲಿ ರೂಪುಗೊಂಡ ಕಂಚಿನ ಶಿಲ್ಪಗಳಿಗೆ ವಿಶೇಷವಾದ ಕಲಾಪ್ರೌಢಿಮೆಯಿದೆ. ಮುಂದೆ ವಿಜಯನಗರದ ಅರಸರು ಹಾಗೂ ವಿಜಯನಗರೋತ್ತರ ಅರಸರಿಗೆ ಮಾದರಿಯಾಗಿ ರೂಪುಗೊಂಡಿದ್ದು ಚೋಳಶಿಲ್ಪಗಳೇ. ವಿಜಯನಗರ ಕಾಲದಲ್ಲಿಯೂ

ಕಂಚಿನಲ್ಲಿ ನಿರ್ಮಿಸಿದ ಶಿಲ್ಪಗಳ ಉದಾಹರಣೆಗಳಿವೆ. ಆದರೆ ಅವು ತಿರುಪತಿಯಲ್ಲಿವೆ. ಶಿವಗಂಗೆಯಲ್ಲಿರುವ ಹಿರಿಯ ಕೆಂಪೇಗೌಡನ ಲೋಹ ಶಿಲ್ಪದ ವಿಶೇಷತೆ ಕುರಿತು ಎಂ.ಎಸ್. ಕೃಷ್ಣಮೂರ್ತಿ ಅವರು "ಈ ಶಿಲ್ಪ ಕರ್ನಾಟಕದಲ್ಲಿರುವ ಏಕೈಕ ಶಾಸನವುಳ್ಳ ಕಾಲವುಳ್ಳ ವ್ಯಕ್ತಿಶಿಲ್ಪ... ಕೃಷ್ಣದೇವರಾಯರ ಪ್ರತಿಮೆಗೆ ಸರಿಸಮಾನವೆನಿಸುವ ಕೆಂಪೇಗೌಡರ ಈ ಪ್ರತಿಮೆ ಪ್ರಸ್ತುತ ಕರ್ನಾಟಕದಲ್ಲಿರುವ ಕಂಚಿನ ವ್ಯಕ್ತಿಶಿಲ್ಪಗಳಲ್ಲೆಲ್ಲಾ ಅತ್ಯಂತ ಉತ್ತಮವಾಗಿರುವ ಶಿಲ್ಪವಾಗಿದೆ" ಎಂದು ಅಭಿಪ್ರಾಯಪಟ್ಟಿದ್ದಾರೆ.[6] ಹಿರಿಯ ಕೆಂಪೇಗೌಡನ ಈ ಶಿಲ್ಪವನ್ನು ಕೃಷ್ಣಮೂರ್ತಿ ಅವರು ಮಾಗಡಿ ಕೆಂಪೇಗೌಡನ ಕಂಚಿನ ಪ್ರತಿಮೆ ಎಂದು ಹೇಳಿರುವುದು ಸರಿಯಾದ ತೀರ್ಮಾನವಲ್ಲ. ಈ ಶಿಲ್ಪವು ಯಲಹಂಕ ನಾಡಪ್ರಭುಗಳ ಕಾಲದ ಲೋಹಶಿಲ್ಪಗಳ ಕಲಾತ್ಮಕತೆಗೆ ಸಾಕ್ಷಿಯಾಗಿದೆ.

ಶಿವಗಂಗೆಯ ಗಂಗಾಧರೇಶ್ವರ ದೇವಾಲಯದ ಸಭಾಮಂಟಪದಲ್ಲಿ ಗರ್ಭಗುಡಿಗೆ ನೇರವಾಗಿ ಇರಿಸಲಾಗಿರುವ ಹಿರಿಯ ಕೆಂಪೇಗೌಡ (ಬೆಂಗಳೂರು ಕೆಂಪೇಗೌಡ)ನ ಕಂಚಿನ ಪ್ರತಿಮೆಯು 42.5 ಅಂಗುಲ ಎತ್ತರವಿದೆ. ಒಟ್ಟು ಮೂರು ಕಂಚಿನ ಪ್ರತಿಮೆಗಳು ಇಲ್ಲಿ ಇದ್ದು, ಇವುಗಳಲ್ಲಿ ಕೆಂಪೇಗೌಡರ ಪ್ರತಿಮೆ ಅತ್ಯಂತ ಸುಂದರವಾಗಿದೆ.[7] ಶಾಸನವಿರುವ ಈ ಶಿಲ್ಪವನ್ನು ಸಾಂಪ್ರದಾಯಿಕ ಲೋಹಶಿಲ್ಪ ರಚನೆ ಪದ್ಧತಿಯಲ್ಲಿ ತಯಾರಿಸಲಾಗಿದೆ. ಲೋಹವನ್ನು ಎರಕಹೊಯ್ದು ಅದನ್ನು ಸೂಕ್ಷ್ಮವಾಗಿ ಕೊರೆದು ಮತ್ತು ಉಜ್ಜಿ ನುಣುಪುಗೊಳಿಸಲಾಗಿದೆ. ದೇಹದ ಮೇಲೆ ಆಭರಣಗಳನ್ನು ಸೂಕ್ಷ್ಮವಾಗಿ ಕೊರೆದು ಮಾಡಲಾಗಿದೆ. ಅತ್ಯಂತ ಸುಂದರವಾಗಿ ಆಕರ್ಷಕವಾಗಿದ್ದು ಈ ಪ್ರತಿಮೆ ಲೋಹತಂತ್ರಗಾರಿಕೆಯ ಅದ್ಭುತ ಉದಾಹರಣೆಯಾಗಿದೆ.[8]

ಕಂಚಿನ ದೊಡ್ಡ ಗಾತ್ರದ ಗಂಟೆಗಳು ಯಲಹಂಕ ನಾಡಪ್ರಭುಗಳ ಕಾಲಾವಧಿಯಲ್ಲಿ ನಿರ್ಮಾಣಗೊಂಡು ದೇಗುಲಗಳಲ್ಲಿ ಅಲಂಕೃತಗೊಂಡಿವೆ. ಈ ಬೃಹತ್ ಗಾತ್ರದ ಗಂಟೆಗಳ ಮೇಲೆ ಶಾಸನಗಳನ್ನು ಸಹ ಕೆತ್ತಲಾಗಿದೆ. ಈ ಬಗೆಯ ಗಂಟೆಯ ಮೇಲೆ ಉಲ್ಲೇಖಿತಗೊಂಡ ದಾನಶಾಸನಗಳು ಬೇರಾವ ಸಮಕಾಲೀನ ಪಾಳೆಯಗಾರರ ಕಾಲದಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ಶಿವಗಂಗೆಯಲ್ಲಿರುವ ಕಂಚಿನ ಗಂಟೆಗಳು ಇದಕ್ಕೆ ಉತ್ತಮ ಉದಾಹರಣೆಗಳಾಗಿವೆ.

### 6.2.4 ಲಜ್ಜಾಗೌರಿಯ ಶಿಲ್ಪಗಳು

ಯಲಹಂಕ ನಾಡಪ್ರಭುಗಳ ಕೆಲವು ಸ್ಮಾರಕಗಳಲ್ಲಿ ಲಜ್ಜಾಗೌರಿಯ ಶಿಲ್ಪಗಳು ಕಂಡುಬರುತ್ತವೆ. ಇವು ಆವತಿಯ ತಿಮ್ಮರಾಯ ದೇವಸ್ಥಾನದ ನವರಂಗ ಕಂಬದಲ್ಲಿ, ಬೆಂಗಳೂರಿನ ಜಲಕಂಠೇಶ್ವರ ದೇವಾಲಯದ ಕಂಬದಲ್ಲಿ, ದೊಡ್ಡ ಬಸವಣ್ಣ ದೇಗುಲದ ಪ್ರವೇಶ

ದ್ವಾರದ ಹೊರಗಡೆಯ ಬೋದಿಗೆಯಲ್ಲಿ, ಶಿವಗಂಗೆಯ ಕಮಲತೀರ್ಥದ ಭಿತ್ತಿಯಲ್ಲಿ, ಹುಲಿಯೂರುದುರ್ಗದಲ್ಲಿನ ಆಲಯದ ಕಂಬದ ಮೇಲೆ, ಮಾಗಡಿಯ ತಿರುಮಲೆ ರಂಗನಾಥ ದೇಗುಲದಲ್ಲಿನ ಪೂರ್ವದಿಕ್ಕಿನಲ್ಲಿರುವ ಪ್ರವೇಶದ ಮಂಟಪದ ಕಂಬದ ಮೇಲೆ ಕಾಣಬಹುದಾಗಿದೆ. ನಗ್ನದೇವತೆಯ ರೂಪದ ಲಜ್ಜಾಗೌರಿಯು ಶಿರಸಹಿತವಾಗಿ ಕೆತ್ತಲ್ಪಟ್ಟಿದ್ದಾಳೆ. ಈಕೆಯನ್ನು ಶಾಕಾಂಬರಿ, ಸಂತಾನದಾತ್ರಿ, ಪೃಥ್ವಿ, ಅದಿತಿ ಎಂದು ಮುಂತಾಗಿ ವಿದ್ವಾಂಸರು ಗುರುತಿಸುತ್ತಾರೆ. ಮಧ್ಯಕಾಲೀನ ಕಾಲಘಟ್ಟದಲ್ಲಿ ಹೆಚ್ಚು ಪ್ರಚಲಿತಗೊಂಡ ಈ ಶಿಲ್ಪಗಳ ರಚನೆಯು ಯಲಹಂಕ ನಾಡಪ್ರಭುಗಳ ಕಾಲಾವಧಿಯಲ್ಲಿಯೂ ಮುಂದುವರೆದಿರುವುದು ಲಕ್ಷ್ಯಾರ್ಹ ಸಂಗತಿಯಾಗಿದೆ.

## 6.3 ಕೋಟೆಗಳು

ರಾಜ್ಯಗಳು ಉದಯಿಸುವ ಪೂರ್ವದಲ್ಲಿ ಜನರು ಚಿಕ್ಕ ಚಿಕ್ಕ ಗ್ರಾಮಗಳಲ್ಲಿ ವಾಸಿಸುತ್ತಿದ್ದರು. ಅವರು ತಮ್ಮನ್ನು ಮತ್ತು ತಮ್ಮ ಸಂಪತ್ತು ಎಂದು ಭಾವಿಸಿದವುಗಳನ್ನು ಸಂರಕ್ಷಿಸಿಕೊಳ್ಳಲು ತಾವು ನೆಲೆನಿಂತ ಪ್ರದೇಶದ ಸುತ್ತಲೂ ಎತ್ತರವಾದ ತಡೆಗೋಡೆಗಳನ್ನು ನಿರ್ಮಿಸಿಕೊಂಡಿದ್ದರು. ಇದನ್ನು ಇತಿಹಾಸಕಾರರು 'ಸುತ್ತುಗೋಡೆ' ಅಥವಾ 'ರಕ್ಷಣಾ ಗೋಡೆ' ಅಥವಾ 'ಕಾವಲು ಗೋಡೆ' ಎಂದೆಲ್ಲ ಗುರುತಿಸುತ್ತಾರೆ. ಇವುಗಳೇ ಮುಂದೆ ರಾಜ್ಯಗಳು ಅಥವಾ ನಾಡುಗಳು ರೂಪುಗೊಂಡ ಹಂತದಲ್ಲಿ ಕೋಟೆಗಳಾಗಿ ವಿಕಾಸ ಹೊಂದಿದವು.

ಕೋಟೆಗಳನ್ನು ಕುರಿತು ಭಾರತೀಯ ಪ್ರಾಚೀನ ಕೃತಿಗಳಾದ ಕೌಟಿಲ್ಯನ 'ಅರ್ಥಶಾಸ್ತ್ರ', 'ಮನುಸ್ಮೃತಿ', 'ಶುಕ್ರನೀತಿಸಾರ', 'ಮಾನಸಾರ', 'ಮಯಮತ', ಮೊದಲಾದ ಕೃತಿಗಳಲ್ಲಿ ವಿವರಗಳಿವೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ನಾಲ್ಕು ಪ್ರಕಾರದ ಕೋಟೆಗಳ ವಿವರಗಳಿವೆ. ಅವುಗಳೆಂದರೆ:[9]

1. ಔದಕ : ಆಳವಾದ ನದಿ ಅಥವಾ ನೀರಿನಿಂದ ಆವೃತ್ತವಾದ ಭೂ ಪ್ರದೇಶ.
2. ಪಾರ್ವತ: ಕಲ್ಲುಬಂಡೆ ಅಥವಾ ದೊಡ್ಡ ಗುಹೆಯಾಗಿರುವುದು.
3. ಧಾನ್ವನ: ಹುಲ್ಲು ನೀರುಗಳಿಲ್ಲದ / ಮರುಭೂಮಿಯಾದ ಪ್ರದೇಶ.
4. ವನದುರ್ಗ: ಕುರುಚಲುಗಿಡಗಳಿಂದ ತುಂಬಿರುವ, ಪ್ರವೇಶಿಸಲಾಗದ ದುರ್ಗ

‘ಮನುಸ್ಮೃತಿ’ಯಲ್ಲಿ ಕೋಟೆಯನ್ನು ಕಟ್ಟುವ ಸ್ಥಳ, ಕಟ್ಟಲು ಬಳಸುವ ಸಾಮಗ್ರಿ ಮತ್ತು ಸಂರಕ್ಷಣಾ ವಿಧಾನಗಳ ಆಧಾರದ ಮೇಲೆ ಕೋಟೆಗಳನ್ನು ಆರು ಪ್ರಕಾರಗಳಲ್ಲಿ ವಿಂಗಡಿಸಲಾಗಿದೆ.[10]

1. ಧನ್ವದುರ್ಗ: ಮರುಭೂಮಿಯಿಂದ ಆವೃತ್ತವಾಗಿರುವ ಕೋಟೆ.
2. ಮಹಿದುರ್ಗ: ಕಲ್ಲು ಮತ್ತು ಇಟ್ಟಿಗೆಯಿಂದ ನಿರ್ಮಿಸಿರುವ ಕೋಟೆ.
3. ಜಲದುರ್ಗ: ಆಳವಾದ ನೀರಿನಿಂದ ಸುತ್ತುವರಿಯಲ್ಪಟ್ಟಿರುವ ಕೋಟೆ.
4. ವೃಕ್ಷದುರ್ಗ: ದಟ್ಟವಾದ ಕಾಡಿನಿಂದ ಆವೃತ್ತವಾದ ಕೋಟೆ.
5. ನರದುರ್ಗ: ಚತುರ್ಬಲಗಳಿಮದ ರಕ್ಷಿಸಲ್ಪಟ್ಟ ಕೋಟೆ.
6. ಗಿರಿದುರ್ಗ: ಕಡಿದಾದ ಬೆಟ್ಟದ ಮೇಲೆ ನಿರ್ಮಿಸಿರುವ ಕೋಟೆ.

ಇವುಗಳಲ್ಲಿ ಗಿರಿದುರ್ಗವೇ ಉತ್ತಮವಾದುದು. ಏಕೆಂದರೆ, ಪರ್ವತವನ್ನು ಹತ್ತಿ ಯುದ್ಧ ಮಾಡುವುದು ಕಠಿಣ. ಅಲ್ಲದೆ ಗಿರಿಯ ಮೇಲೆ ನಿಂತು ಕೆಳಗಿನ ಶತ್ರುಗಳನ್ನು ಕೊಲ್ಲುವುದು ಸುಲಭ. ಮನುಸ್ಮೃತಿಯ ಪ್ರಕಾರ ಒಬ್ಬ ಬಿಲ್ಲುಗಾರ ಹೊರಗಿನ ನೂರು ಯೋಧರೊಂದಿಗೆ ಸೆಣೆಸುವನು. ಅದೇ ರೀತಿ ನೂರು ಮಂದಿ ಧನುರ್ಧಾರಿಗಳು ಹತ್ತುಸಾವಿರ ಮಂದಿ ಯೋಧರೊಂದಿಗೆ ಸೆಣೆಸಬಲ್ಲರು. ಆದ್ದರಿಂದ ರಾಜನಿಗೆ ರಕ್ಷಣೆಯ ದೃಷ್ಟಿಯಿಂದ ಕೋಟೆ ಅತ್ಯಗತ್ಯ.

‘ಶುಕ್ರನೀತಿಸಾರ’ವು ಒಂಬತ್ತು ಬಗೆಯ ಕೋಟೆಗಳ ವಿವರಗಳನ್ನು ನೀಡುತ್ತದೆ. ಅವುಗಳೆಂದರೆ:[11]

1. ಐರಿಣ: ಹಳ್ಳ, ಮುಳ್ಳು, ಕಲ್ಲುಗಳಿಂದ ಆವೃತ್ತವಾಗಿರುವುದು.
2. ಪರಿಖ: ಆಳವಾದ ಕಂದಕಗಳಿಂದ ಸುತ್ತುವರಿಯಲ್ಪಟ್ಟಿರುವುದು.
3. ಪರಿಘ: ಕಲ್ಲು, ಇಟ್ಟಿಗೆ / ಮಣ್ಣಿನ ಎತ್ತರವಾದ ಗೋಡೆಗಳಿಮದ ಆವೃತ್ತವಾಗಿರುವುದು.
4. ವನ: ದಟ್ಟವಾದ ಅರಣ್ಯದಲ್ಲಿ ಮುಳ್ಳುಮರಗಳಿಂದ ಕೂಡಿರುವುದು.
5. ಧನ್ವ: ನೀರಿಲ್ಲದ ಒಣ ಭೂಮಿಯಲ್ಲಿರುವುದು.
6. ಜಲ: ನೀರಿನಿಂದ ಸುತ್ತುವರಿಯಲ್ಪಟ್ಟಿರುವುದು.

7. ಗಿರಿ: ಬೆಟ್ಟದ ಮೇಲಿರುವುದು.

8. ಸೈನ್ಯ: ಶಸ್ತ್ರಸಜ್ಜಿತ ಸದೃಢ ಸೈನಿಕರಿಂದ ಸಂರಕ್ಷಿಸಲ್ಪಟ್ಟಿರುವುದು.

9. ಸಹಾಯ: ಬಂಧುಗಳು ಮತ್ತು ಸ್ನೇಹಿತರ ಮನೆಗಳಿಂದ ಆವೃತ್ತವಾಗಿರುವುದು

ಅದೇ ರೀತಿಯಲ್ಲಿ 'ಮಾನಸಾರ'ದಲ್ಲಿ ಕೋಟೆಯಿರುವ ಊರುಗಳನ್ನನುರಿಸಿ ಅವುಗಳನ್ನು ಎಂಟು ವಿಧಗಳಲ್ಲಿಯೂ ಮತ್ತು ಸೈನಿಕ ವಾಸ್ತುದೃಷ್ಟಿಯಿಂದ ಕೋಟೆಗಳನ್ನು ಏಳು ವಿಧಗಳಲ್ಲಿಯೂ ವಿಂಗಡಿಸಿರುವುದನ್ನು ಕಾಣಬಹುದು.

ಯಲಹಂಕ ನಾಡಪ್ರಭುಗಳ ಕಾಲಘಟ್ಟದ ಕೋಟೆಗಳು ಸಾಮಾನ್ಯವಾಗಿ ನೆಲದುರ್ಗ ಮತ್ತು ಗಿರಿದುರ್ಗಗಳಾಗಿವೆ. ಬೆಂಗಳೂರು, ಯಲಹಂಕ, ದೇವನಹಳ್ಳಿ, ಮಾಗಡಿ ಕೋಟೆಗಳು ನೆಲದುರ್ಗದ ಕೋಟೆಗಳಾದರೆ, ಆವತಿ, ಸಾವನದುರ್ಗ, ಹುಲಿಯೂರುದುರ್ಗ, ಹುತ್ರಿದುರ್ಗ, ರಾಮಗಿರಿ, ಭೈರವನದುರ್ಗ ಕೋಟೆಗಳು ಗಿರಿದುರ್ಗಗಳಾಗಿವೆ. ಇಲ್ಲಿನ ಕೋಟೆಗಳು ದಕ್ಷಿಣ ಕರ್ನಾಟಕದ ಇತರೆಡೆಗಳಲ್ಲಿ ಕಂಡುಬರುವಂತೆ ಸಾಂಪ್ರದಾಯಿಕ ರಕ್ಷಣಾವ್ಯವಸ್ಥೆಯನ್ನು ಹೊಂದಿವೆ. ಈ ಕೋಟೆಗಳ ದ್ವಾರಗಳು, ಪಹರೆಕಟ್ಟೆಗಳು, ಕುಂಭಿಗಳು ಮತ್ತಿತರ ಕೋಟೆಯ ಅಂಗಗಳು ವಿಜಯನಗರ ಕಾಲದ ರಚನೆಗಳನ್ನು ಹೆಚ್ಚಾಗಿ ಹೋಲುತ್ತವೆ. ನಾಡಪ್ರಭುಗಳ ಆಡಳಿತದ ಉತ್ತರೋತ್ತರ ಕಾಲಘಟ್ಟದಲ್ಲಿ ಈ ಕೋಟೆಗಳನ್ನು ಯುದ್ಧದಲ್ಲಿ ಬಳಸುತ್ತಿದ್ದ ಉಪಕರಣಗಳ ಅವಶ್ಯಕತೆಗೆ ಅನುಗುಣವಾಗಿ ಹಾಗೂ ಮದ್ದು ಗುಂಡುಗಳ ಬಳಕೆಗೆ ಅನುಗುಣವಾಗಿ ರಚನಾತ್ಮಕವಾಗಿ ಆಧುನಿಕರಣಗೊಳಿಸಿರುವುದನ್ನು ಗಮನಿಸಬಹುದು. ಇದಕ್ಕೆ ಸಾವನದುರ್ಗ, ಬಸವನದುರ್ಗ ಹಾಗೂ ಮಾಗಡಿ ಕೋಟೆಗಳನ್ನು ಉದಾಹರಿಸಬಹುದು.

### 6.3.1 ನಾಡಪ್ರಭುಗಳ ಕಾಲದ ಕೋಟೆಯ ಲಕ್ಷಣ

ಸಾಮಾನ್ಯವಾಗಿ ದಕ್ಷಿಣ ಕರ್ನಾಟಕದ ವಿಜಯನಗರ ಪೂರ್ವ ಕಾಲದ ಕೋಟೆಗಳಲ್ಲಿ ಮದ್ದಿನ ಮನೆಗಳು, ಇಳಿಜಾರಿನ ಕುಂಬಿಗೋಡೆಗಳು, ಪಹರೆಕಟ್ಟೆಗಳು, ಮಿನಾರೇಟ್‌ಗಳು ಕಂಡುಬರುತ್ತಿರಲಿಲ್ಲ. ಈ ಎಲ್ಲಾ ಹೊಸಬಗೆಯ ರಕ್ಷಣಾ ತಂತ್ರಜ್ಞಾನಗಳನ್ನು ಯುದ್ಧಗಳಲ್ಲಿ ಮದ್ದು ಗುಂಡುಗಳ ಬಳಕೆ ಬಂದ ನಂತರ ಅಳವಡಿಸಿಕೊಳ್ಳಲಾಗಿದೆ. ಇದಕ್ಕೆ ಮೊದಲ ಕೋಟೆಯ ರಚನೆಯನ್ನು ಗುರುತಿಸುವ ಏಕೈಕ ವಿಧಾನ ಎಂದರೆ– ಸಾಂಪ್ರದಾಯಿಕ ಕೊತ್ತಳಗಳ ರಚನೆ ಹಾಗೂ ಒಳಾಂಗಣದ ಹಳೆಯ ದೇವಾಲಯ. ಎಸ್.ಕೆ. ಅರುಣಿ ಅವರ ಪ್ರಕಾರ:[12] "ಕ್ರಿ.ಶ. 18ನೆಯ ಶತಮಾನ ಕಾಲಾವಧಿಯಲ್ಲಿ ದಕ್ಷಿಣ ಕರ್ನಾಟಕದ ಕೋಟೆಗಳಲ್ಲಿ ಫಿರಂಗಿಗಳನ್ನು ಬಳಕೆಗೆ

ತರಲಾಯಿತು. ಉದ್ದನೆಯ ತೋಪುಗಳನ್ನು ಬಳಸಲು ವರ್ತುಲಾಕಾರದ ಕೊತ್ತಳಗಳು ತುಂಬಾ ಅನುಕೂಲಕರವಾಗಿದ್ದವು. ಈ ಕಾರಣಗಳಿಂದಾಗಿ ಕೆಲವು ಕಡೆಗಳಲ್ಲಿ ವರ್ತುಲಾಕಾರದ ಕೊತ್ತಳಗಳ ಕೋಟೆಗಳನ್ನು ಹೊಸದಾಗಿ ನಿರ್ಮಿಸಿದ ಉದಾಹರಣೆಗಳಿವೆ. ಈಗಾಗಲೇ ಅಸ್ತಿತ್ವದಲ್ಲಿದ್ದ ಕೋಟೆಗಳನ್ನು ಹಾಗೆಯೇ ಉಳಿಸಿಕೊಂಡು ಅವುಗಳಲ್ಲಿ ಕೆಲವು ಮಾರ್ಪಾಡುಗಳನ್ನು ಕೈಗೊಂಡು ಬಳಸಲಾಯಿತು. ಇನ್ನೂ ಕೆಲವು ಕಡೆಗಳಲ್ಲಿ ಚೌಕಾಕಾರದ ಕೊತ್ತಳಗಳನ್ನು ವರ್ತುಲಾಕಾರದ ಕೊತ್ತಳಗಳನ್ನಾಗಿ ಮಾರ್ಪಡಿಸಲಾಯಿತು. ಈ ರೀತಿಯ ಬದಲಾವಣೆಗಳನ್ನು ಮುಖ್ಯವಾಗಿ ನೆಲದುರ್ಗದಂತಹ ಕೋಟೆಗಳಲ್ಲಿ ಕಾಣುತ್ತೇವೆ" ಎಂದಿದ್ದಾರೆ. ನಾಡಪ್ರಭುಗಳ ಕಾಲದ ಗಿರಿದುರ್ಗಗಳನ್ನು ಗಮನಿಸಿದಾಗ, ಕೋಟೆಯ ದ್ವಾರಗಳು ಒಂದೇ ನೇರಕ್ಕೆ ಇರುವುದಿಲ್ಲ. ಅವುಗಳು ಅಂಕುಡೊಂಕಾದ ರೀತಿಯಲ್ಲಿರುತ್ತವೆ. ಸಾಮಾನ್ಯವಾಗಿ ಸ್ವಾಭಾವಿಕ ಬಂಡೆಯಲ್ಲಿ ಪಶ್ಚಿಮಕ್ಕೆ ಮುಖಮಾಡಿರುವ ಗಣೇಶನ ಉಬ್ಬುಶಿಲ್ಪಗಳು ಕಂಡುಬರುತ್ತವೆ.

### 6.3.2 ಸಂಪತ್ತಿನ ಸಂಗ್ರಹ ಕೇಂದ್ರವಾಗಿ ಕೋಟೆಗಳು

ಭೌಗೋಳಿಕವಾಗಿ ಬೆಂಗಳೂರು ಒಂದು ಆಯಕಟ್ಟಿನ ಜಾಗದಲ್ಲಿದೆ ಎಂಬುದನ್ನು ಹಿಂದಿನ ಅಧ್ಯಾಯಗಳಲ್ಲೆ ಅರಿತಿದ್ದೇವೆ. ಇದರ ಅರಿವಿದ್ದ ಹಿರಿಯ ಕೆಂಪೇಗೌಡನು ಬೆಂಗಳೂರು ಕೋಟೆಯ ಒಳಗೆ ಹಲವಾರು ಪೇಟೆಗಳನ್ನು ನಿರ್ಮಿಸಿ ಅಲ್ಲಿ ವರ್ತಕರಿಗೆ ಮತ್ತು ಕುಶಲಕರ್ಮಿಗಳಿಗೆ ನೆಲೆಸಲು ಅವಕಾಶ ಕಲ್ಪಿಸಿದನು. ಬೆಂಗಳೂರು ಪೇಟೆಯ ಒಳಗಡೆ ಹೆಚ್ಚುತ್ತಿದ್ದ ವಾಣಿಜ್ಯ ಚಟುವಟಿಕೆಗಳಿಗೆ ಸಹಕಾರಿಯಾಗಿ ಪೇಟೆಯ ಹೊರಗೆ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿನ ಕೆರೆಗಳನ್ನು ಜೀರ್ಣೋದ್ಧಾರಗೊಳಿಸಿ ಆ ಮೂಲಕ ಕೃಷಿ ಕಾರ್ಯಗಳು ಉತ್ತೇಜನಗೊಂಡವು. ಇದರಿಂದ ಬೆಂಗಳೂರು ಪರಿಸರದಲ್ಲಿಯೇ ಸಂಪತ್ತಿನ ಕ್ರೋಢೀಕರಣವಾಗತೊಡಗಿತು. ಹೆಚ್ಚಾದ ಸಂಪತ್ತಿನ ನೆರವಿನಿಂದ ನಾಡಿನ ಕೃಷಿ, ವ್ಯಾಪಾರ, ಕಲೆ ಮತ್ತು ವಾಸ್ತುಶಿಲ್ಪಗಳಿಗೆ ಇಂಬು ದೊರೆಯಿತೇನೋ ನಿಜ. ಹಾಗಾದರೆ ಈ ಸಂಪತ್ತಿನ ಸಂಗ್ರಹ ಪ್ರಧಾನವಾಗಿ ಎಲ್ಲಿ ನಡೆಯುತ್ತಿತ್ತು ಎಂಬ ಕೌತುಕ ಮೂಡುತ್ತದೆ. ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಕಂಡುಕೊಂಡ ಹೊಸ ಸಂಗತಿಯೆಂದರೆ ಕೆಂಪೇಗೌಡನ ಆಶ್ರಯದಲ್ಲಿ ನಿರ್ಮಾಣವಾದ ದೇಗುಲಗಳಲ್ಲಿ ದೊಡ್ಡ ಬಸವಣ್ಣನ ಆಲಯವು ಅತ್ಯಂತ ಪ್ರಧಾನವಾದುದು.[13] ಹಾಗಾಗಿ ಬೆಂಗಳೂರು ಪೇಟೆಯ ಮತ್ತು ಪೇಟೆಯನ್ನು ಒಳಗೊಂಡಂತಹ ಸುತ್ತಮುತ್ತಲಿನ ವಹಿವಾಟುಗಳಿಗೆ ಸಂಬಂಧಿಸಿದ ರಾಜಾದಾಯದ ಸಂಗ್ರಹ ಮತ್ತು ಅದರ ಸಂಬಂಧಿತವಾದ ಪ್ರಕ್ರಿಯೆಗಳಿಗೆ ದೊಡ್ಡ ಬಸವಣ್ಣನ ದೇಗುಲವು ಕೇಂದ್ರವಾಗಿದ್ದಿರಬಹುದು. ಈ ಆಲಯವು

ಸಂಪತ್ತಿನ ಸಂಗ್ರಹ ಕೇಂದ್ರವಾಗಿದ್ದ ಕಾರಣದಿಂದ ಸಹಜವಾಗಿಯೇ ಕಳ್ಳಕಾಕರ ಹಾವಳಿ ಇದ್ದಿರಲೂ ಬಹುದು. ಇಂತಹ ದಾಳಿಗಳ ಸಂದರ್ಭದಲ್ಲಿ ಕಳ್ಳರು ದರೋಡೆ ಕೋರರೊಂದಿಗೆ ಹೋರಾಡಿ ಮಡಿದ ವೀರರ ಸ್ಮಾರಕವಾಗಿ ವೀರಗಲ್ಲುಗಳನ್ನು ಈ ದೊಡ್ಡ ಬಸವಣ್ಣ ಗುಡಿಯ ಪರಿಸರದಲ್ಲಿಯೇ  ನೆಟ್ಟಿರುವುದನ್ನು ಕಾಣಬಹುದು. ಇದೇ ಆಲಯದ ಆವರಣದಲ್ಲಿಯೇ ಅಲ್ಲಲ್ಲಿಯೇ ಇದ್ದ ವೀರಗಲ್ಲುಗಳನ್ನು ಪ್ರಸ್ತುತ ಒಂದು ಕಡೆ ಜೋಡಿಸಿರುವುದನ್ನು ಗಮನಿಸಬಹುದು. ಇಂದಿಗೂ ಈ ವೀರಗಲ್ಲುಗಳಿಗೆ ಪೂಜೆಗಳು ಸಲ್ಲುತ್ತಿವೆ. ಏನೂ ಇರದೆ ಹೋಗಿದ್ದರೆ ಇಲ್ಲಿ ಹೋರಾಟ ಮಾಡಿ ಮಡಿಯಬೇಕಾದ ಅನಿವಾರ್ಯತೆ ತಾನೇ ಏನಿತ್ತು? ಎಂಬ ಪ್ರಶ್ನೆ ಮೂಡುತ್ತದೆ. ಮತ್ತೊಂದು ಸಾಧ್ಯತೆಯ ಬಗೆಗೂ ಯೋಚಿಸಬೇಕಾಗುತ್ತದೆ. ವೀರಗಲ್ಲುಗಳನ್ನು ದೇವಾಲಯಗಳ ಆವರಣದಲ್ಲಿಯೇ ಗುಂಪು ಗುಂಪಾಗಿ ಕಾಣಬಹುದು. ಉದಾ. ಬೆಂಗಳೂರಿನ ಮಲ್ಯ ಆಸ್ಪತ್ರೆಯ ಹಿಂಭಾಗದಲ್ಲಿರುವ ಸಂಪಿಗೆ ಬೀರೇಶ್ವರ ದೇವಾಲಯದ ಆವರಣದಲ್ಲಿ ನೂರಾರು ವೀರಗಲ್ಲುಗಳಿವೆ. ಬಹುಶಃ ಸಂಪತ್ತನ್ನು ದೋಚಲು ಕಳ್ಳಕಾಕರು ಬಂದ ಸಂದರ್ಭದಲ್ಲಿ ನಡೆದ ಸಂಘರ್ಷದಲ್ಲಿ ಮಡಿದ ವೀರರ ಸ್ಮರಣಾರ್ಥವಾಗಿ ದೇವಾಲಯಗಳ ಸನ್ನಿದಿಯಲ್ಲಿ ಈ ವೀರಗಲ್ಲುಗಳನ್ನು ಹಾಕಿಸಿದ್ದಿರಬಹುದು. ಅಲ್ಲಿಯೇ ಹಾಕಿಸುವುದರ ಅರ್ಥ ಕೂಡ ಮುಖ್ಯವಾಗುತ್ತದೆ. ಏನೆಂದರೆ, ವೀರನು ದೇವರ ಸನ್ನಿದಿ ಸೇರಿದ ಎಂಬ ಅರ್ಥವನ್ನು ಸೂಚಿಸುವುದಾದರೆ, ಮತ್ತೊಂದು ಅಂಶ ದೇವಾಲಯಗಳ ಸನ್ನಿದಿಯಲ್ಲಿದ್ದರೆ ನಿತ್ಯ ಪೂಜೆಗೊಳ್ಳುತ್ತಿರುತ್ತವೆ ಎಂಬುದೂ ಇರಬಹುದಾಗಿದೆ.

ಕೋಟೆಗಳ ಜೊತೆಜೊತೆಗೆ ಪೇಟೆಗಳು ನಿರ್ಮಾಣವಾಗಿರುವುದನ್ನು ನಾಡಪ್ರಭುಗಳ ಕಾಲದಲ್ಲಿ ನೋಡಬಹುದು. ಕೋಟೆಗಳು ನಿರ್ಮಾಣವಾದ ಕೊಡಲೇ ಪೇಟೆಗಳು ಅನಿವಾರ್ಯವಾಗುತ್ತಿತ್ತು. ಕಾರಣವಿಷ್ಟೆ, ಸಾಮಾನ್ಯವಾಗಿ ಕೋಟೆಗಳು ಸುಂಕದ ಕಟ್ಟೆಗಳಾಗಿರುತ್ತಿದ್ದವು. ಈ ಕಟ್ಟೆಗಳಲ್ಲಿ ಸಂಗ್ರಹವಾಗುವ ವಸ್ತುಗಳ ರೂಪದ ಸುಂಕವನ್ನು ಸ್ಥಳೀಯ ಪೇಟೆಗಳಲ್ಲಿ ಮಾರಾಟ ಮಾಡಿ ನಗದಾಗಿ ಪರಿವರ್ತಿಸಿಕೊಳ್ಳುತ್ತಿದ್ದರು. ಅಲ್ಲದೆ, ಕೋಟೆಯು ಸೈನಿಕರು, ಅಧಿಕಾರಿಗಳು ಮತ್ತು ರಾಜಪರಿವಾರದವರ ಆಶ್ರಯ ತಾಣವಾಗಿರುತ್ತಿತ್ತು. ಅವರ ದಿನನಿತ್ಯದ ಬಳಕೆಗೆ ಬೇಕಾದ ಹಾಲು, ಮೊಸರು, ದವಸ, ದಾನ್ಯಗಳನ್ನು ಪೂರೈಸಲು ಪೇಟೆಗಳ ಅಗತ್ಯವಿರುತ್ತಿತ್ತು. ಅದಕ್ಕಾಗಿ ಪೇಟೆಗಳ ನಿರ್ಮಾಣವಾಗುವುದನ್ನು ಗುರುತಿಸಬಹುದು.[14] ಈ ರೀತಿಯ ಪೇಟೆಯುಕ್ತ ಕೋಟೆಗಳನ್ನು ದಕ್ಷಿಣ ಕರ್ನಾಟಕದ ನಾಡಪ್ರಭುಗಳ ಕಾಲದ ಎಲ್ಲಾ ಕೋಟೆಗಳ ಪರಿಸರದಲ್ಲಿಯೂ ಕಾಣಬಹುದು. ಉದಾ.: ಬೆಂಗಳೂರು (ವಿವಿಧ ಬಗೆಯ ಪೇಟೆಗಳು), ಮಾಗಡಿ (ಹಳೆಪೇಟೆ, ಹೊಸಪೇಟೆ, ಹೊಂಬಾಳಮ್ಮನ ಪೇಟೆ), ಹುಲಿಯೂರುದುರ್ಗ

(ಹಳೆಪೇಟೆ, ಹೊಸಪೇಟೆ), ಹುತ್ರಿದುರ್ಗ (ಸಂತೆಪೇಟೆ), ಭೈರವನದುರ್ಗ (ಹಳೆಪೇಟೆ), ಸಾವನದುರ್ಗ (ನೆಲಪಟ್ಟಣ). ಇವುಗಳು ಸ್ಥಳೀಯ ವಾಣಿಜ್ಯ ಆಕರ್ಷಣೆಯ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು.

### 6.3.3 ಉಗ್ರಾಣ ವ್ಯವಸ್ಥೆಯ ಕೇಂದ್ರ

ವೇಮಗಲ್ ಸೋಮಶೇಖರ್ ಅವರು ಬಸವನಗುಡಿಯ ದೊಡ್ಡ ಬಸವಣ್ಣನ ಆಲಯದ ಆವರಣದಲ್ಲಿರುವಂತಹ ಬಂಡೆಗಳ ಮೇಲಿರುವ ಎರಡು ಶಾಸನಗಳನ್ನು ಬೆಳಕಿಗೆ ತಂದಿದ್ದಾರೆ.[15] ಇವುಗಳಲ್ಲಿ ಒಂದು ಶಾಸನವು ನೈಸರ್ಗಿಕವಾಗಿರುವ ಈ ಬಂಡೆಗಳ ಸಮೂಹದಲ್ಲಿ ಒಂದು ಬಂಡೆಗೆ ಕಹಳೆ ಬಂಡೆ ಎಂದು ಪ್ರಸಿದ್ದವಾಗಿರುವ ಬಂಡೆಯ ಮೇಲಿನದು. ಈ ಶಾಸನದಲ್ಲಿ "ದೀವಟಿಗೆ ಸೋಮನ ಕುಲಗುರುಲಿಂಗ" ಎಂಬ ಪಾಠವಿದೆ. ಈ ಪಠ್ಯದ ಲಿಪಿ ಲಕ್ಷಣದ ಆಧಾರದ ಮೇಲೆ ಈ ಶಾಸನವು 16ನೆಯ ಶತಮಾನದ್ದೆಂದು ಗುರುತಿಸಿದ್ದಾರೆ. ಇನ್ನೊಂದು ಶಾಸನವು ಬಸವಣ್ಣನ ದೇವಾಲಯದ ಹೊರಭಾಗದಲ್ಲಿನ ಮೆಟ್ಟಿಲುಗಳ ಬಲಭಾಗದಲ್ಲಿನ ಒಂದು ದೊಡ್ಡ ಬಂಡೆಯ ಮೇಲಿನದು. ಈ ಶಾಸನವು ವೃಷಭಾವತಿ ನದಿಯು ಈ ದೊಡ್ಡ ಬಸವಣ್ಣನ ಪಾದದಲ್ಲಿ ಹುಟ್ಟುತ್ತದೆ ಎಂಬ ಮಾಹಿತಿಯನ್ನು ನೀಡುತ್ತದೆ. ಈ ಎರಡು ಶಾಸನಗಳಲ್ಲಿ ಸದ್ಯಕ್ಕೆ ಪ್ರಕೃತ ಅಧ್ಯಯನದ ವೇಳೆಯಲ್ಲಿ ದೀವಟಿಗೆ ಸೋಮನ ಶಾಸನ ಬಹಳ ಮುಖ್ಯವೆನಿಸುತ್ತದೆ. ಈಗಾಗಲೇ ವೇಮಗಲ್ ಸೋಮಶೇಖರ್‌ರವರು ಇಲ್ಲಿನ ಬಂಡೆಗಳ ಮೇಲೆಲ್ಲ ತಟ್ಟೆಯಾಕಾರದ ಕುಳಿಗಳು ಇದ್ದು ಅವುಗಳ ನಡುವಿನಿಂದ ದೀಪವನ್ನು ಹೊತ್ತಿಸುತ್ತಿದ್ದುದರ ಸಾಧ್ಯತೆಯ ಬಗ್ಗೆ ತಿಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ದೀವಟಿಗೆ ಸೋಮನ ವಿಚಾರವನ್ನು ಗಮನಿಸಿಬೇಕು. ಈ ಬಸವಣ್ಣನು ದೀವಟಿಗೆ ಹಿಡಿಯುವ ಸೋಮನ ಮನೆಯ ಕುಲದೈವವಾಗಿ, ಗುರುವಾಗಿದ್ದನು. ಈ ಅಂಶವನ್ನು ಗಮನಿಸಿದರೆ ದೀವಟಿಗೆ ಸೋಮನು ಬಸವಣ್ಣನ ಒಕ್ಕಲಿಗೆ ಸೇರಿದ ಸಮುದಾಯದವನೆ ಎಂಬುದು ಖಚಿತಗೊಳ್ಳುತ್ತದೆ.

ಜೊತೆಗೆ ಇನ್ನೊಂದು ಲಕ್ಷ್ಯಾರ್ಹ ವಿಚಾರವೆಂದರೆ, ಇಲ್ಲಿ ದೀಪಗಳನ್ನು ಇಷ್ಟೊಂದು ಪ್ರಮಾಣದಲ್ಲಿ ಹೊತ್ತಿಸುತ್ತಿದ್ದುದು ಯಾವ ಕಾರಣಕ್ಕಾಗಿ ಎಂಬ ಸಂದೇಹ ಮೂಡುತ್ತದೆ. ದೊಡ್ಡ ಬಸವಣ್ಣನ ದೇಗುಲಕ್ಕೂ ಕಡಲೆಕಾಯಿ ಪರಿಷೆಗೂ ಐತಿಹ್ಯಗಳ ಪ್ರಕಾರ ಸಂಬಂಧವಿದೆ. ದೊಡ್ಡ ಬಸವಣ್ಣನ ಗುಡಿಗೂ ಕೃಷಿ ಸಂಸ್ಕೃತಿಗೂ ಬಲವಾದ ಸಂಬಂಧವಿದೆ. ಆದರೆ ಇದರಾಚೆಗೆ ಇನ್ನು ಒಂದು ಹೆಜ್ಜೆ ಮುಂದಿರಿಸಿ ಯೋಚಿಸುವುದಾದರೆ, ಈ ಪ್ರದೇಶದ ಪ್ರಾಚೀನ ಹೆಸರು ಸುಂಕೇನಹಳ್ಳಿ. ಬೆಂಗಳೂರು–ಮೈಸೂರು ಮಾರ್ಗದ ಹಳೆಯ ರಸ್ತೆ ಈ ಮಾರ್ಗವಾಗಿಯೇ

ಸಾಗುತ್ತಿತ್ತು. ಬಹುಶಃ ಬೆಂಗಳೂರು ನಗರವನ್ನು ಪ್ರವೇಶಿಸುವ ಮುನ್ನ ಇಲ್ಲಿ ಸುಂಕವನ್ನು ಸಂಗ್ರಹ ಮಾಡುತ್ತಿದ್ದರೆಂದು ತೋರುತ್ತದೆ. ಸುಂಕವು ನಗದು ರೂಪದಲ್ಲಿ ಮಾತ್ರವಲ್ಲ, ವಸ್ತುಗಳ ರೂಪದಲ್ಲಿಯೂ ಸಂಗ್ರಹವಾಗುತ್ತಿತ್ತು. ಸಂಗ್ರಹ ಸುಂಕ ರೂಪದ ದಾಸ್ತಾನುಗಳನ್ನು ಈ ಆಲಯದ ಪರಿಸರದಲ್ಲಿಯೇ ಮಾಡುತ್ತಿದ್ದಿರಬಹುದು. ಈ ದಾಸ್ತಾನು ಅಥವಾ ಉಗ್ರಾಣಗಳ ರಕ್ಷಣೆಗಾಗಿ ಕಾವಲು ಕಾಯುವ ಸೋಮನು ಪ್ರಮುಖ ದೀವಟಿಗನಾಗಿದ್ದು, ಈ ಶಾಸನ ಹಾಕಿಸಿದಂತೆ ತೋರುತ್ತದೆ. ಹಾಗಾಗಿ ರಾತ್ರಿಯ ವೇಳೆಯಲ್ಲಿ ಇಲ್ಲಿನ ಬೆಳಕಿನ ವ್ಯವಸ್ಥೆಗೆಂದು ಇಲ್ಲಿರುವ ಬಂಡೆಗಳ ಮೇಲಿನ ಕುಳಿಗಳಲ್ಲಿ ದೀಪ ಹಚ್ಚಿಡುವ ವ್ಯವಸ್ಥೆ ಮಾಡಿದ್ದರು ಎನಿಸುತ್ತದೆ. ಬೆಂಗಳೂರು ಪರಿಸರದಲ್ಲಿ ಬೇರೆ ಯಾವ ಸ್ಥಳಗಳಲ್ಲಿಯೂ ಈ ಬಗೆಯ ದೀಪ ಹಚ್ಚಿಡುವ ವ್ಯವಸ್ಥೆಗಳಾಗಲೀ, ದೀವಟಿಗರ ವಿಚಾರವಾಗಲೀ ದಾಖಲಾಗದೇ ಈ ದೊಡ್ಡ ಬಸವಣ್ಣನ ಗುಡಿಯ ಆವರಣದಲ್ಲಿ ಮಾತ್ರ ಈ ಸಂಗತಿಗಳು ಉಕ್ತಗೊಂಡಿರುವುದರಿಂದ ಪ್ರಾಯಶಃ ಈ ಆಲಯದ ಪರಿಸರವು ಸೂಕ್ತವಾದ ಉಗ್ರಾಣ ವ್ಯವಸ್ಥೆಯನ್ನು ಹೊಂದಿತ್ತು ಎಂದು ದೃಢವಾಗಿ ಹೇಳಬಹುದಾಗಿದೆ. ಈ ಮೊದಲು ಅಭಿಪ್ರಾಯಿಸಿದಂತೆ, ದೊಡ್ಡ ಬಸವಣ್ಣನ ಆಲಯವು ಸಂಪತ್ತಿನ ಸಂಗ್ರಹ ಕೇಂದ್ರವೂ ಆಗಿದ್ದ ಕಾರಣದಿಂದಲೂ ಇಲ್ಲಿನ ಬಂಡೆಗಳ ಮೇಲಿರುವ ದೀಪ ಹಚ್ಚಿಡಲು ಅನುಕೂಲವಾದ ಕುಳಿಗಳಲ್ಲಿ ಮುಖ್ಯವಾಗಿ ಬೆಳಕಿನ ವ್ಯವಸ್ಥೆಗೆ ಅವಕಾಶ ಕಲ್ಪಿಸಿರುವುದನ್ನು ಗಮನಿಸಬಹುದು. ಜೊತೆಗೆ ಇದೇ ಪರಿಸರದಲ್ಲಿರುವ ಬೇಡರ ಕಣ್ಣಪ್ಪನ ಆಲಯವನ್ನು ನಿರ್ಮಿಸಿದ ಗುಜ್ಜಲನಾಯಕನು ಸ್ಥಳೀಯವಾಗಿ ಇದೇ ಪರಿಸರದ ರಕ್ಷಣೆಗೆಂದು ವ್ಯವಸ್ಥೆಮಾಡಿದ್ದ ಬೇಡ ಪಡೆಯ ನಾಯಕನೂ ಆಗಿದ್ದನು. ರಕ್ಷಣೆಯ ಜವಾಬ್ದಾರಿಯನ್ನು ಗುಜ್ಜಲನಾಯಕನ ನೇತೃತ್ವದ ಬೇಡಪಡೆಯು ವಹಿಸಿದ್ದುದರಿಂದ ಈ ಪರಿಸರವು ಒಂದು ಸ್ಥಳೀಯವಾದ ಸೇನಾ ಶಿಬಿರವನ್ನೂ ಹೊಂದಿದ್ದಿತ್ತೆಂದು ಊಹಿಸಬಹುದು.

ಬೆಂಗಳೂರು ಪರಿಸರದಲ್ಲಿಯೇ ಹಿರಿಯ ಕೆಂಪೇಗೌಡನ ಅವಧಿಯಲ್ಲಿ ನಿರ್ಮಾಣವಾದ ಪ್ರಧಾನವಾದ ಆಲಯವೂ ಇದಾಗಿರುವುದರಿಂದ ಧನ ಮತ್ತು ಧಾನ್ಯಗಳ ಸಂಗ್ರಹ ಕೇಂದ್ರವಾಗಿ ಇದು ಸುರಕ್ಷತೆಯ ದೃಷ್ಟಿಯಿಂದ ಪ್ರಧಾನವಾದ ಪಾತ್ರ ವಹಿಸಿತ್ತು ಮತ್ತು ಪ್ರಧಾನವಾದ ಸೇನಾ ಶಿಬಿರವು ಆಗಿತ್ತು ಎಂದು ಪ್ರಕೃತ ಅಧ್ಯಯನವು ಪ್ರಥಮವಾಗಿ ಮುನ್ನೆಲೆಗೆ ತರುತ್ತಿದೆ.

### 6.3.4 ಬೆಂಗಳೂರು ಕೋಟೆ

ಯಲಹಂಕ ನಾಡಪ್ರಭು ಹಿರಿಯ ಕೆಂಪೇಗೌಡನು ಒಂದು ಕೋಟೆ ಮತ್ತು ಪಟ್ಟಣವನ್ನು ನಿರ್ಮಿಸಲು ವಿಜಯನಗರದ ದೊರೆ ಅಚ್ಯುತರಾಯನ ಅನುಮತಿ ಪಡೆದು, 1538ರ ಜನವರಿ

14ರಂದು ಕಾಡನ್ನು ಕಡಿದು ಮಣ್ಣಿನ ಕೋಟೆಯ ತಳಪಾಯವನ್ನು ಶುಭಮುಹೂರ್ತದಲ್ಲಿ ಪ್ರಾರಂಭಿಸಿ, 4 ಬತೇರಿಗಳುಳ್ಳ ಕೋಟೆಯ ನಿರ್ಮಾಣವನ್ನು ಪೂರ್ಣಗೊಳಿಸಿದನು ಎಂದು ಬೆಂಗಳೂರಿನ ಬಖೈರಿನಲ್ಲಿ ದಾಖಲಿಸಿದೆ.[16] ಹೊಸ ಪಟ್ಟಣಕ್ಕೆ ಹಳೆಯ ಹೆಸರಾದ ಬೆಂಗಳೂರು ಎಂದೇ ನಾಮಕರಣ ಮಾಡಿ ಬಹುಸಂಖ್ಯೆಯ ಜನರು ಇಲ್ಲಿ ನೆಲೆಸಲು ಪ್ರೋತ್ಸಾಹಿಸಿ ಈ ಪಟ್ಟಣವನ್ನು ತನ್ನ ರಾಜ್ಯದ ರಾಜಧಾನಿಯಾಗಿಯೂ, ವಾಸ ಸ್ಥಳವಾಗಿಯೂ ಮಾಡಿಕೊಂಡನು. ಬೆಂಗಳೂರು ಕೋಟೆಗೆ 9 ದ್ವಾರಗಳಿದ್ದವು. ಅವುಗಳೆಂದರೆ:[17] 1) ಪೂರ್ವಕ್ಕೆ ಹಲಸೂರು ಹೆಬ್ಬಾಗಿಲು 2) ಉತ್ತರಕ್ಕೆ ಯಶವಂತಪುರ ಉಪದ್ವಾರ 3) ಪಶ್ಚಿಮಕ್ಕೆ ಸೊಂಡೇಕಪ್ಪ ಹೆಬ್ಬಾಗಿಲು 4) ಕೆಂಗೇರಿ ಉಪದ್ವಾರ (ಮೈಸೂರು ದ್ವಾರ) 5) ಕಾನಕಾನಹಳ್ಳಿ ಉಪದ್ವಾರ 6) ದಕ್ಷಿಣಕ್ಕೆ ಆನೇಕಲ್ ಹೆಬ್ಬಾಗಿಲು 7) ಯಲಹಂಕ ಹೆಬ್ಬಾಗಿಲು 8) ಸರ್ಜಾಪುರ ಉಪದ್ವಾರ 9) ವರ್ತೂರು ಉಪದ್ವಾರ.

ಇಮ್ಮಡಿ ಕೆಂಪೇಗೌಡನು ನೀರಿನ ಬುಗ್ಗೆಯೊಂದಕ್ಕೆ ಕೆರೆಯನ್ನು ಕಟ್ಟಿಸಿ **'ಕಾರಂಜಿ ಕೆರೆ'** ಎಂದು ಹೆಸರಿಟ್ಟನು. ಆ ಕೆರೆಯಿಂದ ಕೋಟೆಯ ಒಳಕ್ಕೆ ಮತ್ತು ಆಳವಾದ ಕಂದಕಗಳಿಗೆ ನೀರನ್ನು ಹರಿಸಲಾಗುತ್ತಿತ್ತೆಂದು ಹೇಳಲಾಗುತ್ತದೆ.

ಕೆಂಪೇಗೌಡ ಸ್ಥಾಪಿಸಿದ ಬೆಂಗಳೂರಿನ ನಗರದ ವಿಸ್ತಾರ ಕುರಿತು ಅರುಣಿ ಅವರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ: **"**ಇದು ಆ ಕಾಲದ ಉತ್ತಮ ಹಾಗೂ ಹೆಚ್ಚಿನ ರಕ್ಷಣಾ ವ್ಯವಸ್ಥೆಗಳಿಂದ ಕೂಡಿದ ಒಂದು ಭದ್ರ ಹಾಗೂ ಆಯಕಟ್ಟಿನ ನಗರವಾಗಿತ್ತು. ಪೇಟೆ ಆವರಣವು ಸುತ್ತಲೂ ಆಯತಾಕಾರದ ಕೋಟೆಯನ್ನು ಹೊಂದಿತ್ತು. ಪೇಟೆ ಆವರಣಕ್ಕೆ ಹೊಂದಿಕೊಂಡಂತೆ ದಕ್ಷಿಣಕ್ಕೆ ಅಂಡಾಕಾರದ ಕೋಟೆ ಆವರಣವಿತ್ತು. ಅರಮನೆಯನ್ನೊಳಗೊಂಡ ಕೋಟೆ ಆವರಣವು ವಿಕ್ಟೋರಿಯಾ ಆಸ್ಪತ್ರೆಯ ಮುಂಭಾಗದಿಂದ ಕಿಮ್ಸ್ ಆಸ್ಪತ್ರೆಯ ಮುಂಭಾಗವರೆಗೂ, ಪೂರ್ವದಲ್ಲಿ ಕಲಾಸಿಪಾಳ್ಯದ ನವಾಬ ಹೈದರಾಲಿ ರಸ್ತೆ ಮತ್ತು ಪೋಲೀಸ್ ಠಾಣೆಯಿಂದ ಪಶ್ಚಿಮದಲ್ಲಿ ಮಿಂಟೋ ಆಸ್ಪತ್ರೆಯ ಮುಂಭಾಗದ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನವರೆಗೂ ವಿಸ್ತರಿಸಿತ್ತೆಂದು ನಕ್ಷೆಗಳು ಮತ್ತು ಅವಶೇಷಗಳ ಆಧಾರಗಳಿಂದ ಗುರುತಿಸಬಹುದು.**"[18]**

ಪ್ರಸ್ತುತ ಉಳಿದಿರುವ ಬೆಂಗಳೂರಿನ ಕೋಟೆಯು ಹೈದರ್ ಮತ್ತು ಟಿಪ್ಪು ಸುಲ್ತಾನ್ ಕಾಲದಲ್ಲಿ ಪುನರ್ರಚನೆಗೊಂಡಿರುವುದರಿಂದ ನಾಡಪ್ರಭುಗಳ ಕಾಲದ ಕೋಟೆಯ ಮೂಲ ಸ್ವರೂಪವನ್ನು ಗ್ರಹಿಸುವುದು ಕಷ್ಟವಾಗುತ್ತದೆ.

### 6.3.5 ಮಾಗಡಿ ಕೋಟೆ

ನೆಲದುರ್ಗವಾಗಿರುವ ಮಾಗಡಿಯ ಕೋಟೆಯು ಒಂದು ಸುತ್ತಿನ ಕೋಟೆಯಾಗಿತ್ತು. ವಿಶಾಲವಾದ ಕಂದಕಗಳನ್ನು ಹೊಂದಿದ್ದ ಈ ಕೋಟೆಯು ಚೌಕಾಕಾರದಲ್ಲಿದೆ. ಮಾಗಡಿಯ ಕಲ್ಲಿನ ಕೋಟೆಯು ಯಲಹಂಕ ನಾಡಪ್ರಭುಗಳಿಗೂ ಪೂರ್ವದಲ್ಲಿಯೇ ಇದ್ದ ಕೋಟೆ ಎಂಬ ಸುಳುಹನ್ನು ಬಖೈರ್ ನೀಡುತ್ತದೆ. ಮಾಗಡಿಯ ಬಖೈರ್ ಪ್ರಕಾರ: ಗುಡೇಮಾರನಹಳ್ಳಿಯ ತಳವಾರ ಗಂಗನು ಮಾಗಡಿಯ ಕೆಳಕೋಟೆಯ ಭಾಗವನ್ನು ನಿರ್ಮಿಸಿ ಅಲ್ಲಿಯೇ ವಾಸಮಾಡಿಕೊಂಡಿದ್ದರೂ ದುರ್ಗ ಅವನ ವಶವಾಗಲಿಲ್ಲ. ಇದರಿಂದಾಗಿ ಬೆಂಗಳೂರಿನ ಇಮ್ಮಡಿ ಕೆಂಪೇಗೌಡನ ಸ್ನೇಹವನ್ನು ಬಯಸಿ ಮಾಗಡಿಯನ್ನು ಅವನ ವಶಕ್ಕೆ ಕೊಡುತ್ತೇನೆಂದು ಭಾಷೆ ಕೊಟ್ಟನು. ಹೀಗಾಗಿ ಇಮ್ಮಡಿ ಕೆಂಪೇಗೌಡನು ಕ್ರಿ.ಶ. 1605ರಲ್ಲಿ ಸೈನ್ಯ ಸಮೇತನಾಗಿ ಬಂದು ಗಂಗನೊಡಗೂಡಿ ಗುಡೇಮಾರನಹಳ್ಳಿಯಿಂದ ಮಾಗಡಿಯ ಕೆಳಕೋಟೆಗೆ ದಂಡೆತ್ತಿ ಬಂದು ಆ ಕೋಟೆಯ ಜೀಬಿ ದರವಾಜಾದ ಬಳಿ ಗಂಗನನ್ನು ಕೊಂದನು. ನಂತರ ಕೆಂಪೇಗೌಡನು ಕೆಳಕೋಟೆಯನ್ನು ವಶಪಡಿಸಿಕೊಂಡನು. ನಂತರ ಮಾಗಡಿಯನ್ನು ವಿಸ್ತಾರಗೊಳಿಸಿ, ಪೇಟೆಯಲ್ಲಿ ಜನವಸತಿಯನ್ನು ಏರ್ಪಡಿಸಿದನು.[19]

ಮಾಗಡಿ ಕೂಡ ಬೆಂಗಳೂರಿನಂತೆ ಎತ್ತರಿಸಿದ ಭೂಮಧ್ಯದ ತಗ್ಗಿನಲ್ಲಿರುವ ಪ್ರದೇಶ. ಯಾವ ದಿಕ್ಕಿನಿಂದ ಪ್ರವೇಶಿಸಿದರೂ, ಮಾಗಡಿಯನ್ನು ಸಮೀಪಿಸುವವರೆಗೆ ಇಲ್ಲೊಂದು ಪಟ್ಟಣವಿದೆ ಎಂಬ ಕುರುಹುಗಳೇ ಸಿಗುವುದಿಲ್ಲ. ಇದರರ್ಥ ರಕ್ಷಣಾತ್ಮಕವಾಗಿ ಆಯಕಟ್ಟಿನಲ್ಲಿತ್ತೆಂದು ತಿಳಿಯಬೇಕು. ಊರಿಗೆ ಬರುವವರು ಮತ್ತು ಹೋಗುವವರ ಚಲನವಲನಗಳ ಮೇಲೆ ಕಣ್ಣಾಗವಲಿಡಲು ಸೋಮೇಶ್ವರ ದೇವಾಲಯ ಹಾಗೂ ರಂಗನಾಥದೇವಾಲಯದ ಹಿಂಬದಿಗಳಲ್ಲಿ ಎತ್ತರವಾದ ಗುಡ್ಡದ ಮೇಲೆ ಗೋಪುರಗಳನ್ನು ನಿರ್ಮಿಸಿದ್ದಾರೆ. ಇವು ಮೇಲ್ನೋಟಕ್ಕೆ ಬಸವನ ಮಂಟಪಗಳಾಗಿದ್ದರೂ, ವೀಕ್ಷಣಾ ಗೋಪುರಗಳಾಗಿಯೂ ಕೆಲಸ ಮಾಡುತ್ತಿದ್ದವೆಂದು ತಿಳಿಯಬಹುದು. ಈ ಗೋಪುರಗಳಲ್ಲಿ ನಿಂತು ನೋಡಿದರೆ, ಸುತ್ತಲ 15–20 ಕಿ.ಮೀ. ಪಾಸಲೆ ಸ್ಪಷ್ಟವಾಗಿ ಗೋಚರಿಸುತ್ತದೆ.

ಈ ಕೋಟೆಗೆ ಉತ್ತರ ಮತ್ತು ದಕ್ಷಿಣದಲ್ಲಿ ದ್ವಾರಗಳಿದ್ದವು. ಕೋಟೆಯ ಪೂರ್ವದಲ್ಲಿಯೂ ಒಂದು ಚಿಕ್ಕದ್ವಾರ ಇರುವಂತೆ ತೋರುತ್ತದೆ. ಈಗ ಅಲ್ಲೊಂದು ಪಾಳುಬಿದ್ದ ಮಠವಿದೆ. ಕೋಟೆಯ ನಾಲ್ಕೂ ಮೂಲೆಗಳಲ್ಲಿ ಬತೇರಿಗಳನ್ನು ನಿರ್ಮಿಸಲಾಗಿದೆ. ಕೋಟೆಯ ಸುತ್ತ ಆಳವಾದ ಕಂದಕವಿದ್ದು, ಇದಕ್ಕೆ ಕೋಟೆಯ ದಕ್ಷಿಣಕ್ಕಿರುವ ಹೊಂಬಾಳಮ್ಮನ ಕೆರೆಯಿಂದ ನೀರನ್ನು

ಹರಿಸುತ್ತಿದ್ದರೆಂದು ತೋರುತ್ತದೆ. ಈ ಕೋಟೆಯು ನಂತರದ ಕಾಲದಲ್ಲಿ ಪುನರ್ರಚನೆಗೊಂಡಿರುವಂತೆ ತೋರುತ್ತವೆ. ಕೋಟೆಯ ಈಶಾನ್ಯದಲ್ಲಿ ರಾಮೇಶ್ವರ ದೇವಾಲಯವಿದೆ. ಕೋಟೆಯ ಮಧ್ಯಭಾಗದಲ್ಲಿ ಕೊಂಚ ನೈರುತ್ಯ ಭಾಗಕ್ಕೆ ಸಮೀಪವಾದಂತೆ ಕೆಲವು ವರ್ಷಗಳ ಹಿಂದೆ ಕಟಾಂಜನದ ಅವಶೇಷಗಳು ದೊರೆತಿದ್ದವು. ಬಹುಶಃ ಈ ಭಾಗದಲ್ಲಿ ಅರಮನೆಯ ಅವಶೇಷ ಇದ್ದಿರಬಹುದಾಗಿದೆ. ಜೀರ್ಣೋದ್ಧಾರದ ನೆಪದಲ್ಲಿ ಕೋಟೆಯ ಸುತ್ತ ಇದ್ದ ಕಂದಕವನ್ನು ಮುಚ್ಚಿ, ಕೋಟೆಯ ಮೂಲ ಸ್ವರೂಪವನ್ನೆ ಇಂದು ಹಾಳು ಮಾಡಿರುವುದರಿಂದ ಕೋಟೆಯ ಮೂಲ ರಚನೆಯನ್ನು ಅರ್ಥ ಮಾಡಿಕೊಳ್ಳಲು ಅಸಾಧ್ಯವಾಗಿದೆ.

### 6.3.6 ಹುತ್ರಿದುರ್ಗಕೋಟೆ

ಪ್ರಸ್ತುತ ಹುತ್ರಿದುರ್ಗವು ಏಳುಸುತ್ತಿನ ಕೋಟೆಯಿಂದಾಗಿ ಪ್ರಸಿದ್ಧವಾಗಿದೆ. ಭೂಮಟ್ಟದಿಂದ ಸುಮಾರು 200 ಅಡಿಗಳ ಮೇಲೆದ್ದ ಪ್ರದೇಶದಲ್ಲಿ ಹುತ್ರಿ ಗ್ರಾಮವಿದೆ. ಗ್ರಾಮದ ಉತ್ತರಕ್ಕೆ ಹುತ್ರಿದುರ್ಗವೂ, ದಕ್ಷಿಣಕ್ಕೆ ಬಸವನದುರ್ಗವೂ ಇದೆ. ಈ ಎರಡೂ ಬೆಟ್ಟಗಳನ್ನು ಸುತ್ತುವರಿದಂತೆ ಮೊದಲ ಎರಡು ಸುತ್ತಿನ ಕೋಟೆ ಇದೆ. ಯಲಹಂಕ ನಾಡಪ್ರಭುಗಳು ಈ ಕೋಟೆಯನ್ನು ನಿರ್ಮಿಸಿದರೆಂದು ಕೆಲವು ಇತಿಹಾಸಕಾರರು ಹೇಳುತ್ತಾರೆ.[20] ಕೋಟೆಯ ಬಗೆಗೆ ಅಧ್ಯಯನ ನಡೆಸಲು ನಮಗೆ ಒಂದೇ ಒಂದು ಶಾಸನ ಬಿಟ್ಟರೆ ಬೇರೆ ಆಧಾರಗಳಿಲ್ಲ. ಇದು ಎರಡನೇ ಸುತ್ತಿನ ಕೋಟೆಗೆ ನಿರ್ಮಿಸಿರುವ ಎರಡನೇ ದ್ವಾರವಾದ ಎಲಿಯೂರು ದ್ವಾರದ ತೊಲೆಯ ಮೇಲಿದೆ.[21] ಅದರಂತೆ ಚೆನ್ನಮನಾಯಕ ಎಂಬ ಅಧಿಕಾರಿಯು ಮುತ್ತನಾಯಕನ ಶಿಷ್ಯನಾದ ಜಂಗಮಯ್ಯನಿಂದ ಯೆಲಯೂರು ದ್ವಾರವನ್ನು ಸೂಕ್ತ ಸ್ತಂಭಗಳಿಂದ ನಿರ್ಮಿಸಿದನು. ಜಂಗಮಯ್ಯನ ಬಗೆಗೆ ಹಾಗೂ ಹುತ್ರಿದುರ್ಗದ ಬಗೆಗೆ ಅಧ್ಯಯನ ನಡೆಸಿರುವ ಹಂ.ಗು. ರಾಜೇಶ್ ಹೇಳುವ ಪ್ರಕಾರ ಜಂಗಮಯ್ಯ ಎಂಬುವವನು 1460 ದಶಕದಲ್ಲಿ ಬೆಂಗಳೂರು ಪರಿಸರದಲ್ಲಿ ಇದ್ದ ವಿಜಯನಗರದ ಅಧಿಕಾರಿ. ಆತನನ್ನು 1470 ದಶಕದಲ್ಲಿ ಹುತ್ರಿದುರ್ಗ ಪರಿಸರಕ್ಕೆ ವರ್ಗಾಯಿಸಲಾಗಿದೆ. ಆತನ ಕಾಲದಲ್ಲಿ ಎರಡನೇ ಸುತ್ತಿನ ಯೆಲಿಯೂರುದ್ವಾರ ನಿರ್ಮಾಣವಾಗಿದೆ. ಮುಂದುವರೆದು 17ನೆಯ ಶತಮಾನದ ಆರಂಭಿಕ ದಶಕಗಳವರೆಗೆ ಹುತ್ರಿದುರ್ಗದ ಮೇಲೆ ಯಲಹಂಕ ನಾಡಪ್ರಭುಗಳು ಯಾವುದೇ ನಿಯಂತ್ರಣವನ್ನು ಹೊಂದಿರುವಂತೆ ಕಾಣುವುದಿಲ್ಲ. ಇವರ ಮೊದಲ ಶಾಸನ ಸಿಗುವುದೇ ಹುತ್ರಿದುರ್ಗಕ್ಕೆ ಸಮೀಪವಿರುವ ಕಲ್ಯಾದಲ್ಲಿ. ಅದರ ಕಾಲ ಕ್ರಿ.ಶ. 1621. ಅಂದರೆ, ಹುತ್ರಿದುರ್ಗದ ಕೋಟೆಯು ಯಲಹಂಕ ನಾಡಪ್ರಭುಗಳಿಗೂ ಪೂರ್ವದಲ್ಲಿಯೇ ನಿರ್ಮಾಣವಾಗಿತ್ತು. ಹುತ್ರಿದುರ್ಗವು 1663ರ

ಹೊತ್ತಿಗೆ ಮೈಸೂರು ಒಡೆಯರ ಅಧೀನಕ್ಕೆ ಹೋಗುವುದರಿಂದ ಅರ್ಧಶತಮಾನಕ್ಕೂ ಹೆಚ್ಚು ಕಾಲ ಹುತ್ರಿದುರ್ಗ ಯಲಹಂಕ ನಾಡಪ್ರಭುಗಳ ಅಧೀನದಲ್ಲಿ ಇತ್ತೆಂದು ಹೇಳಲಾಗದು. ಈ ಅವಧಿಯಲ್ಲಿ ಯಲಹಂಕ ನಾಡಪ್ರಭುಗಳು ಕೆಲವು ಹಂತದ ಕೋಟೆಯನ್ನಾದರೂ ನಿರ್ಮಾಣ ಮಾಡಿಸಿರಬಹುದು. ಆದರೆ, ಯಾವ ಸುತ್ತಿನ ಕೋಟೆಗಳನ್ನು ನಿರ್ಮಿಸಿದರೆಂಬುದನ್ನು ಅರಿಯಲು ವಿಶೇಷ ಅಧ್ಯಯನದ ಅಗತ್ಯವಿದೆ ಎಂದಿದ್ದಾರೆ.[22]

ಕೋಟೆಯ ಮೊದಲ ದ್ವಾರದಿಂದ ಬೆಟ್ಟದ ತುದಿಯವರೆಗೂ 9 ಹೆಬ್ಬಾಗಿಲುಗಳು, ಎರಡು ದಿಡ್ಡಿ ಬಾಗಿಲುಗಳಿವೆ. ಬೆಟ್ಟದ ಮೊದಲನೆಯ ದ್ವಾರವು ದೊಡ್ಡದಾಗಿದ್ದರೆ ಕೊನೆಯ ದ್ವಾರವು ಅತ್ಯಂತ ಕಿರಿದಾಗಿದೆ. ಈ ಕೋಟೆಯ ಬಾಗಿಲುಗಳು ಒಂದಕ್ಕೊಂದು ನೇರವಾಗಿರದೆ ಅಂಕುಡೊಂಕಾಗಿವೆ. ಒಂದೊಂದು ಬಾಗಿಲಿಗೂ ಅಂತರವನ್ನು ಇರಿಸಲಾಗಿದೆ. ಇದರ ಉದ್ದೇಶ ಕೋಟೆಯು ಶತ್ರುಗಳಿಗೆ ಸುಲಭವಾಗಿ ವಶವಾಗದೆ, ಅವರು ಒಳಗೆ ಬರಲು ಸುಲಭಸಾಧ್ಯವಾಗದಿರಲೆಂದು ಕೋಟೆಯ ಬಾಗಿಲುಗಳ ರಚನೆ ಚಕ್ರವ್ಯೂಹದಂತೆ ಒಂದು ವಿಶಿಷ್ಟ ಚಿಂತನೆಯ ವೈಜ್ಞಾನಿಕ ವಿದ್ವತ್ತನ್ನು ಅಳವಡಿಸಿಕೊಂಡಂತೆ ಕಾಣಿಸುತ್ತದೆ. ಹೊರ ಕೋಟೆಯು ಮೂರು ಬಾಗಿಲುಗಳನ್ನು ಹೊಂದಿದೆ. ಅವುಗಳಲ್ಲಿ ಒಂದು ಎಲಿಯೂರು ಬಾಗಿಲು, ಇನ್ನೊಂದು ಮಾಗಡಿ ಬಾಗಿಲು, ಮತ್ತೊಂದು ಬಾಳೆಕಟ್ಟೆ ಬಾಗಿಲು. ಇವುಗಳು ಆಯಾ ಊರಿನ ದಿಕ್ಕಿಗೆ ಇರುವುದರಿಂದ ಆಯಾ ಹೆಸರಿನಿಂದ ಕರೆಯಲಾಗಿದೆ. ಹುತ್ರಿದುರ್ಗದ ಕೋಟೆಯು ಏಳು ಸುತ್ತಿನ ಕೋಟೆಯಾಗಿದ್ದು ಒಂದೊಂದು ಸುತ್ತನ್ನೂ ಒಂದೊಂದು ಹೆಸರಿನಿಂದ ಗುರುತಿಸುತ್ತಾರೆ. ಉದಾ.: ಕಲ್ಲುಕೋಟೆ, ಎಮ್ಮೆದೊಣ್ಣಯ್ಯನ ಕೋಟೆ, ತಬಸಿಮರದ ಕೋಟೆ, ದೊರೆ ಕೋಟೆ, ಸೋಗೆ ಕೋಟೆ ಎಂತಲು ಕರೆಯುತ್ತಾರೆ.[23]

ಕೋಟೆಯನ್ನು ಸ್ಥಳಿಯವಾಗಿ ದೊರೆಯುವ ಗ್ರಾನೈಟ್ ಕಲ್ಲಿನಿಂದ ಭದ್ರಪಡಿಸಿದ್ದು, ಒಂದು ಕಾಲದಲ್ಲಿ ಅಭೇದ್ಯವಾದ ಕೋಟೆಯಾಗಿತ್ತೆಂದು ತೋರುತ್ತದೆ. ಹುತ್ರಿಬೆಟ್ಟದ ಮೇಲಿನ ಕೋಟೆಯನ್ನು ಕಡಿದಾದ ಸ್ಥಳಗಳಲ್ಲಿ ಹೊರತು, ಶತೃಗಳು ಪ್ರವೇಶಿಸಬಹುದಾದ ಸ್ಥಳಗಳಲ್ಲಿ ಕೋಟೆಯನ್ನು ಕಟ್ಟಲಾಗಿದೆ. ಹೈದರ್ ಮತ್ತು ಟಿಪ್ಪು ಕಾಲದಲ್ಲಿ ಕೋಟೆಯ ಬತೇರಿಗಳನ್ನು ವೃತ್ತಾಕಾರದಲ್ಲಿ ಪುನರ್ರಚಿಸಿರುವುದು ಕಂಡುಬರುತ್ತದೆ. ಎತ್ತರವಾದ ಬೆಟ್ಟವನ್ನು ಶಂಕರಕುಂಬಿ ಎನ್ನುವರು. ಅದರ ಪೂರ್ವಕ್ಕಿರುವ ಬೆಟ್ಟವನ್ನು ತಿರುಮಲ ಬೆಟ್ಟ ಎನ್ನುವರು. ಇವೆರಡರ ನಡುವಿನ ಭಾಗದಲ್ಲಿ ಸಮತಟ್ಟಾದ ಪ್ರದೇಶವಿದೆ. ಇಲ್ಲಿಗೆ ಹೋಗುವ ಮಾರ್ಗದಲ್ಲಿ ವೇದಿಕೆಯೊಂದು ಇತ್ತು. ಆದರೆ ಈಗ ಶಿಥಿಲವಾಗಿದೆ. ಅಲ್ಲಿಯೇ ಬಂಡೆಯ ಮೇಲೆ ಯಲಹಂಕ

ನಾಡಪ್ರಭುಗಳ ಕಾಲದ ಕೋಟೆಗಳು ಮತ್ತು ದೇವಾಲಯಗಳಲ್ಲಿ ಕಂಡು ಬರುವ ಗಣೇಶನ ಉಬ್ಬುಶಿಲ್ಪವಿದೆ. ಸಮತಟ್ಟಾದ ಪ್ರದೇಶದಲ್ಲಿ ಅರಮನೆಯ ಅವಶೇಷಗಳು, ಭಾರೀಗಾತ್ರದ ಬೀಸುಕಲ್ಲುಗಳು, ಕಣಜಗಳ ಅವಶೇಷಗಳು ಕಂಡುಬರುತ್ತವೆ. ಎಸ್.ಕೆ. ಅರುಣಿ ಅವರು ಈ ಪ್ರದೇಶದಲ್ಲಿ ಆದಿಲ್‌ಷಾಹಿಗಳ ಕಾಲದ ನಾಣ್ಯವನ್ನು ಮತ್ತೆ ನಂದಿ ಲಾಂಛನವಿದ್ದ ಮತ್ತೊಂದು ನಾಣ್ಯವನ್ನು ಕ್ಷೇತ್ರಕಾರ್ಯ ವೇಳೆ ಪತ್ತೆ ಮಾಡಿರುವುದಾಗಿ ದಾಖಲಿಸಿದ್ದಾರೆ.[24]

### 6.3.7 ಹುಲಿಯೂರುದುರ್ಗ

ಹುಲಿಯೂರುದುರ್ಗದ ಕೋಟೆಯು ಏಕಶಿಲೆಯಿಂದ ಕೂಡಿರುವ, ದೂರಕ್ಕೆ ಲಿಂಗದಂತೆ ಕಾಣುವ ಕಡಿದಾದ ಬೆಟ್ಟವನ್ನು ಸುತ್ತುವರಿದು ನಿರ್ಮಿಸಲ್ಪಟ್ಟಿದೆ. ಈ ಕೋಟೆಯ ಮೊದಲ ಎರಡು ಹಂತಗಳನ್ನು ಏರಿದರೆ, ಸಮತಟ್ಟಾದ ಎತ್ತರದ ಮೈದಾನ ಪ್ರದೇಶಗಳು ಕಂಡುಬರುತ್ತದೆ. ಇದು ನಾಡಪ್ರಭುಗಳ ಕಾಲದ ಜನವಸತಿ ಪ್ರದೇಶವಾಗಿತ್ತು. ಇಲ್ಲಿಯೇ ವೇಣುಗೋಪಾಲಸ್ವಾಮಿ ದೇವಾಲಯ ಕಂಡುಬರುತ್ತದೆ. ಕೆಳಗಿನ ಸುತ್ತಿನ ಕೋಟೆಯ ಅವಶೇಷಗಳು ಮತ್ತು ಬಲಿಷ್ಠವಾದ ಅಂಕುಡೊಂಕಾದ ಪ್ರವೇಶ ದ್ವಾರಗಳು ಕಂಡುಬರುತ್ತವೆ. ಈ ರಚನೆಯು ಪಾಳೆಗಾರರ ಕಾಲದ ರಚನೆಯ ಸ್ಪಷ್ಟ ಮಾದರಿಯಾಗಿದೆ. ಕೋಟೆಯ ಗೋಡೆಗಳ ಎತ್ತರವನ್ನು ಅಗತ್ಯಕ್ಕನುಗುಣವಾಗಿ ಎತ್ತರಿಸಿದ್ದಾರೆ. ಕೋಟೆಯು ಇಳಿಜಾರಿನಂತಹ ಕೆಲವು ಭಾಗಗಳಲ್ಲಿ 5 ಮೀ. ಎತ್ತರವಿದ್ದರೆ, ಉಳಿದ ಕಡೆ 2–3 ಮೀ. ಎತ್ತರ ಇದೆ. ಕೊತ್ತಲಗಳು ಸುಮಾರು 7 ಮೀ. ಎತ್ತರ, 4 ಮೀ. ಅಗಲ ಇವೆ. ಕುಂಭಿಗೋಡೆಯು ಎತ್ತರವಾಗಿದ್ದು, ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿದ್ದಾರೆ. ಅಲ್ಲಲ್ಲಿ ಕಿಂಡಿಗಳಿದ್ದು, ಹೊರಗಿನ ಚಲನವಲನವನ್ನು ವೀಕ್ಷಿಸಬಹುದು.

ಹುಲಿಯೂರುದುರ್ಗದ ಕೋಟೆಯು ಎರಡು ಕಡೆಗಳಲ್ಲಿ ಪ್ರವೇಶವನ್ನು ಹೊಂದಿದೆ. ಒಂದು ಊರಿನ ಕಡೆಯಿಂದ ಅಂದರೆ ಉತ್ತರ ದಿಕ್ಕಿನಿಂದ ಮತ್ತೊಂದು ದಕ್ಷಿಣ ದಿಕ್ಕಿನಿಂದ ಎರಡೆರಡು ದ್ವಾರಗಳನ್ನು ಹಾದುಹೋಗುವ ಮೂಲಕ ಕೋಟೆಯ ಒಳಭಾಗದ ಸಮತಟ್ಟದ ಪ್ರದೇಶವನ್ನು ಪ್ರವೇಶಿಸಬಹುದು. ಇಲ್ಲಿಂದ ಪಶ್ಚಿಮ ಭಾಗದಿಂದ ಕುಂಬಿಬೆಟ್ಟವನ್ನು ಏರಬೇಕು. ಕೆಲವು ಮೆಟ್ಟಿಲುಗಳನ್ನು ಏರಿದರೆ, ಅಲ್ಲಿಯೇ ಒಂದು ಕುಂಬಿ ಗಣೇಶನ ಸಣ್ಣಗುಡಿ ಇದೆ. ಇದು ಬಂಡೆಯ ಮೇಲೆ ಕೊರೆದಿರುವ ಸುಮಾರು 4 ಅಡಿಗಳ ಎತ್ತರದ ಗಣೇಶನ ಉಬ್ಬುಶಿಲ್ಪ. ಇದೇ ಮಾದರಿಯ ಗಣೇಶನ ಉಬ್ಬುಶಿಲ್ಪಗಳನ್ನು ಸಾವನದುರ್ಗ, ಶಿವಗಂಗೆಯಲ್ಲಿ ಗಂಗಾಧರೇಶ್ವರ ದೇವಾಲಯಕ್ಕೆ ಹೋಗುವ ಮೆಟ್ಟಿಲುಗಳ ಎಡಭಾಗದಲ್ಲಿ ಇರುವುದನ್ನು ಸ್ಮರಿಸಬಹುದು. ಹುತ್ರಿದುರ್ಗದಲ್ಲಿರುವ ಗಣೇಶನ ಉಬ್ಬುಶಿಲ್ಪ ಕೇವಲ ಒಂದು ಅಡಿ ಎತ್ತರವಿದೆ. ಯಲಹಂಕ

ನಾಡಪ್ರಭುಗಳ ಕಾಲದ ಕೋಟೆಗಳಲ್ಲಿ ಗಣೇಶನ ಶಿಲ್ಪಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಅಷ್ಟೇ ಸಾಮಾನ್ಯವಾಗಿ ಈ ಗಣೇಶನ ಶಿಲ್ಪಗಳು ಪಶ್ಚಿಮಕ್ಕೆ ಮುಖಮಾಡಿರುವುದು ಮತ್ತೊಂದು ವಿಶೇಷ. ಬೆಂಗಳೂರು ದೊಡ್ಡಗಣೇಶ ಕೂಡ ಪಶ್ಚಿಮಕ್ಕೆ ಮುಖಮಾಡಿದೆ. ಇದು ಒಂದು ಯಲಹಂಕ ನಾಡಪ್ರಭುಗಳ ಕಾಲದ ರಕ್ಷಣಾ ವಾಸ್ತುಶಿಲ್ಪದ ಪ್ರಮುಖ ಲಕ್ಷಣಗಳಲ್ಲಿ ಒಂದೆಂದು ಪರಿಗಣಿಸಬಹುದು.

ಕುಂಬಿಬೆಟ್ಟದ ಮೇಲ್ಭಾಗದಲ್ಲಿ ಇಟ್ಟಿಗೆ ಮತ್ತು ಕಲ್ಲಿನಿಂದ ಕಟ್ಟಿದ ಎರಡು ಕಣಜವಿದೆ. ಮದ್ದಿನ ಮನೆ ಇದೆ. ಐದು ನೀರಿನ ದೊಣೆಗಳು ಇವೆ. ಅವುಗಳನ್ನು ಅಕ್ಕ–ತಂಗೇರ ಕೊಳ, ಎಂಜಲೆಲೆ ಕೊಳ ಎನ್ನುವರು.[25] ಬೆಟ್ಟದ ತುದಿಯಲ್ಲಿ ವರ್ತುಲಾಕಾರದ ಕಿರಿದಾದ ಮೂರು ಬುರುಜುಗಳ ಅವಶೇಷಗಳಿವೆ. ಅಲ್ಲದೆ ಅರಮನೆಗಳ ಅವಶೇಷಗಳು ಕಂಡುಬರುತ್ತವೆ.

### 6.3.8 ಸಾವನದುರ್ಗ

ಮಾಗಡಿಯಿಂದ ಆಗ್ನೇಯಕ್ಕೆ 11 ಕಿ.ಮೀ. ದೂರದಲ್ಲಿರುವ ಬಹತ್ ಏಕಶಿಲಾ ಬೆಟ್ಟವೇ ಸಾವನದುರ್ಗ. ಸಮುದ್ರಮಟ್ಟದಿಂದ ಎತ್ತರವಿರುವ ಏಷ್ಯಾದ ಅತಿದೊಡ್ಡ ಏಕಶಿಲಾ ಪರ್ವತ ಇದಾಗಿದೆ. ಮಾಗಡಿಯ ಬಖೈರಿನ ಪ್ರಕಾರ: ಬಲ್ಲಾಳನು ಆಳುತ್ತಿದ್ದಾಗ ಮಾಗಡಿ ಪ್ರದೇಶವನ್ನು ದಟ್ಟ ಕಾಡು ಆವರಿಸಿಕೊಂಡಿತ್ತು. ಬಲ್ಲಾಳನ ಆಡಳಿತ ಕೊನೆಗೊಂಡು, ವಿಜಯನಗರದ ಅಥವಾ ಆನೆಗೊಂದಿಯ ನರಪತಿ ರಾಜನ ವಶಕ್ಕೆ ಬಂದಿತು. ಆ ಸಮಯದಲ್ಲಿ ಈ ಪ್ರದೇಶದ ಸನಿಹದ ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತಿದ್ದ ಬೇಡರು ಅಥವಾ ಕಿರಾತರು ಪ್ರಯಾಣಿಕರಿಗೆ ಮತ್ತು ಇತರರಿಗೆ ತೊಂದರೆ ಕೊಡುತ್ತಿದ್ದರು. ಆಗ ಬುಕ್ಕರಾಯನು ಸೈನ್ಯ ಸಮೇತನಾಗಿ ಬಂದು ಈ ಕಿರಾತರನ್ನು ಶಿಕ್ಷಿಸಿ ಈ ಪ್ರದೇಶದಲ್ಲಿ ಶಾಂತಿಯನ್ನು ಸ್ಥಾಪಿಸಿದನು. ನಂತರ ಕೃಷ್ಣದೇವರಾಯನ ಕಾಲದಲ್ಲಿ ತೊಗರಿಬೇಳೆಯ ಸರಬರಾಜಿಗೆಂದು ಪೆನುಗೊಂಡೆಯ ತಿರುಮಲೆ ತಾತಾಚಾರ್ಯರಿಗೆ ಅಗ್ರಹಾರವಾಗಿ ನಾಗಸೆಟ್ಟಿಹಳ್ಳಿಯನ್ನು ಪ್ರಧಾನಿ ಸಾಳುವ ತಿಮ್ಮರಸಯ್ಯ ದಾನವಾಗಿ ಕೊಟ್ಟನು. ಅಚ್ಯುತರಾಯನು ಸಾಮಂತರಾಯನನ್ನು ಈ ಪ್ರದೇಶದ ಅಧಿಕಾರಿಯನ್ನಾಗಿ ನೇಮಿಸಿ, ಈ ಪ್ರದೇಶದಲ್ಲಿದ್ದ ದಂಗೆಕೋರರನ್ನು ನಿಗ್ರಹಿಸಿ ಎರಡು ಬೆಟ್ಟಗಳ ಮೇಲೆ ಸುಭದ್ರವಾದ ದುರ್ಗಗಳನ್ನು ಕಟ್ಟಿಸಿ, ಅವುಗಳಿಗೆ ತನ್ನ ಹೆಸರಿನಿಂದಲೇ ಬಿಳಿ ಸಾಮಂತದುರ್ಗ ಮತ್ತು ಕರೀಸಾಮಂತ ದುರ್ಗಗಳೆಂದು ಹೆಸರಿಟ್ಟನು. ಈ ವೇಳೆಗೆ ಅಚ್ಯುತರಾಯ ನಿಧನ ಹೊಂದಿರಲಾಗಿ, ಈ ಸಂಗತಿಯನ್ನು ರಾಮರಾಯನಿಗೆ ತಿಳಿಸಿದನು. ಸಂತೋಷಪಟ್ಟ ರಾಮರಾಯನು ಈ ಪ್ರದೇಶವನ್ನು ಅಮರ ಜಹಗೀರಾಗಿ ನೀಡಿದನು.[26] ಖೈಫಿಯತ್ತಿನ ಆರಂಭಿಕ ವಿವರವಾದ ಈ ಪ್ರದೇಶದಲ್ಲಿ

ಪ್ರಯಾಣಿಕರಿಗೆ ಕಿರಾತರು (ಕಳ್ಳರು) ಉಪಟಳ ನೀಡುತ್ತಿದ್ದ ಸಂಗತಿಯನ್ನು ಕ್ರಿ.ಶ. 1340ರ ಮಾಡಬಾಳ್ ಶಾಸನವು[27] ಸಮರ್ಥಿಸುತ್ತದೆ. "ವೀರಬಲ್ಲಾಳನ ಕಾಲದಲ್ಲಿ ಕಾಯದಣ್ಣಾಯಕರ ಮಗ ಬಲಪನಾಯಕನ ಸೈನಿಕ ಮಾಡಂಬಾಳ ದಂತಿಸೆಟ್ಟಿಯರ ಮಗ ಆಲಪ್ಪನು ಸಾವಂದಿಯ ದಾರಿಯಲಿ ಕಳ್ಳರೊಡನೆ ಕಾದಾಡಿ ಸ್ವರ್ಗವನ್ನು ಸೇರಿದನು" ಎನ್ನುವ ಶಾಸನದ ಪಾಠವು ಹಲವು ಜಿಜ್ಞಾಸೆಗಳನ್ನು ಹುಟ್ಟುಹಾಕಿದೆ.[28] ಸಾಮಂತರಾಯ 1571ರವರೆಗೆ 28 ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ನಂತರ ಅವನ ಮಗ ಸಂಪಗರಾಯ 17 ವರ್ಷ ಆಳ್ವಿಕೆ ಮಾಡಿದನು. ಇವನ ಕಾಲದಲ್ಲಿ ತಿರುಮಲೆಯ ರಂಗನಾಥಸ್ವಾಮಿ ದೇವಾಲಯ ಜೀರ್ಣೋದ್ಧಾರವಾಯಿತು. ನಂತರ ಅವನ ಮಗ ಚಿಕ್ಕರಾಯ 16 ವರ್ಷ ಆಳಿದನು. ತನ್ನ ಮಗಳನ್ನೆ ಕಾಮಿಸಿದ ಚಿಕ್ಕರಾಯ ಬಿಳಿಯ ಬೆಟ್ಟದಿಂದ ದೋಣೆಗೆ ಹಾರಿ ಪ್ರಾಣಬಿಟ್ಟ. ಇವನಿಗೆ ಪುತ್ರ ಸಂತಾನವಿಲ್ಲದ ಕಾರಣ ಗುಡೇಮಾರನಹಳ್ಳಿ ಗಂಗಪ್ಪ ನಾಯಕ ಎಂಬ ತಳವಾರನು ಈ ಪ್ರದೇಶವನ್ನು ಆಕ್ರಮನಿಸಿಕೊಂಡು ಆ ಮಾರ್ಗದ ಎಲ್ಲ ಪ್ರಯಾಣಿಕರನ್ನು ದೋಚುತ್ತಿದ್ದ. ವಿಜಯನಗರದ ಅರಸರ ಆದೇಶದ ಮೇರೆಗೆ ಯಲಹಂಕ ನಾಡಪ್ರಭು ಇಮ್ಮಡಿ ಕೆಂಪೇಗೌಡನು ಗಂಗಪ್ಪ ನಾಯಕನನ್ನು ಕೊಂದು ಕೋಟೆಯನ್ನು ವಶಪಡಿಸಿಕೊಂಡನು. ಕರಿಸಾವಂತ ದುರ್ಗದ ಮೇಲೆ ಬೆಳೆದಿದ್ದ ಕಾಡನ್ನು ಸವರಿ ದುರ್ಗವನ್ನು ದುರಸ್ತಿಗೊಳಿಸಿ, ಅಲ್ಲಿಯೇ ಸೇನೆಯನ್ನು ಇರಿಸಿ, ಸೇನಾಧಿಪತಿಗಳನ್ನು ನೇಮಿಸಿದನು. ಸಾವನದುರ್ಗದ ಕೋಟೆಯು ಸುಮಾರು 2.5 ಕಿ.ಮೀ. ಉದ್ದ ಹಾಗೂ 1.5 ಕಿ.ಮೀ. ಅಗಲವಾಗಿದೆ. ಇಲ್ಲಿನ ಕೋಟೆಯನ್ನು 4 ಭಾಗಗಳಾಗಿ ವಿಂಗಡಿಸಬಹುದು.

1) ನೆಲಪಟ್ಟಣ 2) ಬಸವನದುರ್ಗ 3) ಬಿಳಿಬೆಟ್ಟದ ಕೋಟೆ 4) ಕರೀಬೆಟ್ಟದ ಕೋಟೆ.

### 6.3.8.1 ನೆಲಪಟ್ಟಣ

ಸಾವನದುರ್ಗದ ಎರಡೂ ಬೆಟ್ಟಗಳ ತಪ್ಪಲಲ್ಲಿ ಯಲಹಂಕ ನಾಡಪ್ರಭು ಇಮ್ಮಡಿ ಕೆಂಪೇಗೌಡನಿಂದ 1638ರಲ್ಲಿ ನೆಲಪಟ್ಟಣ ನಿರ್ಮಾಣವಾಯಿತು. ಇಮ್ಮಡಿ ಕೆಂಪೇಗೌಡ ಅದನ್ನು ತನ್ನ ಹೊಸ ರಾಜಧಾನಿಯನ್ನಾಗಿ ಮಾಡಿಕೊಂಡನು. ಕಲ್ಲು ಮತ್ತು ಮಣ್ಣಿನಿಂದ ಕೋಟೆ ಕಟ್ಟಿದನು. ಇದು ಹತ್ತು ಕಿ.ಮೀ. ವ್ಯಾಸದ ದೊಡ್ಡ ಪಟ್ಟಣವಾಗಿತ್ತು. ಇಲ್ಲಿ ಅರಮನೆ, ಸೇನಾನೆಲೆ, ವ್ಯಾಪಾರ ವಹಿವಾಟುಗಳಿಗೆ ಅನುಕೂಲಗಳನ್ನು ಕಲ್ಪಿಸಿದ್ದನು. ಜನವಸತಿ ನಿರ್ಮಿಸಿ ಸೂಕ್ತ ರಕ್ಷಣಾ ವ್ಯವಸ್ಥೆ ಮಾಡಿದನು. ಇಲ್ಲಿ ದ್ವಾರಗಳು, ಅರಮನೆಯ ಅವಶೇಷಗಳು, ಹಜಾರ ಕಂಡುಬರುತ್ತದೆ.

### 6.3.8.2 ಕರಿಬೆಟ್ಟದ ಕೋಟೆ

ಕರಿಬೆಟ್ಟದ ಕೋಟೆಯನ್ನು ಬೆಟ್ಟದ ತುದಿಯವರೆಗೂ ನಿರ್ಮಿಸಲಾಗಿದೆ. ಈ ಕೋಟೆಯನ್ನು ಪ್ರವೇಶಿಸಲು ಅನೇಕ ದ್ವಾರಗಳನ್ನು ಮಾಡಲಾಗಿದೆ. ಈ ದ್ವಾರಗಳು ವೈರಿಗಳಿಗೆ ನೇರವಾಗಿ ಕಾಣದಂತೆ ಬಾಗಿಲ ಎದುರಿಗೆ ಅಡ್ಡ ಗೋಡೆಗಳನ್ನು ಕಟ್ಟಲಾಗಿದೆ. ಈ ಗೋಡೆಗಳು 5–6 ಅಡಿಗಳಷ್ಟು ದಪ್ಪವಾಗಿವೆ. ಇಲ್ಲಿನ ಕೊತ್ತಲಗಳು ಚೌಕಾಕಾರದಲ್ಲಿಯೂ, ಕೆಲವೊಂದು ಅರ್ಧವೃತ್ತಾಕಾರದಲ್ಲಿಯೂ ಇರುವುದನ್ನು ಕಾಣಬಹುದು. ಬೆಟ್ಟದ ತುದಿಯಲ್ಲಿ ಕಣಜ, ನೀರಿನದೊಣೆ, ಕಟ್ಟಡದ ಅವಶೇಷಗಳು ಕಂಡುಬರುತ್ತವೆ.

### 6.3.8.3 ಬಿಳಿಬೆಟ್ಟದ ಕೋಟೆ

ಬಿಳಿಯ ಬೆಟ್ಟದಲ್ಲಿ ಚೌಕಾಕಾರದ ಮತ್ತು ವರ್ತುಲಾಕಾರದ ಕಲ್ಲಿನ ಕೊತ್ತಲಗಳನ್ನು ಕಾಣಬಹುದು. ಅಲ್ಲದೆ, ಸಭಾಂಗಣ, ಮದ್ದಿನಮನೆ, ಕಾವಲುಚೌಕಿ ಮೊದಲಾದವುಗಳ ಅವಶೇಷಗಳು ಕಂಡುಬರುತ್ತವೆ. ಬೆಟ್ಟದ ಮೇಲ್ಭಾಗದವರೆಗೆ ಎರಡು ಕೋಟೆ ಗೋಡೆಗಳನ್ನು ಕಾಣುತ್ತೇವೆ. ಬೆಟ್ಟದ ಮೇಲಕ್ಕೇರಲು ಕರಿಬೆಟ್ಟದ ತಪ್ಪಲಿನಿಂದ ಪಶ್ಚಿಮದಿಕ್ಕಿನಿಂದ ಏರಲು ಕಚ್ಚಾ ಮೆಟ್ಟಿಲುಗಳಿವೆ. ಬಿಳಿಬೆಟ್ಟ ಮತ್ತು ಕರಿಬೆಟ್ಟಗಳ ನಡುವೆ ಒಂದು ಪ್ರಪಾತವಿದ್ದು, ಸುಮಾರು 10 ಅಡಿಗಳ ದೂರವನ್ನು ಮರದ ಹಲಗೆಯ ಸಹಾಯದಿಂದಲೇ ದಾಟಬೇಕು. ಅಲ್ಲೊಂದು ಕಿರಿದಾದ ದ್ವಾರವಿದ್ದು ಶತೃಗಳು ಆಕ್ರಮಿಸಿ ಮೇಲೇರಿ ಬಂದಾಗ ಮರದ ಹಲಗೆಯನ್ನು ತೆಗೆದುಬಿಟ್ಟರೆ ಕೋಟೆಯ ಮೇಲ್ಭಾಗಕ್ಕೆ ಪ್ರವೇಶಿಸಲು ಸಾಧ್ಯವಾಗುತ್ತಿರಲಿಲ್ಲ. ಹೀಗೆ ಬಲಾಢ್ಯ ಮತ್ತು ಸುರಕ್ಷಿತ ಕೋಟೆ ಇದಾಗಿತ್ತು. ಮುಂದೆ ಹೈದರಾಲಿ ಮತ್ತು ಟಿಪ್ಪುಸುಲ್ತಾನ ಕೂಡ ಈ ಕೋಟೆಯನ್ನು ಬಳಸಿಕೊಂಡಿರುವುದಕ್ಕೆ ಸಾಕ್ಷಿಯಾಗಿ ವೃತ್ತಾಕಾರದ ಕೊತ್ತಳಗಳನ್ನು ಕಾಣಬಹುದಾಗಿದೆ. ಈ ಕೋಟೆಯನ್ನು ಮುತ್ತಲು ಬ್ರಿಟಿಷರು ನಡೆಸಿದ ಪ್ರಯತ್ನದ ಬಗೆಗೂ ವಿವರವಾದ ವರದಿಗಳಿವೆ.

### 6.3.8.4 ಬಸವನದುರ್ಗ

ಬಸವನದುರ್ಗವು ಸಾವನದುರ್ಗದ ಬಿಳಿಬೆಟ್ಟದಿಂದ ದಕ್ಷಿಣಕ್ಕಿದೆ. ಬೆಟ್ಟದ ಮೇಲ್ಭಾಗವು ಸಮತಟ್ಟಾಗಿದ್ದು ಮೈದಾನದಿಂದ ಕೂಡಿದೆ. ಇಲ್ಲಿ ಕಾವಲು ಗೋಪುರಗಳು, ಸೈನಿಕ ಕಟ್ಟಡಗಳು, ಆಯತಾಕಾರದ ಅರಮನೆಯ ಅವಶೇಷಗಳು, ನೀರಿನ ದೋಣೆಗಳು ಕಂಡುಬರುತ್ತವೆ. ಇಲ್ಲಿನ ಕೋಟೆಯ ಗೋಡೆಗಳು ಸುಮಾರು 7–10 ಅಡಿಗಳ ಗಾತ್ರ ಇವೆ. ಒಟ್ಟಾರೆ, ಸೈನಿಕ ವಸತಿ ನೆಲೆಗೆ ಸೂಕ್ತವಾದ ಪ್ರದೇಶವಾಗಿದೆ.

## 6.4 ಅರಮನೆಗಳು

ನಾಡಪ್ರಭುಗಳ ಕೋಟೆಗಳ ಒಳಗಿನ ಆವರಣಗಳಲ್ಲಿ ಅರಮನೆಗಳಂತಹ ಕಟ್ಟಡಗಳು ನಿರ್ಮಾಣವಾಗಿದ್ದವು. ಈ ಕಟ್ಟಡಗಳು ಸಂರಕ್ಷಣೆಗಾಗಿ ಸುತ್ತಲೂ ಕೋಟೆಗೋಡೆಗಳಂತಹ ರಚನೆಗಳನ್ನು ಹೊಂದಿದ್ದವು. ಇವುಗಳಿಗೆ ಪ್ರತ್ಯೇಕವಾದ ದ್ವಾರಗಳು ಇದ್ದವು. ಇವುಗಳ ಮೂಲಕ ಪ್ರವೇಶಿಸಿದಾಗ, ಒಳಭಾಗದಲ್ಲಿ ಪ್ರಭುಗಳ ವಾಸದ ಮನೆಗಳು, ಸಣ್ಣ ಉದ್ಯಾನವನಗಳು, ಒಡ್ಡೋಲಗದಂತಹ ಪುಟ್ಟ ರಚನೆಗಳು, ದೇವಾಲಯಗಳು ನಿರ್ಮಾಣವಾಗಿದ್ದವು. ಈ ವಿನ್ಯಾಸದಲ್ಲಿ ಸಹ ನಾವು ವಿಜಯನಗರದ ಅರಮನೆ ನಿರ್ಮಾಣದ ಶೈಲಿಯನ್ನು ಕಾಣಬಹುದು. ಬೆಂಗಳೂರು, ದೇವನಹಳ್ಳಿ, ಯಲಹಂಕ, ಸಾವನದುರ್ಗ, ಹುತ್ರಿದುರ್ಗ ಮತ್ತು ಹುಲಿಯೂರು ದುರ್ಗಗಳ ಕೋಟೆಗಳ ಒಳಗೆ ಮತ್ತು ಸಮೀಪದಲ್ಲಿ ಅರಮನೆ ಕಟ್ಟಡಗಳನ್ನು ನಿರ್ಮಿಸಲಾಗಿತ್ತು.

## 6.5 ಹಜಾರಗಳು

ಮಧ್ಯಕಾಲೀನ ಅವಧಿಯಲ್ಲಿ ಅರಸರು ಕೋಟೆಗಳ ರಚನೆಗಳ ಆವರಣದಲ್ಲಿಯೇ ಹಜಾರಗಳೆಂದು ಕರೆಯಲ್ಪಡುವ ವೇದಿಕೆಗಳುಳ್ಳ ಕಟ್ಟಡಗಳನ್ನು ನಿರ್ಮಾಣ ಮಾಡಿರುವುದು ಕಂಡುಬರುತ್ತದೆ. ಹಾಗಾಗಿ ಹುತ್ರಿದುರ್ಗ, ಶಿವಗಂಗೆ, ಸಾವನದುರ್ಗ ಮತ್ತು ಮಾಗಡಿ ಪ್ರದೇಶಗಳಲ್ಲಿ ಕೆಂಪೇಗೌಡರ ಹಜಾರ ಎಂಬ ವಿಶಿಷ್ಟ ಹೆಸರಿನಿಂದ ಗುರುತಿಸಲಾದ ಇಂತಹ ರಚನೆಗಳನ್ನು ಕಾಣಬಹುದು. ಮುಖಮಂಟಪಗಳಲ್ಲಿ ಕಂಬಗಳಿದ್ದು ಇವು ಆಕರ್ಷಕಗಳಾಗಿವೆ. ಸರಳಸುಂದರ ಅಧಿಷ್ಠಾನಗಳನ್ನು ಹೊಂದಿವೆ. ವಿಸ್ತಾರವಾದ ಅಂಗಳವನ್ನು ಇವುಗಳ ಒಳಭಾಗದಲ್ಲಿ ಕಾಣಬಹುದು. ಹುತ್ರಿದುರ್ಗದ ಹಜಾರವು ಚಿಕ್ಕಗಾತ್ರವನ್ನು ಹೊಂದಿದ್ದರೆ, ಸಾವನದುರ್ಗದ ಹಜಾರವು ವಿಸ್ತಾರವಾದದ್ದಾಗಿದೆ. ಶಿವಗಂಗೆ ಮತ್ತು ಮಾಗಡಿಯ ಹಜಾರಗಳು ದೇವಾಲಯದ ಸಂಕೀರ್ಣಗಳ ಭಾಗವಾಗಿವೆ. "ಬಹುಶಃ ಇವುಗಳ ರಚನೆಯಲ್ಲಿ ಅರಸರ ವಾಸಸ್ಥಾನ ಹಾಗೂ ದೇವಾಲಯ ಸಂಕೀರ್ಣತೆಗಳಿಗೂ ತಾತ್ವಿಕ ಸಂಬಂಧ ಕಲ್ಪಿಸುವ ಅರ್ಥಗಳನ್ನು ಗುರುತಿಸಬಹುದು. ಹಂಪಿಯ ಮಹಾನವಮಿ ದಿಬ್ಬದ ನಿರ್ಮಾಣದ ಹಿನ್ನೆಲೆ ಹಾಗೂ ಅದರ ಆಚರಣೆಯನ್ನು ಕೆಂಪೆಗೌಡ ಹಜಾರಗಳಲ್ಲಿ ಸಾಮ್ಯತೆಯನ್ನು ಕಾಣಬಹುದು. ವಿಜಯನಗರದಲ್ಲಿ ಏಕೈಕ ಉದಾಹರಣೆ ಇದ್ದರೆ, ನಾಡಪ್ರಭುಗಳಲ್ಲಿ ರಾಜಧಾನಿಯಲ್ಲಿ ಮತ್ತು ಧಾರ್ಮಿಕ ಸ್ಥಳಗಳಲ್ಲಿಯೂ ಇರುವುದು ವಿಶೇಷ. ಶಿವಗಂಗೆಯಂತಹ ಧಾರ್ಮಿಕ ಕ್ಷೇತ್ರದಲ್ಲಿಯೂ ಹಾಗೆ ಇಂತಹ ಆಚರಣೆಗಳನ್ನು ರಾಜಧಾನಿ ನಗರಗಳ ಹೊರಗಡೆಯೂ ಆಚರಿಸುತ್ತಿದ್ದರೆಂದು ಗುರುತಿಸಬಹುದು. ನಾಡಪ್ರಭುಗಳ ರಾಜಧಾನಿಯಾಗಿದ್ದ ಬೆಂಗಳೂರಿನ ಅರಮನೆಯ

ಆವರಣದಲ್ಲಿ ಕೆಂಪೇಗೌಡ ಹಜಾರ ಕಟ್ಟಡ ಇಲ್ಲದಿರುವುದು ಒಂದು ಸೋಜಿಗದ ಸಂಗತಿ. ಕೋಟೆ ವೆಂಕಟರಮಣ ದೇವಸ್ಥಾನ ಹಳೆಯ ಕೋಟೆ ಆವರಣದ ಬಹು ಮುಖ್ಯ ಕೇಂದ್ರ ಹಾಗೂ ಎಲ್ಲಾ ಚಟುವಟಿಕೆಗಳ ಸ್ಥಳವಾಗಿತ್ತು. ಬಹುಶಃ ಇದರ ಅಕ್ಕಪಕ್ಕದಲ್ಲಿ ಕೆಂಪೇಗೌಡರು ನಿರ್ಮಿಸಿದ್ದ 'ಹಜಾರ' ಇರಬಹುದಾದ ಸಾಧ್ಯತೆಗಳಿವೆ. ಅದರ ಅವಶೇಷದ ಅನ್ವೇಷಣೆ ಅಥವಾ ಶೋಧನೆಯ ಅವಶ್ಯಕತೆ ಇರುವುದು" ಎಂಬ ಅಭಿಪ್ರಾಯವು ಗಮನಾರ್ಹವಾದುದಾಗಿದೆ.[29]

## 6.6 ನಗರ ರಚನೆಗಳು

ನಾಡಪ್ರಭುಗಳು ಬಹುಮುಖ್ಯವಾಗಿ ಬೆಂಗಳೂರು, ಮಾಗಡಿ, ಯಲಹಂಕ, ಹುಲಿಯೂರುದುರ್ಗ, ಕುಣಿಗಲ್ ಮೊದಲಾದ ನಗರ, ಪಟ್ಟಣಗಳ ಏಳಿಗೆಗೆ ತಮ್ಮದೆಯಾದ ಕೊಡುಗೆಗಳನ್ನು ನೀಡಿದ್ದಾರೆ. ನಗರ ನಿರ್ಮಾಣ ಮಾಡುವಾಗ ನೆಲೆಯನ್ನು ಆಯ್ದುಕೊಳ್ಳುವ ವಿಚಾರದಲ್ಲಿ ರಕ್ಷಣಾತ್ಮಕವಾಗಿ ಸೂಕ್ತವಾದ ಮತ್ತು ಆಯಕಟ್ಟಿನ ಸ್ಥಳಗಳನ್ನು ಗುರುತಿಸಿ, ಆಯ್ಕೆ ಮಾಡಿಕೊಳ್ಳುತ್ತಿದ್ದರು. ಈ ಕಾರಣಕ್ಕಾಗಿ ಅವರಿಗೆ ಭೌಗೋಳಿಕ ಜ್ಞಾನ/ತಿಳುವಳಿಕೆ ಚೆನ್ನಾಗಿ ಕರಗತವಾಗಿತ್ತೆಂದು ತಿಳಿಯಬಹುದು. ನಾಡಪ್ರಭುಗಳ ಕಾಲದ ನಗರ ರಚನೆಗಳ ನೆಲೆ ಹಿನ್ನೆಲೆಗೆ ಕಾರಣವಾಗಿರುವ ಕೆಲವು ಅಂಶಗಳನ್ನು ಪಟ್ಟಿ ಮಾಡಬಹುದು.

1. ನಗರ ನಿರ್ಮಾಣದ ನೆಲೆಯನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಭೌಗೋಳಿಕವಾಗಿ ಎತ್ತರದ ದಿಣ್ಣೆಯ ಮೇಲೆ ಬಟ್ಟಲ ತಳದಂತಿರುವ ಮತ್ತು ಸುತ್ತಲು ಬೆಟ್ಟಗುಡ್ಡಗಳಿಂದ ಆವೃತ್ತವಾಗಿರುವಂತಹ ನೆಲೆಗಳನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಈ ರೀತಿಯ ರಚನೆಗಳು ರಕ್ಷಣಾ ದೃಷ್ಟಿಯಿಂದ ಅತ್ಯಂತ ಮುಖ್ಯವಾಗಿರುತ್ತಿದ್ದವು. ಈ ನೆಲೆಗಳ ಸಮೀಪದವರೆಗೆ ಶತೃಗಳು ಆಗಮಿಸಿದರೂ ಕೂಡ ನೆಲೆಗಳು ಅಗೋಚರವಾಗಿಯೇ ಇರುತ್ತಿದ್ದವು. ಉದಾ. ಬೆಂಗಳೂರು, ಮಾಗಡಿ, ಸಾವನದುರ್ಗ ಮುಂತಾದ ನೆಲೆಗಳನ್ನು ಹೆಸರಿಸಬಹುದು.

   ಆಧುನಿಕ ಬೆಂಗಳೂರು ನಗರದ ನಿರ್ಮಾಣಕ್ಕೆ ನಾಡಪ್ರಭು ಕೆಂಪೇಗೌಡರು ಆಯ್ದುಕೊಂಡಿರುವ ಪ್ರದೇಶ ಬಹು ಆಸಕ್ತಿದಾಯಕವಾಗಿದೆ. ಚಿಕ್ಕಬಳ್ಳಾಪುರದ ಉತ್ತರದಿಕ್ಕಿನಿಂದ ಆರಂಭವಾಗಿ ಮೇಕೆದಾಟು ಸಮೀಪದವರೆಗೆ ಸಾಗುವ 'ಉಪ ಜಲವಿಭಜಕ' ದಿಣ್ಣೆಯೊಂದರ ಮೇಲೆ ಬೆಂಗಳೂರನ್ನು ನಿರ್ಮಿಸಲಾಗಿದೆ. ಈ 'ಬೆಂಗಳೂರು ದಿಣ್ಣೆ'ಯು ಸಮುದ್ರಮಟ್ಟದಿಂದ 900 ಮೀ.ಗಳಿಗೂ ಹೆಚ್ಚು ಎತ್ತರವನ್ನು ಹೊಂದಿದೆ. ಇದು ಬೆಂಗಳೂರಿನಲ್ಲಿ ಹೈಗ್ರೌಂಡ್, ಸೆಂಟ್ರಲ್ ಕಾಲೇಜ್ ಮಾರ್ಗವಾಗಿ

ಅವಿನ್ಯೂ ರಸ್ತೆಯ ಪಕ್ಕದಲ್ಲಿ ಸಾಗಿ ಕೋಟೆ, ಟಿಪ್ಪು ಅರಮನೆ, ಹೆಚ್ಚು ಕಡಿಮೆ ಕೆ.ಆರ್.ರಸ್ತೆಯ ಒಂದು ಬದಿಯಲ್ಲಿಯೇ ಮುಂದುವರೆದು ಬಸವನಗುಡಿ, ಜಯನಗರ, ಬನಶಂಕರಿ ಬಡಾವಣೆಗಳತ್ತ ಸಾಗುತ್ತದೆ.

ಕೆಂಪೇಗೌಡರ ಕಾಲದ ಪೇಟೆ ಮತ್ತು ಕೋಟೆ ಪ್ರದೇಶವು ಬಟ್ಟಲ ತಳದಂತಿರುವ ನೆಲೆಯಾಗಿದೆ. ಇದರ ಸುತ್ತಲು ಉತ್ತರಕ್ಕೆ ರಾಜಮಹಲ್ ವಿಲಾಸ್, ಹೈಗ್ರೌಂಡ್ ಪ್ರದೇಶವೂ; ದಕ್ಷಿಣಕ್ಕೆ ಬಸವನಗುಡಿ ಗುಡ್ಡ ಮತ್ತು ಬನಶಂಕರಿಯ ದಿಣ್ಣೆಯೂ ಆವೃತ್ತವಾಗಿದೆ. ಪಶ್ಚಿಮದಲ್ಲಿ ಸುಂಕದಕಟ್ಟೆ, ಹೆಗ್ಗನಹಳ್ಳಿ, ಮಹಾಲಕ್ಷ್ಮಿಪುರಂ ದಿಣ್ಣೆಗಳೂ, ಪೂರ್ವದಲ್ಲಿ ಲಾಲ್‌ಭಾಗ್ ಮತ್ತು ಬೈರಸಂದ್ರದ ಗುಡ್ಡಗಳು ಸುತ್ತುವರೆದಿವೆ.

ಬೆಂಗಳೂರಿನ ಕೋಟೆ ಮತ್ತು ಪೇಟೆ ಪ್ರದೇಶವು ಸಮುದ್ರಮಟ್ಟದಿಂದ ಸುಮಾರು 900 – 910 ಮೀ.ಗಳಷ್ಟು ಎತ್ತರದಲ್ಲಿದೆ. ಇದರ ನಾಲ್ಕೂ ದಿಕ್ಕುಗಳಲ್ಲಿ: ಉತ್ತರದಲ್ಲಿ ರಾಜಮಹಲ್ ವಿಲಾಸ್ ಸಮುದ್ರಮಟ್ಟದಿಂದ ಸುಮಾರು 942ಮೀ. ಎತ್ತರದಲ್ಲಿದ್ದರೆ, ದಕ್ಷಿಣದಲ್ಲಿ ಬೈರಸಂದ್ರ ಮತ್ತು ಬಸವನಗುಡಿ ಗುಡ್ಡಗಳು 935 ಮೀ.ಗಳವರೆಗೆ ಎತ್ತರ ಇವೆ. ಪೂರ್ವದಲ್ಲಿ ಮಾರತ್ತಳ್ಳಿ ಸಮೀಪದ ಚನ್ನಪ್ಪನಹಳ್ಳಿ, ಸೊಣ್ಣೇನಹಳ್ಳಿ ಪರಿಸರದ ಗುಡ್ಡಗಳು 910 ಮೀ.ಗಿಂತಲೂ ಎತ್ತರದಲ್ಲಿವೆ. ಪಶ್ಚಿಮದಲ್ಲಿ ಸುಂಕದಕಟ್ಟೆ ಸುತ್ತಲ ದಿಣ್ಣೆಗಳು ಸುಮಾರು 930 ಮೀ.ಗಳ ಎತ್ತರದಲ್ಲಿವೆ. ಇವುಗಳ ನಡುವೆಯೂ ಕೂಡ ಕಣಿವೆ ದಿಣ್ಣೆಗಳಿವೆ. ಇವೆಲ್ಲವೂ ಬೆಂಗಳೂರು ಕೋಟೆ ಮತ್ತು ಪೇಟೆ ಪ್ರದೇಶವನ್ನು ತಾವರೆಯ ದಳಗಳಂತೆ ಆವೃತ್ತವಾಗಿವೆ. ನಗರ ಸುಲಭವಾಗಿ ಶತೃಗಳ ಕಣ್ಣಿಗೆ ಬೀಳದಂತೆ ಇವುಗಳು ಪ್ರಾಕೃತಿಕ ರಕ್ಷಣೆ ಒದಗಿಸುತ್ತವೆ. ಆದ್ದರಿಂದ ಕೆಂಪೇಗೌಡರು ಈ ಸ್ಥಳವನ್ನು ಆಯ್ಕೆ ಮಾಡಿಕೊಂಡಿರುವಂತೆ ತೋರುತ್ತದೆ. ಬೆಂಗಳೂರು ನೆಲೆಯ ಆಯ್ಕೆಯ ಹಿಂದೆ ನಾಯಿಯನ್ನು ಮೊಲ ಬೆನ್ನಟ್ಟಿದ ಸ್ಥಳವೆಂಬ ಐತಿಹ್ಯದ ಬದಲು, ಪ್ರಜ್ಞಾಪೂರ್ವಕವಾಗಿ ಆಯ್ಕೆ ಮಾಡಿಕೊಂಡಿರುವ ಸ್ಥಳ ಎಂದು ಹಂ.ಗು. ರಾಜೇಶ್ ಅವರು ಪ್ರತಿಪಾದಿಸಿದ್ದಾರೆ.[30] ಈ ರೀತಿಯ ನೆಲೆಗಳನ್ನು ಆಯ್ದು ನಗರಗಳನ್ನು ನಿರ್ಮಾಣ ಮಾಡಿರುವ ಉದಾಹರಣೆಗಳು ಮಧ್ಯಕಾಲೀನ ಸಂದರ್ಭದಲ್ಲಿ ಕಾಣಸಿಗುತ್ತವೆ. ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪಿ ಕೂಡ ಇಂತಹ ನೆಲೆಯಲ್ಲಿಯೇ ಇರುವುದನ್ನು ಗಮನಿಸಬಹುದು.

2. ಯಲಹಂಕ ನಾಡಪ್ರಭುಗಳು ನಗರ/ಪಟ್ಟಣಗಳ ಅಭಿವೃದ್ಧಿಗೆ ಆಯ್ದುಕೊಂಡ ಸ್ಥಳಗಳು ಸಾಮಾನ್ಯವಾಗಿ ನೈಸರ್ಗಿಕ ನೀರಿನ ಒರತೆಗಳು ಇರುವ ಅಥವಾ ಸಮೃದ್ಧ ನೀರಿನ ಲಭ್ಯತೆಗಳಿರುವ ನದಿ, ತೊರೆ, ಕೆರೆಗಳ ಸಾಮಿಪ್ಯದಲ್ಲಿವೆ. ಸಾಮಾನ್ಯವಾಗಿ ಡೈಕ್ ಶಿಲಾಶ್ರೇಣಿಯ ಆಜುಬಾಜಿನಲ್ಲಿ ನೈಸರ್ಗಿಕ ನೀರಿನ ಒರತೆಗಳು ಕಂಡುಬರುತ್ತವೆ. ಈ ನೀರಿನ ಬುಗ್ಗೆಗಳು / ಚಿಲುಮೆಗಳು ವರ್ಷಪೂರ್ತಿ ನಿರಂತರವಾಗಿ ನೀರನ್ನು ಪೂರೈಸುತ್ತಿರುತ್ತವೆ. ಇಂತಹ ನೆಲೆಗಳನ್ನು ಗುರುತಿಸಿ ಕೋಟೆ, ಪೇಟೆಗಳನ್ನು ಅಥವಾ ನಗರಗಳನ್ನು ಕಟ್ಟುವುದು ಪಾಳೆಯಗಾರರ ಕಾಲದ ನಿರ್ಮಾಣಗಳ ಹಿನ್ನೆಲೆಯಲ್ಲಿ ನೋಡಬಹುದು. ಉದಾ.: ಬೆಂಗಳೂರು ಕೋಟೆಯ ದಕ್ಷಿಣದಲ್ಲಿ ಚಿಲುಮೆಯೊಂದನ್ನು ಗುರುತಿಸಿ, ಕಾರಂಜಿ ಕೆರೆಯನ್ನು ಯಲಹಂಕ ನಾಡಪ್ರಭುಗಳು ನಿರ್ಮಿಸಿದರು. ಇದರಿಂದ ಕೋಟೆಯ ಒಳಭಾಗಕ್ಕೆ ಮತ್ತು ಕಂದಕಕ್ಕೆ ನೀರನ್ನು ಪೂರೈಸಲಾಗುತ್ತಿತ್ತು. ಬೆಂಗಳೂರು ನಗರದ ನಡುವೆ ಅಂದರೆ ಓಕಳಿಪುರ, ಬಿನ್ನಿಮಿಲ್ ಮಾರ್ಗವಾಗಿ ಒಂದು ಡೈಕ್ ಶ್ರೇಣಿ ಹಾದು ಹೋಗಿದ್ದು, ನಗರಿಕರಣದಿಂದಾಗಿ ಅದರ ಕುರುಹುಗಳು ಇಂದು ಕಾಣಸಿಗುವುದಿಲ್ಲ ಎಂದು ಎಸ್.ಕೆ. ಅರುಣಿ ಅವರು ಅಭಿಪ್ರಾಯ ಪಟ್ಟಿದ್ದಾರೆ. ಈ ಶ್ರೇಣಿಯ ಆಸುಪಾಸಿನಲ್ಲಿ ನೀರಿನ ಒರತೆಗಳು ಕಂಡುಬರುತ್ತವೆ ಎಂದು ಹೇಳುತ್ತಾರೆ.[31] ಸಾವನದುರ್ಗವು ಅರ್ಕಾವತಿ ಹೊಳೆಯ ಬಲದಂಡೆಯಲ್ಲಿದ್ದರೆ, ಹುಲಿಯೂರುದುರ್ಗವು ಶಿಂಷಾ ನದಿಯ ಎಡದಂಡೆಯ ಮೇಲಿದೆ. ಜೊತೆಗೆ ದೀಪಾಂಬುದಿಕೆರೆ, ಹಳೆವೂರುಕೆರೆ, ದುರ್ಗದ ಕೆರೆಗಳಂತಹ ಬೃಹತ್ ಕೆರೆಗಳು ಹುಲಿಯೂರುದುರ್ಗದ ಪರಿಸರದಲ್ಲಿ ಇವೆ. ಇವು ವಿಶಾಲವಾದ ಕೃಷಿ ಭೂಪ್ರದೇಶಕ್ಕೆ ನೀರುಣಿಸುತ್ತವೆ. ಕುಣಿಗಲ್ ಪಟ್ಟಣವು ನಾಗಿನಿ ಎಂಬ ಹೊಳೆ ದಂಡೆಯಲ್ಲಿದೆ. ನಾಗಿನಿ, ನಳಿನಿ ಮತ್ತು ಕಮಲ ಹೊಳೆಗಳು ಬಂದು ಕೂಡುವ ಸ್ಥಳದಲ್ಲಿ ಗಂಗರ ಕಾಲದಲ್ಲಿ ನಿರ್ಮಿಸಿದ ಬೃಹತ್ ಕೆರೆಯೂ ಇದೆ. ಮಾಗಡಿ ಪರಿಸರದಲ್ಲಿ ಹೇಳಿಕೊಳ್ಳುವಂತಹ ಯಾವ ದೊಡ್ಡ ಕೆರೆ–ತೊರೆಗಳು ಇಲ್ಲ. ಆದರೆ, ಈ ಪ್ರದೇಶದಲ್ಲಿ ಸಾಕಷ್ಟು ನೀರಿನ ಒರತೆಗಳು ಇವೆ. ಗುಡ್ಡಗಳ ತಪ್ಪಲಾದ್ದರಿಂದ ಮತ್ತು ಬಟ್ಟಲ ತಳಾಕೃತಿಯಲ್ಲಿ ಮಾಗಡಿ ಪ್ರದೇಶ ಇರುವುದರಿಂದ ಈ ಪರಿಸರದಲ್ಲಿನ ಕೆರೆ ಕಲ್ಯಾಣಿಗಳಲ್ಲಿ ಸದಾಕಾಲ ನೀರು ತುಂಬಿರುತ್ತದೆ.

3. ಒಂದು ಶತಮಾನದಲ್ಲಿ ದಕ್ಷಿಣ ಭಾರತದ ಪ್ರಮುಖ ವಾಣಿಜ್ಯ ನಗರವಾಗಿ ಬೆಳೆದಿದ್ದ ಬೆಂಗಳೂರು ಆದಿಲ್‌ಷಾಹಿಗಳ ಕೈವಶವಾದ (1638) ನಂತರ ಅಭಿವೃದ್ಧಿ ಹೊಂದಿರದ ಪ್ರದೇಶಗಳನ್ನು ಯಲಹಂಕ ನಾಡಪ್ರಭುಗಳು ಹೊಂದಬೇಕಾಯಿತು. ಅವರು

ಬೆಂಗಳೂರಿನಂತಹ ಮಹಾನಗರದ ಗುಂಗಿನಿಂದ ಹೊರಬಂದು ಮಾಗಡಿ, ಸಾವನದುರ್ಗ, ಹುಲಿಯೂರುದುರ್ಗ, ಕುಣಿಗಲ್ ಮುಂತಾದ ಊರುಗಳನ್ನು ಅಭಿವೃದ್ಧಿಪಡಿಸುವ ಕಡೆಗೆ ಗಮನ ಹರಿಸಿದರು. ಇಲ್ಲಿ ಈಗಾಗಲೇ ಚರ್ಚಿಸಿರುವಂತೆ ಪಿನಾಕಿನಿ ಮತ್ತು ಅರ್ಕಾವತಿ ನದಿ ಕಣಿವೆಯ ನಡುವಿನ ಎತ್ತರವಾದ ಬಯಲು ಪ್ರದೇಶಗಳು ನಾಡಪ್ರಭುಗಳ ಕೈತಪ್ಪಿ, ಕುರುಚಲು ಕಾಡು ಮತ್ತು ಬೆಟ್ಟಗುಡ್ಡಗಳಿಂದ ಆವೃತ್ತವಾದ ಅರ್ಕಾವತಿ ಮತ್ತು ಶಿಂಷಾ ನದಿಗಳ ನಡುವಿನ ಪ್ರದೇಶಗಳಿಗೆ ತೃಪ್ತಿಪಡಬೇಕಾಯಿತು. ಈ ಪ್ರದೇಶಗಳಲ್ಲಿ ರಕ್ಷಣಾತ್ಮಕವಾಗಿ ಆಯಕಟ್ಟಿನ ಮತ್ತು ವಾಣಿಜ್ಯ ಮಾರ್ಗಗಳ ಸಂಪರ್ಕವಿರುವ ನೆಲೆಗಳನ್ನು ಆಯ್ದುಕೊಂಡು ಅಭಿವೃದ್ಧಿ ಪಡಿಸಿದರು. ಸಾವನದುರ್ಗ ರಕ್ಷಣೆಯ ದೃಷ್ಟಿಯಿಂದ ಹೆಚ್ಚು ಸರಕ್ಷಿತವಾಗಿತ್ತು ಮಾತ್ರವಲ್ಲ; ಪ್ರಾಚೀನ ವ್ಯಾಪಾರ ಮಾರ್ಗವೊಂದು ಈ ಊರಿನ ಮೂಲಕವೇ ಹಾದು ಹೋಗುತ್ತಿತ್ತು. ಇತ್ತೀಚೆಗೆ ಕೆ.ಆರ್. ನರಸಿಂಹನ್ ಅವರು ಶೋಧಿಸಿದ ಕಲ್ಲೂರು ವರದರಾಜಸ್ವಾಮಿ ದೇವಾಲಯದ ಅಧಿಷ್ಟಾನದ ಪಟ್ಟಿಕೆಯ ಮೇಲಿನ ಕ್ರಿ.ಶ. 1330ರ ಶಾಸನದಲ್ಲಿ ಅವ್ವೆಯರಹಳ್ಳಿಯ ಕುಳವನೂರ ಅರಮನೆಯಿಂದ ದೇವರಿಗೆ ದಾನ ಕೊಟ್ಟಿರುವ ಉಲ್ಲೇಖವಿದೆ.[32] ಅಂದರೆ ಸಾವನದುರ್ಗದ ಸಮೀಪದಲ್ಲಿರುವ ಇಂದಿನ ಮಂಚನಬಲೆ ಅಣೆಕಟ್ಟಿನ ಮುಂಭಾಗದಲ್ಲಿರುವುದೇ ಅವ್ವೇರಹಳ್ಳಿ. ಇದೇ ಶಾಸನದಲ್ಲಿ ಉಕ್ತವಾಗಿರುವ ಅವ್ವೆಯರಹಳ್ಳಿ. ಇಲ್ಲಿ ಅರಮನೆ ಇದ್ದ ಉಲ್ಲೇಖವಿದೆ. ಅರ್ಕಾವತಿಯ ದಂಡೆಯಲ್ಲಿಯೇ ಅರಮನೆಯೊಂದು 14ನೇ ಶತಮಾನದ ಪೂರ್ವಾರ್ದದಲ್ಲಿಯೇ ಇತ್ತೆಂದು ಭಾವಿಸಬಹುದು. ಬಹುತೇಕ ಇದೇಕಾಲದಲ್ಲಿ ಸಾವಂಧಿಯ ರಸ್ತೆಯಲ್ಲಿ ಕಳ್ಳರ ಉಪಟಳವಿದ್ದ ಬಗ್ಗೆ ಶಾಸನವೊಂದು ಉಲ್ಲೇಖಿಸುತ್ತದೆ. ಇವುಗಳಿಂದ ಈ ಪ್ರದೇಶ ಆರ್ಥಿಕವಾಗಿ ಸಬಲವಾಗಿತ್ತೆಂದು ಅರಿಯಬಹುದು. ಈ ಪ್ರದೇಶಗಳ ಮೇಲಿನ ನಿಯಂತ್ರಣಕ್ಕಾಗಿ ಯಲಹಂಕ ನಾಡಪ್ರಭುಗಳು ಸಾವನದುರ್ಗದಲ್ಲಿ ಸುಮಾರು ಹತ್ತು ಚ.ಕಿ.ಮೀ. ವಿಸ್ತಾರದ ನೆಲಪಟ್ಟಣವನ್ನು ಅಭಿವೃದ್ಧಿಪಡಿಸಿ, ತಮ್ಮ ರಾಜಧಾನಿಯನ್ನಾಗಿಯೂ ಮಾಡಿಕೊಂಡು ಆಳಿದರೆಂದು ತರ್ಕಿಸಬಹುದು.

4. ಈ ನಗರ ರಚನೆಗಳು ಮತ್ತು ಪುನರ್ ರಚನೆಗಳು ನಾಡಪ್ರಭುಗಳ ಪ್ರದೇಶಗಳಿಗೆ ಒಳನಾಡಿನ ಮತ್ತು ಹೊರನಾಡಿನ ಪ್ರಮುಖ ವ್ಯಾಪಾರಿ ಮಾರ್ಗಗಳಿಗೆ ಸನಿಹದಲ್ಲಿದ್ದವು. ಈ ಅಂಶವನ್ನು ಕುಣಿಗಲ್, ಮಾಗಡಿ ಮತ್ತು ಸಾವನದುರ್ಗದ ಹಿನ್ನೆಲೆಯಲ್ಲಿಯೇ ಪರಿಶೀಲಿಸಬಹುದಾಗಿದೆ. ಕುಣಿಗಲ್ ಕರಾವಳಿಯಿಂದ ಒಳನಾಡನ್ನು ಪ್ರವೇಶಿಸುವ ಒಂದು

ರೀತಿಯ ವ್ಯಾಪಾರದ ದ್ವಾರವಾಗಿತ್ತು. ಮಂಗಳೂರು ಕರಾವಳಿ ಭಾಗದಿಂದ ಒಳನಾಡಿನಲ್ಲಿ ವ್ಯಾಪಾರಕ್ಕಾಗಿ ಆಗಮಿಸುವ ದೇಶಿ–ವಿದೇಶಿ ವ್ಯಾಪಾರಿಗಳು ಕುಣಿಗಲ್ ಮೂಲಕವೇ ಪ್ರವೇಶಿಸಬೇಕಿತ್ತು. ಅಂತಹ ಆಯಕಟ್ಟಿನ ವಾಣಿಜ್ಯ ಮಾರ್ಗದ ಪಟ್ಟಣವನ್ನು ಅಭಿವೃದ್ಧಿ ಪಡಿಸುವ ಮೂಲಕ ಆ ಮಾರ್ಗದ ವ್ಯಾಪಾರದ ಮೇಲೆ ನಿಯಂತ್ರಣ ಸಾಧಿಸಿದರು.

5. ವೈರಿಗಳ ಆಕ್ರಮಣವನ್ನು ಯುಕ್ತವಾಗಿ ಎದುರಿಸಲು ಪ್ರಾಕೃತಿಕವಾಗಿ ಅಂದರೆ, ಬೆಟ್ಟ ಗುಡ್ಡಗಳು ಸಹ ರಕ್ಷಣೆಯನ್ನೊದಗಿಸಿದ್ದವು. ಇದನ್ನು ಸಾವನದುರ್ಗ, ಹುತ್ರಿದುರ್ಗ, ಹುಲಿಯೂರುದುರ್ಗ, ರಾಮಗಿರಿಯ ಹಿನ್ನೆಲೆಯಲ್ಲಿ ಪರಿಶೀಲಿಸಬಹುದು. ಸಾವನದುರ್ಗಕ್ಕೆ ಬೆಟ್ಟಗುಡ್ಡಗಳ ಪ್ರಾಕೃತಿಕ ರಕ್ಷಣೆ ಇತ್ತು. ಹುತ್ರಿದುರ್ಗ, ಹುಲಿಯೂರುದುರ್ಗಗಳು ಭೂಮಟ್ಟದಿಂದ ಮೇಲೆತ್ತಲ್ಪಟ್ಟ 100–300 ಅಡಿಗಳ ಎತ್ತರದ ಭೂಪ್ರದೇಶದಲ್ಲಿ ಕೋಟೆ ಮತ್ತು ಠಾಣ್ಯವನ್ನು ನಿರ್ಮಿಸಿಕೊಂಡಿರುವುದನ್ನು ಗಮನಿಸಬಹುದು. ಹುಲಿಯೂರುದುರ್ಗ ಮತ್ತು ಹುತ್ರಿದುರ್ಗಗಳು ಒಳನಾಡಿನ ವ್ಯಾಪಾರ ಮಾರ್ಗದ ಸಮೀಪ್ಯದಲ್ಲಿಯೇ ಇದ್ದವು.

ಒಟ್ಟಾರೆ, 1638ರಲ್ಲಿ ಬೆಂಗಳೂರಿನಂತಹ ವಾಣಿಜ್ಯ ಕೇಂದ್ರ ಕೈತಪ್ಪಿ, ಅಲ್ಲಿಂದ ಹೊರಬಿದ್ದ ಮೇಲೆ ನಾಡಪ್ರಭುಗಳು ಅಂತಹ ಮತ್ತೊಂದು ವಾಣಿಜ್ಯ ನಗರವನ್ನು ಕಟ್ಟುವ ಕನಸನ್ನು ಕೈಬಿಟ್ಟು, ಕೋಟೆಗಳನ್ನು ಕಟ್ಟಿ ವಾಣಿಜ್ಯ ಮಾರ್ಗಗಳನ್ನು ನಿಯಂತ್ರಿಸುವ ಕಡೆಗೆ ಯೋಚಿಸಿದಂತಿದೆ. ಇದಕ್ಕೆ ಕಾರಣ ಬೆಂಗಳೂರಿನಂತಹ ಮತ್ತೊಂದು ನಗರವನ್ನು ಅಭಿವೃದ್ಧಿಪಡಿಸಲು ಸಂಪನ್ಮೂಲದ ಕೊರತೆ ಕೂಡ ಕಾರಣವಾಗಿರಬಹುದು. ನಗರವನ್ನು ಕಟ್ಟಿದ ಮೇಲೆ ಅದನ್ನು ರಕ್ಷಿಸುವಂತಹ ಬಲಿಷ್ಠ ಸೈನ್ಯವನ್ನು ನಿರ್ವಹಿಸಬೇಕಾಗುತ್ತದೆ. ಅದಿಲ್ಲದೆ ನಗರವನ್ನು ಕಟ್ಟಿದರೆ ಗೆದ್ದಲು ಕಟ್ಟಿದ ಹುತ್ತಕ್ಕೆ ಹಾವು ಬಂದು ಸೇರಿದಂತಾಗುತ್ತದೆ. ಆದ್ದರಿಂದ ಯಲಹಂಕ ನಾಡಪ್ರಭುಗಳು ದೊಡ್ಡ ನಗರವೊಂದನ್ನು ಅಭಿವೃದ್ಧಿ ಪಡಿಸುವ ಬದಲು, ಪುಟ್ಟ ಪುಟ್ಟ ಪಟ್ಟಣಗಳನ್ನು ಅಭಿವೃದ್ಧಿಪಡಿಸಿ, ವಾಣಿಜ್ಯ ಮಾರ್ಗಗಳನ್ನು ನಿಯಂತ್ರಿಸುವ ಕಡೆಗೆ ಗಮನಹರಿಸಿದಂತೆ ಕಾಣುತ್ತದೆ. ಇದು ಅವರ ವಾಣಿಜ್ಯ ನೀತಿಯೂ ಆಗಿತ್ತೆಂದು ಊಹಿಸಬಹುದು.

### 6.6.1 ಬೆಂಗಳೂರು

ಬೆಂಗಳೂರು ನಗರವಂತೂ ಅತ್ಯಂತ ವಿಶಿಷ್ಟವಾದ ರೀತಿಯಲ್ಲಿ ತನ್ನ ರಚನಾ ವೈಖರಿಯನ್ನು ಒಳಗೊಂಡಿದೆ. ನಾಡಪ್ರಭುಗಳ ಕಾಲದ ಇದರ ರಚನಾತ್ಮಕ ವಿಶೇಷತೆಗಳನ್ನು ಈ ಕೆಳಕಂಡ ಅಂಶಗಳು ಸ್ಪಷ್ಟಪಡಿಸುತ್ತವೆ:

1. ನಾಡಪ್ರಭುಗಳ ಕಾಲದಲ್ಲಿ ಬೆಂಗಳೂರು ನಗರವು ಆಯತಾಕಾರದ ನಾಗರಿಕರ ಆವರಣ ಮತ್ತು ಅರಮನೆ ಆವರಣಗಳನ್ನು ಪಡೆದುಕೊಂಡಿತು. "ಅರಸರಿಗಾಗಿ ಮತ್ತು ನಾಗರಿಕರಿಗಾಗಿ ಪ್ರತ್ಯೇಕ ಆವರಣಗಳನ್ನು ರಚಿಸಿ ಬೆಂಗಳೂರನ್ನು ಒಂದು ರಾಜಧಾನಿ ನಗರವನ್ನಾಗಿ ನಿರ್ಮಿಸುವಲ್ಲಿ ಡೆಕ್ಕನ್ ಸುಲ್ತಾನರ ರಾಜಧಾನಿಯಾಗಿದ್ದ ಬೀದರ್ ನಗರ ರಚನೆಯ ಪ್ರಭಾವವನ್ನು ಕಾಣುತ್ತೇವೆ. ಇದಕ್ಕೆ ಕಾರಣ ಕ್ರಿ.ಶ. 14ರಿಂದ 17 ನೆಯ ಶತಮಾನದ ಕಾಲಾವಧಿಯಲ್ಲಿ ದಕ್ಷಿಣ ಭಾರತದಲ್ಲಿ ನಗರೀಕರಣ ಪ್ರಕ್ರಿಯೆಯಲ್ಲಿ ಹೊಸ ಆವಿಷ್ಕಾರ ಮೂಡಿಸಿದ್ದ ಡೆಕ್ಕನ್ ಸುಲ್ತಾನರು ನಿರ್ಮಿಸಿದ್ದ ಬೀದರ್, ಗೋಲ್ಕೊಂಡಾ, ಅಹ್ಮದ್ ನಗರ, ಬಿಜಾಪುರ, ಫಿರೋಜಾಬಾದ್, ಗುಲ್ಬರ್ಗಾ ಮತ್ತಿತರ ನಗರಗಳು ಆ ಕಾಲದ ಸಮಕಾಲೀನ ನಗರಗಳಿಗಿಂತಲೂ ಹೆಚ್ಚು ಸುವ್ಯವಸ್ಥಿತವಾಗಿ ಹಾಗೂ ಹೆಚ್ಚು ರಕ್ಷಣಾತ್ಮಕವಾಗಿ ನಿರ್ಮಾಣಗೊಂಡು ಹೆಸರುವಾಸಿಯಾಗಿದ್ದವು. ಬೆಂಗಳೂರು ನಿರ್ಮಿಸುವ ಕಾಲಾವಧಿಯಲ್ಲಿ ಸುವ್ಯವಸ್ಥೆಗೆ ಹಾಗೂ ಭದ್ರತೆಗೆ ಹೆಸರುವಾಸಿಯಾಗಿದ್ದ ಡೆಕ್ಕನ್ನಿನ ನಗರಗಳ ಮಾದರಿಯನ್ನು ಇಲ್ಲಿ ಅಳವಡಿಸಿರುವ ಸಾಧ್ಯತೆ ಕಾಣುತ್ತೇವೆ. ಬೀದರ್ ನಗರದಲ್ಲಿ ಕಂಡುಬರುವಂತೆ ಪಶ್ಚಿಮದಲ್ಲಿ ಅರಮನೆ ಆವರಣ ನಿರ್ಮಿಸಿ ಅದಕ್ಕೆ ಅಂಟಿಕೊಂಡಂತೆ ನಾಗರಿಕರಿಗಾಗಿ ವಿಶಾಲವಾದ ನಗರವನ್ನು ಪೂರ್ವದಲ್ಲಿ ನಿರ್ಮಿಸಿರುವದನ್ನು ಕಾಣುತ್ತೇವೆ. ಎರಡು ಆವರಣಗಳು ಪ್ರತ್ಯೇಕವಾದ ಎತ್ತರದ ಕೋಟೆಗೋಡೆಗಳಿಂದ ಕೂಡಿದ್ದು ಇವುಗಳ ಮಧ್ಯದಲ್ಲಿ ಪರಸ್ಪರ ಸಂಪರ್ಕಕ್ಕಾಗಿ ಒಂದು ದೊಡ್ಡ ದ್ವಾರ ನಿರ್ಮಿಸಲಾಗಿದೆ. ಇದೇ ಮಾದರಿಯ ನಿರ್ಮಾಣ ಬೆಂಗಳೂರಿನ ನಗರ ನಿರ್ಮಾಣದಲ್ಲಿ ಕಾಣುತ್ತೇವೆ."[33]

2. ನಾಡಪ್ರಭುಗಳ ಕಾಲದಲ್ಲಿ ಅರಮನೆ ಮತ್ತು ಪೇಟೆ ಆವರಣಗಳ ನಡುವಿನ ದ್ವಾರಗಳನ್ನು ಬಹಳ ಸದೃಢವಾಗಿ ನಿರ್ಮಿಸಲಾಗಿದೆ. ಹಾಗಾಗಿ ಇವು ಇನ್ನು ಉಳಿದುಕೊಂಡು ಬಂದಿರುವುದನ್ನು ಕಾಣಬಹುದು. ಆ ಮೂಲಕ ದ್ವಾರಕ್ಕೆ ಸಹ ಹೆಚ್ಚಿನ ಮಹತ್ವ ನೀಡಲಾಗಿದೆ. ಇಂತಹ ದ್ವಾರದ ಮೇಲೆ ನಾಡಪ್ರಭುಗಳು ತಮ್ಮ ರಾಜಲಾಂಛನ ರಚಿಸಿದ್ದಿರಬಹುದಾದ ಸಾಧ್ಯತೆಗಳಿವೆ.[34]

3. ಬೆಂಗಳೂರಿನ ಅರಮನೆ ಆವರಣ ಮತ್ತು ನಾಗರಿಕ ಆವರಣಗಳೆರಡು ಮಂಡಲಗಳ ರೂಪದಲ್ಲಿ ವಿಂಗಡಿಸಿ ಕೋಟೆಯಿಂದ ಭದ್ರಪಡಿಸಲಾಗಿದೆ. ಅದರಂತೆ ವಾಸ್ತುಶಾಸ್ತ್ರಗಳು ಅರಸನ ಅಂತಃ ಪುರ, ರಾಜನ ಆರಾಧ್ಯ ದೇವರ ಗುಡಿ ಹಾಗೂ ಒಡ್ಡೋಲಗ

ಇವುಗಳನ್ನು ನಿರ್ಮಿಸಲು ಮಧ್ಯದ ಮಂಡಲ ಆಯ್ಕೆ ಮಾಡಿಕೊಳ್ಳಬೇಕೆಂದು ಸೂಚಿಸುತ್ತದೆ. ಕೋಟೆ ಆವರಣ ಅರಸರಿಗಾಗಿ ಪ್ರತ್ಯೇಕವಾಗಿ ರಚಿಸಿದ ಆವರಣವಾಗಿದ್ದು ಇದರ ಮಧ್ಯದಲ್ಲಿ ಈಗಿನ ಕೋಟೆ ವೆಂಕಟರಮಣ ದೇವಸ್ಥಾನವಿದೆ. ಶಾಸ್ತ್ರಗಳಲ್ಲಿ ಸೂಚಿಸಿದಂತೆ ಮಧ್ಯದ ಮಂಡಲದಲ್ಲಿ ದೇವಾಲಯ ಕಂಡುಬರುತ್ತಿದ್ದು ಇದರ ಪಕ್ಕದಲ್ಲಿಯೇ ಅರಸರಿಗಾಗಿ ನಿರ್ಮಿಸಿದ ಅರಮನೆಗಳಿವೆ.

4. ಅರಸರಿಗೆ ಮತ್ತು ನಾಗರಿಕರಿಗೆ ಪ್ರತ್ಯೇಕವಾದ ಅನುಕೂಲಗಳನ್ನು ಒದಗಿಸಲು ನೆರವಾಗುವ ರೀತಿಯಲ್ಲಿ ಈ ನಗರಗಳು ತಮ್ಮ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಾ ಸಾಗಿದ್ದವು. ಹೀಗಾಗಿ ಇಂತಹ ನಗರಗಳಲ್ಲಿ ವಿವಿಧ ಧಾರ್ಮಿಕ ಆಚರಣೆಗಳು, ಉತ್ಸವಗಳು ಸುಸೂತ್ರವಾಗಿ ನಡೆಯುವಂತಾದವು.

5. ಹಲವು ಕಸುಬುದಾರರು, ವ್ಯಾಪಾರಿಗಳು, ಅಧಿಕಾರಿಗಳ ಚಲನವಲನಗಳಿಗೆ ಅನುಕೂಲ ಕಲ್ಪಿಸಿಕೊಡುವುದು ಸಹ ನಗರಗಳ ಪ್ರವರ್ಧಮಾನಕ್ಕೆ ಕಾರಣವಾಗಿದ್ದವು.

### 6.6.2 ಮಾಗಡಿ

ಮಾಗಡಿಯು ಸಹ ಒಂದು ನೆಲದುರ್ಗವಾಗಿದ್ದು, ಕೋಟೆ, ನಗರ ಮತ್ತು ದೇವಾಲಯಗಳ ಒಂದು ಸಂಕೀರ್ಣ ರಚನೆಯನ್ನು ಒಳಗೊಂಡಿದೆ. ಇಲ್ಲಿನ ಕೋಟೆಯು ಮೂಲತಃ ಚಿಕ್ಕಗಾತ್ರದಲ್ಲಿದೆ. ಇದರ ಒಳಾಂಗಣವು ಪುಟ್ಟದಾದ ಪ್ರದೇಶವನ್ನು ಒಳಗೊಂಡಿದೆ. ಈ ಕೋಟೆಯ ಆವರಣದೊಳಗೆ ನಾಡಪ್ರಭುಗಳ ವಾಸಕ್ಕೆ ಅವಕಾಶವಿತ್ತೆಂದು ಊಹಿಸಬಹುದಾಗಿದೆ. ಕೋಟೆಯ ಹೊರಾವರಣದಲ್ಲಿ ಮಾಗಡಿಯ ಪಟ್ಟಣವು ವ್ಯಾಪಿಸಿದೆ. ಊರಿನ ಒಂದು ದಿಕ್ಕಿನಲ್ಲಿ ಶೈವ ಸೋಮನಾಥ ದೇವಾಲಯವನ್ನು, ಇನ್ನೊಂದು ದಿಕ್ಕಿನಲ್ಲಿ ವೈಷ್ಣವ ರಂಗನಾಥ ಅಥವಾ ತಿರುಮಲೆ ರಂಗನಾಥನ ಆಲಯವನ್ನು ಕಾಣಬಹುದು. ಜೊತೆಗೆ ಪಂಚಲಿಂಗ ದೇವಾಲಯ ಮತ್ತು ರಾಮೇಶ್ವರ ದೇಗುಲಗಳು ಶೈವ ವೈಷ್ಣವ ಸಂಪ್ರದಾಯದ ಸಮ್ಮಿಲನ ದ್ಯೋತಕಗಳಾಗಿ ಕಂಡುಬರುತ್ತವೆ. ಈ ದೇಗುಲಗಳ ಸನಿಯದಲ್ಲಿಯೇ ಇತ್ತೀಚೆಗೆ ಅರಮನೆ ಅವಶೇಷಗಳು ಪತ್ತೆಯಾಗಿದ್ದು ಇಲ್ಲಿ ಅರಮನೆ ಇದ್ದುದಕ್ಕೆ ಸಾಕ್ಷಿಭೂತವಾಗಿವೆ.

### 6.6.3 ಯಲಹಂಕ

ಯಲಹಂಕವು ಸಹ ನಾಡಪ್ರಭುಗಳ ಆರಂಭಿಕ ರಾಜಧಾನಿಯಾಗಿದ್ದಿತು. ಆದರೆ ಇಲ್ಲಿ ಕೋಟೆ, ದೇಗುಲ ಮತ್ತು ಕಂದಕಗಳ ಅವಶೇಷಗಳನ್ನು ಸ್ವಲ್ಪಮಟ್ಟಿಗೆ ಗುರುತಿಸಬಹುದಷ್ಟೆ. ಇಲ್ಲಿನ

ವೇಣುಗೋಪಾಲಸ್ವಾಮಿ ಆಲಯವು ನಾಡಪ್ರಭುಗಳ ಆಡಳಿತದ ಪ್ರಾರಂಭಿಕ ಹಂತದಲ್ಲಿ ಪ್ರಮುಖ ಕೇಂದ್ರವಾಗಿದ್ದಿತು. ಈ ದೇಗುಲದ ಸಮೀಪದಲ್ಲಿಯೇ ಅರಮನೆಯ ಪ್ರದೇಶವಿದ್ದಿತು. ಇದು ಆಯತಾಕಾರದಲ್ಲಿತ್ತು. ಇದನ್ನು ಈಗಲೂ ಕೋಟೆ ಪ್ರದೇಶವೆಂದು ಕರೆಯುತ್ತಾರೆ. ಇದರ ಪ್ರವೇಶಕ್ಕೆ ಮಧ್ಯದಲ್ಲಿ ದ್ವಾರವಿದ್ದಿತ್ತು. ಈ ದ್ವಾರವು ಈಗಲೂ ಅರಳಿ ಮರದ ಸನಿಹದಲ್ಲಿದೆ. ಅರಮನೆ ಮುಂಭಾಗದಲ್ಲಿ ಪೇಟೆಯನ್ನು ನಿರ್ಮಿಸಲಾಗಿತ್ತು. ಅದರ ಆಸುಪಾಸುಗಳಲ್ಲಿ ಸಂಪರ್ಕ ಯೋಗ್ಯ ರಸ್ತೆಗಳನ್ನು ರಚಿಸಲಾಗಿತ್ತು. ಈ ಎಲ್ಲ ಅಂಗಗಳನ್ನು ಒಳಗೊಂಡಂತೆ ಕೋಟೆಯು ಆವೃತವಾಗಿದ್ದಿತು. ಕೋಟೆಯ ಸುತ್ತಲೂ ಕಂದಕವಿದ್ದಿತ್ತು. ಈಗಲೂ ರೈಲ್ವೆ ನಿಲ್ದಾಣದ ಪೋಲಿಸ್ ಠಾಣೆಯ ಪಕ್ಕದಲ್ಲಿ ಈ ಕಂದಕದ ಅವಶೇಷವನ್ನು ಕಾಣಬಹುದು. ಬೆಂಗಳೂರು ನಗರ ರಚನೆಯ ಪೂರ್ವದಲ್ಲಿ ಯಲಹಂಕ ನಗರ ನಿರ್ಮಾಣದ ಅನುಭವವು ಪ್ರಭಾವಿಸಿರುವುದನ್ನು ತಳ್ಳಿಹಾಕಲಾಗದು.

## 6.7 ಯಲಹಂಕ ನಾಡಪ್ರಭುಗಳು ಮತ್ತು ಸಾಹಿತ್ಯ

ಯಲಹಂಕ ನಾಡಪ್ರಭುಗಳು ಸಾಹಿತ್ಯ ಸಂವೇದನೆ ಉಳ್ಳವರಾಗಿದ್ದು ಕವಿಗಳನ್ನು ಪೋಷಿಸಿದ್ದರು. ಕೆಲವು ನಾಡಪ್ರಭುಗಳು ಸ್ವತಃ ಕವಿಗಳೂ ಆಗಿದ್ದರು. ಅವರ ಸಮಕಾಲೀನ ರಾಜವಂಶಗಳ ಆಶ್ರಯದಲ್ಲಿದ್ದ ಕವಿಗಳು ಸಹ ಪ್ರಾಸಂಗಿಕವಾಗಿ ಯಲಹಂಕ ನಾಡಪ್ರಭುಗಳ ವಿಷಯಗಳನ್ನು ಪ್ರಸ್ತಾಪಿಸಿರುವುದು ಕಂಡುಬರುತ್ತದೆ. ಯಲಹಂಕ ನಾಡಪ್ರಭುಗಳ ಆಸ್ಥಾನದಲ್ಲಿ ಕನ್ನಡ, ಸಂಸ್ಕೃತ ಮತ್ತು ತೆಲುಗು ಕವಿಗಳೂ ಆಶ್ರಯ ಪಡೆದಿದರು.

### 6.7.1 ಹೊನ್ನಕವಿ (1640–1730)

ಯಲಹಂಕ ನಾಡಪ್ರಭುಗಳ ಆಶ್ರಯವನ್ನು ಪಡೆದಿದ್ದ ಕವಿಗಳಲ್ಲಿ ಹೊನ್ನ ಕವಿಯು ಒಬ್ಬ ಗಣ್ಯಕವಿಯಾಗಿದ್ದನು. ಇಮ್ಮಡಿ ಕೆಂಪೇಗೌಡನ ಆಸ್ಥಾನದಲ್ಲಿ ಆಶ್ರಯ ಪಡೆದಿದ್ದನು. ಈತನು ಬರೆದಿರುವ ನಾಲ್ಕು ಕೃತಿಗಳಲ್ಲಿ **'ಕೆಂಪರಾಯ ತಮ್ಮರಾಯನ ಪದಗಳು' (ಕೆಂಪೇಗೌಡನ ಜಯಪ್ರಶಸ್ತಿ), 'ಸ್ವರ ವಚನಗಳು', 'ಅಲ್ಲಮ ಪ್ರಭು ಸಂಗೀತ',** ಉಪಲಬ್ಧವಾಗಿವೆ. **'ಕೆಂಪೇಗೌಡನ ಯಶಃಪ್ರತಾಪ ಕೀರ್ತನೆಗಳು'** ಪೂರ್ಣಪ್ರಮಾಣದಲ್ಲಿ ಲಭ್ಯವಾಗಿಲ್ಲ. ಈ ಕೀರ್ತನೆಯ 53 ಸಾಲುಗಳು ಮಾತ್ರ **'ಇಮ್ಮಡಿ ತಿಮ್ಮರಾಯ ಕೆಂಪರಾಯ ಪದಗಳು'** ಹೆಸರಿನಲ್ಲಿ ಪ್ರಕಟವಾಗಿದೆ.[35] (ಈ ಕೀರ್ತನೆಗಳನ್ನು ಅನುಬಂಧ–1ರಲ್ಲಿ ನೋಡಬಹುದು). **'ಕೆಂಪರಾಯ ತಮ್ಮರಾಯನ ಪದಗಳು'** ಕೃತಿಯನ್ನು ಕರ್ಲಮಂಗಲ ಶ್ರೀಕಂಠಯ್ಯನವರು **ಕೆಂಪೇಗೌಡನ ಜಯಪ್ರಶಸ್ತಿ** ಹೆಸರಿನಲ್ಲಿ ಸಂಪಾದಿಸಿ ಪ್ರಕಟಿಸಿದರು (1961). ನಂತರ ಎಂ.ಜಿ. ಮಂಜುನಾಥ ಅವರು **'ಹೊನ್ನಕವಿಯ**

**ಸಮಗ್ರ ಸಾಹಿತ್ಯ'** ಹೆಸರಿನಲ್ಲಿ 'ಕೆಂಪರಾಯ ತಮ್ಮರಾಯನ ಪದಗಳು', 'ಸ್ವರ ವಚನಗಳು', 'ಅಲ್ಲಮ ಪ್ರಭು ಸಂಗೀತ'ಗಳನ್ನು ಒಳಗೊಂಡ ಕೃತಿಯನ್ನು ಸಂಪಾದಿಸಿದರು (2012).

ಶಿವಗಂಗೆಯ ಮೇಲಣಗವಿ ಮಠದ ವತಿಯಿಂದ 2000ನೆಯ ಇಸವಿಯಲ್ಲಿ 'ಶಿವಗಂಗಾಸಿರಿ' ಎಂಬ ವಿಶೇಷ ಸಂಚಿಕೆಯನ್ನು ಪ್ರಕಟಿಸಿತು. ಇದರಲ್ಲಿ ಎಸ್. ಶಿವಣ್ಣನವರು ಸಂಪಾದಿಸಿದ "ಗಂಗಾಧರ ಶತಕ" ಎಂಬ 100 ಕಂದಗಳು ಪ್ರಕಟವಾಗಿದೆ. "ಗಂಗಾಧರ ಶತಕ"ದ ವಸ್ತುವಿಗೂ ಗಂಗೇಶ ಅಂಕಿತದ ಸ್ವರವಚನಗಳ ವಸ್ತುವಿಗೂ ಸಾಮ್ಯತೆ ಇದೆ. ಆದ್ದರಿಂದ ಈ "ಗಂಗಾಧರ ಶತಕ"ದ ಕರ್ತೃ ಹೊನ್ನಕವಿ ಆಗಿರುವ ಸಾಧ್ಯತೆ ಇದೆ ಎಂದು ಬಿ. ನಂಜುಂಡಸ್ವಾಮಿ ಅವರು ಅನುಮಾನಿಸಿದ್ದಾರೆ.[36]

'ಕೆಂಪೇಗೌಡ ಜಯಪ್ರಶಸ್ತಿ'ಯನ್ನು ಸಂಪಾದಿಸಿದ ಕರ್ಲಮಂಗಲ ಶ್ರೀಕಂಠಯ್ಯನವರು ಈ ಕೃತಿಯ ಕೃರ್ತೃ ಗುಮ್ಮಳಾಪುರದ ಗುರು ನಂಜೇಶ್ವರನೆಂದು ಅನುಮಾನಿಸಿದ್ದರು. ಮುಂದುವರೆದು ಈ ಪ್ರಶಸ್ತಿಯ ಕವಿಯು ಗುರುನಂಜೇಶ್ವರನೋ, ಇಲ್ಲವೆ, ಈ ನಂಜೇಶ್ವರನ ಕೃಪಾಪಾತ್ರನಾದ ಇವನ ಒಬ್ಬ ಶಿಷ್ಯನೋ ಏನನ್ನೂ ಹೇಳುವುದಕ್ಕಾಗದೇ ಹೋಗಿದೆ ಎಂದಿದ್ದಾರೆ. ಅಲ್ಲದೆ ಈತ ಸ್ಮಾರ್ತ ಅಥವಾ ಶಿವದ್ವಿಜ ಬ್ರಾಹ್ಮಣನಾಗಿದ್ದಿರಬಹುದೆಂದೂ, ಈತ ಇಮ್ಮಡಿ ಕೆಂಪೇಗೌಡನಿಗೂ ಗುರುವಾಗಿದ್ದರೂ ಇರಬಹುದೆಂದು ಊಹಿಸಿದ್ದಾರೆ.[37] ಈ ಕೃತಿಯ ಮೊದಲ ಭಾಗವು ಕ್ರಿ.ಶ. 1512ರಲ್ಲಿಯೂ, ಎರಡನೆಯ ಭಾಗವು ಕ್ರಿ.ಶ. 1634ರಲ್ಲಿ ರಚನೆಯಾಗಿರಬಹುದೆಂದು ಗುರುತಿಸಿದ್ದಾರೆ.[38] 'ಕೆಂಪೇಗೌಡ ಜಯಪ್ರಶಸ್ತಿ'ಯ ಕರ್ತೃ ಕುರಿತು ಬಿ. ನಂಜುಂಡಸ್ವಾಮಿ ಅವರು ಅಧ್ಯಯನ ನಡೆಸಿ, ಜಯಪ್ರಶಸ್ತಿಯಲ್ಲಿ ಉಕ್ತವಾಗಿರುವ 'ಕಕೊದ್ಗಿರಿ ಗಂಗಾಧರೇಶ, ಕಕೊದ್ಗಿರಿ ಗಂಗೇಶ' ಎಂಬ ಅಂಕಿತವನ್ನು ಗಮನಿಸಿ, ಜಿ.ಎ. ಶಿವಲಿಂಗಯ್ಯನವರು ಸಂಪಾದಿಸಿ ಪ್ರಕಟಿಸಿರುವ ನಲವತ್ತನಾಲ್ಕು ಸ್ವರವಚನಗಳಲ್ಲಿಯೂ 'ಗಂಗೇಶ' ಎಂಬ ಅಂಕಿತವನ್ನು ಗುರುತಿಸಿ, ಈ ಸ್ವರವಚನಗಳು ಹಾಗೂ ಜಯಪ್ರಶಸ್ತಿಯ ಕರ್ತೃ ಒಬ್ಬನೇ. ಈತನ ನಿಜವಾದ ಹೆಸರು 'ಹೊನ್ನ'. ಈತನು ಶಿವಗಂಗೆ ಪರಿಸರದವರನು. ಶಿವಗಂಗೆಯ ಶಕ್ತಿದೇವತೆಯಾದ ಹೊನ್ನಾದೇವಿಯ ಹೆಸರನ್ನು ಹೊಂದಿದ್ದ ವೀರಶೈವ ಕವಿ ಎಂದು ಗುರ್ತಿಸಿದ್ದಾರೆ.[39] ಪ್ರಾಯಶಃ ಈತನ ಹೆಸರು ಹೊನ್ನಪ್ಪ ಅಥವಾ ಹೊನ್ನಯ್ಯ ಎಂದಿರಬಹುದೆಂದು ಎಂ.ಜಿ. ಮಂಜುನಾಥ ಅವರು ಅನುಮಾನಿಸಿದ್ದಾರೆ.

"ಯಲಹಂಕ ನಾಡಪ್ರಭು ಇಮ್ಮಡಿ ಕೆಂಪೇಗೌಡನ (1597–1667) ಆಶ್ರಯದಲ್ಲಿದ್ದ ಹೊನ್ನಕವಿಯು ಇಂದಿನ ಬೆಂಗಳೂರು ಗ್ರಾಮಾತರ ಜಿಲ್ಲೆ ನೆಲಮಂಗಲ ತಾಲ್ಲೂಕಿನ ಶಿವಗಂಗೆ

ಗ್ರಾಮದವನು. ಶಿವಗಂಗೆಯ ಗಂಗಾಧರೇಶ್ವರ – ಹೊನ್ನದೇವೆಯ ಭಕ್ತನಾಗಿದ್ದನು. ವೀರಶೈವಧರ್ಮಕ್ಕೆ ಸೇರಿದ ಈತನು 'ಕೊಲ್ಲಿಪಾಕೆಯ ರೇವಣಸಿದ್ದೇಶ್ವರನ ಸಂಪ್ರದಾಯದ ಗುಮ್ಮಳಾಪುರದ ಮಠಾಧೀಶರಾದ ನಂಜೇದೇವ ಅಯ್ಯನವರ ಶಿಷ್ಯನಾಗಿದ್ದನು. ಈ ನಂಜೆದೇವರು ಇಮ್ಮಡಿ ಕೆಂಪೇಗೌಡನಿಗೂ ಗುರುವಾಗಿದ್ದರು. ಇವರಿಗೆ ಇಮ್ಮಡಿ ಕೆಂಪೇಗೌಡನು ಗುಮ್ಮಳಾಪುರದ ಗ್ರಾಮವನ್ನು ದಾನವಾಗಿ ಕೊಟ್ಟ ವಿವರಗಳು ಗುಮ್ಮಳಾಪುರದ ಶಿಲಾಶಾಸನವೊಂದರಲ್ಲಿದೆ" ಎಂದು ಎಂ.ಜಿ. ಮಂಜುನಾಥ ಅವರು ಕವಿ ಹೊನ್ನನ ವಿವರವನ್ನು ಸಂಗ್ರಹಿಸಿದ್ದಾರೆ.[40]

### 6.7.2 ಏಕಾಮ್ರ ದೀಕ್ಷಿತ

ಈತನು ಯಲಹಂಕನಾಡ ಕೊನೆಯ ಪ್ರಭುವಾದ ಎರಡನೆಯ ಮುಮ್ಮಡಿ ಕೆಂಪ ಭೂಪಾಲ ಅಂದರೆ ಮುಮ್ಮಡಿ ಕೆಂಪವೀರಪ್ಪಗೌಡನ (1710–1728) ಆಸ್ಥಾನದಲ್ಲಿದ್ದನೆಂದು ಭಾವಿಸಲಾಗಿದೆ. ಕವಿ ಏಕಾಮ್ರ ದೀಕ್ಷಿತನು ವೆಲನಾಡು ಪಂಗಡದ ವೇದಬ್ರಹ್ಮ ಶ್ರೀ ಮುಕ್ತೀಶ್ವರ ದೀಕ್ಷಿತನೆಂಬ ಪ್ರಖ್ಯಾತ ಪಂಡಿತನ ಮಗ. ಈತನು 'ವೀರಭದ್ರ ವಿಜಯ' ಎಂಬ ಚಂಪೂ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿ, ರಾಜರಿಗೊಪ್ಪಿಸಿ, ಅವರಿಂದ ಐದು ಗ್ರಾಮಗಳನ್ನು ಪಡೆದು, ಆಸ್ಥಾನದಲ್ಲಿ ವಿದ್ವಾಂಸನಾಗಿದ್ದನೆಂದು ಎಸ್.ಕೆ. ನರಸಿಂಹಯ್ಯನವರು ದಾಖಲಿಸಿದ್ದಾರೆ.[41] ಏಕಾಮ್ರ ದೀಕ್ಷಿತನ ಗುರುವಾಗಿದ್ದ ಸರ್ವತಂತ್ರ ಸ್ವತಂತ್ರನಾಗಿದ್ದ 'ರಾಮಲಿಂಗಾಧ್ವರಿ ಕುಲತಿಲಕನ ಕೀರ್ತಿಯೂ ಮತ್ತದ್ವಿಪದ ಮದೋದಕನ ಸುವಾಸನೆಯಂತೆ, ವಿದ್ವಾಂಸರ ಮನೋಭಿಲಾಶೆಗಳನ್ನು ತೀರಿಸುವಂತಿದ್ದು ಎಲ್ಲೆಡೆ ಹರಡಿತ್ತೆಂದಿದ್ದಾನೆ. ಇಂಥ ಶ್ರೇಷ್ಠ ಗುರುವಿನ ಶಿಷ್ಯನಾದ ಕವಿ ತನ್ನನ್ನು "ಸಕಲ ಕವಿಬುಧರಿಂದ ಶ್ಲಾಘಿಸಲಾದವನೂ, ಸಕಲ ತಂತ್ರ ಸ್ವತಂತ್ರ ವಿರುದ ಸಮರ್ಥನೂ, ಶಾರದೆಯೇ ಪರುಷಾಕಾರವನ್ನು ಧರಿಸಿದಳೋ ಎಂಬಂತಿದ್ದವನೂ, ಯಲಹಂಕನಾಡ ಮುಂಮಡಿ ಕೆಂಪಭೂಪಾಲನ ಸಭೆಯ ಆಭರಣವೆನ್ನಿಸಿದ್ದ"ನೆಂದು ಕಾವ್ಯದ ಕೊನೆಯಲ್ಲಿ ಕವಿ ತಿಳಿಸಿರುವುದ್ದಾಗಿಯೂ, ಈತನು 'ಸತ್ಯಪರಿಣಯ' ಮತ್ತು 'ಜಾಂಬುವತಿ ಪರಿಣಯ' ಎಂಬ ಕೃತಿಗಳನ್ನೂ ರಚಿಸಿರುವುದಾಗಿಯೂ ಕೋ. ವಸಂತಲಕ್ಷ್ಮೀ ಅವರು ಉಲ್ಲೇಖಿಸಿದ್ದಾರೆ.[42]

**'ವೀರಭದ್ರ ವಿಜಯ'** ಕೃತಿಯ ಮೂರು ಹಸ್ತಪ್ರತಿಗಳು ಮೈಸೂರಿನ ಓರಿಯಂಟಲ್ ರಿಸರ್ಚ್ ಲೈಬ್ರರಿಯಲ್ಲಿವೆ. ಮತ್ತೊಂದು ಪ್ರತಿ ಮದರಾಸ್ ಸರ್ಕಾರದ ಪ್ರಾಚ್ಯ ಹಸ್ತಪ್ರತಿ ಭಂಡಾರದಲ್ಲಿದೆ ಎಂದು ಕೊ. ವಸಂತಲಕ್ಷ್ಮಿ ಅವರು ಉಲ್ಲೇಖಿಸಿದ್ದಾರೆ.[43] **'ವೀರಭದ್ರ ವಿಜಯ'** ಕೃತಿಗೆ ಮಾಗಡಿಯ ನಂಜುಂಡಶಾಸ್ತ್ರಿಗಳ ಮಗ ಕೃಷ್ಣಶಾಸ್ತ್ರಿ ಎಂಬುವವರು ಕನ್ನಡದಲ್ಲಿ

**'ಮನೋರಂಜನೀಯ'** ಎಂಬ ಟೀಕನ್ನು ಬರೆದು ಪ್ರಕಟಿಸುವುದಕ್ಕೆ ಸಿದ್ಧಪಡಿಸಿರುವುದಾಗಿ ಎಸ್.ಕೆ. ನರಸಿಂಹಯ್ಯನವರು ಒಂದು ಕಡೆ ದಾಖಲಿಸಿದ್ದಾರೆ.[44] ಆದರೆ, ಆ ಕೃತಿ ಪ್ರಕಟವಾದ ಬಗ್ಗೆ ಯಾವುದೇ ಮಾಹಿತಿಗಳು ಲಭ್ಯವಿರುವುದಿಲ್ಲ.

'ವೀರಭದ್ರ ವಿಜಯ'ವು ಐದು ಉಲ್ಲಾಸಗಳನ್ನು (ಅಧ್ಯಾಯ) ಹೊಂದಿದೆ. ಇದರಲ್ಲಿನ್ನ ನಾಲ್ಕನೆಯ ಉಲ್ಲಾಸದಲ್ಲಿ ಸಾವನದುರ್ಗದ ವೀರಭದ್ರದೇವರ ರಥೋತ್ಸವಕ್ಕೆ ಮುಮ್ಮಡಿ ಕೆಂಪವೀರಪ್ಪಗೌಡನು ಆಗಮಿಸಿದಾಗ, ಅವನನ್ನು ಕಂಡು ಜನರು ಮಾತನಾಡಿಕೊಳ್ಳುವ ದಾಟಿಯಲ್ಲಿ ಯಲಹಂಕ ನಾಡಪ್ರಭುಗಳ ವಂಶಸ್ಥರ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾನೆ. ಈ ವಂಶಾವಳಿಯು ಹಿರಿಯ ಕೆಂಪೇಗೌಡನಿಂದ ಆರಂಭವಾಗುತ್ತದೆ. ಅವನ ಪೂರ್ವಿಕರ ಬಗೆಗೆ ಯಾವ ಪ್ರಸ್ತಾಪವನ್ನು ಈ ಇಲ್ಲಿ ಮಾಡಿಲ್ಲದಿರುವುದು ಅಚ್ಚರಿ ಮೂಡಿಸುತ್ತದೆ.

### 6.7.3 ಇತರ ಪಂಡಿತರು ಮತ್ತು ವಿದ್ವಾಂಸರು

ಇಮ್ಮಡಿ ಕೆಂಪೇಗೌಡನ ಕೆಂಪಾಪುರ ಅಗ್ರಹಾರದ ದಾನಶಾಸವನ್ನು ಕರ್ಲಮಂಗಲ ಶ್ರೀಕಂಠಯ್ಯನವರು ಮೊದಲು **'ಕೆಂಪೇಗೌಡ ಜಯಪ್ರಶಸ್ತಿ'**ಯಲ್ಲಿ ಪ್ರಕಟಿಸಿದರು.[45] ಸಂಸ್ಕೃತದಲ್ಲಿರುವ ಈ ಶಾಸನವನ್ನು ನಂತರ ಎಂ.ಜಿ. ಮಂಜುನಾಥ ಅವರು ಮೂಲಪಾಠ ಮತ್ತು ಶಾಸನದ ಸಂಗ್ರಹಾನುವಾದದೊಂದಿಗೆ 'ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ'ದಲ್ಲಿ ಮರುಪ್ರಕಟಿಸಿದರು.[46] ಯಲಹಂಕ ನಾಡಪ್ರಭು ಇಮ್ಮಡಿ ಕೆಂಪೇಗೌಡನು ಕ್ರಿ.ಶ. 1605ರಲ್ಲಿ ಸಂವತ್ಸರ ವ್ರತವನ್ನು ಮಾಡಿ ವ್ರತದ ಅಂತ್ಯದಲ್ಲಿ, ಮಿಡಿಸಾಗರ ಎಂಬ ಗ್ರಾಮಕ್ಕೆ ತನ್ನ ಹೆಸರಿನಲ್ಲಿ ಕೆಂಪಾಪುರ ಎಂದು ಮರುನಾಮಕರಣ ಮಾಡಿ, 48 ವೃತ್ತಿಗಳನ್ನಾಗಿ ಮಾಡಿ ಹಲಸೂರು ಸೋಮೇಶ್ವರನ ಸನ್ನಿಧಿಯಲ್ಲಿ 48 ಜನರಿಗೆ ಅಗ್ರಹಾರವಾಗಿ ದಾನ ಮಾಡಿದ ವಿವರಗಳಿವೆ. ವೃತ್ತಿ ಎಂದರೆ ಉಪಜೀವನಕ್ಕಾಗಿ ಕೊಡುವ ಉಂಬಳಿಯಾಗಿದೆ. ಅಂದರೆ ಕೆಂಪಾಪುರ ಅಗ್ರಹಾರದ ಸುತ್ತಲಿನ ಭೂಮಿಯನ್ನು 48 ಸಮಪ್ರಮಾಣದಲ್ಲಿ ಭಾಗಮಾಡಿ, ಆ ಭೂದಾನ ಮಾಡುವುದಾಗಿದೆ. ಈ ಶಾಸನದಲ್ಲಿ ದಾನ ಪಡೆದ ಹಲವು ವಿದ್ವಾಂಸರು ಮತ್ತು ಪಂಡಿತರುಗಳ ಹೆಸರು ಉಲ್ಲೇಖವಾಗಿವೆ. ಅವರಲ್ಲಿ ವೀರೇಶ, ನಾಮಕ, ಸದಾಹರಿ ಕಥಾಸಕ್ತ ದಾಸಂಭಟ್ಟ, ದಿವಾಕರ ಪಂಡಿತ, ತಿರುಮಲಶಾಸ್ತ್ರಿ ಕವಿ ಮೊದಲಾದವರು ಮುಖ್ಯರು.

**6.7.3.1 ವೀರೇಶ**

ಈತನು ಎಡದ್ಗ್ರಾಮದವನು ಎಂದು ಹೇಳಲಾಗಿದೆ. ಈ ಊರು ಯಾವುದೆಂಬುದರ ಬಗ್ಗೆ ತಿಳಿಯುವುದಿಲ್ಲ. ಈತನ ವಿದ್ವತ್ತಿನ ಬಗ್ಗೆ ಮತ್ತು ಹಿನ್ನೆಲೆಯ ಬಗ್ಗೆ ಸಂಕ್ಷಿಪ್ತ ವಿವರಗಳು ಮಾತ್ರ ಶಾಸನದಲ್ಲಿ ಕಂಡುಬರುತ್ತದೆ. ವೀರೇಶನು ಶ್ರೀರಂಗಪಟ್ಟಣದ ರಾಜನ ಮುಂದೆ ವಿದ್ವತ್ಸಭೆಯಲ್ಲಿ ಒಂದು ವರ್ಷಕಾಲ ಅಪಾರ ಸಂತೋಷವನ್ನು ಉಂಟು ಮಾಡಿದನು. ಈತ ಚತುರ್ಥ ಜಾತಿಯವನೆಂದು ಶಾಸನದಲ್ಲಿ ಹೇಳಿದ್ದು, ಇವನ ಪ್ರತಿಭೆಯನ್ನು ಮೆಚ್ಚಿ ಇಮ್ಮಡಿ ಕೆಂಪೇಗೌಡನು 47 ಬ್ರಾಹ್ಮಣರ ಜೊತೆಯಲ್ಲಿ ಈತನಿಗೂ ಭೂದಾನ ಕೊಟ್ಟನು. ಅದರ ವಿವರ ಹೀಗಿದೆ:

ವೀರೇಶ ನಾಮಧೇಯಾಯ ವಿಷ್ಣುಪಾದೋದ್ಭವಾಯ ಚ|
ತುರೀಯ್ಯ ಜಾತೀಯ ಧರ್ಮ–ವಿದೇ ರಾಜಾ ಭುವಂ ದದೌ||
ಅಂಶಸ್ತಥಾ ಚಭೂವೈಕಃ – ತಾದೃಗ್ದೇವಾರ್ಚನಾ ಪರಃ|
ಶ್ರೀರಂಗ ಪತ್ತನೇ ರಾಜ್ಞಾಂ – ಅಗ್ರೇ ವಿದ್ವತ್ಸಭಾ ಮುಖೇ|
ಎಡದ್ಗ್ರಾಮ ಬುಧೈಸ್ಸಾಕಂ – ಅನುವಾದ್ಯೇಕ ವತ್ಸರಂ|
ನಿರ್ಜಿತ್ಯ ನಿಬಿಡಂ ತೋಷಂ – ಯಃ ಪ್ರಾಪ ಸಬುಧೋ ಧೃವಂ||

ವೀರೇಶನ ಬಗೆಗೆ ಕರ್ಲಮಂಗಲ ಶ್ರೀಕಂಠಯ್ಯನವರು ಹೀಗೆ ದಾಖಲಿಸುತ್ತಾರೆ: "ಈ ದಾನ ಪಡೆದವರಲ್ಲಿ 47 ಜನಗಳು ನಾನಾ ಗೋತ್ರ ಸಂಪ್ರದಾಯಗಳಿಗೆ ಸೇರಿದ ಬ್ರಾಹ್ಮಣರು. ಈ ಗುಂಪಿನಲ್ಲಿ 45ನೆಯವನಾದ "ವೀರೇಶ"ನು ಒಕ್ಕಲು ಮಗನು. ಇವನು ಧರ್ಮವಿದನೆಂದೂ ಮಹಾ ವಿದ್ವಾಂಸನೆಂದೂ ಶ್ರೀರಂಗಪಟ್ಟಣದ ರಾಜಸಭೆಯಲ್ಲಿ ತನ್ನ ಶಾಸ್ತ್ರಜ್ಞಾನ ಪಾಂಡಿತ್ಯದಿಂದ ಎಲ್ಲರನ್ನೂ ಗೆದ್ದು ಮೆಚ್ಚಿಸಿದನೆಂದೂ ಇದೇ ಜಯಪ್ರಶಸ್ತಿಯ ಸಂಗಡ ಮುದ್ರಿಸಿರುವ ಕೆಂಪಾಪುರ ಅಗ್ರಹಾರದ ದಾನಶಾಸನದಿಂದ ಗೊತ್ತಾಗುವುದು" ಎಂದಿದ್ದಾರೆ. [47]

ಒಕ್ಕಲಿಗನಾಗಿದ್ದ ವೀರೇಶನು ಶ್ರೀರಂಗಪಟ್ಟಣದ ರಾಜಸಭೆಯಲ್ಲಿ ವರ್ಷಕಾಲ ಪಾಂಡಿತ್ಯ ಪ್ರದರ್ಶಿಸುವಂತಹ ಜ್ಞಾನವನ್ನು ಹೇಗೆ ಸಂಪಾದಿಸಿದ, ಇವನ ತಂದೆ–ತಾಯಿ ಯಾರು? ಇವನ ಊರು ಎಡದ್ಗ್ರಾಮ ಎಲ್ಲಿದೆ? ಈತನು ಏನಾದರೂ ಬರೆದಿರುವನೇ ಎಂಬ ಬಗೆಗೆ ಯಾವುದೇ ಆಧಾರಗಳಾಗಲಿ, ಸುಳುಹುಗಳಾಗಲಿ ಸಿಗುವುದಿಲ್ಲ.

**6.7.3.2 ದಿವಾಕರ ಪಂಡಿತ**

ಕೆಂಪಾಪುರ ಅಗ್ರಹಾರದ ಭೂದಾನ ಪಡೆದವರಲ್ಲಿ ದಿವಾಕರ ಪಂಡಿತ 12ನೆಯ ವ್ಯಕ್ತಿ. ಈತ ಇಮ್ಮಡಿ ಕೆಂಪೇಗೌಡನ ಆಸ್ಥಾನ ಪಂಡಿತನಿರಬಹುದು.

**6.7.3.3 ಕವಿ ತಿರುಮಲಶಾಸ್ತ್ರಿ**

ಬಾಲಕುಂಟ್ಲವಾಸಿಯೂ, ಕೌಂಡಿನ್ಯ ಗೋತ್ರದವನೂ, ಕನ್ನಡದಲ್ಲಿ 'ಮೇಘಪ್ರಸ್ತರ' ಎಂಬ ಕಾವ್ಯವನ್ನು ಬರೆದವನೂ ಆದ ತಿರುಮಲಶಾಸ್ತ್ರಿಗೆ ಇಮ್ಮಡಿ ಕೆಂಪೇಗೌಡನು ಒಂದು ವೃತ್ತಿ ಭೂಮಿಯನ್ನು ಕೊಟ್ಟು ಗೌರವಿಸಿದ ವಿವರ ಕೆಂಪಾಪುರ ಅಗ್ರಹಾರ ಶಾಸನದಲ್ಲಿದೆ. ಆದರೆ ಕರ್ನಾಟಕ ಕವಿಚರಿತೆಯಲ್ಲಿ ಇವನ ಬಗೆಗಾಗಲಿ ಕೃತಿಯ ಬಗೆಗಾಗಲಿ ವಿವರಗಳಿಲ್ಲ. ತಿರುಮಲಶಾಸ್ತ್ರಿಗೆ ಇಮ್ಮಡಿ ಕೆಂಪೇಗೌಡ ಆಶ್ರಯ ನೀಡಿದ್ದನೆಂದು ತಿಳಿಯಬಹುದು.

**6.7.3.4 ಸದಾಹರಿ ಕಥಾಸಕ್ತ ದಾಸಂಭಟ್ಟ**

ವಸಿಷ್ಠಗೋತ್ರದ ಸದಾಹರಿ ಕಥಾಸಕ್ತನಾದ ದಾಸಂಭಟ್ಟನಿಗೆ ಬಂದ ಭೂದಾನವನ್ನು ಅವನ ಮಕ್ಕಳಾದ ಭಗವತ್ಕೀರ್ತನ ಪರರಾದ ದಾಸಾಚಾರ್ಯ ಮತ್ತು ವಿಠಲಾಚಾರ್ಯರಲ್ಲಿ ಹಂಚಲ್ಪಟ್ಟಿತು. ಹರಿಕಥೆಯ ದಾಸರಿಗೂ ಇಮ್ಮಡಿ ಕೆಂಪೇಗೌಡ ಪ್ರೋತ್ಸಾಹ ನೀಡುತ್ತಿದ್ದನು ಎಂಬುದಕ್ಕೆ ಇದು ಒಂದು ನಿದರ್ಶನವಾಗಿದೆ. ಇಮ್ಮಡಿ ಕೆಂಪೇಗೌಡನ ಮಗನಾದ ಇಮ್ಮಡಿ ಹಿರಿಯ ಕೆಂಪೇಗೌಡನ ಕಾಲದಲ್ಲಿ ಹುಲಿಯೂರುದುರ್ಗದಲ್ಲಿ ನಾಟಕ ಶಾಲೆಯ ಶೃಂಗಾರಮ್ಮ ಎಂಬಾಕೆಯು ಅವನ ಆಶ್ರಯದಲ್ಲಿದ್ದು, ಕೆರೆ, ಅಗ್ರಹಾರ, ಬಸವ ಮಂಟಪವನ್ನು ನಿರ್ಮಿಸಿದ್ದಳು ಎಂಬುದನ್ನು ಇಲ್ಲಿ ಸ್ಮರಿಸಬಹುದು.

**6.7.3.5 ಶ್ರೀನಿವಾಸ ಕವಿ (ಸು.1700)**

ಈತನು ಮಾಗಡಿಯ ತಿರುಮಲೆ ಗ್ರಾಮದವನು. ಕವಿಯ ಕಾಲವನ್ನು ಆರ್. ನರಸಿಂಹಾಚಾರ್ ಅವರು ಸುಮಾರು 1700 ಎಂದು ಗುರುತಿಸುತ್ತಾರೆ. ಶ್ರೀನಿವಾಸಕವಿಯು ಭಾಮಿನಿ ಷಟ್ಪದಿಯಲ್ಲಿ **'ಭಾರತ ಸ್ತ್ರೀಪರ್ವ'** ಎಂಬ ಕೃತಿಯನ್ನು ಬರೆದಿದ್ದಾನೆ. ಕೃತಿಯ ಆರಂಭದಲ್ಲಿ ಸಾಮಂತದುರ್ಗದ ಮಾಕುಟೀಪುರ ಸನಿಹಿತ ತಿರುಮಲೆಯ ಶ್ರೀರಂಗನನ್ನು ಸ್ತುತಿಸಿದ್ದಾನೆ. ಬ್ರಾಹ್ಮಣ ಕವಿಯಾದ ಈತನು ರಂಗನಾಥನ ಅಂಕಿತದಲ್ಲಿ ಗ್ರಂಥವನ್ನು ರಚಿಸಿದ್ದಾನೆ.[48]

### 6.7.3.6 ಯಜ್ಞಪತಿಭಟ್ಟ / ಯಜ್ಞಂಭಟ್ಟ

ಈತ ಸೊಂಡೆಕೊಪ್ಪದ ಮದುವೆಂಕಟೇಶ್ವರ ಸೋಮಯಾಜಿಯವರ ಮಗ. 17ನೆಯ ಶತಮಾನದ ಆರಂಭದಲ್ಲಿ ಯಜ್ಞಂಭಟ್ಟರೆಂಬವವರಿಗೆ ಜೀವಿಕೆಗಾಗಿ ಈತನಿಗೆ ಇಮ್ಮಡಿ ಕೆಂಪೇಗೌಡನು ನೆಲಮಂಗಲ ಸಮೀಪದಲ್ಲಿ ಒಂದಿಷ್ಟು ಭೂಮಿಯನ್ನು ದಾನಮಾಡಿದ ಬಗ್ಗೆ ತಾಮ್ರ ಶಾಸನವೊಂದರಲ್ಲಿ ಹೀಗೆ ಹೇಳಿದೆ: ಯಲಹಂಕ ನಾಡಪ್ರಭುಗಳಾದ ಚತುರ್ಥಗೋತ್ರರಾದ ಕೆಂಪನಾಚೇಗೌಡರಯ್ಯನವರ ಪುತ್ರರೂ ಆದ ಇಮ್ಮಡಿ ಕೆಂಪೇಗೌಡರಯ್ಯನವರು ಕಾಶ್ಯಪಗೋತ್ರದ ಆಪಸ್ತಂಬಸೂತ್ರರಾದ ಯಜ್ಞಂಭಟ್ಟರಿಗೆ ಬರಸಿಕೊಟ್ಟ ಆ ಭೂದಾನ ಧರ್ಮಶಾಸನ ಎಂದಿದೆ. ಇದಕ್ಕೆ ಸಂಬಂಧಪಟ್ಟ ಸುಮಾರು 13 ಎಕರೆ ಜಮೀನನ್ನು ಸೊಂಡೇಕೊಪ್ಪದಲ್ಲಿ ಮತ್ತು ಸಮೀಪದ ಇರಿಗೇನಹಳ್ಳಿ, ಮಂಟನಕುರ್ಚಿ ಗ್ರಾಮಗಳಲ್ಲಿ ಇತ್ತು ಎಂದು ಎಸ್.ಆರ್.ರಾಮಸ್ವಾಮಿ ಅವರು ತಮ್ಮ 'ದೀವಟಿಗೆಗಳು' ಕೃತಿಯಲ್ಲಿ ದಾಖಲಿಸಿದ್ದಾರೆ.[49] ಯಜ್ಞಂಭಟ್ಟನು ಪ್ರಸಿದ್ಧ ಇತಿಹಾಸಕಾರರಾದ ಎಸ್.ಶ್ರೀಕಂಠಶಾಸ್ತ್ರಿಗಳ ಪೂರ್ವಿಕನಾಗಿದ್ದು, ಇಮ್ಮಡಿ ಕೆಂಪೇಗೌಡನ ಆಸ್ಥಾನದಲ್ಲಿ ಇದ್ದನೆಂದು ನಂಬಲಾಗಿದೆ.

### 6.7.3.7 ವೆಂಕಟಪತಿ (ಸು. 1661)

ಈತನು ಯಲಹಂಕ ನಾಡಪ್ರಭು ಮುಮ್ಮಡಿ ಕೆಂಪೇಗೌಡನ ಆಸ್ಥಾನದಲ್ಲಿ ಲಿಪಿಗಾರನಾಗಿದ್ದನೆಂದೂ, ಈತನು ಅಜ್ಞಾತ ಕವಿಯ 'ವಚನಸಾರ' ಎಂಬ ಕೃತಿಯನ್ನು ಪ್ರತಿಮಾಡಿಕೊಟ್ಟನೆಂದು ಬಿ. ನಂಜುಂಡಸ್ವಾಮಿ ಅವರು ಗುರುತಿಸಿದ್ದಾರೆ. ಈ ಕೃತಿಯ ಅಂತ್ಯದಲ್ಲಿ "ಶಾರ್ವರಿ ಸಂವತ್ಸರದ ಮಾಘ ಬ 14ರಲ್ಲೂ ಶ್ರೀಮತು ಎಲಹಂಕ ನಾಡಪ್ರಭು ಮುಮ್ಮಡಿ ಕೆಂಪಯ್ಯಗೌಡರಿಗೆ ಆಯುರಾರೋಗ್ಯ, ಐಶ್ವರ್ಯ, ಧನಕನಕ, ವಸ್ತುವಾಹನ ಸಮೃದ್ಧಿಯಾಗಲೆಂದು ವೆಂಕಟಪತಿ ಬರೆದ ವಚನಸಾರಕ್ಕೆ ಶುಭಮಸ್ತು" ಎಂದು ಬರೆಯಲಾಗಿದೆ.[50] ಇದನ್ನು ಪ್ರತಿಮಾಡಿದ ಕಾಲ ಕ್ರಿ.ಶ. 1661ರಲ್ಲಿ ಬರೆಯಲಾಗಿದೆ.

### 6.7.3.8 ದೇವಣಾರ್ಯ ಕವಿ (ಸು. 1725)

**'ಬತ್ತೀಸಪುತ್ಥಳಿ'** ಕಥೆಯ ಒಂದು ಪ್ರತಿಯಲ್ಲಿ ಯಲಹಂಕನಾಡಪ್ರಭು ಈ ಕಥೆಯನ್ನು ಕೇಳಿದಂತೆ ಹೇಳಿರುವುದರಿಂದ ಕವಿ ಆತನ ಆಶ್ರಿತವಾಗಿದ್ದಿರಬಹುದು. ಈ ಪ್ರತಿ 1817ರಲ್ಲಿ ಬರೆದುದಾದುದರಿಂದ ಗ್ರಂಥವು ಆ ಕಾಲಕ್ಕೆ ಹಿಂದೆ ಹುಟ್ಟಿರಬೇಕು. ಈ ಗ್ರಂಥವನ್ನು ಕವಿ ಗದ್ಯರೂಪವಾಗಿಯೂ ಬರೆದಿರುವಂತೆ ತಿಳಿಯುತ್ತದೆ. ಕಥೆಗಳ ಕೊನೆಯಲ್ಲಿ ಇದು ಕವಿ

ದೇವಣಾರ್ಯ ವಿರಚಿತಮಪ್ಪ ಬತ್ತೀಸಪುತ್ತಳಿ ಕಥೆಯೊಳ್ ಎಂದು ಇರುವುದಾಗಿ ಬಿ. ನಂಜುಂಡಸ್ವಾಮಿ ಅವರು ದಾಖಲಿಸಿದ್ದಾರೆ.[51]

ಯಲಹಂಕ ನಾಡಪ್ರಭುಗಳು ಕೇವಲ ಕವಿಜನ ಪೋಷಕರು ಮಾತ್ರವಲ್ಲ, ಕೆಲವರು ಸ್ವತಃ ಕವಿಗಳೂ ಆಗಿದ್ದರೆಂದು ತಿಳಿದು ಬರುತ್ತದೆ. **'ಗಂಗಾಗೌರಿ ವಿಲಾಸಮು'** ಎಂಬ ತೆಲುಗು ಕೃತಿಯ ಮಂಗಳಾಚರಣೆಯ ವೃತ್ತದಲ್ಲಿ **"ಹಿರಿಯ ಕೆಂಪ ನೃಪರ್ತಿ"** ಎಂಬ ಉಲ್ಲೇಖವನ್ನಾಧರಿಸಿ ಕೆಲವು ವಿದ್ವಾಂಸರು ಈ ಕೃತಿಯನ್ನು ಹಿರಿಯ ಕೆಂಪೇಗೌಡನು ರಚಿಸಿದನೆಂತಲೂ, ಈ ವಂಶದವರೂ **'ತೆಲುಗರು'** ಎಂತಲೂ ನಿರ್ಣಯಿಸಿ ಬಿಟ್ಟರು.[52] ಆದರೆ ಈ ಅಭಿಪ್ರಾಯವನ್ನು ಪರಿಶೀಲಿಸಲು ಬೇರೆ ಆಕರಗಳೊಂದಿಗೆ ಓರೆಗೆ ಹಚ್ಚಿನೋಡಿದವರು ವಿರಳ. ಇದರ ಪರಿಶೀಲನೆಗೆ ಹೋಗುವ ಮುನ್ನ ಕವಿ ಏಕಾಮ್ರ ದೀಕ್ಷಿತನ **'ವೀರಭದ್ರ ವಿಜಯ'** ಕೃತಿಯನ್ನು ನೋಡುವುದು ಒಳಿತು. ಈ ಕೃತಿಯಲ್ಲಿ ಇಮ್ಮಡಿ ಹಿರಿಯ ಕೆಂಪೇಗೌಡನನ್ನು ಕುರಿತು ಹೀಗೆ ಹೇಳಿದೆ: "ಇವನ ಅತಿ ಪರಾಕ್ರಮವುಳ್ಳ ಬಾಹುಗಳು ಶತ್ರುಗಳೆಂಬ ಗಂಧಹಸ್ತಿಗಳ ನೆತ್ತಿಗೆ ಅಂಕುಶದಂತಿತ್ತು. ಇವನ ಪರಾಕ್ರಮದಿಂದ ವೀರರ ಭೂಮಿಯಾಗುತ್ತಿತ್ತು. ಇವನು ಬಹುಭಾಷಾ ಪಂಡಿತನಾಗಿದ್ದು, ಅನೇಕ ಭಾಷೆಗಳಲ್ಲಿ ಕವಿ ಆಗಿದ್ದನು. ಹಲವು ಭಾಷೆಗಳನ್ನು ಅಭ್ಯಸಿಸಿದ್ದ ಇವನನ್ನು 'ನವ ಕವಿತಾ ಗುಂಭಪುಂಭವಾಣಿ' ಎಂದು ಕರೆದಿದೆ."[53] ಈ ಹಿನ್ನೆಲೆಯಲ್ಲಿ **'ಗಂಗಾಗೌರಿ ವಿಲಾಸಮು'** ಕೃತಿಯ ರಚನಾಕಾರನಾದ "ಹಿರಿಯ ಕೆಂಪ ನೃಪತಿ"ಯೇ ಇಮ್ಮಡಿ ಹಿರಿಯ ಕೆಂಪೇಗೌಡನೆಂದು ತೀರ್ಮಾನಿಸಬಹುದು. **'ಗಂಗಾಗೌರಿ ವಿಲಾಸಮು'** ಕೃತಿಯಲ್ಲಿ **"ಹಿರಿಯ ಕೆಂಪ ನೃಪರ್ತಿ"** ಎಂದು ಕರೆದಿರುವಂತೆಯೇ ಕೆಂಪಾಪುರದ ಸ್ಮಾರಕ ಶಾಸನದಲ್ಲಿಯೂ "ಇಮ್ಮಡಿ ಹಿರಿಯ ಕೆಂಪೇಗೌಡ"ನನ್ನು "ಹಿರಿಯ ಕೆಂಪೇಗೌಡ"ನೆಂದು ಕರೆಯಲಾಗಿದೆ. ಇದು ಸಮಕಾಲೀನ ರೂಢಿನಾಮ ಸಂಕ್ಷೇಪವೇ ವಿನಃ ಮತ್ತೇನು ಅಲ್ಲ ಎಂದು ಹಂ.ಗು. ರಾಜೇಶ್ ಅವರು ಅಭಿಪ್ರಾಯ ಪಟ್ಟಿದ್ದಾರೆ.[54] ಆದ್ದರಿಂದ **'ಗಂಗಾಗೌರಿ ವಿಲಾಸಮು'** ಕೃತಿಯ ಕರ್ತೃ ಹಿರಿಯ ಕೆಂಪೇಗೌಡನಲ್ಲ. ಆತ ಕವಿಯಾಗಿದ್ದ ಎಂಬುದಕ್ಕೆ ಯಾವ ಸಾಕ್ಷ್ಯವೂ ಇಲ್ಲ. ಆದ್ದರಿಂದ ಈ ಕೃತಿಯ ಕರ್ತೃ ಕುಣಿಗಲ್ ನಿಂದ ಆಳುತ್ತಿದ್ದ ಇಮ್ಮಡಿ ಹಿರಿಯ ಕೆಂಪೇಗೌಡನೇ ಆಗಿರುವ ಸಾಧ್ಯತೆಗಳಿವೆ.

ಅನೇಕ ನಾಡಪ್ರಭುಗಳು ಕಲೆಗೆ ಪ್ರೋತ್ಸಾಹ ನೀಡಿದಂತೆ ಸಾಹಿತ್ಯಕ್ಕೂ ಪ್ರೋತ್ಸಾಹ ನೀಡಿದ್ದಾರೆ. ಅವರಲ್ಲಿ ಸುಗುಟೂರು ಅರಸು ಮುಮ್ಮಡಿ ತಮ್ಮೇಗೌಡನು ಒಬ್ಬ ಹೆಸರಾಂತ ಕವಿಯೂ ವಿದ್ವಾಂಸನೂ ಆಗಿದ್ದನು. ಆತ ಕನ್ನಡ, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ

ಕೃತಿಗಳನ್ನು ರಚಿಸಿದ್ದನೆಂದು ಆತನ 'ಶಂಕರಸಂಹಿತೆ' ಯಿಂದ ತಿಳಿದುಬರುತ್ತದೆ. ಅದೇರೀತಿ ಯಲಹಂಕ ನಾಡಪ್ರಭುಗಳಲ್ಲಿ ಇಮ್ಮಡಿ ಹಿರಿಯ ಕೆಂಪೇಗೌಡನು ಬಹುಭಾಷಾ ಪಂಡಿತನಾಗಿದ್ದು, ಅನೇಕ ಭಾಷೆಗಳನ್ನು ಬಲ್ಲವನಾಗಿದ್ದನು. ಇಮ್ಮಡಿ ಕೆಂಪೇಗೌಡನು ಅನೇಕ ವಿದ್ವಾಂಸರಿಗೆ, ಕವಿಗಳಿಗೆ ಆಶ್ರಯ ನೀಡಿದ್ದನೆಂದು ಈ ಮೇಲೆ ಅವಲೋಕಿಸಿದ್ದೇವೆ. ಹೀಗೆ ಯಲಹಂಕ ನಾಡಪ್ರಭುಗಳು ಸಾಹಿತ್ಯ ಪೋಷಕರು ಮಾತ್ರವಾಗಿರಲಿಲ್ಲ, ಕೆಲವು ಪ್ರಭುಗಳು ಸ್ವತಃ ಸಾಹಿತ್ಯ ರಚನೆ ಮಾಡಿದ್ದಾರೆ. ಹೀಗೆ ಯಲಹಂಕ ನಾಡಪ್ರಭುಗಳು ಕನ್ನಡ ಸಾಹಿತ್ಯದ ಜೊತೆ ಜೊತೆಗೆ ಸಂಸ್ಕೃತ ಮತ್ತು ತೆಲುಗು ಸಾಹಿತ್ಯಕ್ಕೂ ತಮ್ಮ ಕಾಣಿಕೆಯನ್ನು ನೀಡಿದ್ದಾರೆ.

## 6.8 ಉಪಸಂಹಾರ

ವಿಜಯನಗರೋತ್ತರ ಕಾಲಘಟ್ಟದಲ್ಲಿ ಪ್ರವರ್ಧಮಾನಕ್ಕೆ ಬಂದ ಹಲವು ನಾಡಪ್ರಭುಗಳ ಮನೆತನಗಳು ವಿಜಯನಗರದ ಅವನತಿಯ ನಂತರ ರಾಜಪೋಷಣೆ ಇಲ್ಲದೆ ಸೊರಗಿದ ಕಲೆ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಆಸರೆಯಾಗಿ ನಿಂತರು. ಕಲಾವಿದರು, ಶಿಲ್ಪಿಗಳು, ಕವಿಗಳಿಗೆ ಪೋಷಣೆ ನೀಡಿದರು. ಪರಿಣಾಮವಾಗಿ ವಿಜಯನಗರದ ಕಲೆ ಮತ್ತು ವಾಸ್ತುಶಿಲ್ಪಗಳು ಭಿನ್ನನೆಲೆಯಲ್ಲಿ ಸ್ಥಳೀಯ ಮಟ್ಟದಲ್ಲಿ ಅರಳತೊಡಗಿದವು.

ನಾಡಪ್ರಭುಗಳ ಕಾಲದ ದೇವಾಲಯಗಳಲ್ಲಿ ವಿಜಯನಗರ ಸಾಮ್ರಾಟ ರಚನೆಗಳಲ್ಲಿ ಇರುವಂತೆ ಬೃಹತ್ ನಿರ್ಮಾಣಗಳನ್ನು, ದೇವಾಲಯಗಳ ಭಿತ್ತಿಯ ಮೇಲೆ ಕಾಣುವ ಕುಸುರಿ ಕೆಲಸಗಳು ವಿರಳ. ಏಕೆಂದರೆ ಸಣ್ಣ ಸಣ್ಣ ಶಿಲ್ಪಗಳು ಸೂಕ್ಷ್ಮವಾದ ಕುಸುರಿ ಕೆಲಸಗಳನ್ನು ಬೇಡುತ್ತದೆ. ಅವುಗಳ ರಚನೆಗೆ ತಗಲುವ ವೆಚ್ಚ ಕೂಡ ಹೆಚ್ಚಾಗಿರುತ್ತದೆ. ಅದಕ್ಕಾಗಿ ನಾಡಪ್ರಭುಗಳ ಕಾಲದ ಕೆಲವು ದೇವಾಲಯಗಳು ಸರಳವಾಗಿರುತ್ತವೆ. ಸೂಕ್ಷ್ಮ ಕೆತ್ತನೆಗಳ ಬದಲು ದೊಡ್ಡದಾದ ಅಥವಾ ಉದ್ದದಾದ ಶಿಲ್ಪಗಳನ್ನು ಬಿಡಿಸುವ ಪರಿಪಾಠ ಆರಂಭವಾಗುತ್ತದೆ. ಉದಾ. ಬೆಂಗಳೂರಿನ ಬೆಣ್ಣೆ ಬಸವಣ್ಣನ ಗುಡಿ ನೋಡಿದರೆ ಅಲ್ಲಿ ಹಾವು, ಆನೆ, ಮೀನು ಇತ್ಯಾದಿ ಉಬ್ಬುಶಿಲ್ಪಗಳು ಮಾತ್ರ ಗೋಚರಿಸುತ್ತದೆ. ಬಹಳ ಸರಳವಾಗಿ ರಚಿಸಿರುವ ದೇವಾಲಯ ಇದಾಗಿದೆ. ಇದರ ಉದ್ದೇಶ ದೇವಾಲಯಗಳ ಭಿತ್ತಿಗಳು ಖಾಲಿ ಖಾಲಿ ಬಿಡುವ ಬದಲು ಸರ್ಪದಂತಹ ಉದ್ದವಾದ ಶಿಲ್ಪಗಳನ್ನು ಕೆತ್ತುವುದು. ಮೀನುಗಳನ್ನು ಬಿಡಿಸುವುದು ಇತ್ಯಾದಿ ಉಬ್ಬು ಶಿಲ್ಪಗಳನ್ನು ಬಿಡಿಸಿರುವುದನ್ನು ಕಾಣಬಹುದು. ಇವುಗಳು ಹೆಚ್ಚು ಕುಸುರಿ ಕೆಲಸವನ್ನು ಬೇಡುವುದಿಲ್ಲ. ಆದರೆ ಇಡೀ ದೇವಾಲಯದ ಭಿತ್ತಿಯನ್ನು ಆವರಿಸುತ್ತವೆ. ಕಡಿಮೆ ವೆಚ್ಚದಲ್ಲಿ ಮಾಡಿಸಬಹುದಾದ ಕೆಲಸಗಳಾಗಿರುತ್ತವೆ. ಕೆಲವು ನಾಡಪ್ರಭುಗಳೇ ನಿರ್ಮಿಸಿರುವ ದೇವಾಲಯಗಳು ವಿಜಯನಗರದ

ಅನುಕರಣೆಯನ್ನೆ ಮಾಡುವಂತಿವೆ. ಉದಾ. ಬೆಂಗಳೂರಿನ ಬಳ್ಳಾಪುರಪೇಟೆಯ ರಂಗನಾಥ ದೇವಾಲಯ, ಅಲಸೂರು ಸೋಮೇಶ್ವರ ದೇವಾಲಯ, ಮಾಗಡಿಯ ಸೋಮೇಶ್ವರ ದೇವಾಲಯ ಇವುಗಳು ಹೆಚ್ಚು ವೆಚ್ಚದಾಯಕವಾಗಿವೆ. ಹಲವು ಸೂಕ್ಷ್ಮ ಕೆತ್ತನೆಗಳಿಂದ ಕೂಡಿದ್ದು, ಬೃಹತ್ ನಿರ್ಮಾಣಗಳಾಗಿವೆ. ಜೊತೆಗೆ ಬಳಸಿರುವ ಕಲ್ಲುಗಳು ಕೂಡ ಸ್ಥಳೀಯವಾಗಿಯೇ ದೊರಕುವಂತವುಗಳಾಗಿದ್ದವು. ಮಾಗಡಿಯ ಸೋಮೇಶ್ವರ ದೇವಾಲಯಕ್ಕೆ ಬಳಸಿರುವ ತಿಳಿಗೆಂಪು ಕಲ್ಲುಗಳು ಆ ದೇವಾಲಯದಿಂದ ಹುಲಿಯೂರುದುರ್ಗ ರಸ್ತೆಯಲ್ಲಿ ಕೇವಲ ಮೂರು ಕಿ.ಮೀ. ದೂರದಲ್ಲಿರುವ ಕಲ್ಲುಗಣಿಯಿಂದ ತೆಗೆದಿರುವಂತಿದೆ. ಈ ತಿಳಿಗೆಂಪು ವರ್ಣದ ಕಲ್ಲು ವಾಸ್ತುಶಿಲ್ಪಕ್ಕೆ ವಿಶೇಷ ಆಕರ್ಷಣೆಯನ್ನು ನೀಡಿದೆ. ಹೀಗೆ ಸ್ಥಳೀಯ ಸಂಪನ್ಮೂಲಗಳನ್ನೆ ಬಳಸಿಕೊಂಡು ತಮ್ಮ ಆರ್ಥಿಕ ಸಾಮರ್ಥ್ಯ ಮತ್ತು ಸವಲತ್ತಿನ ಲಭ್ಯತೆಯ ಆಧಾರದ ಮೇಲೆ ದೇವಾಲಯಗಳನ್ನು ನಿರ್ಮಿಸುತ್ತಿದ್ದರು.

ನಾಡಪ್ರಭುಗಳ ಕಾಲದ ಶಿಲ್ಪ ಶೈಲಿಯಲ್ಲಿ ವಿನೂತನ ವಿನ್ಯಾಸವೊಂದನ್ನು ಅಳವಡಿಸಿಕೊಂಡದ್ದು ಇಲ್ಲಿ ದಾಖಲಾರ್ಹವಾಗಿದೆ. ಈಗಾಗಲೇ ಎಸ್.ಕೆ. ಅರುಣಿ ಅವರು ಗುರುತಿಸಿರುವಂತೆ ಶಿಲ್ಪ ಕೋಷ್ಠಕಗಳಲ್ಲಿ ಅಲೆಅಲೆಯಂತ ಕಮಾನು ಬಳಕೆ ಮಾಡಿಕೊಳ್ಳುವ ಮೂಲಕ ಶಿಲ್ಪದ ಸೊಬಗನ್ನು ಮತ್ತು ಆಕರ್ಷಣೆಯನ್ನು ಹೆಚ್ಚಿಸುವಂತೆ ಮಾಡಿದರು. ಇದು ಮೂಲತಃ ಮರಾಠರ ಶೈಲಿಯ ಅನುಕರಣೆಯಂತೆ ಕಾಣುತ್ತದೆ. ಮತ್ತೊಂದು ಪ್ರಮುಖವಾದ ಲಕ್ಷಣ ಎಂದರೆ ಯಲಹಂಕ ನಾಡಪ್ರಭುಗಳ ಕೋಟೆಗಳಲ್ಲಿ ಮತ್ತು ದೇವಾಲಯಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಗಣೇಶನ ಉಬ್ಬುಶಿಲ್ಪಗಳು. ಕೋಟೆಗಳಲ್ಲಿ ಸಾಮಾನ್ಯವಾಗಿ ಗಣೇಶನ ಉಬ್ಬುಶಿಲ್ಪವನ್ನು ಪಶ್ಚಿಮಾಭಿಮುಖವಾಗಿ ಬಿಡಿಸಿರುವುದು ವಿಶೇಷ. ಮತ್ತೊಂದು ನಾಡಪ್ರಭುಗಳ ಶಿಲ್ಪಶೈಲಿಯ ವಿಶೇಷತೆ ಎಂದರೆ ಏಕಶಿಲೆಯಲ್ಲಿ ನಿರ್ಮಾಣ ಮಾಡಿರುವ ಸೋಮಪಾನ, ಚಂದ್ರಪಾನ, ಡಮರು, ತ್ರಿಶೂಲ, ಕಲ್ಲಿನ ಛತ್ರಿ ಈ ರೀತಿಯ ರಚನೆಗಳು. ದಕ್ಷಿಣ ಕರ್ನಾಟಕದಲ್ಲಿ ವಿಶೇಷವಾಗಿ ಬೆಂಗಳೂರು ಪರಿಸರದಲ್ಲಿ ಮಾತ್ರ ಈ ರೀತಿಯ ರಚನೆಗಳನ್ನು ಕಾಣಬಹುದು. ನಾಡಪ್ರಭುಗಳ ಕಾಲದಲ್ಲಿ ಮತ್ತೊಂದು ಗಮನಿಸಬೇಕಾದ ಅಂಶ ಎಂದರೆ ಏಕಶಿಲೆಯಲ್ಲಿ ಬೃಹತ್ತಾದ ಶಿಲ್ಪಗಳನ್ನು ನಿರ್ಮಿಸುವುದು. ಉದಾ. 11 ಅಡಿ ಎತ್ತರದ ಬಸವಣ್ಣ, 13 ಅಡಿಗಳ ಎತ್ತರದ ಗಣೇಶ ಈ ರೀತಿಯ ರಚನೆಗಳು ನಾಡಪ್ರಭುಗಳ ಕಾಲದಲ್ಲಿ ಗಮನಸೆಳೆಯುತ್ತವೆ. ಇದು ಹಂಪಿಯಲ್ಲಿ ಕಾಣುವ ಸಾಸುವೆಕಾಳು ಗಣಪ, ಕಡಲೆಕಾಳು ಗಣಪಗಳ ಅನುಕರಣೆಯಾಗಿರಬಹುದಾದರೂ, ಯಲಹಂಕ ನಾಡಪ್ರಭುಗಳ ರಚನೆಯಲ್ಲಿ ಗಣಪನ ಉಬ್ಬುಶಿಲ್ಪಗಳಿಗೆ ಹೆಚ್ಚು ಆದ್ಯತೆ ನೀಡಲಾಗಿದೆಯೇ ವಿನಃ ಹಂಪಿಯಲ್ಲಿರುವಂತೆ ಶಿಲ್ಪವಾಗಿ

ಕಾಣಲು ಸಾಧ್ಯವಿಲ್ಲ. ಇದೂ ಕೂಡ ಕಡಿಮೆ ಕೌಶಲ್ಯ ಮತ್ತು ಶ್ರಮದಿಂದ ಮಾಡಬಹುದಾದ ರಚನೆಗಳಾಗಿವೆ. ಪೂರ್ಣ ಶಿಲ್ಪವಾಗಿ ಕಡೆಯಲು ಬೇಡುವ ಕೌಶಲ್ಯ ಮತ್ತು ಶ್ರಮ ಉಬ್ಬುಶಿಲ್ಪಗಳಿಗೆ ಬೇಕಾಗುವುದಿಲ್ಲ.

ನಗರ ರಚನೆಯ ವಿಚಾರದಲ್ಲಿ ಒಂದು ಗಮನಿಸಬೇಕಾದ ವಿಚಾರವೇನೆಂದರೆ, ನಾಡಪ್ರಭುಗಳ ಕಾಲದಲ್ಲಿ ನಗರ ರಚನೆಗೆ ನೆಲೆಯನ್ನು ಆಯ್ದುಕೊಳ್ಳಲು ನಾಯಿ ಮೊಲದ ಕಥೆಗಳು ಕಾರಣವಲ್ಲ. ಇದು ಎಲ್ಲಾ ಕಡೆ ಇರುವ ಕಥೆಯೇ ಆಗಿದೆ. ಈ ರೀತಿಯ ಸ್ಥಳ ಮಹಿಮೆಯನ್ನು ಹೇಳುವ ಮೂಲಕ ಶತ್ರುಗಳಲ್ಲಿ ಒಂದು ಥರದ ಆತಂಕವನ್ನು ಉಂಟುಮಾಡುವ ಮತ್ತು ಮಾನಸಿಕ ಜಯವನ್ನು ಪಡೆಯುವ ಉದ್ದೇಶವಿರುವಂತಿದೆ. ಅದೇನೆ ಇರಲಿ, ನೆಲೆಯನ್ನು ಆಯ್ಕೆ ಮಾಡಿಕೊಳ್ಳುವ ಮೊದಲು ವ್ಯಾಪಕವಾದ ಭೌಗೋಳಿಕ ಪರಿವೀಕ್ಷಣೆಯನ್ನು ನಡೆಸುತ್ತಿದ್ದರು ಎಂಬುದರಲ್ಲಿ ಅನುಮಾನವಿಲ್ಲ. ಏಕೆಂದರೆ, ಬೇಟೆಗೆ ಬಂದಾಗ ದಾರಿ ತಪ್ಪಿ ಅಲೆಯುವಾಗ, ಅಥವಾ ಬೇಟೆಗೆ ಬಂದಾಗ ಎಂಬುದು ಭೌಗೋಳಿಕ ಪರಿವೀಕ್ಷಣೆಯ ಮತ್ತೊಂದು ವಿಧಾನವೆಂದು ಅಥವಾ ಪರಿವೀಕ್ಷಣೆಯನ್ನೆ ಸಾಂಕೇತಿಕ ರೂಪದಲ್ಲಿ ಹೇಳುವ ವಿಧಾನವೂ ಆಗಿರಬಹುದು. ಈ ಹಿನ್ನೆಲೆಯಲ್ಲಿ ಬೆಂಗಳೂರು ನೆಲೆಯ ಆಯ್ಕೆ ಪ್ರಜ್ಞಾಪೂರ್ವಕವಾದ ಆಯ್ಕೆಯೇ ವಿನಃ ಮೊಲ ನಾಯಿಯನ್ನು ಬೆನ್ನಟ್ಟಿತು ಎಂಬ ಕಥೆಯಂತಾಗಿರುವುದಿಲ್ಲ.

ಸಾಹಿತ್ಯ ಕ್ಷೇತ್ರಕ್ಕೆ ಬಂದಾಗ ವಿಜಯನಗರ ಸಾಮ್ರಾಟರು ಕನ್ನಡ, ತೆಲುಗು, ತಮಿಳು ಮತ್ತು ಸಂಸ್ಕೃತ ಸಾಹಿತ್ಯಕ್ಕೆ ಪೋಷಣೆ ನೀಡಿದ್ದರು. ಆದರೆ ವಿಜಯನಗರದ ಅವನತಿಯತ್ತ ಸಾಗಿದಂತೆ ಕವಿಗಳಿಗೆ, ವಿದ್ವಾಂಸರಿಗೆ ರಾಜಮನ್ನಣೆ ದೊರಕದೆ ಸಾಹಿತ್ಯ ಸೊರಗತೊಡಗಿತು. ಆ ಸಂದರ್ಭದಲ್ಲಿ ವಿಜಯನಗರದ ಆಸ್ಥಾನ, ದಸರಾದಂತಹ ಉತ್ಸವ ಮೊದಲಾದವುಗಳನ್ನು ನಾಡಪ್ರಭುಗಳು ಕೂಡ ತಮ್ಮ ನಾಡಿನಲ್ಲಿ ಅಳವಡಿಸಿಕೊಳ್ಳತೊಡಗಿದರು. ಪರಿಣಾಮವಾಗಿ ಆಸ್ಥಾನವನ್ನು ಕವಿಗಳು ವಿದ್ವಾಂಸರು ಅಲಂಕರಿಸಲಾರಂಭಿಸಿದರು. ರಾಜಾಶ್ರಯವನ್ನು ಬಯಸಿ, ದೂರದೂರದ ಪ್ರದೇಶಗಳಿಂದ ವಲಸೆ ಬಂದ ವಿದ್ವಾಂಸರಿಗೆ ಭೂ ಉಂಬಳಿ ನೀಡಿ ಆಶ್ರಯ ಕಲ್ಪಿಸತೊಡಗಿದರು. ಉದಾ.ಗೆ ಇತಿಹಾಸಕಾರರಾದ ಎಸ್. ಶ್ರೀಕಂಠಶಾಸ್ತ್ರಿ ಅವರ ಪೂರ್ವಿಕ ಯಜ್ಞಪತಿಭಟ್ಟರ ಬಗೆಗೆ ನೋಡುವುದಾದರೆ, ಮೂಲತಃ ಆಂಧ್ರದ ಮುಲಕನಾಡು ಪಂಗಡದವರು. ಮೂರು ಶತಮಾನಗಳ ಹಿಂದೆ ಬೆಂಗಳೂರು ಸಮೀಪದ ನೆಲಮಂಗಲ ಮಾಗಡಿ ಪ್ರಾಂತದಲ್ಲೂ ಪ್ರಸ್ಥಪುರಿ (ಬಳ್ಳಾಪುರ), ಕಕುದ್ಗಿರಿ (ಶಿವಗಂಗೆ), ಶ್ರೀರಂಗಪಟ್ಟಣ, ಧರ್ಮಪುರಿ ಮುಂತಾದೆಡೆಗಳಲ್ಲೂ ನೆಲೆಸಿದರು. ನೆಲಮಂಗಲದ ಆಸುಪಾಸಿನಲ್ಲಿ ನಲೆಗೊಂಡ ಪೂರ್ವಿಕರಲ್ಲಿ

ಮುದ್ದುವೆಂಕಟೇಶ್ವರ ಸೋಮಯಾಜಿಯಿಂದ ಹತ್ತನೇ ತಲೆಮಾರಿನವರು ಶ್ರೀಕಂಠಶಾಸ್ತ್ರಿಗಳು. ಸೋಮಯಾಜಿಯ ಮಗನೇ ಯಜ್ಞಪತಿಭಟ್ಟ. ಈತ ಇಮ್ಮಡಿ ಕೆಂಪೇಗೌಡನಿಂದ 13 ಎಕರೆ ಭೂಮಿಯನ್ನು ಉಂಬಳಿ ಪಡೆದನು.[55] ಹೀಗೆ ವಿದ್ವಾಂಸರು ಮತ್ತು ಶಿಲ್ಪಿಗಳು, ಕಲಾವಿದರು ಆಶ್ರಯಕ್ಕಾಗಿ, ಜೀವನೋಪಾಯಕ್ಕಾಗಿ ವಲಸೆ ಹೋಗುವ ಪ್ರಸಂಗಗಳು ವ್ಯಾಪಕವಾಗಿ ನಡೆಯುತ್ತಿದ್ದವು. ಇದರಿಂದಾಗಿ ವಿಜಯನಗರದ ಕಲೆ, ಸಾಹಿತ್ಯಗಳು ಕೂಡ ದಕ್ಷಿಣ ಭಾರತದಾದ್ಯಂತ ಪಸರಿಸಲು ಸಾಧ್ಯವಾಯಿತು.

* * *

## ಅಡಿಟಿಪ್ಪಣಿಗಳು

1. ಅರುಣಿ.ಎಸ್.ಕೆ., **ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ**, 2007: 6.
2. **ಅದೇ.**: 37.
3. **ಅದೇ.**: 20.
4. ತರೀಕೆರೆ ರಹಮತ್ : **ಕರ್ನಾಟಕದ ನಾಥಪಂಥ,** 2006.
5. ಅರುಣಿ ಎಸ್.ಕೆ., **ಬೆಂಗಳೂರು ಪರಂಪರೆ**, 2019: 114.
6. ಕೃಷ್ಣಮೂರ್ತಿ ಎಂ.ಎಸ್., **"**ಮಾಗಡಿ ಕೆಂಪೇಗೌಡರ ಕಂಚಿನಪ್ರತಿಮೆ ಸುಂದರವಾದ ಶಿಲ್ಪಕೃತಿ**"**, (ಸಂ.) ಗೋಪಾಲ್ ಆರ್., ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು, ಮೈಸೂರು, 2010: 213.
7. ಉಳಿದ ಎರಡು ಶಿಲ್ಪಗಳಲಿ ಒಂದು ಸೋಲೂರು ಪಾಳೆಯಗಾರ ಕೆಂಪಸೋಮಣ್ಣನ ಶಿಲ್ಪ, ಮತ್ತೊಂದು ಉಳ್ಳಿ ಚಿಕ್ಕಣ್ಣನದೆನ್ನಲಾಗಿದೆ. ಈಗಿರುವ ಕೆಂಪಸೋಮಣ್ಣನ ಕಂಚಿನ ಶಿಲ್ಪದ ಪ್ರಸ್ತುತ ಎತ್ತರ 43.5 ಅಂಗುಲ. ಇದರ ಮೊಣಕಾಲಿನ ಭಾಗವನ್ನು ಕತ್ತರಿಸಿ ಪೀಠಕ್ಕೆ ಬೆಸೆಯಲಾಗಿದೆ. ಬಹುಶಃ ಮೂಲದಲ್ಲಿ ಈ ಶಿಲ್ಪ ಇನ್ನೂ 5–6 ಅಂಗುಲಗಳ ಎತ್ತರವಿದ್ದಿರಬಹುದಾದ ಸಾಧ್ಯತೆಗಳಿವೆ. ಆದರೆ ಏಕೆ ಹೀಗೆ ಮಾಡಲಾಗಿದೆ ಎಂಬುದಕ್ಕೆ ಯಾವುದೇ ಮಾಹಿತಿಗಳಿಲ್ಲ. ಈಗ ಈ ಶಿಲ್ಪ ಮೇಲ್ನೋಟಕ್ಕೆ ಕೆಂಪೇಗೌಡನ ಪ್ರತಿಮೆಗಿಂತ ಚಿಕ್ಕದಾಗಿ ಕಾಣುತ್ತದೆ.
8. ಅರುಣಿ. ಎಸ್.ಕೆ. **ಪೂರ್ವೋಕ್ತ** 2007: 38.
9. ಶಂಕರ ಭಾರತೀ, **ಕೌಟಿಲ್ಯನ ಅರ್ಥಶಾಸ್ತ್ರ**, 2010(1963): 90–91.
10. ಪಾಟೀಲ ಸಿ.ಎಸ್., **ಕರ್ನಾಟಕದ ಕೋಟೆಗಳು**, 1999: 2.
11. **ಅದೇ.**
12. ಅರುಣಿ ಎಸ್.ಕೆ. **ಪೂರ್ವೋಕ್ತ,** 2007: 75.
13. ದೊಡ್ಡ ಬಸವಣ್ಣನ ದೇವಾಲಯವು ಒಂದನೆಯ ಕೆಂಪೇಗೌಡರ ಕಾಲದ ರಚನೆಯೆಂದು ಎಂ.ಎಚ್.ಕೃಷ್ಣ ಅವರ ಅಭಿಪ್ರಾಯ. (**ಎಂ.ಎ.ಆರ್. 1935,** ಪು 20–27).
14. ಶಿವಕುಮಾರಿ ಎಂ.ಎಸ್., **"**18 ಮತ್ತು 19ನೇ ಶತಮಾನದ ಮೈಸೂರು ಸಂಸ್ಥಾನದಲ್ಲಿ ಕೆಲವು ಕೋಟೆಯುಕ್ತ ಪೇಟೆ ಮತ್ತು ಪಟ್ಟಣಗಳ ವಿಕಾಸ**"**, 2014: 146-155.
15. ಸೋಮಶೇಖರ್ ವೇಮಗಲ್, **"**ಬೆಂಗಳೂರಿನ ದೊಡ್ಡ ಬಸವಣ್ಣ ದೇವಾಲಯದ ಶಾಸನಗಳು**"**, **'ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ',** 2010: 56.
16. ಮಂಜುನಾಥ ಎಂ.ಜಿ., **'ಬೆಂಗಳೂರಿನ ಬಖೈರುಗಳು'**, 2006ಎ: 41.

17. ಲಿಂಗಯ್ಯ ಡಿ., **'ಯಲಹಂಕ ನಾಡಪ್ರಭುಗಳು ಜಾನಪದ ಸಂಪುಟ'**, 2005: 25.

18. ಅರುಣಿ ಎಸ್.ಕೆ., **ಪೂರ್ವೋಕ್ತ,** 2007: 104–105.

19. ಮಂಜುನಾಥ ಎಂ.ಜಿ., **ಪೂರ್ವೋಕ್ತ,** 2006ಎ: 81 & 92.

20. ಮುಖ್ಯವಾಗಿ ಎಫ್.ಗುಡ್‌ವಿಲ್, 'Hutridroog and Huliyurdroog', **Quarterly Journal of the Mythic Society,** Vol-XIV, No.2, 1924:73-74.; ಎಸ್.ಎ. ಮಂಜುಳ, **ಉತ್ತರಿದುರ್ಗ,** ಇತಿಹಾಸ ಕಥಾ ಸಂಗ್ರಹಕಾರರು, ಬೆಂಗಳೂರು, 1986:34; ಜೆ.ಟಿ.ಜಯರಾಮಯ್ಯ, **'**ಕೆಂಪೇಗೌಡರ ಕಾಲದ ಕೋಟೆ ಕೊತ್ತಲಗಳು**'**, (ಸಂ.) ಎಂ.ಹೆಚ್. ಕೃಷ್ಣಯ್ಯ ಮತ್ತು ದೇವರಕೊಂಡಾರೆಡ್ಡಿ, **ಬೆಂಗಳೂರು ಕೆಂಪೇಗೌಡರ ವಂಶಸ್ಥರು,** ಜನತಾ ಶಿಕ್ಷಣ ಸಂಸ್ಥೆ, ಬೆಂಗಳೂರು, 1996:61–63; ಎಸ್.ಕೆ. ಅರುಣಿ, **ಯಲಹಂಕ ನಾಡ ಪ್ರಭುಗಳ ವಾಸ್ತುಶಿಲ್ಪ–ಶಿಲ್ಪಕಲೆ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, 2006:272.

21. **ಎಪಿಗ್ರಾಫಿಯ ಕರ್ನಾಟಿಕ ಸಂಪುಟ–12**, ಕುಣಿಗಲ್ –20.

22. ರಾಜೇಶ್ ಹಂ.ಗು., **"**ಹುತ್ರಿದುರ್ಗ: ಒಂದು ಚಾರಿತ್ರಿಕ ಅಧ್ಯಯನ**"**, **ಇತಿಹಾಸ ದರ್ಶನ ಸಂಪುಟ–34,** 2019: 392–398.

23. ರೇವಣಸಿದ್ಧಯ್ಯ ಕೆ., **'ಕುಣಿಗಲ್ ನಾಡು ಇತಿಹಾಸ ಮತ್ತು ಪುರಾತತ್ವ ಅಧ್ಯಯನ',** (ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಅಪ್ರಕಟಿತ ಮಹಾಪ್ರಬಂಧ): 206.

24. ಅರುಣಿ ಎಸ್.ಕೆ., **ಪೂರ್ವೋಕ್ತ,** 2007: 282.

25. ಸದಾಶಿವಪ್ಪ ಹು.ಪು., **'ಹುಲಿಯೂರು ದುರ್ಗ',** 1978: 25.

26. ಮಂಜುನಾಥ ಎಂ.ಜಿ. **ಪೂರ್ವೋಕ್ತ,** 2006ಎ: 90–91.

27. **ಎ.ಕ.(ರೈ)9,:** ಮಾಗಡಿ–13.

28. ಇದರಿಂದ ಎರಡು–ಮೂರು ವಿಚಾರಗಳು ಉದ್ಭವಿಸುತ್ತವೆ. ಒಂದು– ಹೊಯ್ಸಳರ ಕಾಲದಲ್ಲಿಯೇ ಸಾವಂಧಿ ಎಂಬ ಪ್ರದೇಶವಿತ್ತು. ಎರಡು– ಬಲ್ಲಾಳನ ಕಾಲದಲ್ಲಿ ಈ ಪ್ರದೇಶದಲ್ಲಿ ಕಳ್ಳರು (ಕಿರಾತರು) ದಾರಿಹೋಕರನ್ನು ಸುಲಿಯುತ್ತಿದ್ದರು. ಅವರನ್ನು ನಿಯಂತ್ರಿಸುವ ಸಂದರ್ಭದಲ್ಲಿ ಬಲಪನಾಯಕನ ಸೈನಿಕ ಆಲಪ್ಪನು ಹೋರಾಡುತ್ತಾ ಮರಣ ಹೊಂದಿರಬಹುದು. ಇನ್ನೊಂದು ಮುಖ್ಯವಿಚಾರ ಎಂದರೆ **"**ಮಾಗಡಿ ಜಿಲ್ಲೆಯ ಚಾರಿತ್ರಿಕ ಬಖೈರು**"** ರಚಿಸಿದ ಸಿ.ವಿ.ಲಚ್ಮಯ್ಯನು ಮಾಗಡಿಯ ಬಗ್ಗೆ ವಿಚಾರಣೆ ನಡೆಸಿ, 1807ರ ಮಾರ್ಚ್‌ನಲ್ಲಿ ಸಂಗ್ರಹಿಸಲ್ಪಟ್ಟ ಮಾಹಿತಿಯನ್ನು ಅದೇ ವರ್ಷ ಅಕ್ಟೋಬರ್ 8 ರಂದು ಇಂಗ್ಲಿಷ್‌ಗೆ ಅನುವಾದಿಸಿದ್ದಾನೆ. ಸಿ.ವಿ. ಲಚ್ಮಯ್ಯನು ಕರ್ನಲ್ ವಿಲ್ಕ್ಸ್‌ನಿಗೆ ಶಾಸನ, ಹಸ್ತಪ್ರತಿಗಳನ್ನು ಓದಿಕೊಡುತ್ತಿದ್ದ ದೇಶಿಯ ಪಂಡಿತ ಕಾವಲಿ ವೆಂಕಟ ಬೋರಯ್ಯನ ತಮ್ಮ. ಇವನ ಪೂರ್ಣ ಹೆಸರು ಕಾವಲಿ ವೆಂಕಟ ಲಕ್ಷ್ಮಯ್ಯ ಎಂಬುದನ್ನು ಆರಂಭಿಕ ಅಧ್ಯಾಯದ ಸಂದರ್ಭದಲ್ಲಿಯೇ ಚರ್ಚಿಸಿದ್ದೇನೆ. ಈ ವೆಂಕಟ ಲಕ್ಷ್ಮಯ್ಯನು ಮಾಗಡಿ ಬಖೈರನ್ನು ರಚಿಸಿರುವ ಸಂದರ್ಭದಲ್ಲಿ ಈ ಶಾಸನವನ್ನೂ ಓದಿ, ಮಾಹಿತಿ

ಸಂಗ್ರಹಿಸಿರಬಹುದೆಂಬ ಅನುಮಾನ ಕಾಡುತ್ತದೆಯಾದರೂ, ಸಾವಂಧಿ ಎಂಬ ಹೆಸರಿನ ಉಲ್ಲೇಖವಿದ್ದರೂ ಏಕೆ ಸಾಮಂತರಾಯನಿಂದ ಸಾವಂದಿ ಹೆಸರು ಬಂದಿತೆಂದು ಹೇಳುತ್ತಾನೆ ಎಂಬ ಮತ್ತೊಂದು ಅನುಮಾನ ಕಾಡುತ್ತದೆ.

29. ಅರುಣಿ ಎಸ್.ಕೆ., **ಪೂರ್ವೋಕ್ತ,** 2007: 09.
30. ರಾಜೇಶ್ ಹಂ.ಗು., **"**ಕೆಂಪೇಗೌಡರ ಬೆಂಗಳೂರು ನೆಲೆ–ಹಿನ್ನೆಲೆ**", ಇತಿಹಾಸ ದರ್ಶನ ಸಂಪುಟ–35,** 2020:499–501.
31. ಅರುಣಿ ಎಸ್.ಕೆ. ಅವರ ಸಂದರ್ಶನ ದಿನಾಂಕ: 28.01.2020.
32. ನರಸಿಂಹನ್ ಕೆ.ಆರ್., **"**ಕಲ್ಲೂರು ಹಾಗೂ ಮುದುವತ್ತಿಯ ಅಪ್ರಕಟಿತ ಶಾಸನ ಹಾಗೂ ವೀರಗಲ್ಲು ಸ್ಮಾರಕಗಳು**"**, 2020: 96–98.
33. ಅರುಣಿ ಎಸ್.ಕೆ., **ಪೂರ್ವೋಕ್ತ,** 2007: 10–12.
34. **ಅದೇ.**
35. **A Descriptiove Catalogue of the Kannada Manuscripts. Vol.7,** No.1264 (1958) P. 2-4.
36. ನಂಜುಂಡಸ್ವಾಮಿ ಬಿ., **"**ಯಲಹಂಕ ನಾಡಪ್ರಭುಗಳ ಕಾಲದ ಸಾಹಿತ್ಯ**"**, 2020: 205.
37. ಶ್ರೀಕಂಠಯ್ಯ, **ಗೌಡಕುಲವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ',** ಕರ್ಲಮಂಗಲ, 1961: 1.
38. **ಅದೇ.**: 3–4.
39. ನಂಜುಂಡಸ್ವಾಮಿ ಬಿ., **ಪೂರ್ವೋಕ್ತ,** 2020:203–205.
40. **ಅದೇ.**: ಪ್ರಸ್ತಾವನೆ ಪು.26.
41. ನರಸಿಂಹಯ್ಯ ಎಸ್.ಕೆ., **ಮಾಗಡಿ ಕೆಂಪೇಗೌಡ,** 1922 (1924): 43.
42. ವಸಂತಲಕ್ಷ್ಮಿ ಕೋ., **"**ಏಕಾಮ್ರ ದೀಕ್ಷಿತನ 'ವೀರಭದ್ರ ವಿಜಯ'ದಲ್ಲಿ ಯಲಹಂಕ ಪ್ರಭುಗಳು**"**, 1996: 36.
43. **ಅದೇ.**
44. ನರಸಿಂಹಯ್ಯ ಎಸ್.ಕೆ. **ಪೂರ್ವೋಕ್ತ.**
45. ಶ್ರೀಕಂಠಯ್ಯ, **ಪೂರ್ವೋಕ್ತ,** 1961: 20–28.
46. ಮಂಜುನಾಥ ಎಂ.ಜಿ., **'ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ',** 2006: 79–92.
47. ಶ್ರೀಕಂಠಯ್ಯ, **ಪೂರ್ವೋಕ್ತ,** 1961: ಮುನ್ನುಡಿ ಪು.39.
48. ನರಸಿಂಹಾಚಾರ್ ಆರ್., **ಕರ್ನಾಟಕ ಕವಿಚರಿತೆ ಸಂಪುಟ–2,** 2005: 517–18.

49. ರಾಮಸ್ವಾಮಿ ಎಸ್.ಆರ್., **ದೀವಟಿಗೆಗಳು,** 2012: 189.

50. ನಂಜುಂಡಸ್ವಾಮಿ ಬಿ., **ಪೂರ್ವೋಕ್ತ,** 2020: 212–213.

51. **ಅದೇ.**: 213.

52. ತೆಲುಗು ಕಾವ್ಯವನ್ನು ನೋಡಿ ಶ್ರೀ ಸುಬ್ಬರಾಮಪ್ಪನವರು ಮಾಗಡಿ ಕೆಂಪೇಗೌಡನೂ, ಇವರ ವಂಶದವರೂ "ತೆಲುಗ"ರೆಂದು ನಿರ್ಣಯಿಸಿ ಬಿಟ್ಟರು" ಎಂದು ಶ್ರೀಕಂಠಯ್ಯ ತಮ್ಮ **'ಕೆಂಪೇಗೌಡ ಜಯಪ್ರಶಸ್ತಿ'**ಯ ಮುನ್ನುಡಿ ಪು.50ರಲ್ಲಿ ಉಲ್ಲೇಖಿಸಿದ್ದಾರೆ.

53. ವಸಂತ ಲಕ್ಷ್ಮಿ ಕೋ., **ಪೂರ್ವೋಕ್ತ,** 1996: 39.

54. ರಾಜೇಶ್ ಹಂ.ಗು., **"**ಕೆಂಪಾಪುರ ಸಮಾಧಿಯ ಕೆಂಪೇಗೌಡ ಯಾರು?**",** 2016: 71–72.

55. ರಾಮಸ್ವಾಮಿ ಎಸ್.ಆರ್., **ಪೂರ್ವೋಕ್ತ,** 2012: 189

* * * * *

# ಅಧ್ಯಾಯ–7

# ಉಪಸಂಹಾರ

ದಕ್ಷಿಣ ಕರ್ನಾಟಕದಲ್ಲಿ ಏಳಿಗೆಗೆ ಬಂದ ವಿಜಯನಗರೋತ್ತರ ಕಾಲದ ಹಲವು ಸಾಮಂತ ಮನೆತನಗಳಲ್ಲಿ ಆಯ್ದ ಮನೆತನಗಳನ್ನು ಪರಿಗಣಿಸಿ ಈವರೆಗೆ ಇಲ್ಲಿ ಅಧ್ಯಯನ ನಡೆಸಲಾಗಿದೆ. ಈ ಮನೆತನಗಳಲ್ಲಿ ಬೆಂಗಳೂರು ಪರಿಸರದಲ್ಲಿ ಪ್ರವರ್ಧಮಾನಕ್ಕೆ ಬಂದ ಯಲಹಂಕ ನಾಡಪ್ರಭುಗಳನ್ನು ಕುರಿತು ವಿಶೇಷವಾಗಿ ಅಧ್ಯಯನವನ್ನು ನಡೆಸಲಾಗಿದೆ. ಪ್ರಸ್ತುತ ಅಧ್ಯಯನ ವಿಷಯವಾದ **ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)** ಇದರಲ್ಲಿ ಈ ಕೆಳಕಂಡ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

1. ವಿಜಯನಗರೋತ್ತರ ಕಾಲಘಟ್ಟದ ದಕ್ಷಿಣ ಕರ್ನಾಟಕದ ರಾಜಕೀಯ ಸಂದರ್ಭದಲ್ಲಿ ಅರಾಜಕತೆಯ ವಾತಾವರಣ ಸೃಷ್ಟಿಯಾಗಿತ್ತು. ನಿರಂತರ ಕಲಹಗಳು ಏರ್ಪಟ್ಟವು. ಬಿಜಾಪುರದ ಆದಿಲ್‌ಶಾಹಿಗಳ ನಿರಂತರ ದಾಳಿಗಳು, ಮರಾಠರ ಆಕ್ರಮಣಗಳು ಆರ್ಥಿಕ ಬೆಳವಣಿಗೆಯನ್ನು ಕುಂಟಿತಗೊಳಿಸಿದವು. ಆದರೂ ವಿಜಯನಗರ ಸಾಮ್ರಾಜ್ಯದ ಕೇಂದ್ರ ಶಕ್ತಿಯ ಅವನತಿ, ಪ್ರಮುಖ ವ್ಯಾಪಾರ ಮತ್ತು ವಾಣಿಜ್ಯ ಕೇಂದ್ರವಾದ ಹಂಪಿಯ ಅವನತಿಯು ದಕ್ಷಿಣ ಭಾರತದ ಒಳನಾಡಿನಲ್ಲಿ ಸಣ್ಣಮಟ್ಟ ಹೊಸ ವ್ಯಾಪಾರ ಕೇಂದ್ರಗಳ ವಿಕಾಸಕ್ಕೆ ಪ್ರೇರಣೆಯಾಯಿತು. ಜೊತೆಗೆ ಸ್ಥಳೀಯ ಮಟ್ಟದಲ್ಲಿ ನಡೆಯುತ್ತಿದ್ದ ಕೃಷಿ ವಿಸ್ತರಣೆ ಮತ್ತು ಕೆರೆ ನೀರಾವರಿಯು ಸ್ಥಳೀಯ ಸಂಸ್ಥಾನಗಳಿಗೆ ಶಕ್ತಿಯನ್ನು ತುಂಬಿತು. ಯೂರೋಪಿಯನ್ನರ ಆಗಮನವು ಸ್ಥಳೀಯ ಆರ್ಥಿಕತೆಗೆ ಉತ್ತೇಜನ ನೀಡಿತು. ವ್ಯಾಪಾರ ಮಾರ್ಗಗಳ ಮೇಲೆ ನಿಯಂತ್ರಣವನ್ನು ಸಾಧಿಸಿದ ಸ್ಥಳೀಯ ಪ್ರಭುತ್ವಗಳು ಸಶಕ್ತವಾಗಿ ಬೆಳೆಯತೊಡಗಿದವು ಎಂಬ ಅಂಶವನ್ನು ಕಂಡುಕೊಳ್ಳಲಾಗಿದೆ. ಅಂಥವುಗಳಲ್ಲಿ ಯಲಹಂಕ ನಾಡಪ್ರಭುಗಳು, ಮೈಸೂರು ಒಡೆಯರು, ಕೆಳದಿಯ ನಾಯಕರು ಪ್ರಮುಖರು.

2. ನಾಡಪ್ರಭುಗಳು ಪಾಳೆಯಗಾರರು, ನಾಯಕರು ಮುಂತಾದ ಸಾಮಂತ ಮನೆತನಗಳ ಹಿನ್ನೆಲೆಯಲ್ಲಿ ಅನೇಕ ಪವಾಡಗಳು, ದೈವಿಕ ಪ್ರೇರಣೆಗಳು, ವಿಸ್ಮಯಗಳು ಘಟಿಸುವಂತಹ ಕಥನಗಳು ಸಾಮಾನ್ಯವಾಗಿ ಐತಿಹ್ಯಗಳ ರೂಪದಲ್ಲಿ ಕೇಳಿಬರುತ್ತವೆ. ಈ ಪವಾಡ,

ಪ್ರೇರಣೆಗಳ ಐತಿಹ್ಯಗಳ ಹಿಂದೆ ತಮ್ಮನ್ನು ಅಥವಾ ತಮ್ಮ ಮನೆತನಗಳನ್ನು ದೈವೀಕರಿಸಿಕೊಳ್ಳುವ ಮೂಲಕ ಜನಸಾಮಾನ್ಯರನ್ನು ನಂಬಿಸುವ ಅಥವಾ ಆ ಮುಖೇನ ಜನಸಾಮಾನ್ಯರ ವಿಧೇಯತೆಯನ್ನು ಗಳಿಸುವ ಹುನ್ನಾರವೇ ವಿನಃ ಬೇರೇನೂ ಅಲ್ಲ. ಉದಾ. ವೆಂಕಟೇಶ್ವರ ಕಣ್ಣಿಲ್ಲದ ಭಕ್ತನ ಪ್ರಾರ್ಥನೆಗೆ ಮೆಚ್ಚಿ ಒಂದು ಕಣ್ಣು ಕೊಟ್ಟು ಮತ್ತೊಂದು ಕಣ್ಣಿಗಾಗಿ ರಾಜನನ್ನು ಕೇಳು ಎಂದು ಹೇಳಿದನಂತೆ. ಆಗ ರಾಜ ಒಡೆಯರ್ ತನ್ನ ದೈವೀಕ ಶಕ್ತಿಯಿಂದ ಭಕ್ತನಿಗೆ ಕಣ್ಣು ನೀಡಿದ ಎಂಬುದಾಗಲಿ, ಕಣ್ಣಿಲ್ಲದ ಭಕ್ತನೊಬ್ಬನಿಗೆ ವೀರಭದ್ರನು ಒಂದು ಕಣ್ಣು ನೀಡಿ, ಮತ್ತೊಂದು ಕಣ್ಣನ್ನು ಮುಮ್ಮಡಿ ಕೆಂಪೇಗೌಡನನ್ನು ಕೇಳುವಂತೆ ಹೇಳಲಾಗಿ, ಕೆಂಪೇಗೌಡನು ತನ್ನ ದೈವಿಕ ಶಕ್ತಿಯಿಂದ ಮತ್ತೊಂದು ಕಣ್ಣುಕೊಟ್ಟ ಎಂಬುದಾಗಲಿ, ಇವು ಅರಸರು ತಮ್ಮನ್ನು ದೈವೀಕರಿಸಿಕೊಂಡು ಜನರ ವಿಧೇಯತೆಯನ್ನು ಗಳಿಸುವುದಾಗಿತ್ತು ಎಂಬುದನ್ನು ಕಂಡುಕೊಳ್ಳಲಾಗಿದೆ.

3. ಕೆಲವು ಸ್ಥಳಗಳಿಗೆ ಸಂಬಂಧಿಸಿದಂತೆ ಸ್ಥಳಮಹಿಮೆಗಳು ಹುಟ್ಟಿಕೊಂಡಿವೆ. ಐತಿಹ್ಯಗಳಾಗಿ ಕೇಳಿ ಬರುವ ಈ ಸ್ಥಳಮಹಿಮೆಗಳು ಶತೃಗಳನ್ನು ಮಾನಸಿಕವಾಗಿ ಗೆಲ್ಲುವ ತಂತ್ರವಷ್ಟೆ ಎಂಬುದು ಮೇಲ್ನೋಟಕ್ಕೆ ಕಂಡುಬರುವುದು. ಇಂತಹ ಕಥನಗಳು ವಿಜಯನಗರೋತ್ತರ ಕಾಲಘಟ್ಟದಲ್ಲಿ ಸಾಮಾನ್ಯವಾಗಿ ಎಲ್ಲಾ ಪ್ರಮುಖ ಸ್ಥಳಗಳ ಬಗೆಗೂ ಕೇಳಿಬರುತ್ತವೆ. ಉದಾ.: ರಣದುಲ್ಲಾಖಾನನ ಸೈನ್ಯ ಶ್ರೀರಂಗಪಟ್ಟಣದ ಮೇಲೆ ದಾಳಿ ಮಾಡಿದಾಗ ಅವನ ಸೈನಿಕರಿಗೆ ಕೋಟೆಯ ಮೇಲಿನಿಂದ ರಾಕ್ಷಸರಂತಹ ಅವತಾರಗಳು ಕಂಡುಬರಲಾಗಿ ಸೈನಿಕರು ಓಡಿ ಹೋದರು ಎಂಬುದಾಗಲಿ, ಮೈಸೂರು ಕೋಟೆಯನ್ನು ಮುತ್ತುವ ಸಂದರ್ಭದಲ್ಲಿ ಕೋಟೆಯ ತೆನೆಗಳ ಹಿಂಬದಿಯಲ್ಲಿ ತಲೆಗೆದರಿದ ರುದ್ರ ಹೆಣ್ಣಿನ ರೂಪಗಳು ಕಾಣಿಸಿದವೆಂದು ಬೆದರಿದ ಆದಿಲ್‌ಶಾಹಿಯ ಸೈನಿಕರು ಓಡಿ ಹೋದರೆಂದು ಹೇಳಲಾಗುವ ಐತಿಹ್ಯಗಳು ಈ ಕೋಟೆಗಳನ್ನು ರಂಗನಾಥ ಮತ್ತು ಚಾಮುಂಡಿ ರಕ್ಷಣೆ ಮಾಡುತ್ತಿದ್ದಾರೆ.[1] ಅವುಗಳ ಮೇಲೆ ದಾಳಿ ಮಾಡಿದರೆ ದೈವಗಳು ಮುನಿಯುತ್ತವೆ ಎಂಬ ಅನೂಹ್ಯವಾದ ಭೀತಿಯನ್ನು ಶತ್ರುಗಳಲ್ಲಿ ಈ ರೀತಿಯ ಕಥನಗಳು ಹುಟ್ಟಿಸುತ್ತವೆ.

4. ವಿಜಯನಗರೋತ್ತರ ಕಾಲದ ಸಾಮಂತ ಮನೆತನಗಳ ಪೂರ್ವೀಕರು ಬೇರೆ ಬೇರೆ ಸ್ಥಳಗಳಿಂದ ವಲಸೆ ಬಂದವರೇ ಆಗಿದ್ದಾರೆ. ಇವರು ತಮ್ಮ ಶಕ್ತಿ, ಸಾಮರ್ಥ್ಯಗಳ ಮೇಲೆ ಬಂದವರು. ಸ್ಥಳೀಯವಾಗಿ ಏಳಿಗೆಗೆ ಬಂದಂತ ಮನೆತನಗಳು ಇಲ್ಲವೇ ಇಲ್ಲ ಎನ್ನುವಷ್ಟು ವಿರಳ. ಬೇರೊಂದು ಸ್ಥಳಗಳಿಂದ ವಲಸೆ ಬಂದು ರಾಜ್ಯಕಟ್ಟಿ ಆಳಿದವರೆ

ಹೆಚ್ಚು. ಇದು ಯಾಕೆ ಸ್ಥಳೀಯರಿಗೆ ಸಾಧ್ಯವಾಗಲಿಲ್ಲ ಎಂಬ ಬಹುಮುಖ್ಯವಾದ ಪ್ರಶ್ನೆಯನ್ನು ಹುಟ್ಟುಹಾಕುತ್ತದೆ. ಇದಕ್ಕೆ ಸ್ಥಳೀಯರ ನಿಷ್ಕ್ರಿಯತೆ ಅಥವಾ ಜಡತ್ವವೇ ಕಾರಣ. ಇದಕ್ಕಾಗಿ ಇವರನ್ನು "ತಟಸ್ಥ ಬಣ" (Neutral Force) ಎಂದೂ, ಅದಕ್ಕೆ ವ್ಯತಿರಿಕ್ತವಾಗಿ ವಲಸಿಗರ ಕ್ರಿಯಾಶೀಲತೆ, ಸೃಜನಶೀಲತೆ, ಧೈರ್ಯ ಮತ್ತು ಸಾಹಸವಂತಿಕೆಯು ಸ್ಥಳೀಯ ಪ್ರಭುಗಳಾಗಿ ಏಳಿಗೆ ಹೊಂದಲು ಕಾರಣವಾಗಿದೆ. ಇವರನ್ನು "ಸಕ್ರಿಯ ಬಣ" (Active Force) ಎಂದೂ ಗುರುತಿಸಲಾಗಿದೆ.

5. ಅಧಿರಾಜನಿಗೆ ಸವಾಲಾಗುವ ಸಾಮಂತರನ್ನು ವಿಜಯನಗರದ ದೊರೆಗಳು ನಿಯಂತ್ರಿಸುತ್ತಿದ್ದರು. ಆದರೆ, ವಿಜಯನಗರ ಸಾಮ್ರಾಜ್ಯ ರಕ್ಕಸತಂಗಡಿ ಯುದ್ಧದಲ್ಲಿ ಸೋತ ನಂತರ ದುರ್ಬಲಗೊಂಡಿದ್ದರಿಂದ ಸಾಮಂತರು ಸ್ವತಂತ್ರರಾಗತೊಡಗಿದರು. ಅನುಮತಿ ಇಲ್ಲದೆ ಭೈರವ ನಾಣ್ಯವನ್ನು ಟಂಕಿಸಿದನೆಂದು ಹಿರಿಯ ಕೆಂಪೇಗೌಡನನ್ನು ಬಂಧಿಸಿ ಸೆರೆಗೆ ತಳ್ಳಿದರು. ಆದರೆ ವಿಜಯನಗರ ಸಾಮ್ರಾಜ್ಯ ಅಳಿವಿನ ಅಂಚಿನಲ್ಲಿದ್ದ ಸಂದರ್ಭದಲ್ಲಿ ಯಲಹಂಕ ನಾಡಪ್ರಭುಗಳೇ ಕುಣಿಗಲ್ ಹಣ ಎಂಬ ನಾಣ್ಯವನ್ನು ಟಂಕಿಸಿ ಚಲಾವಣೆಗೆ ತಂದಂತಿದೆ.[1] ಇದರಿಂದ ಅರ್ಥವಾಗುವುದೇನೆಂದರೆ, ಸ್ವತಂತ್ರ ನಾಣ್ಯಚಲಾವಣೆ ಎಂಬುದು ಸ್ವತಂತ್ರಗೊಳ್ಳುವುದರ ಪ್ರತೀಕವಾಗಿತ್ತು. ಇದರಿಂದ ಆರ್ಥಿಕ ಸಂಗತಿಗಳು ರಾಜಕೀಯ ಶಕ್ತಿಯನ್ನು ಪ್ರಭಾವಿಸುತ್ತಿದ್ದವು ಎಂಬುದನ್ನು ಕಂಡುಕೊಳ್ಳಲಾಗಿದೆ.

6. ಯಲಹಂಕ ನಾಡಪ್ರಭುಗಳ ಪೂರ್ವಿಕ ರಣಭೈರೇಗೌಡನಿಂದ ಈ ಮನೆತನ ಆರಂಭವಾಯಿತೆಂದು ಹೇಳಲು ಯಾವುದೇ ನಿರ್ದಿಷ್ಟ ಆಧಾರಗಳಿಲ್ಲ. ನಮಗೆ ಲಭ್ಯವಿರುವ ಆಧಾರಗಳ ಪ್ರಕಾರ ಹಿರಿಯ ಕೆಂಪೇಗೌಡನೇ ಈ ಮನೆತನದ ಮೊಟ್ಟಮೊದಲ ಅರಸ. ಅವನಿಗೂ ಪೂರ್ವದಲ್ಲಿ ಅವನ ವಂಶಸ್ಥರು ಆಳ್ವಿಕೆ ನಡೆಸಿದ ಬಗೆಗೆ ಮೌಖಿಕ ಆಕರಗಳನ್ನು ಹೊರತು ಪಡಿಸಿ, ಸಮಕಾಲೀನ ಯಾವ ಆಧಾರಗಳು ಇಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ. ಒಂದು ವೇಳೆ ಹಿರಿಯ ಕೆಂಪೇಗೌಡನ ಪೂರ್ವೀಕರು ರಾಜ್ಯವಾಳುತ್ತಿದ್ದಲ್ಲಿ, ಕೆಂಪೇಗೌಡನಿಗೆ ಅಚ್ಯುತರಾಯ ನಾಯಕತನವನ್ನು ನೀಡುವ ಪ್ರಸಂಗ ಬರುತ್ತಿರಲಿಲ್ಲ. ಕೆಂಪೇಗೌಡನಿಗೂ ಪೂರ್ವದಲ್ಲಿ ಅವನ ತಂದೆ ಕೆಂಪನಾಚೇಗೌಡನು ಮಾಗಡಿ ಪರಿಸರದಲ್ಲಿ ಆಳುತ್ತಿದ್ದನು ಎಂಬುದು ವಾಸ್ತವಕ್ಕೆ ದೂರವಾದ ಸಂಗತಿಯಾಗಿದ್ದು, ಕಲ್ಯ ಮತ್ತು ಕೆಂಪೋಹಳ್ಳಿಯ ಶಾಸನಗಳ ಪಾಠವನ್ನು

ಪರಿಷ್ಕರಿಸಿದ ಸಂಪಾದಕರ ದೋಷವೇ ಹೊರತು ಬೇರೆಯಲ್ಲ ಎಂಬುದನ್ನು ಗುರುತಿಸಲಾಗಿದೆ.

7. ಆವತಿ ಮತ್ತು ಯಲಹಂಕ ನಾಡಪ್ರಭುಗಳ ಏಳು ಜನ ಸೋದರರು ಏಳುಬಂಡಿಯಲ್ಲಿ ಕಂಚಿಯಿಂದ ವಲಸೆ ಬಂದರು ಎಂಬುದನ್ನು ಚಾರಿತ್ರಿಕವಾಗಿ ಒಪ್ಪಲು ಆಗದು. ಅವರು ಮೊರಸು ನಾಡಿನ ಭಾಗದವರೇ ವಿನಃ ಕಂಚಿಯಿಂದ ಬಂದವರಲ್ಲ ಎಂಬುದು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಮೊರಸು ನಾಡು ಎಂಬುದು 8ನೆಯ ಶತಮಾನದಿಂದಲೂ ಇದ್ದಬಗ್ಗೆ ಶಾಸನಾಧಾರಗಳು ಇವೆ. ಜೊತೆಗೆ ಮೊರಸು ವೈಷ್ಣವರು, ಮೊರಸು ಹೊಲೆಯರು ಎಂಬ ಸಮುದಾಯಗಳೂ ಇರುವುದರಿಂದ ಮೊರಸು ನಾಡಿನಲ್ಲಿ ವಾಸಿಸುತ್ತಿದ್ದ ಸಮುದಾಯಗಳಿಗೆ ಆ ಹೆಸರು ಬಂದಿದೆಯೇ ವಿನಃ ಮೊರಸು ಒಕ್ಕಲಿಗರಿಂದ ಮೊರಸು ನಾಡು ಎಂಬ ಹೆಸರು ಬಂದಿರುವುದಿಲ್ಲ ಎಂಬುದನ್ನು ಗುರುತಿಸಲಾಗಿದೆ.

8. ಆವತಿಯ ರಣಭೈರೇಗೌಡ ಮತ್ತು ಅವನ ಏಳು ಮಂದಿ ಸೋದರರು ಏಳು ಮನೆತನಗಳನ್ನು ಸ್ಥಾಪಿಸಿದರು ಎಂಬುದಕ್ಕೆ ಯಾವುದೇ ಸ್ಪಷ್ಟ ಪುರಾವೆಗಳಿಲ್ಲ. ಏಳು ಜನ ಸೋದರರ ಹೆಸರುಗಳ ಬಗೆಗೆ ಸ್ಪಷ್ಟತೆ ಇಲ್ಲ. ಇಲ್ಲಿ ಏಳು ಎಂಬುದು ಕೇವಲ ಆಶಯ ರೂಪಕವಾಗಿ ಬಳಸಲಾಗಿದೆಯೇ ವಿನಃ ಆ ಸಂಖ್ಯೆಗಳು ವಾಸ್ತವವಲ್ಲ. ಏಳು ಎಂಬುದು ಬಹುಶಃ ಏಳಿಗೆಯ ಸೂಚಕವಾಗಿ, ವಲಸೆ ಬಂದವರ ಏಳಿಗೆಗೆ ಏಳು ಎಂಬುದು ಆಶಯ ರೂಪಕವಾಗಿಯೂ, ಸಮೃದ್ಧಿಯ ಸೂಚಕ ಶಬ್ದವೆಂದು ತೋರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಧಾನ್ಯಗಳನ್ನು ಸೇರು ಅಥವಾ ಕೊಳಗದಲ್ಲಿ ಅಳೆಯುವಾಗ ಏಳನೇ ಸೇರು/ಕೊಳಗವನ್ನು ಅಳೆದು ಹಾಕುವಾಗ ಏಳು ಎನ್ನುವ ಬದಲು ಹೆಚ್ಚು ಅಥವಾ ಹೆಚ್ಚೆಚ್ಚು ಎಂದು ಹೇಳುವ ರೂಢಿ ಇದೆ. ಇದರ ಅರ್ಥ ವೃದ್ಧಿಸು, ಸಮೃದ್ಧವಾಗು ಎಂಬ ಪರಿಕಲ್ಪನೆಯ ಹಿನ್ನೆಲೆಯಲ್ಲಿಯೇ ಬಳಸುತ್ತಿದ್ದರೆಂದು ಕಂಡುಕೊಳ್ಳಲಾಗಿದೆ.

9. ಕೆಂಪೇಗೌಡ ಬೆಂಗಳೂರು ನಗರದ ಸ್ಥಾಪನೆಗೆ ನೆಲೆಯನ್ನು ಆಯ್ದುಕೊಳ್ಳಲು ಮೊಲ ನಾಯಿಯ ಮೇಲೆ ನಡೆಸಿದ ಆಕ್ರಮಣ ಎಂಬ ಕಥನಗಳು ಕೇವಲ ಮಿಥಕಗಳು. ಈ ಭೌಗೋಳಿಕ ಆಯ್ಕೆಯ ಹಿನ್ನೆಲೆಯನ್ನು ಪರಿಶೀಲಿಸಿದರೆ ಇದು ಪ್ರಜ್ಞಾಪೂರ್ವಕ ಆಯ್ಕೆ ಎಂಬುದನ್ನು ಕಂಡುಕೊಳ್ಳಲಾಗಿದೆ.

10. ಬೆಂಗಳೂರು ಕೋಟೆಯ ನಿರ್ಮಾಣದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಲಕ್ಷ್ಮೀದೇವಿಯ ಆತ್ಮಾರ್ಪಣೆಯ ಘಟನೆಗೆ ಯಾವುದೇ ಚಾರಿತ್ರಿಕ ಹಿನ್ನೆಲೆ ಇಲ್ಲ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

11. ರಣದುಲ್ಲಾಖಾನ್ ಬೆಂಗಳೂರು ಆಕ್ರಮಿಸಿದ ನಂತರ ಯಲಹಂಕ ನಾಡಪ್ರಭುಗಳು ಅರ್ಕಾವತಿ ಮತ್ತು ಪಿನಾಕಿನಿ ನದಿ ಕಣಿವೆಯಿಂದ ಅರ್ಕಾವತಿ–ಶಿಂಷಾ ಕಣಿವೆಗೆ ಸ್ಥಳಾಂತರ ಗೊಂಡು, ತಮ್ಮ ಆರ್ಥಿಕ ನೀತಿಯಲ್ಲಿಯೂ ಬದಲಾವಣೆಯನ್ನು ತಂದುಕೊಂಡಂತೆ ತೋರುತ್ತದೆ. ಬೆಂಗಳೂರಿನಂತಹ ಬೃಹತ್ ಪಟ್ಟಣ ಕಟ್ಟುವ ಬದಲು ಅಲ್ಲಲ್ಲಿ ಸಣ್ಣಸಣ್ಣ ಪಟ್ಟಣಗಳನ್ನು ನಿರ್ಮಿಸಿ, ಸ್ಥಳೀಯ ವ್ಯಾಪಾರ ವಹಿವಾಟಿಗೆ ಅನುಕೂಲ ಕಲ್ಪಿಸಿದರು. ಬೃಹತ್ ನಗರಗಳು ತನ್ನ ಸಂಪತ್ತಿನಿಂದ ಶತೃಗಳನ್ನು ಬೇಗ ಆಕರ್ಷಿಸುತ್ತದೆ. ಅವುಗಳ ಬದಲಿಗೆ ಅಲ್ಲಲ್ಲಿ ಪುಟ್ಟಪುಟ್ಟ ಪಟ್ಟಣಗಳನ್ನು ನಿರ್ಮಿಸುವ 'ಎಲೆಮರೆಯಕಾಯಿ ನೀತಿ'ಯನ್ನು ಅನುಸರಿಸಿದಂತೆ ತೋರುತ್ತದೆ. ಈ ನೀತಿಯಡಿ ನಿರ್ಮಿಸಿದ ನಗರಗಳಲ್ಲಿ ಮಾಗಡಿ, ಹುಲಿಯೂರುದುರ್ಗ, ಕುದೂರು, ಕುಣಿಗಲ್ ಮುಂತಾದವುಗಳು ಪ್ರಮುಖವಾದವು.

12. ಇತ್ತೀಚೆಗೆ ಮಾಗಡಿ ತಾಲ್ಲೂಕು ಕೆಂಪಾಪುರದಲ್ಲಿ ಬೆಳಕಿಗೆ ಬಂದ ಶಾಸನಯುಕ್ತ ಮಂಟಪವು ಹಿರಿಯ ಕೆಂಪೇಗೌಡನ ಸಮಾಧಿ ಎಂದು ಬಹುತೇಕ ವಿದ್ವಾಂಸರ ಅಭಿಪ್ರಾಯವಾಗಿತ್ತು. ಆದರೆ ಪ್ರಸ್ತುತ ಅಧ್ಯಯನದಿಂದ ಆ ಸಮಾಧಿ ಹಿರಿಯ ಕೆಂಪೇಗೌಡನಿಗೆ ಸಂಬಂಧಿಸಿದ್ದಲ್ಲ. ಬದಲಿಗೆ, ಅವನ ಮೊಮ್ಮಗ ಕುಣಿಗಲ್‌ನಿಂದ ಆಳುತ್ತಿದ್ದ ಇಮ್ಮಡಿ ಹಿರಿಯ ಕೆಂಪೇಗೌಡನಿಗೆ ಸಂಬಂಧಿಸಿದ್ದಾಗಿದೆ ಎಂಬುದನ್ನು ಸಂಶೋಧನೆಯಿಂದ ಕಂಡುಕೊಳ್ಳಲಾಗಿದೆ.

13. ಮಾಗಡಿಯು ಧಾರ್ಮಿಕ ಸಂಘರ್ಷದ ಕೇಂದ್ರವಾಗಿ ಮಾರ್ಪಟ್ಟ ಅಂಶವನ್ನು ಗುರುತಿಸಲಾಗಿದೆ. ಈ ಧಾರ್ಮಿಕ ಸಂಘರ್ಷವು ಯಲಹಂಕ ನಾಡಪ್ರಭುಗಳ ಅವನತಿಗೆ ಕಾರಣವಾಯಿತು ಎಂಬ ವಿಚಾರವನ್ನು ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಕಂಡುಕೊಳ್ಳಲಾಗಿದೆ.

14. ಬೆಂಗಳೂರು ಪರಿಸರದ ಪಾಳೆಯಗಾರರ ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಒಂದು ಶಿಷ್ಠತೆ (ಯುನಿಕ್) ಇದೆ ಎಂಬುದನ್ನು ಕಂಡುಕೊಳ್ಳಲಾಗಿದೆ. ನವನಾಥ ಶಿಲ್ಪಗಳು ಬೆಂಗಳೂರಿನ

ಜಲಕಂಠೇಶ್ವರ ಮತ್ತು ಅಲಸೂರು ಸೋಮೇಶ್ವರ ದೇವಾಲಯಗಳಲ್ಲಿ ಮಾತ್ರ ಕಂಡುಬರುತ್ತವೆಯೇ ಹೊರತು ಬೇರೆಲ್ಲಿಯೂ ಕಂಡುಬಂದಿಲ್ಲ. ಅದೇರೀತಿ ಗವಿಗಂಗಾಧರೇಶ್ವರ ದೇವಾಲಯದ ಮುಂಭಾಗದಲ್ಲಿರುವ ಸೋಮಪಾನ ಮತ್ತು ಸೂರ್ಯಪಾನ ಎಂದು ಹೇಳಲಾಗುವ ವಿಶಿಷ್ಠ ಏಕಶಿಲಾ ಶಿಲ್ಪಗಳು, ಕಲ್ಲಿನ ಛತ್ರಿ ಮುಂತಾದವುಗಳು ಬೆಂಗಳೂರು ಪರಿಸರವನ್ನು ಹೊರತು ಬೇರೆಲ್ಲಿಯೂ ಕಂಡುಬರುವುದಿಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಕಂಡು ಕೊಳ್ಳಲಾಗಿದೆ.

**ಅಡಿ ಟಿಪ್ಪಣಿಗಳು**

1. **ಶ್ರೀಮನ್ಮಹಾರಾಜರವರ ವಂಶಾವಳಿ,** 1916: 75–76.
2. **ದ್ರಾವಿಡ ಭಾಷಾ ಜ್ಞಾತಿ ಪದಕೋಶ,** 2014: 86.

# ಪರಾಮರ್ಶನ ಗ್ರಂಥಗಳು

## ಪ್ರಾಥಮಿಕ ಆಕರಗಳು

### ಶಾಸನ ಸಂಪುಟಗಳು


1. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 3, ಭಾಗ–1** (ಮೈಸೂರು ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1894.
2. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 4, ಭಾಗ–2** (ಮೈಸೂರು ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1898.
3. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 5, ಭಾಗ–1** (ಹಾಸನ ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1902.
4. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 5, ಭಾಗ–2** (ಹಾಸನ ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1902.
5. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 6,** (ಕಡೂರು ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1901.
6. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 7, ಭಾಗ–1** (ಶಿವಮೊಗ್ಗ ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1902.
7. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 8, ಭಾಗ–2** (ಶಿವಮೊಗ್ಗ ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1904.
8. ರೈಸ್ ಬಿ.ಎಲ್., (ಸಂ.) 1905. **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 9,** (ಬೆಂಗಳೂರು ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1905.
9. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 10, ಭಾಗ–1** (ಕೋಲಾರ ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1905.
10. ರೈಸ್ ಬಿ.ಎಲ್., (ಸಂ.) 1905. **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 10, ಭಾಗ–2** (ಕೋಲಾರ ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1905.
11. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 11,** (ಚಿತ್ರದುರ್ಗ ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1903.
12. ರೈಸ್ ಬಿ.ಎಲ್., (ಸಂ.) **ಎಪಿಗ್ರಾಫಿಯ ಕರ್ನಾಟಿಕ, ಸಂಪುಟ: 12,** (ತುಮಕೂರು ಜಿಲ್ಲೆ), ಮೈಸೂರು ಪುರಾತತ್ವ ಇಲಾಖೆ, ಬೆಂಗಳೂರು, 1904.
13. ಕೃಷ್ಣ ಎಂ.ಎಚ್., (ಸಂ.) (ಅಪ್ರಕಟಿತ) **ಎಪಿಗ್ರಾಫಿಯ ಕರ್ನಾಟಿಕ, (ಅನುಬಂಧ) ಸಂಪುಟ: 9.** (ಬೆಂಗಳೂರು ಜಿಲ್ಲೆ).

14. ಗೋಪಾಲ್ ಬಾ.ರಾ., (ಸಂ.) **ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) ಸಂಪುಟ: 3,** (ಮೈಸೂರು ಜಿಲ್ಲೆ). ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1974.

15. ಗೋಪಾಲ್ ಬಾ.ರಾ., (ಸಂ.) **ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) ಸಂಪುಟ: 4,** (ಮೈಸೂರು ಜಿಲ್ಲೆ). ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1975.

16. ಗೋಪಾಲ್ ಬಾ.ರಾ., (ಸಂ.) **ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) ಸಂಪುಟ: 5,** (ಮೈಸೂರು ಜಿಲ್ಲೆ). ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1976.

17. ಗೋಪಾಲ್ ಬಾ.ರಾ., (ಸಂ.) **ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) ಸಂಪುಟ: 6,** (ಮಂಡ್ಯ ಜಿಲ್ಲೆ). ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1977.

18. ಗೋಪಾಲ್ ಬಾ.ರಾ., (ಸಂ.) **ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) ಸಂಪುಟ: 7,** (ಮಂಡ್ಯ ಜಿಲ್ಲೆ). ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1979.

19. ಗೋಪಾಲ್ ಬಾ.ರಾ., (ಸಂ.) **ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) ಸಂಪುಟ: 8,** (ಹಾಸನ ಜಿಲ್ಲೆ). ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1984.

20. ಗೋಪಾಲ್ ಬಾ.ರಾ., (ಸಂ.) **ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) ಸಂಪುಟ: 9,** (ಹಾಸನ ಜಿಲ್ಲೆ). ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1990.

21. ನರಸಿಂಹಮೂರ್ತಿ ಎ.ವಿ., (ಗೌ.ಸಂ.) **ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) ಸಂಪುಟ: 10,** (ಹಾಸನ ಜಿಲ್ಲೆ). ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1997.

22. ಶ್ರೀನಿವಾಸ ರಿತ್ತಿ., **ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) ಸಂಪುಟ: 24,** (ತುಮಕೂರು ಜಿಲ್ಲೆ). ಮೈಸೂರು: ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2009.

23. ಮಂಜುನಾಥ ಎಂ.ಜಿ. **ಯಲಹಂಕ ನಾಡಪ್ರಭುಗಳ ಶಾಸನ ಸಂಪುಟ.** ಶ್ರೀಕೆಂಪೇಗೌಡ ಅಧ್ಯಯನ ಪೀಠ. ಬೆಂಗಳೂರು, 2006.

24. ಶೈಲಜ ಬಿ.ಎಂ. **ಪಾಳೆಯಗಾರರ ಶಾಸನಗಳು ಸಂಪುಟ: 1,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 2012.

25. ಪುಟ್ಟಸ್ವಾಮಿ. **ಪಾಳೆಯಗಾರರ ಶಾಸನಗಳು ಸಂಪುಟ: 2,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 2012.

## ಪ್ರಾಚೀನ ಸಂಪಾದನ ಗ್ರಂಥಗಳು

**1.** ಕಲಬುರ್ಗಿ ಎಂ.ಎಂ. ಮತ್ತು ಹಿರೇಮಠ್ ಆರ್.ಸಿ. (ಸಂ.), **ಇಮ್ಮಡಿ ಚಿಕ್ಕಭೂಪಾಲ ಸಾಂಗತ್ಯ,** ಸಪ್ನ ಬುಕ್ ಹೌಸ್, ಬೆಂಗಳೂರು, 2013.

**2.** ನಿರುಪಮಾ., **ಶ್ರೀಕೃಷ್ಣದೇವರಾಯನ ಆಮುಕ್ತಮಾಲ್ಯದ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2014 (2010).

3. ಭಾನುಮತಿ ವೈ. ಸಿ.(ಸಂ.), **"ಮೈಸೂರು ದೊರೆಗಳ ಪೂರ್ವವಂಶಾಭ್ಯುದಯ", ಅರಸರ ಚರಿತ್ರೆಗಳು,** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, 2011.

4. ಭೋಯಿ ಮ.ಭಾ., **ತಿರುಮಲಾರ್ಯ ವಿರಚಿತ ಚಿಕ್ಕದೇವರಾಯ ವಂಶಾವಳಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1999.

5. ಸಿದ್ದಗಂಗಯ್ಯ ಡಿ., **ಕುಕುದ್ಗಿರಿ ಮಹಾತ್ಮ್ಯೆ ಅಥವಾ ಶಿವಗಂಗೆ ಮಹಾತ್ಮ್ಯೆ,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 2012.

6. ಶಾಮಶಾಸ್ತ್ರಿ ಆರ್., (ಸಂ.), **ಕೆಳದಿನೃಪ ವಿಜಯಂ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, 1973.

## ಆನುಷಂಗಿಕ ಆಕರಗಳು

### ಪುಸ್ತಕಗಳು

1. ಎಡ್ಗರ್ ಥರ್ಸ್ಟನ್ & ರಂಗಾಚಾರಿ ಕೆ., (ಅನು) ಪಾರ್ವತೀಶ ಬಿಳಿದಾಳೆ, ರೀಟಾ ರೀನಿ, **ದಕ್ಷಿಣ ಭಾರತದ ಜಾತಿ ಮತ್ತು ಬುಡಕಟ್ಟುಗಳು – ಸಂಪುಟ 5,** ಕುವೆಂಪು ಭಾಷಾ ಭಾರತಿ, ಬೆಂಗಳೂರು, 2019.

2. ಕಲಬುರ್ಗಿ ಎಂ.ಎಂ., **ಮಾರ್ಗ–4,** ಸಪ್ನಬುಕ್ ಹೌಸ್, ಬೆಂಗಳೂರು, 2005(2004):313–316.

3. ಕಾವಲಮ್ಮ ಆರ್., **ಮಧುಗಿರಿ ಮಹಾನಾಡು ಪ್ರಭುಗಳು,** ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್, ಕೃಷ್ಣಾಪುರದೊಡ್ಡಿ, ಬೆಂಗಳೂರು, 2005.

4. ಕೃಷ್ಣಯ್ಯ ಎಂ.ಎಚ್. ಮತ್ತು ದೇವರ ಕೊಂಡಾರೆಡ್ಡಿ. 1995. **ಬೆಂಗಳೂರು ಕೆಂಪೇಗೌಡರ ವಂಶಸ್ಥರು.** ಬೆಂಗಳೂರು: ಜನತಾ ಶಿಕ್ಷಣ ಸಂಸ್ಥೆ.

5. ಕೃಷ್ಣಮೂರ್ತಿ ಪಿ.ವಿ., ಸುಗುಟೂರು ವೀರಶೈವ ಅರಸುಮನೆತನ', ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1994.

6. ಕೃಷ್ಣಮೂರ್ತಿ ಪಿ.ವಿ., **ಶಾಸನ, ಇತಿಹಾಸ ಮಂಥನ,** ಪ್ರಸಾರಾಂಗ, ತುಮಕೂರು ವಿಶ್ವವಿದ್ಯಾಲಯ, ತುಮಕೂರು, 2011.

7. ಕೃಷ್ಣಮೂರ್ತಿ ಪಿ.ವಿ., **ಶಾಸನ ಮಂಥನ,** ಪ್ರಸಾರಾಂಗ, ತುಮಕೂರು ವಿಶ್ವವಿದ್ಯಾಲಯ, ತುಮಕೂರು, 2011ಎ.

8. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ, **ಕರ್ನಾಟಕದ ಇತಿಹಾಸ ದರ್ಶನ.** ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು: 1970.

9. ಗಂಗಾಂಬಿಕೆ ಎಸ್., **'ಕೆಂಪೇಗೌಡರು ಮತ್ತು ಅವರ ವಂಶೀಯರು ಹೊಸ ಪರಿವೀಕ್ಷಣೆಗಳು',** ದೀಪ್ತಿ ಬುಕ್ ಹೌಸ್, ಮಂಡ್ಯ: 2020.

10. ಗೋಪಾಲಗೌಡ ಕಲ್ವಮಂಜಲಿ, **ಕೋಲಾರ ಚಿಕ್ಕಬಳ್ಳಾಪುರ ಪ್ರಾಂತ ಅವತಿ ನಾಡಪ್ರಭುಗಳ ಇತಿಹಾಸ, ಚಿಕ್ಕಬಳ್ಳಾಪುರ,** ಅರುಣಾ ಪ್ರಕಾಶನ, ಚಿಕ್ಕಬಳ್ಳಾಪುರ, 2012.

11. ಚನ್ನಬಸಪ್ಪ ಎಸ್. ಪಾಟೀಲ, **ಕರ್ನಾಟಕ ಕೋಟೆಗಳು ಸಂಪುಟ– 1,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1999.

12. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನ ಬುಕ್ ಹೌಸ್, ಬೆಂಗಳೂರು, 2002 (1966).

13. ದಯಾನಂದ ಪಟೇಲ್ ಟಿ. ಮತ್ತು ವೀರಪ್ಪ ಜಿ.ಟಿ., **ಯಲಹಂಕ ಪ್ರಭುಗಳು ಒಂದು ಅಧ್ಯಯನ**. ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ: 1994.

14. ನರಸಿಂಹಯ್ಯ ಎಸ್.ಕೆ. **ಮಾಗಡಿ ಕೆಂಪೇಗೌಡ ಬೆಂಗಳೂರು ಸ್ಥಾಪಕ ಮತ್ತು ಆತನ ಪೂರ್ವಿಕರು.** ಬೆಂಗಳೂರ: ಒಕ್ಕಲಿಗರ ಸಂಘದ ಮುದ್ರಣಾಲಯ. 1924 (1922).

15. ನಾಗರಾಜು ಎಚ್.ಎಂ. **ವಿಜಯನಗರದ ಇಮ್ಮಡಿ ದೇವರಾಯ,** ಸಂವಹನ, ಮೈಸೂರು: 1999.

16. ನಾಗರಾಜು ಟಿ.ವಿ., **'ಮೊರಸು ಒಕ್ಕಲಿಗರ ದ್ಯಾವರ ಸಂಪ್ರದಾಯಗಳು',** ಜನನಿ ಪ್ರಕಾಶನ, ಬೆಂಗಳೂರು, 2005.

17. ನಾರಾಯಣಾಚಾರ್ಯ ಕೆ., **ಮಧುಗಿರಿ ಚರಿತ್ರೆ,** ವಿ.ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು: 1945.

18. ಪುಟ್ಟಣ್ಣ ಎಂ.ಎಸ್. **ಚಿತ್ರದುರ್ಗದ ಪಾಳಯಗಾರರು,** ಬೆಂಗಳೂರು, 1924.

19. ಮನು ವಿ. ದೇವದೇವನ್. **ಪೃಥ್ವಿಯಲ್ಲೊದಗಿದ ಘಟವು... ಕರ್ನಾಟಕದ ನಿನ್ನೆಗಳು**. ಅಕ್ಷರ ಪ್ರಕಾಶನ. ಹೆಗ್ಗೋಡು, 2009.

20. ಮುನಿರಾಜಪ್ಪ, **'ಮಾಗಡಿ ಸೀಮೆ ಇತಿಹಾಸ–ಸಂಸ್ಕೃತಿ',** ಸ್ಫೂರ್ತಿ ಪ್ರಕಾಶನ, ಹೊಸಪಾಳ್ಯ, ಮಾಗಡಿ, 2005.

21. ಮೋಹನ್ ಕೃಷ್ಣ ರೈ, **ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 2006.

22. ರಹಮತ್ ತರೀಕೆರೆ, **ಕರ್ನಾಟಕದ ನಾಥಪಂಥ,** ಪ್ರಸಾರಾಂಗ, ಕನ್ನಡ ವಿವಿ, ಹಂಪಿ 2006,

23. ರಾಗೌ, **ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು,** ಜಯಶ್ರೀ ಎಲೆಕ್ಟ್ರಿಕಲ್ಸ್ ಅಂಡ್ ಪಬ್ಲಿಷರ್ಸ್, ಮೈಸೂರು, 2010 (1992).

24. ರಾಜಶೇಖರ್ ಕೆ.ಎಲ್., (ಸಂ.) **'ನುಡಿಜಾಗರ',** ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 2016.

25. ರಾಜಶೇಖರ್ ಪಿ.ಕೆ., ಪುಟ್ಟೇಗೌಡ ಗುಡ್ಡೇನಹಳ್ಳಿ, ನಂಜಪ್ಪ ಗುಡ್ಡೇನಹಳ್ಳಿ, **'ಮಾಗಡಿ ಕೆಂಪೇಗೌಡ',** ಬೆಂಗಳೂರು, ಹೆಚ್.ವಿ.ಎಸ್. ಪಬ್ಲಿಷರ್ಸ್ & ಡಿಸ್ಟ್ರಿಬ್ಯೂಟರ್ಸ್, 2009(1975),

26. ರಾಜಶೇಖರಪ್ಪ ಬಿ., **ಇತಿಹಾಸ ಕಥನ**. ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು: 2001.

27. ರಾಜೇಗೌಡ ಹ.ಕ. **'ಬೆಂಗಳೂರು ಕೆಂಪೇಗೌಡ ಮತ್ತು ಅವನ ವಂಶಸ್ಥರು',** ಕೆಂಪೇಗೌಡ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, 2005.

28. ಲಕ್ಷ್ಮಣ್ ತೆಲಗಾವಿ, **ಚಿತ್ರದುರ್ಗ ನಾಯಕ ಅರಸರು: ರಾಜಕೀಯಚಿತ್ರ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, 2009.
29. ಲಕ್ಷ್ಮಣ್ ತೆಲಗಾವಿ, **ಎಪ್ಪತ್ತೇಳು ಪಾಳೆಯಗಾರರು: ಸಂಖ್ಯಾ ಆಶಯ ನೆಲೆಯ ಚಾರಿತ್ರಿಕ ವಿವೇಚನೆ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, 2010.
30. ವೆಂಕಟೇಶ್ ಎಸ್., **ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ**, ದೃಷ್ಟಿ ಪ್ರಕಾಶನ, ದೊಡ್ಡಬಳ್ಳಾಪುರ, 2016.
31. ವಿಲ್ & ಏರಿಯಲ್ ಡ್ಯುರಾಂಟ್ (ಇಂಗ್ಲಿಷ್ ಮೂಲ). (ಅನು.: ಭಗವಾನ್ ಕೆ.ಎಸ್.). 2011. **ಇತಿಹಾಸದ ಪಾಠಗಳು**. ಬೆಂಗಳೂರು: ಕಣ್ವ ಪ್ರತಿಷ್ಠಾನ.
32. ವಿವೇಕ ರೈ ಬಿ.ವಿ., (ಸಂ.) **ಪ್ರವಾಸಿ ಕಂಡ ವಿಜಯನಗರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ: 2001.
33. ವೆಂಕಟರತ್ನಂ ಎ.ವಿ., 1974, **ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, 1974.
34. ಷೇಕ್ ಅಲಿ ಬಿ., **ಕರ್ನಾಟಕ ಚರಿತ್ರೆ ಸಂಪುಟ–4,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, 1997.
35. **ಶ್ರೀಮನ್ಮಹಾರಾಜರವರ ವಂಶಾವಳಿ,** ಭಾಗ–1, ಮೈಸೂರು, 1916.
36. ಶೆಟ್ಟರ್ ಷ., ಶಂಗಂ–ತಮಿಳಗಂ ಮತ್ತು ಕನ್ನಡ ನಾಡು ನುಡಿ, ಬೆಂಗಳೂರು, ಅಭಿನವ ಪ್ರಕಾಶನ, 2007.
37. ಶೆಟ್ಟರ್ ಷ., **ಹಳಗನ್ನಡ ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ,** ಬೆಂಗಳೂರು, ಅಭಿನವ ಪ್ರಕಾಶನ, 2014.
38. ಶೇಷಶಾಸ್ತ್ರ ಆರ್., **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು: 2004.
39. ಸ್ಮಿತಾ ರೆಡ್ಡಿ ಡಿ., **ಬೆಂಗಳೂರು ನಗರ ನಿರ್ಮಾಪಕ ಕೆಂಪೇಗೌಡ,** ನವಕರ್ನಾಟಕ ಪ್ರಕಾಶನ, ಬೆಂಗಳೂರು: 2015.
40. ಸೂರ್ಯನಾಥ ಕಾಮತ್, (ಸಂ.) **ಕರ್ನಾಟಕ ಗ್ಯಾಸೆಟಿಯರ್ ಸಂಪುಟ–1,** ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, 1984.
41. ಸ್ವಾಮಿ, ಬಿ.ಜಿ.ಎಲ್., **ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೇರಿಕ,** ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, 2004 (ತೃತೀಯ ಮುದ್ರಣ).
42. ಹನುಮಂತೇಗೌಡ ಕೆಂಕೆರೆ, **ದೇವಗುಂದ ಮಹಾನಾಡ ಪ್ರಭುಗಳು,** ಬೆಂಗಳೂರು, ಗೋಧೂಳಿ ಪ್ರಕಾಶನ, 2015
43. Annaswamy T.V., **Bengaluru to Bangalore: Urban History of Bangalore from the Pre-Historic period to the end of 18$^{th}$ Century,** 2002.
44. Aruni S.K., **Surapura Samsthana, Historical and Archaeological Study of Poligar State in South India,** Bharatiya Kala Prakashan, Delhi, 2004.
45. Basavaraja K.R., **History and Culture of Karnataka,** Chalukya publication Dharwad, 1984.
46. Burton Stein, **Vijayanagara**, Cambridge University Press, 2007 (1994).

47. Chandrasekharan T., **A Descriptive Catalogue of the Kannada Manuscripts in the Government Oriental Manuscripts Library, Madras Vol.VII,** Govt of Madras, Madras: 1958.
48. Dikshit G.S., **Local Bodies in Medieval South India,** Directorate of Archaeolgy and Museums, 2004.
49. Fazlul Hasan, **Bangalore Through the Centuries,** Historical Publication Bangalore, 1970.
50. Gopal R., **Life and Achivements of Sri Krishnadevaraya,** Directorate of Archaeolgy and Museums, Mysore, 2010.
51. Hayavadana Rao C., **Mysore Gazetteer,** Vol.2.
52. Hayavadana Rao C., **History of Mysore**, Govt Press, Bangalore, 1943.
53. Mahalingam T.V., **Administration and Social Life Under Vijayangar, Part 1 & 2,** University of Madras, Madras, 1969.
54. Malini Adiga, **The Making of Southern Karnataka – Society, polity and culture in the early medieval period AD 400-1030,** Orient Longman, Chennai: 2006.
55. Maya Jayapal, **Bangalore The Story of a City,** Eastwest Book, Chennai, 1997.
56. Narasimhaiah B., **Metropolis Vijayanagara,** Book India Publishing, Delhi, 1992.
57. Nilakanta Sastri K.A., **A History of South India,** OUP, 2002(1975).
58. Noboru Karashima (Ed), **A Concise History of South India,** OUP, 2014.
59. Sanjay Subrahmanyam, **The Political Economy of Commerce Southern India 1500-1650**, Cambridge University Press, New Dehli: 2004.
60. Saletore B.A., **Social and Political Life in the Vijayanagara Empire, 2 vol,** B.G. Paul & Co. Madras, 1934.
61. Yashaswini Sharma, **Bangalore: The Early City AD 1537-1799,** Partridge, 2016.

## ಲೇಖನಗಳು

1. ಕೃಷ್ಣಮೂರ್ತಿ ಪಿ.ವಿ., "ಆವತಿನಾಡ ಪ್ರಭುಗಳು", (ಸಂ.) ವಸು ಎಂ.ವಿ., **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಹಂಪಿ, 2001: 322–336.
2. ಕೃಷ್ಣಮೂರ್ತಿ ಪಿ.ವಿ., "ಬೆಂಗಳೂರು ಪರಿಸರದ ಜನಸಮುದಾಯಗಳು– ಒಂದು ಚಾರಿತ್ರಿಕ ಅವಲೋಕನ", **ಇತಿಹಾಸ ದರ್ಪಣ, ಪುಸ್ತಕ–10,** 2011
3. ಗೋಪಾಲರಾವ್ ಎಚ್.ಎಸ್., "ಮೈಸೂರಿನ ಇಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಐದು ದಾನಪತ್ರಗಳು", **ಇತಿಹಾಸ ದರ್ಶನ ಸಂಪುಟ: 13,** 1998: 38–43.

4. ಗೋಪಾಲರಾವ್ ಎಚ್.ಎಸ್., "ಕೆಂಪಾಪುರದಲ್ಲಿರುವ ಕೆಂಪೇಗೌಡರ ಸಮಾಧಿ", (ಸಂ.) ರಾಜಶೇಖರ್ ಕೆ.ಎಲ್., **ನುಡಿಜಾಗರ,** ಬೆಂಗಳೂರು, ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, 2016: 194–109.
5. ಗೋವರ್ಧನ ಸುಂಕಂ, "ಬೆಂಗಳೂರು ಪರಿಸರದ ರಾಜಕೀಯ ಅವಲೋಕನ (ಹೊಯ್ಸಳೋತ್ತರ ಯುಗದಿಂದ ನಾಡಪ್ರಭುಗಳ ಆಗಮನದವರೆಗೆ)", **ಇತಿಹಾಸ ದರ್ಪಣ ಪುಸ್ತಕ: 37–38,** 2018: 83–102.
6. ದೇವರಕೊಂಡಾರೆಡ್ಡಿ, "ಗುಮ್ಮಳಾಪುರದ ಗಂಗಮ್ಮನ ಗುಡಿ ಶಿಲಾಶಾಸನ", **ಇತಿಹಾಸ ದರ್ಶನ ಸಂಪುಟ: 5,** 1990: 31–33.
7. ನಂಜುಂಡಸ್ವಾಮಿ ಬಿ., "ಮುತ್ತಿನ ಮುಮ್ಮಡಿ ಏಳು ನಾಡ ಪ್ರಭುಗಳು, ಕೋರಾ ಇವರಲ್ಲಿರುವ 'ಜಯರೇಖೆ'", **ಇತಿಹಾಸ ದರ್ಶನ ಸಂಪುಟ–10,** 1995: 243–251.
8. ನರಸಿಂಹನ್ ಕೆ.ಆರ್., "ಕಲ್ಲೂರು ಹಾಗೂ ಮುದುವತ್ತಿಯ ಅಪ್ರಕಟಿತ ಶಾಸನ ಹಾಗೂ ವೀರಗಲ್ಲು ಸ್ಮಾರಕಗಳು", **ಇತಿಹಾಸ ದರ್ಶನ, ಸಂಪುಟ–35,** 2020: 96–102.
9. ನಾಗರಾಜ್ ಎಂ.ಜಿ., "ಯಲಹಂಕ ವಂಶಾವಳಿ ಮತ್ತು ಸಾಂಸ್ಕೃತಿಕ ಸಾಧನೆಗಳು", (ಸಂ) ಗೋಪಾಲ್ ಆರ್., **'ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆ',** 2010:88–100.
10. ನಾಗರಾಜ್ ಎಂ.ಜಿ., "ಕೆಂಪೇಗೌಡರ ಪೂರ್ವಜರು ಕೆಲವು ಹೊಸ ಸಂಗತಿಗಳು", (ಸಂ.) ರಾಜಶೇಖರ್ ಕೆ.ಎಲ್. **ನುಡಿಜಾಗರ,** 2016: 85.
11. ನಾಗರಾಜ್ ಎಂ.ಜಿ., "ಹಿರಿಯ ಕೆಂಪೌಗೌಡರ ವೀರಸಮಾಧಿ ನೆಲೆ ಕೆಂಪಾಪುರದಲ್ಲಿ ಹೊಸ ಸಂಸ್ಕೃತ ಶಾಸನ ಪತ್ತೆ", **ಒಕ್ಕಲಿಗರ ಪತ್ರಿಕೆ,** ನವೆಂಬರ್ 2017: 18–19.
12. ನಾಗರಾಜ ಕೆ., "ಕೆಂಪೇಗೌಡ ಕನ್ನಡಿಗ", **ಪ್ರಜಾವಾಣಿ,** 1957 ಮೇ, 19, 20, 21, 22.
13. ಪುಟ್ಟಸ್ವಾಮಿ ಬಿ.ಎಸ್. 2013. "ಯಲಹಂಕ ನಾಡಪ್ರಭುಗಳ ಕಾಲದ ಒಂದು ಅಪ್ರಕಟಿತ ತಾಮ್ರ ಶಾಸನ". **ಇತಿಹಾಸ ದರ್ಶನ ಸಂಪುಟ: 13**. ಪು.: 56–57.
14. ಮಹಾದೇವಯ್ಯ, ಮುನಿನಗರ., "ಮುನಿನಗರದ ಅಪ್ರಕಟಿತ ಶಾಸನ ಮತ್ತು ಪ್ರಾಚೀನ ಅವಶೇಷಗಳು". **ಇತಿಹಾಸ ದರ್ಶನ ಸಂಪುಟ– 17**. 2002: 78–79.
15. ಮಂಜುನಾಥ್ ಎಂ.ಜಿ., (ಸಂ.), **ಹೊನ್ನಕವಿಯ ಸಮಗ್ರಸಾಹಿತ್ಯ,** ಬೆಂಗಳೂರು: ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ. 2012: 1–58.
16. ಮಾಧವಿ ಎಂ.ಕೆ., "ಸೋಮನಾಥ: ರೊಮಿಲಾ ಥಾಪರ್ ಅವರ ವಿಶ್ಲೇಷಣಾ ಕ್ರಮ", **ಇತಿಹಾಸ ದರ್ಪಣ ಪುಸ್ತಕ: 33–34**. ಏಪ್ರಿಲ್–ಸೆಪ್ಟೆಂಬರ್ 2017 :163–174.
17. ರಾಜಶೇಖರ್ ಕೆ.ಎಲ್., "ಯಲಹಂಕ ನಾಡಪ್ರಭುಗಳ ನ್ಯಾಯಾಡಳಿತ", (ಸಂ.) ಲಕ್ಷ್ಮಣ್ ತೆಲಗಾವಿ, **'ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ',** 2008: 327–28.
18. ರಾಜೇಶ್ ಹಂ.ಗು. 2009 (ಜುಲೈ–ಸೆಪ್ಟೆಂಬರ್). "ಶಾಸನಗಳ ಶ್ರೀಮಂತ ಸಂಗ್ರಹಕಾರ ಬಿ.ಎಲ್.ರೈಸ್". **ಇತಿಹಾಸ ದರ್ಪಣ ಪುಸ್ತಕ–2**. ಪು.: 8–11.

19. ರಾಜೇಶ್ ಹಂ.ಗು., **“**ಬದಲಾವಣೆಯತ್ತ ಆರಂಭಿಕ ಮಧ್ಯಕಾಲೀನ ಬೆಂಗಳೂರು ಪರಿಸರ (950–1350): ಹೊಸ ಪರಿವೀಕ್ಷಣೆಗಳ ವಿಶ್ಲೇಷಣೆ**”, ಇತಿಹಾಸ ದರ್ಪಣ, ಪುಸ್ತಕ–18,** ಜುಲೈ–ಸೆಪ್ಟೆಂಬರ್ 2013: 11–42.

20. ರಾಜೇಶ್ ಹಂ.ಗು., **“**ಮೊದಲ ಸಹಸ್ರಮಾನದ ಕೆರೆ ನೀರಾವರಿ ಹಿನ್ನೆಲೆಯಲ್ಲಿ ಆರ್ಥಿಕ ಮತ್ತು ಸಾಮಾಜಿಕ ಇತಿಹಾಸ**”**, (ಸಂ.) ಎಸ್. ಚಂದ್ರಶೇಖರ್ ಮತ್ತಿತರರು, **ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು ಸಂಪುಟ 7,** ಬೆಂಗಳೂರು, 2016: 177

21. ರಾಜೇಶ್ ಹಂ.ಗು., **“**ಹಿತಾಸಕ್ತವರ್ಗ ಮತ್ತು ಚಾರಿತ್ರಿಕ ರಾಜಕಾರಣದ ಹಿನ್ನೆಲೆಯಲ್ಲಿ ಸಮಾಧಿಯ ಕೆಂಪೇಗೌಡನಿಗಾಗಿ ಹುಡುಕಾಟ**”. ಚರಿತ್ರೆ ಅಧ್ಯಯನ** ಸಂಪುಟ–10, ಸಂಚಿಕೆ–1. ಜುಲೈ–ಡಿಸೆಂಬರ್ 2017: 169–198.

22. ರಾಜೇಶ್ ಹಂ.ಗು., **“**ಕುಣಿಗಲ್ ತಾಲ್ಲೂಕು ಹ(ಅ)ಂದಲಗೆರೆ ಗ್ರಾಮದ ನಾಮವಿವೇಚನೆ ಮತ್ತು ಪ್ರಾಚ್ಯಾವಶೇಷಗಳು**”, ಇತಿಹಾಸ ದರ್ಶನ, ಸಂಪುಟ.32**, 2017: 499–502.

23. ರಾಜೇಶ್ ಹಂ.ಗು., **“**ಹುತ್ರಿದುರ್ಗ: ಒಂದು ಚಾರಿತ್ರಿಕ ಅಧ್ಯಯನ**”, ಇತಿಹಾಸ ದರ್ಶನ, ಸಂಪುಟ.34,** 2019: 392–398.

24. ರಾಜೇಶ್ ಹಂ.ಗು., **“**ಕೆಂಪೇಗೌಡನ ಸೊಸೆ ಲಕ್ಷ್ಮೀದೇವಿಯ ಆತ್ಮಬಲಿದಾನ: ಒಂದು ಚಾರಿತ್ರಿಕ ಪರಿಶೀಲನೆ**”**, (ಸಂ.) ಸುಂಕಂ ಗೋವರ್ಧನ, **ಡಾ.ಪಿ.ವಿ. ಕೃಷ್ಣಮೂರ್ತಿ ಅಭಿನಂದನ ಸಂಪುಟ ಅಕ್ಷರ ಮೇರು,** 2020: 657–662.

25. ರಾಜೇಶ್ ಹಂ.ಗು., **“**ಕೆಂಪೇಗೌಡರ ಬೆಂಗಳೂರು: ನೆಲೆ–ಹಿನ್ನೆಲೆ**”, ಇತಿಹಾಸ ದರ್ಶನ, ಸಂಪುಟ–35,** 2020: 499–501.

26. ಲಕ್ಷ್ಮಣ್ ತೆಲಗಾವಿ, **“**ವಿಜಯನಗರದ ಅಮರನಾಯಕರು ಮತ್ತು ಪಾಳೆಯಗಾರರು**”, ಚರಿತ್ರೆ ಅಧ್ಯಯನ,** ಸಂಪುಟ 3, ಸಂಚಿಕೆ 2, ಜನವರಿ–ಜೂನ್ 2009: 20–42.

27. ವಿರೂಪಾಕ್ಷಿ ಪೂಜಾರಹಳ್ಳಿ. 2003. **“**ಸ್ಥಳೀಯ ಚರಿತ್ರೆ: ಆಕರಗಳ ಸ್ವರೂಪ ಮತ್ತು ಅಧ್ಯಯನ ವಿಧಾನ**”**. (ಸಂ.) ಲಕ್ಷ್ಮಣ್ ತೆಲಗಾವಿ. **ಸ್ಥಳೀಯ ಚರಿತ್ರೆ: ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ**. ಹಂಪಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

28. ಶ್ರೀನಿವಾಸ್ ಎಂ.ವಿ. 1987. **“**ಪ್ರಾದೇಶಿಕ ಇತಿಹಾಸ ಅಧ್ಯಯನ: ಒಂದು ಸಮೀಕ್ಷೆ**”**. (ಸಂ.) ಲಕ್ಷ್ಮಣ್ ತೆಲಗಾವಿ. **ಹರತಿಸಿರಿ**. ಹರ್ತಿಕೋಟೆ: ವಾಲ್ಮೀಕಿ ಸಾಹಿತ್ಯ ಸಂಪದ. ಪು.: 581–590.

29. ಶೇಷಾದ್ರಿ ಎಂ. 2014 (1970). **“**ಚಾರಿತ್ರಿಕ ಯುಗ**”**, (ಸಂ.) ಆರ್.ಆರ್. ದಿವಾಕರ್. ಕರ್ನಾಟಕ ಪರಂಪರೆ. ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ ಇಲಾಖೆ. ಪು.: 116.

30. ಸದಾಶಿವ ಕೆ., **“**ನಾಡಪ್ರಭುಗಳ ಕಾಲದ ಸ್ಥಿತ್ಯಂತರ ಸ್ಥಿತಿಯ ಸಾಮಾಜಿಕ ವ್ಯವಸ್ಥೆ**”**, (ಸಂ.) ಗೋಪಾಲ್ ಆರ್., **ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು,** 2010: 170.

31. ಸರಿತಾ ಟಿ.ಎಚ್. **“**ಕೃಷ್ಣದೇವರಾಯನ ಕಾಲದ ನಾಯಕತನ (ಕ್ರಿ.ಶ. 1509–1529)**” ಇತಿಹಾಸ ದರ್ಪಣ. ಸಂಪುಟ–29**, ಅಕ್ಟೋಬರ್ – ಡಿಸೆಂಬರ್, 2018: 25–28.

32. ಸುಬ್ಬರಾಮಪ್ಪ ಕೆ., **"ಬೆಂಗಳೂರು ನಿರ್ಮಾಪಕ ಕೆಂಪೇಗೌಡ ತೆಲುಗಿನವ, ತೆಲುಗು ಕವಿ", ಪ್ರಜಾವಾಣಿ,** 17.3.1957.

33. ಸುಷ್ಮಾ ಆರೂರ್, **"ಬೆಂಗಳೂರಿನಲ್ಲಿ ಶಹಾಜಿ ಭೋಸಲೆ (1636 ರಿಂದ 1664ರ ಅವಧಿ) –'ರಾಧಾಮಾಧವ ವಿಲಾಸ ಚಂಪು' ಕಾವ್ಯ ಹಿನ್ನೆಲೆಯಲ್ಲಿ", ಇತಿಹಾಸ ದರ್ಪಣ, ಪುಸ್ತಕ–9,** 2011: 12–15.

34. ಸೋಮಶೇಖರ್ ವೇಮಗಲ್. 1996. **"ಬೆಂಗಳೂರಿನ ದೊಡ್ಡಬಸವಣ್ಣ ದೇವಾಲಯ ಮುಂದಿನ ಎರಡು ಅಪ್ರಕಟಿತ ಶಾಸನಗಳು". ಇತಿಹಾಸ ದರ್ಶನ ಸಂಪುಟ: 11**. ಪು.: 129–131.

35. ಹನುಮಂತಪ್ಪ ಬಳ್ಳೆಕೆರೆ, **"ಕೆಳದಿಯ ಐತಿಹ್ಯಗಳು"**, (ಸಂ.) ಕಲಬುರ್ಗಿ ಎಂ.ಎಂ. ಮತ್ತಿತರರು, **ಕೆಳದಿ ಸಂಸ್ಥಾನ ಸಮಗ್ರ ಅಧ್ಯಯನ,** ಮತ್ತಿತರರು, ಶಿವಮೊಗ್ಗ, 2017.

36. Caleb Simmon, 2014, 'The Goddess and Vaiṣṇavism in Search for Regional Supremacy: Woḍeyar Devotional Traditions During the Reign of Rāja woḍeyar (1578-1617 CE)', Pp.27-46.

37. Ota Nobuhiro, "A Study of Two Nayaka Families in the Vijayanagara Kingdom in the Sixteenth Century", **The Memoirs of the Toyo Bunko, 66,** 2008.

38. Shadaksharaiah, "Farming Class and the Franmented Polity: A Study of Yalahanka Nada Prabhu of Karnataka", 20th Session of European Conferences of Modern Sout Asian Studies, Submitted to the Panel 22, 8th-11th July 2008.

## ಅಪ್ರಕಟಿತ ಮಹಾಪ್ರಬಂಧಗಳು

1. ಕೆಂಪರಾಜು, **ಬೆಂಗಳೂರು ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ, 2012.

2. ಯಶೋಧ ಪಿ. **ಬೆಂಗಳೂರು ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ (1799–1947),** ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ. 2016.

3. ಶಿವಕುಮಾರಿ ಎಂ.ಎಸ್., **ಟಿಪ್ಪು ಕೋಟೆಗಳ ರಚನೆ, ತಂತ್ರಜ್ಞಾನ ಮತ್ತು ಮೌಖಿಕ ಕಥನಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ. 2017.

4. ರೇವಣಸಿದ್ಧಯ್ಯ, **ಕುಣಿಗಲ್ ನಾಡು ಇತಿಹಾಸ ಮತ್ತು ಪುರಾತತ್ವ ಅಧ್ಯಯನ,** ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸಿದ ಪಿಎಚ್.ಡಿ ಮಹಾಪ್ರಬಂಧ. 2018.

5. ರೇವಣಸಿದ್ಧಯ್ಯ ಕೆ., **ಕುಣಿಗಲ್ಲಿಗೂ ನಾಡಪ್ರಭು ಕೆಂಪೇಗೌಡರಿಗೂ ಇರುವ ಸಂಬಂಧಗಳು'** ನಾಡಪ್ರಭು ಕೆಂಪೇಗೌಡ ಮಾನವಿಕ ಮತ್ತು ಸಮಾಜ ವಿಜ್ಞಾನಗಳ ಕೇಂದ್ರ, ಜ್ಞಾನಭಾರತಿ, ಬೆಂಗಳೂರು. ಇಲ್ಲಿಗೆ ಸಲ್ಲಿಸಿದ ಕಿರು ಸಂಶೋಧನಾ ಪ್ರೌಢ ಪ್ರಬಂಧ, 2016–17.

## ಸಂದರ್ಶನ

1. ಅರುಣಿ ಎಸ್.ಕೆ. (53), ಐ.ಸಿ.ಎಚ್.ಆರ್. ಉಪನಿರ್ದೇಶಕರು. ಬೆಂಗಳೂರು. ಸಂದರ್ಶನ ದಿ: 05.08.2019.
2. ಜಗದೀಶ್ (59), ಉಪನ್ಯಾಸಕರು, ತಿಗಳ ಗುಡ್ಡೇಮಾರನಹಳ್ಳಿ ಹ್ಯಾಂಡ್‌ಪೋಸ್ಟ್, ಇವರ ಸಂದರ್ಶನ ದಿನಾಂಕ: 22.04.2019.
3. ದೇವರಕೊಂಡಾರೆಡ್ಡಿ (68), ಅಧ್ಯಕ್ಷರು, ಕರ್ನಾಟಕ ಇತಿಹಾಸ ಅಕಾದೆಮಿ. ರೆಡ್ಡಿ ಒಕ್ಕಲಿಗ, ಬೆಂಗಳೂರು. ಸಭೆಯೊಂದರಲ್ಲಿನ ಚರ್ಚೆಯಿಂದ ದಿ: 21.12.2020.
4. ನಾಗನಾಥ್ ಎಸ್. (70) ಪ್ರಾಧ್ಯಾಪಕರು, ಬ್ರಾಹ್ಮಣ, ಬೆಂಗಳೂರು. ಫೋನ್ ಸಂಭಾಷಣೆ ದಿ: 11.02.2021.
5. ನಾಗರಾಜ್ ಟಿ.ವಿ. (62) ಒಕ್ಕಲಿಗ, ಬೆಂಗಳೂರು.
6. ಬೈರೇಗೌಡ (60) ಒಕ್ಕಲಿಗ, ಬೆಂಗಳೂರು.
7. ಚಿಕ್ಕಪ್ಪಗೌಡ (62), ಪಾಳೇಗಾರ ವಂಶಸ್ಥರು, ಹುಲಿಕಲ್ಲು,
8. ರಂಗನಾಥಾಚಾರ್ಯ (45) ಬ್ರಾಹ್ಮಣ, ಅರ್ಚಕರು, ತುಪ್ಪದ ಆಂಜನೇಯ ದೇವಸ್ಥಾನ, ಆರ್.ಟಿ.ರಸ್ತೆ, ಬೆಂಗಳೂರು.
9. ಮಾಗಡಿ ಭಾಸ್ಕರ್ (50), ದೇವಾಂಗ, ಚೌಡಮ್ಮ ದೇವಾಲಯದ ಟ್ರಸ್ಟಿ, ಬೆಂಗಳೂರು.
10. ರಾಮಯ್ಯ (50) ಒಕ್ಕಲಿಗ, ಬೈರವದೇವರ ಅರ್ಚಕ, ಬೈರವನದುರ್ಗ, ಕುದೂರು.
11. ರಾಚಪ್ಪ (65) ಹೊಲೆಯ, ಹೊನ್ನೇಗೌಡನದೊಡ್ಡಿ, ಕುಣಿಗಲ್ ತಾ.
12. ಗಂಗಯ್ಯ (78) ಒಕ್ಕಲಿಗ, ಕಲ್ಲುದೇವನಹಳ್ಳಿ, ಮಾಗಡಿ ತಾ.
13. ನಾಗರಾಜ್ ಎಂ.ಜಿ., (92) ಲಿಂಗಾಯತ, ನಿವೃತ್ತ ಉಪನ್ಯಾಸಕರು, ಬೆಂಗಳೂರು.
14. ಶಿವರಾಮಯ್ಯ (77) ಕುರುಬ, ನಿವೃತ್ತ ಕೆ.ಇ.ಬಿ. ಅಧಿಕಾರಿ, ಚನ್ನಪಟ್ಟಣ.
15. ವಡ್ಡಗೆರೆ ನಾಗರಾಜಯ್ಯ (56) ಮಾದಿಗ, ಉಪನ್ಯಾಸಕರು, ಬೆಂಗಳೂರು.
16. ವಿಜಯರಾಘವರೆಡ್ಡಿ (45) ರೆಡ್ಡಿ, ಉಪನ್ಯಾಸಕರು, ಬೆಂಗಳೂರು.
17. ಶಿವಕುಮಾರ ಪಾವಟೆ (42) ಲಿಂಗಾಯತ, ಯಲಹಂಕ, ಬೆಂಗಳೂರು.
18. ಕೆಂಪಯ್ಯ (64), ಒಕ್ಕಲಿಗ, ಬೋರ್‌ವೆಲ್ ಏಜೆನ್ಸಿ, ಹುಲಿಯೂರುದುರ್ಗ.
19. ಪ್ರಕಾಶಮೂರ್ತಿ ಎಂ., (48) ಒಕ್ಕಲಿಗ, ಹುಣಸೆಕುಪ್ಪೆ, ಹುತ್ರಿದುರ್ಗ

## ಅನುಬಂಧ–1

**ರಾಗ – ನಾಟಿ**

ಪಲ್ಲವಿ –

ಪೊಗಳುತಿದೆ ಜಗವೆಲ್ಲ ಸುಗುಣ ಇಮ್ಮಡಿ ಕೆಂಪ|
ನಗಣಿತ ಗುಣಶ್ರಯನ ಬಗೆ ಬಗೆಯೊಳೆಣಿಸಿ | ಪೊಗಳುತಿದೆ|| (1)

ಚರಣಗಳು.—

ತಲಕಾಡು ನಂದಿ ಶ್ರೀರಂಗ ಮೈಸೂರು
ಹೊಳೆವ ನರಸಿಂಹಪುರ ಹೊಸಹೊಳಲು ಪಾಳ್ಯ||
ಮಳವಳ್ಳಿ ಮದ್ದೂರು ಚೆನ್ನಪಟ್ಟಣದಿ
. . . . ಚಂದ್ರನೊಲು ಶಾಂತಿಕರವೆಂದು ||
ಕುಂದು . . . . ದೊಡ್ಡರಸಿಕೆರೆ ಬೇರೂರು |
ನಂದ್ಯಾಲ ಧರ್ಮವರ ತಾ . . . ತೆಯೊಳು ||
ಕಂದನ ಹೊಳಲು ಕಂಬದೂರು ಬೂದು . . . ಪಂಚ
ನಂದಿಯೊಳು ಸತತ ಗುಣಸಿಂಧು ಮೆಂದೆಂದು ||
ಪೊಗಳುತಿದೆಕೊ || (2)

ಕೋಳಾಲ ಹೊಸಕೋಟೆ ಗಜ ಶಿಲಾಪುರ
. . . ಮ್ಮಳ ಶಿವಗಂಗೆ ಕುಣಿಗಲು . . . ಮಲೆಯು
ಗೂಳೂರು ಪೆನುಗೊಂಡೆ ಬಲ್ಲಾಳಪುರದಲಿ
ಪೇಳಾ. . . ನಾಶ್ರಿತ ಜನಾಧಾರಣೆ (3)

ಕಾಶಿ ಕೇದಾರ ದಿಳ್ಳಿಯಹಮದನಗರ |
ಲೇಸೆನಿಪ ಆಗರ ಪುರಾನುಪುರ. . . . .||
. . . . . . ಬಂಕಾಪುರವು ಕಲ್ಯಾಣ |
ದೇಶದೊಳಗೆಲ್ಲ ಬಸವೇಶನಿವನೆಂದು || (4)

ಜಂಜಿ ತಂಜಾವೂರು ತಿರುವಣಾಮಲೆಯು ಪುರಿ |
ಕಂಜಸಖನನುಜ ಗಿರಿ ಕಾಳಹಸ್ತಿಯೊಳು ||
ರಂಜಿಸುವ ವೇಲೂರು ಕಂಚಿ ತಿರುಪತಿಯೊಳು ಇರಿ |
ವಂಜಿ ವರದೊಳು ರಣ ಧನಂಜಯನೆಂದು || (5)

ಗುರುಹಿರಿಯರುಗಳು ಬಲ್ಲವರು ಬುಧಜನರು |
ಅರಿನೃಪರು ಮಿತ್ರ ಬಾಂಧವರು ಕೋವಿದರು ||
ಧುರಧೀರನೆಂದು ಕಾರಣ ಜನ್ಮಕೆ ಪ್ರಭು |

ವರಗಂಗೇಶನೊಳೆ ಕಾಯ್ದು ಸತ್ಯವೆಂದು || (6)

* * * *

ಪಲ್ಲವಿ --

ಇಳೆಗೆ ನೀನೆ ಮಹಾಪರಾಕ್ರಮಿ
ಎಲಹಂಕನಾಡ ಪ್ರಭುವಲಾ
ಇಮ್ಮಡಿಕೆಂಪ ಸಾರ್ವಭೌಮ
ತೆಗೆ ನೀನೆ ಮಹಾಪರಾಕ್ರಮಿ

ಚರಣಗಳು---

ನಿನ್ನ ಕೊಡೆ ಮಚ್ಚರಿಸಿದ ಹೊನ್ನೊರೆಯೆಲ್ಲನ ಸಕಲ ರಾಜ್ಯ |
ವನ್ನು ದಾಳಿವರಿದಾಕ್ಷಣದಿ ಸನ್ನಾಹದ ಕೋಟೆಗಳ ಸಾಧಿಸಿ |
ಮುನ್ನ ತುಮುಕೂರ ಪೇಟೆಯ ತುಳಿಸಿದೆ ಪ್ರಜೆ ಕಂಗೆಡಲು |
ಮನ್ನಿಸಿ ಪಟ್ಟಣವನುಳುಹಿದೆ ಕೆಂಪರಾಯ ||

ಮೂರು ಸಿಂಹಾಸನಕೆ ವಾರ್ತೆ ಮೀರಿ ಬಾಳ್ವ ಬಲುವ |
ಜ್ಜೀರ ಜಗದೇಕರಾಯನ ಭಾರಿಯ ಮುರಿಯಲಿರಿದು ಗಂಧ |
ವಾರಣಗಳನು ಗ್ರಹಿಸದೆ ಸಕಲ ಸಭಾಸ್ಕರಗಳನು (?)|
ಸೂರೆಗೊಳಿಸಿದೆ ನಾಲ್ಕು ದಿಕ್ಕಿನ ಧಾರಿಣಿಯೊಳು ಜಯವ ನೋಹಿಸಿದೆ
ಕೆಂಪರಾಯ || (2)

ಧರಣಿ ತರಣಿ ಚಂದ್ರ ತಾರೆ. . . ಗಿರಿಗಳುಳ್ಳನಕ |
ನಿರತ ಬೆಂಗಳೂರು ಪಟ್ಟಣವ ಸ್ಥಿರದಿ ಹಲಸೂರ ಸೋಮೇ |
ಶ್ವರನ . . . ಂದಲಾಳು ಪ್ರತಿಭಟಿಸುವ ನರಪತಿಗಳ ಪಿಡಿದು |
ಸೀಳುವೆ ಕೆಂಪೇಂದ್ರ ಕೆಂಪ
ಸುರಪರ ವೈಭವದಿಂದ ಬಾಳುವೆ ಕೆಂಪರಾಯ ||

]

# ಅನುಬಂಧ–2

# ಶಾಸನೋಕ್ತ ಇಲೈಪ್ಪಾಕ್ಕುನಾಡು/ಯಲಹಂಕನಾಡು

| ಕಾಲ | ಶಾಸನ ಸಂಖ್ಯೆ | ಅಧಿರಾಜ | ನಾಡು | ವಳನಾಡು | ಪ್ರಮುಖ ಪಟ್ಟಣಗಳು | ನಾಡಪ್ರಭು | ಅಧಿಕಾರಿಗಳು | ಶಾಸನದ ಪ್ರಮುಖ ವಿಷಯ | ಪ್ರಮುಖ ಅಂಶಗಳು |
|---|---|---|---|---|---|---|---|---|---|
| 1200 | ಬೆಂ-13 | | ಇಲೈಪ್ಪಾಕ್ಕನಾಡು (ಯಲಹಂಕ ನಾಡು) | ರಾಜರಾಜಚೋಳ **ವಳನಾಡು** | ತೇಸಿ ಮಾಣಿಕ್ಕ ಪಟ್ಟಣ (ತೊಂಬಲೂರು) | | | -ಚೋಳರ ಕಾಲದಲ್ಲಿ ನಂತರ ಹೊಯ್ಸಳರ ಕಾಲದಲ್ಲಿ ಕನ್ನಡದ ಗ್ರಾಮಗಳು ಮತ್ತು ಅಧಿಕಾರಿಗಳ ಹೆಸರುಗಳು ತಮಿಳೀಕರಣ ವಾಗಿರುವುದನ್ನು ಕಾಣಬಹುದು.. | |
| 1237 | ಬೆಂ-139 ಎ | ಪೊಯ್ಸಳ ವೀರ ನರಸಿಂಗ | ಇಲೈಪ್ಪಾಕ್ಕನಾಡು (ಯಲಹಂಕ ನಾಡು) | | | ಚಿಕ್ಕದೇವರ್ (ನಾಡಗಾವುಂಡ) | ಹಿರಿಯ ತ್ರಿಲೋಕ ಶೆಟ್ಟಿ (ಅಧಿಕಾರಿಯೇ?) | ಹಿರಿಯ ತ್ರಿಲೋಕ ಶೆಟ್ಟಿಯು ಶಿವನೀಶ್ವರ ಉಡೈಯಾರ್ ದೇವಾಲಯಕ್ಕೆ ಗೋಪುರ ಮಾಡಿಸಿ, ಭೂಮಿಯನ್ನು ಕೊಡುಗೆಯಾಗಿ ನೀಡಿ ತೆರಿಗೆ ವಿನಾಯಿತಿ ಕೊಟ್ಟನು. | ಹಿರಿಯ ತ್ರಿಲೋಕ ಶೆಟ್ಟಿ ಉಲ್ಲೇಖವಿದೆ. ಈತ ಪ್ರಮುಖ ಅಧಿಕಾರಿಯಾಗಿರುವ ಸಾಧ್ಯತೆ ಇದೆ. |
| 1266 | ಬೆಂ-10 | | ಇಲೈಪ್ಪಾಕ್ಕನಾಡು (ಯಲಹಂಕ ನಾಡು) | ರಾಜೇಂದ್ರಚೋಳ **ವಳನಾಡು** | ತೊಂಬಲೂರು (ದೊಮ್ಮಲೂರು) ಪ್ರತಿನಾಮ ದೇಶಿಮಾಣಿಕ್ಕ ಪಟ್ಟಣ, ಜಾಲಪಳ್ಳಿ (ಜಾಲಹಳ್ಳಿ), ಪಿನ್ನಮಂಗಲ (ಚಿನ್ನಮಂಗಲ) | | ತ್ರಿಪುರಾಂತಕ ಶೆಟ್ಟಿಯ ಪತ್ನಿ ಪಾರ್ವತಿ ಚಟ್ಟಿ. ತ್ರಿಪುರಾಂತಕ ಶೆಟ್ಟಿ ಅಧಿಕಾರಿಯಾಗಿರಬ ಹುದು. | ದೊಮ್ಮಲೂರಿನ ತ್ರಿಪುರಾಂತಕ ಪೆರುಮಾಳ್ ದೇವರು ಶೆಟ್ಟಿಗಳ ಮನೆದೇವರಾಗಿರಬೇಕು. ಆದ್ದರಿಂದ ದೇವಾಲಯದ ಅಭಿವೃದ್ಧಿಗೆ ಸಾಕಷ್ಟು ಕೊಡುಗೆ ಕೊಟ್ಟಿರುವುದನ್ನು ಗಮನಿಸಬಹುದು. | -ಜಾಲಹಳ್ಳಿ, ಚಿನ್ನಮಂಗಲ ಗಳಲ್ಲಿ ಕೆರೆಗಳು, ದೊಮ್ಮಲೂರಿನಲ್ಲಿ ದೊಡ್ಡ ಕೆರೆ ಅಸ್ತಿತ್ವದಲ್ಲಿತ್ತು.<br>-ದೊಮ್ಮಲೂರು ಪ್ರಮುಖ ವ್ಯಾಪಾರಿ ಪಟ್ಟಣವಾಗಿರಬಹುದು. |
| 1267 | ದೊ.ಬ-31ಎ | ವೀರ ನರಸಿಂಹ | ಯಲಹಕ್ಕ | | | ಮಹಾಮಂಡಲೇಶ್ವರ, ತ್ರಿಭುವನ ಮಲ್ಲ, ನಚಿದಗಿರಿನಾಥ, ಭಂಗಿಕುಲ 'ಬ್ಬೆಚಿ ದೇವರಸ' (ನಾಡಾಳ್ವ) | | ಐಹೊಳೆ ಐನೂರ್ವರು, ನಾನಾದೇಶಿ ಗಳ ಉಲ್ಲೇಖವಿದೆ. | ಬಲ್ಲಾಳ ಸೆಟ್ಟಿ ಮತ್ತು ಅನೇಕ ಸೆಟ್ಟಿಗಳ ಉಲ್ಲೇಖವಿದೆ. |
| 1290 | ಬೆಂ-11 | ಹೊಯ್ಸಳ ರಾಮನಾಥ | ಇಲೈಪಾಕ್ಕುನಾಡು | | ರಾಜ ತಂಬಲೂರು | | ಚೆಲ್ಲಪಿಳ್ಳೈ (ಅಧಿಕಾರಿ) | ಇಲೈಪಾಕ್ಕು ನಿವಾಸಿಗಳಿಂದ ಚೆಲ್ಲಪಿಳ್ಳೈ ಎಂಬ ಅಧಿಕಾರಿಗೆ ಮನವಿ. ಚೊಕ್ಕಪೆರುಮಾಳ್ ದೇವಾಲಯ ಉತ್ಸವದ ಕರ್ಚಿಗೆ ಸಂಬಂಧಿಸಿದಂತೆ | ದೇವಾಲಯದ ನಿರ್ವಾಹಕ ನಾರಾಯಣ ತಾದರ್. |

| | | | | | | | | | |
|---|---|---|---|---|---|---|---|---|---|
| | | | | | | | | 10 ಪಣವನ್ನು ರಾಜತಂಬಲೂರು ಜನರು ನೀಡುವ ಮೊತ್ತದಲ್ಲಿ ಮನ್ನಮಾಡಿದ ಬಗ್ಗೆ ತಿಳಿಸುತ್ತದೆ. | |
| 1292 | ನೆ-38ಬಿ | ಹೊಯ್ಸಳ ರಾಮನಾಥ | ಇಲ್ಲೈಪಾಕುನಾಡು | | ತಿಗ್ಗೈಕೊಟ್ಟೈ | | | ಯಾವ ಅಧಿಕಾರಿ, ವ್ಯಕ್ತಿಯ ಉಲ್ಲೇಖವಿಲ್ಲ. ಯಾರೋ ಒಬ್ಬರು ಐವರ್‌ಕಂಡ ನಾಚಿುನಾರ್ ದೇವಲಿಗೆ ದೇವದಾನವಾಗಿ ಭೂಮಿ ನೀಡಿದರು. | |
| 1297 | ಬೆಂ-6 ಎ | | ಇಲ್ಲೈಪಾಕ್ಕನಾಡು | | ಇರುಂಬಿಲಿಯೂರ್ ಪ್ರತಿನಾಮದೇಯ ವೀರಬಲ್ಲಾಳ ಚತುರ್ವೇದಿ ಮಂಗಲಂ. ಗೋಪಿಪಳ್ಳಿ, ಶಯನಲ್ಲೈ, ತೊಮ್ಮಲೂರು ಪರ್ರು (ಜಿಲ್ಲೆ)ಯಲ್ಲಿದೆ. | | | ಇರುಂಬಿಲಿಯೂರಿನ ಮಹಾಜನರು ಇಲ್ಲೈಪಾಕ್ಕ ನಾಡಿನ ತೊಮ್ಮಲೂರು ಪರ್ರು (ಜಿಲ್ಲೆ)ಯು ಒಳಗೊಂಡ ಗೋಪಿಪಳ್ಳಿ, ಶಯನಲ್ಲೈ ಗ್ರಾಮಗಳನ್ನು ಕೋಇಯಿಲ್ ಮೊದಲಿಯಾರ್ ಎಂಬ ಬ್ರಾಹ್ಮಣನಿಗೆ ನೀಡಿದರು. | |
| 1301 | ಬೆಂ-65 | ಹೊಯ್ಸಳ ವೀರಬಲ್ಲಾಳ | ವಿರಿವಿನಾಡು, ಮಾಸಂದಿನಾಡು, ಮುರುಸುನಾಡು, ಪೆಣ್ಣೈಯಂಡಾರ್ ಮಡನಾಡು, ಐಂಬುಳುಗೂರು ನಾಡು, ಎಲವೂರ್ ನಾಡು, ಕುವಳಲಾ ನಾಡು, ಕೈವಾರ ನಾಡು, **ಇಲ್ಲೈಪ್ಪಾಕ್ಕನಾಡು,** | ಹೆಸರ್‌ಕುಂದಾನಿ **ರಾಜ್ಯ,** | ಚೊಕ್ಕನಾಚಿುನ್ ಪರ್ರು (ಜಿಲ್ಲೆ), ವೆಪ್ಪೂರ್ ಪರ್ರು, ತಾಮರೈಕ್ಕರೈ (ತಾವರೆಕೆರೆ) | | | ಉಲ್ಲೇಖಿತ ನಾಡೊಳಗಣ ದೇವಾಲಯಗಳಲ್ಲಿನ ಮ್ಮಠ ಮತ್ತು ಸ್ಥಾನಗಳ ಮುಖ್ಯಸ್ಥರಿಗೆ ಬಲ್ಲಾಳ ತಿಳಿಸುವುದೇನೆಂದರೆ- ಕಪ್ಪಕಾಣಿಕೆ, ಮಗ್ಗದೆರೆ, ಅಕ್ಕಸಾಲಿಗನ ತೆರಿಗೆ, ಸುಂಕ, ದೇವಾಲಯಗಳ ಕೊಡಿಗೆ ಇತ್ಯಾದಿ ದೇವದಾನವನ್ನು ಎಲ್ಲ ರೀತಿಯ ತೆರಿಗೆಗಳೊಂದಿಗೆ ಮನ್ನಾ ಮಾಡಿದ ಬಗ್ಗೆ ತಿಳಿಸುತ್ತಾನೆ. | ವೆಪ್ಪೂರು ಪರ್ರುವಿನ ತಾಮರೈಕ್ಕರೈ ಎಂದಿದೆ. ಆದರೆ ಬೆಂ-67 (1365) ಶಾಸನದಲ್ಲಿ ನಿಗರಿಲಿ ಚೋಳಮಂಡಲದ ರಾಜೇಂದ್ರ ಚೋಳವಳನಾಡಿನ ಪೆಪ್ಪೂರು ನಾಡಿನಲ್ಲಿರುವುದಾಗಿ ತಿಳಿಸುತ್ತದೆ. -ಪರ್ರು ಮತ್ತು ನಾಡು ಒಂದೆಯೇ ಎಂಬ ಜಿಜ್ಞಾಸೆಗೆ ಅರ್ಥ ಹುಡುಕಬೇಕು. |
| 1305 | ಬೆಂ-23 | ವೀರಬಲ್ಲಾಳ | ಇಲ್ಲೈಪ್ಪಾಕ್ಕ ನಾಡು | | ಶಿವಪುರವು ಗಂಗನಾರಾಯಣ ಚತುರ್ವೇದಿ ಮಂಗಳಕ್ಕೆ ಸೇರಿದೆ. | | ಪೆರುಮಾಳ್ ದೇವ ದಂಡನಾಯಕನ ಮಗ ಚಕ್ರವರ್ತಿ ದಂಡನಾಯಕ | ಚಕ್ರವರ್ತಿದಂಡನಾಯಕನು ಕೊಳ, ಕೆರೆ, ಎಲ್ಲಾ ರೀತಿಯ ಭೂಮಿಗಳಲ್ಲದೆ ರೈತರ ಕೊಡುಗೆಗಳು ಸ್ಥಿರಿದಂತೆ ಎಲ್ಲ ವಿನಾಯಿತಿಗಳನ್ನು ಶಿವಪುರ ಚತುರ್ಸಿಮೆಯಲ್ಲಿ ನೀಡಿದನು. ಯಲಹಂಕ ನಾಡಿನ ಜನರು ಸರ್ವಮಾನ್ಯವಾಗಿ ನೀಡುತ್ತಾನೆ. | ಈ ತಮಿಳು ಶಾಸನದ ಕೊನೆಯಲ್ಲಿ ಕನ್ನಡದಲ್ಲಿ 'ಅಲ್ಲಾಳ ನಾಥ' ಎಂದು ಕನ್ನಡದಲ್ಲಿ ಸಹಿ ಮಾಡಿದೆ. ಕನ್ನಡ ಅಧಿಕಾರಿಗಳಿದ್ದರೂ ಹೊಯ್ಸಳ ಕೆಲವು ದೊರೆಗಳ ತಮಿಳು ಮೋಹದಿಂದ |

| | | | | | | | | | ತಮಿಳಿನಲ್ಲಿ ಶಾಸನ ಹಾಕಿ-ಸುತ್ತಿದ್ದುದಕ್ಕೆ ಇದು ಸಾಕ್ಷಿ. |
|---|---|---|---|---|---|---|---|---|---|
| 1308 | ಬೆಂ-134 | ವೀರಬಲ್ಲಾಳ | ಎಲಹಕನಾಡು | | ಹೆಬ್ಬಾಳ, ಸಿವಗಂಗೆ | ದೇವಣ್ಣನ ಮಗ ಅಲ್ಲಪ ದಂಡನಾಯಕನು ಎಲಕಹನಾಡನ್ನಾಳುತ್ತಿದ್ದ. | ಉರಿಯಣ್ಣ (ಸರ್ವಾಧಿಕಾರಿ?) | ಅಲ್ಲಪ ದಂಡನಾಯಕನು ಎಲಹಕ ನಾಡನ್ನು ಆಳುವಾಗ ಉರಿಯಣ್ಣ & ನಾಡ ಸಮಸ್ತ ಪ್ರಭುಗೌಡರು ಹೆಬ್ಬಾಳವನ್ನು ದಾನಕೊಟ್ಟ ಬಗ್ಗೆ ತಿಳಿಸುತ್ತದೆ. | ಸಿವಗಂಗೆಯ ಬಾಚಣ್ಣ,ಉಡುಯಣ್ಣ ಉಲ್ಲೇಖವಿದೆ. |
| 1328 | ದೇ-60 | ವೀರ ಬಲ್ಲಾಳ | ಎಲಹಕ್ಕನಾಡು | | ಜಾಲ, ಜಾಲ ತರಬನಹಳ್ಳಿ, ಅನುಡಳ | ಮಯಿಲಿಗೆಗೌಡ, ಮಾರಗೌಡ, ಮಲಯಗೌಡ, ಠಾಮಿಜುಪ್ಪ (ಸ್ವಾಮಿಜುಪ್ಪ)ಗ್ಗಡ, | ಮಹಾಪ್ರಧಾನ ಪೊನ್ನಯನ ಮಗ ಹೊಯದಣ್ಣಾಯಕ, ಸೇನಬೋವ ಅಲ್ಲಾಳ. | ಹೊಯದಣ್ಣಾಯಕ, ಎಲಹಕ್ಕನಾಡ ಗಾವುಂಡರು, ಸೇನಬೋವ ಅಲ್ಲಾಳ ಮೊದಲಾದ ಸಮಸ್ತ ಗೌಡ ಪ್ರಜೆಗಳು ಜಾಲದ ಚನ್ನಕೇಶವ ದೇವರಿಗೆ ಜಾಲತರಬನಹಳ್ಳಿ, ಅನುಡಳ ಗ್ರಾಮಗಳ ಚತುರ್ಸೀಮೆಯನ್ನು ದೇವರ ಅಭಿಷೇಕಕ್ಕೆ ಬಿಟ್ಟರು. | |
| 1328 | ದೊ.ಬ-14 | ವೀರಬಲ್ಲಾಳ | ಎಲಹಕ್ಕನಾಡು | | ಮಲದಿಪನ ಪುರ, ಹಡುವನಹಳ್ಳಿ | | ಮಹಾಮಂತ್ರಿ ಪುಣ್ಣವನ ಮಗ ಮೇಯದಂಣ್ಣಾಯಕ | ದಂಡನಾಯಕನು ಮಲದಿಪನಪುರವನ್ನು ಬದಲಿಸಿ, ಹಡುವನಹಳ್ಳಿಯನ್ನು ದಾನವಾಗಿ ಕೊಟ್ಟನು. | |
| 1340 | ಬೆಂ-31 | ವೀರ ಬಲ್ಲಾಳ | ಯಲಹಕ ನಾಡು | | ಹಾರಮರವೂರು | | ಮಹಾಪ್ರಧಾನ ಕಾಮೆಯ ದಂಡನಾಯಕನ ಮಗ ಕಾಮೆಯ ದಂಡನಾಯಕ, ನಾಡಸೇನಬೋವ ಅಲ್ಲಾಳ. | ನಾಯಕನು ಹಾರಮರವೂರ ಕೋಟೆಗೆ ಸೇರಿದ ಹಿಂದಿನ ಪದ್ಧತಿಯ ಅನುಸಾರ ಭೂಮಿಯನ್ನು ಸರ್ವಮಾನ್ಯ ಕೊಡಗೆಯಾಗಿ ಸೇನಬೋವ ಅಲ್ಲಾಳನಿಗೆ ನೀಡಿದನು. | ಹಾರಮರವೂರಿನಲ್ಲಿ ಕೋಟೆ ಇದ್ದ ಉಲ್ಲೇಖ ಸಿಗುತ್ತದೆ.<br>-ಕೋಟೆಗೆ ಸುಂಕವನ್ನು ಕೊಡಲಾಗುತ್ತಿತ್ತು.<br>-ಬೆಂಗಳೂರು ಪರಿಸರದಲ್ಲಿ ಕೋಟೆಯನ್ನು ಉಲ್ಲೇಖಿಸುವ ಮೊದಲ ಶಾಸನ. |
| 1342 | ಬೆಂ-24 | ವೀರಬಲ್ಲಾಳ | ಯೆಲಹಕನಾಡು | | ಸೋಮಿದೇವನಹಳ್ಳಿ, ಕಾಳಿತಮ್ಮನಹಳ್ಳಿ, ಮಾವಿನಕೆರೆ, ಹುರವಾಮಾರಾಡಿಂ ಯ ಕೆರೆ | ಚಿಕ್ಕ ಬಯಿರೆಯನಾಯಕನ ಮೈದುನಂದಿರಾದ ಜೋಳೆಯ ನಾಯಕ, ಯಲಹಕನಾಡ ಪ್ರಭು ಬಯಿರೇದೇವ, ಮಾರಗವುಂಡ, ತಾಯಿಜುಪ್ಪ, ಮಾಚಿದೇವ, | ನಾಡಸೇನಬೋವ ಅಲಾಳಜೀಯ, ಮಹಾಸಾಮಂತಾಧಿ ಪತಿ ಪೆಮ್ಮದೇವರಸನ ಮಗ ಅಲ್ಲಯ್ಯ. | ಮೀಸೆಯರಗಂಡ ಚಿಕ್ಕಬಯಿರೆಯನಾಯಕನ ಮೈದುನಂದಿರು, ನಾಡಸೇನಬೋವ ಮೊದಲಾದ ಗಾವುಂಡರು ಅಲ್ಲಯ್ಯನಿಗೆ ಸೋಮಿದೇವನಹಳ್ಳಿ, ಕಾಳಿತಮ್ಮನಹಳ್ಳಿಯ ಮಾವಿನಕೆರೆ, ಹುರವಾಮಾರಾಡಿಯಕೆರೆಯೊಳಗಣ ಚತುರ್ಸಿಮೆಯನ್ನು ಸರ್ವಮಾನ್ಯವಾಗಿ ಕೊಟ್ಟರು. | ಮಾವಿನಕೆರೆ, ಹುರವಾಮಾರಾಡಿಯಕೆರೆ 2 ಕೆರೆ ಉಲ್ಲೇಖವಿದೆ. ನಾಡಸೇನಬೋವ ಅಲಾಳಜೀಯ ಉಲ್ಲೇಖವಿದೆ. |

| | | | | | | ಕಂನಗವುಂಡ | | | |
|---|---|---|---|---|---|---|---|---|---|
| 1342 | ಬೆಂ-21 | ವೀರಬಲ್ಲಾಳ | ಎಲಕ್ಕನಾಡು | | ಜಕ್ಕೂರು | ಮಹಾಸಾಮಂತಾಧಿಪತಿ ಚಿಕ್ಕಬಯಿರಯ ನಾಯ್ಕನ ಮಗ ಹೊನ್ನಮಾರಯನಾಯ್ಕ | ನಾಡಸೇನಬೋವ ಅಲಾಳ | ಹೊನ್ನಮಾರನಾಯ್ಕನು ಅಲಾಳನಿಗೆ ಸರ್ವಮಾನ್ಯ ಕೊಡಗಿಯಾಗಿ ಜಕ್ಕೂರು ಚತುರ್ಸಿಮೆ ನೀಡಿದನು. | ನಾಡಸೇನಬೋವ ಮತ್ತು ವಿಕ್ಕ ಬಯಿರಿಯ ನಾಯ್ಕನ ಬಗ್ಗೆ ವಿಶೇಷವಾಗಿ ಗಮನಿಸಬೇಕು. |
| 1342 | ಬೆಂ-129 | ವೀರಬಲ್ಲಾಳ (ಉಣಾಮಲೈ ಪಟ್ಟಣ) | ಯಲಹಕ್ಕನಾಡು | | ನಾಗವಾರ, ನಾಗಿಸೆಟ್ಟಿಹಳ್ಳಿ, ಜಾಲಮಾಚಿಹಳ್ಳಿ (ಜಾಲಹಳ್ಳಿ) | ಚಿಕ್ಕಭೈರೆಯನಾಯಕ (ಎಕ್ಕಟಿಗ), ಬೈರಿದೇವ (ನಾಡಪ್ರಭು) | ಅಲ್ಲಾಳಜೀಯ (ನಾಡಸೇನಬೋವ) | ಬಲ್ಲಾಳನ ಅರಮನೆಯ ಎಕ್ಕಟ್ಟಿಗನಾದ ಮಹಾ ಸಾಮಂತಾಧಿಪತಿ,ಮೀಸೆಯರಗಂಡ, ಚಿಕ್ಕಭೈರೆಯ ನಾಯಕನ ಮೈದುನ ತೊಳೆಯನಾಯಕ, ಯಲಹಕ್ಕ ನಾಡ ಪ್ರಭು ಬೈರಿದೇವ, ತಾಮಿಚಿಪ, ಮಾಚಿದೇವ, ಕನ್ನಗೌಡ, ನಾಡಸೇನಬೋವ ಅಲ್ಲಾಳಜಿಯರು ನಾಗವಾರದ ಮಾರಗೌಡನ ಮಗ ಮಾರಪ್ಪನಿಗೆ ನಾಗಿಸೆಟ್ಟಿಹಳ್ಳಿ ಮತ್ತು ಅದಕ್ಕೆ ಸೇರಿದ ದೊಡ್ಡಕೆರೆ ಅರ್ಧ ಭಾಗ, ಜಾಲಮಾಚಿಹಳ್ಳಿಯ ಚತುರ್ಸಿಮೆಯನ್ನು ಕೊಡುಗೆಯಾಗಿ ಕೊಟ್ಟರು. | -ನಾಗಿಸೆಟ್ಟಿಹಳ್ಳಿಯಲ್ಲಿ ದೊಡ್ಡಕೆರೆ ಇದ್ದ ಬಗ್ಗೆ ಉಲ್ಲೇಖವಿದೆ.<br>-ಎಕ್ಕಟಿಗ ಎಚಿದರೆ ಹತ್ಮಹತ್ಯಾದಳದವನು ಎಚಿದರ್ಥ.<br>-ಯಲಹಂಕ ನಾಡಪ್ರಭು ಬೈರಿದೇವ ಕೆಂಪೇಗೌಡನ ವಂಶಸ್ಥರಲ್ಲಿ ಬರುವ ಮೊದಲಿಗನಾದ ರಣಬೈರೇಗೌಡನೇ ಇರಬೇಕು. |
| 1348 | ದೇ-50 | ಹರಿಯಪ್ಪ & ಬುಕ್ಕಣ್ಣ ಉಡೈಯರ್, | ಮಹಾ ಎಲಕ್ಕನಾಡು | | ಕೊಡಿಗೆಹಳ್ಳಿ | ಮಹಾಸಾಮಂತಾಧಿಪತಿ ಮೈಲೆಯನಾಯಕ, ಎಲಕ್ಕನಾಡ ಪ್ರಭು ಬೈರಿದೇವ, ಮಾಚಿದೇವ, ಗೋಪಾಲಸ್ವಾಮಿಚಿಪ್ಪ, ಕನ್ನಗೋಡದೇವ, ಬೈಯಪ್ಪ, | ಅಲ್ಲಾಳಜಿ (ಸೇನಬೋವ?) | ಮೈಲೆಯನಾಯಕ, ಅಲ್ಲಾಳಜಿ & ಸಮಸ್ತ ಗಾವುಂಡರು, ಬೈರಿಸೆಟ್ಟಿಯ ಮಗ ಕ್ವರಿಯ ನಾಯಕನಿಗೆ ಕೊಡಿಗೆಹಳ್ಳಿಯ ಚತುರ್ಸಿಮೆಯನ್ನು ಸರ್ವಮಾನ್ಯ ಬಿಟ್ಟರು. | |
| 1363 | ಬೆಂ-81 | ಬುಕ್ಕಣ್ಣ ಒಡೆಯರ ಮಗ ಕಂಪಣ್ಣ ಒಡೆಯರು | **ಎಲಹಕನಾಡು,** ತೊರೆವಳಿನಾಡು | | ಮುಳುಬಾಗಿಲು ಪಟ್ಟಣ, ಬೆಲರ್ತ್ತ | ಕಂಪಣ್ಣ ಒಡೆಯನ್ ಮಗ ಕಾಮ್ಮೆಯನಾಯಕನು | ಅಲ್ಲಾಜಿಯ ಮಗ ತಣ್ಣಿಯಪ್ಪ | ಬುಕ್ಕಣ್ಣನ ಮಗ ಕಂಪಣ್ಣನು ಮುಳುಬಾಗಿಲು ಪಟ್ಟಣದಲ್ಲಿ ಆಳುತ್ತಿರುವಾಗ ಅವನ ಮಗ ಕಾಮ್ಮೆಯ ನಾಯಕನು ರಾಜ್ಯದ ರೈತರ ಸಮ್ಮುಖದಲ್ಲಿ ಎಲಹಕನಾಡ ಅಲ್ಲಾಜಿಯ ಮಗ ತಣ್ಣಿಯಪ್ಪನಿಗೆ ತೊರೆವಳಿನಾಡ ದಕ್ಷಿಣಕ್ಕಿರುವ ಬೆಲರ್ತ್ತದಲ್ಲಿ ಭೂಮಿಯನ್ನು ಸರ್ವಮಾನ್ಯ ನೀಡಿದನು. | -ಕಾಮ್ಮೆಯನಾಯಕ ಕಂಪಣ್ಣನ ಮಗ ಎಂಬ ವಿಚಾರ ತಿಳಿಯುತ್ತದೆ.<br>- ಅಲ್ಲಾಳಜಿಯ ಮಗ ತಣ್ಣಿಯಪ್ಪ ಎಂದಿದೆ. ಅಲ್ಲಾಳ ಎಂದರೆ ಸೇನಬೋವ ಅಲ್ಲಾಳನೇ ಇರಬೇಕು. |
| 1368 | ಬೆಂ-132 | ವೀರಬುಕ್ಕಣ್ಣ ಒಡೆಯ | ಇಲೈಪ್ಪಾಕ್ಕ ನಾಡು | | ದೇವಸಮುದ್ರ | ಮಯಲಯನಾಯಕನ | | ಮಹಾಮಂಡಲೇಶ್ವರ, ಇಂದುರಾಯ | ಕುಕ್ಕಲುನಾಡನ್ನು ಆಳುತ್ತಿದ್ದ |

| | | | | | (ದೇವಸಂದ್ರ) | ಮಗ ದೇವಯ ನಾಯಕ | | ಸುರತ್ರಾಣನ್, ಪೂರ್ವದಕ್ಷಿಣ ಪಶ್ಚಿಮೊತ್ತರ ಸಮುದ್ರಾಧಿಪತಿ,ವೀರಬುಕ್ಕಣ್ಣನ ಕಾಲದಲ್ಲಿ-ಮಹಾಸಾಮಂತಾಧಿ ಪತಿ, ಭಾಷೆಗೆ ತಪ್ಪುವ ರಾಯರ ಗಂಡ, ಮಯಲಯನಾಯಕನ ಮಗ ದೇವಯ ನಾಯಕನು ಇಲೈಪ್ಪಾಕ್ಕ ನಾಡನ್ನು ಆಳುತ್ತಿದ್ದನು. | ಮಯಲಯನಾಯಕನ ಮಗ ದೇವಯನಾಯಕನು ಯಲಹಂಕನಾಡನ್ನು ಆಳುತ್ತಿರುವುದರಿಂದ ಸಾಮಂತತ್ವ ವಂಶಪಾರಂಪರ್ಯವಾಗಿತೆಂದು ತಿಳಿಯಬಹುದು. |
|---|---|---|---|---|---|---|---|---|---|
| 1386 | ಬೆಂ-139 | ಹರಿಯಪ್ಪೊಡೆಯ, ಬುಕ್ಕಣ್ಣ ವಡೆಯ | ಯಲಹಕನಾಡು | | ಜೂಬನಹಳ್ಳಿ | ಮಹಾಸಾಮಂತಾಧಿಪತಿ, ನರಲೋಕಗಂಡ ಮಯಿಲೆಯನಾಯ್ಕನ ಮಗ ಕೋಟೆಯನಾಯ್ಕ | | ಕೋಟೆಯನಾಯ್ಕನು ಬಂಕೋಡಿದೇವ ಪೆರುಮಾಳನ ಮಗ ಖಾರ್ಯದೇವರಿಗೆ ಯಲಹಂಕನಾಡ ಒಳಗಿನ ಜೂಬನಹಳ್ಳಿಯ ಪೂರ್ವದ ಚತುರ್ಸಿಮೆಯನ್ನು ಸರ್ವಮಾನ್ಯ ಕೊಡಿಗೆಯಾಗಿ ನೀಡಿದನು. | ಮಯಿಲೆಯನಾಯ್ಕನ ಮತ್ತೊಬ್ಬ ಮಗನ ಹೆಸರು ಕೋಟೆಯ ನಾಯಕ ಎಂದಿದೆ. ಶಾಸನವೊಂದರಲ್ಲಿ(ಬೆಂ-117) ಮಯಿಲೆನಾಯಕನ ತಮ್ಮ ಚನ್ನಯನ ಮಗ ಎಂಬಂತೆ ಉಲ್ಲೇಖಗೊಂಡಿದೆ. |

# ಅನುಬಂಧ–3

## ಯಲಹಂಕ ನಾಡಪ್ರಭುಗಳ ವಂಶಾವಳಿ

### (ವಿವಿಧ ಮೂಲಗಳ ಪ್ರಕಾರ)

'ಬೆಂಗಳೂರಿನ ಐತಿಹಾಸಿಕ ಬಖೈರು' ಪ್ರಕಾರ ಯಲಹಂಕ ನಾಡಪ್ರಭುಗಳ ವಂಶಾವಳಿ

**ಜಯಗೌಡ (ಕ್ರಿ.ಶ. 1418–1433)**

|

**ಗಿಡ್ಡೇಗೌಡ (ಕ್ರಿ.ಶ. 1433–1443)**

|

**ಕೆಂಪನಾಚೇಗೌಡ (ಕ್ರಿ.ಶ. 1443–1513)**

|

**ಕೆಂಪೇಗೌಡ (ಕ್ರಿ.ಶ. 1513–?)**

|

**ಇಮ್ಮಡಿ ಕೆಂಪೇಗೌಡ (ಕ್ರಿ.ಶ. 1647–1701)**



1. ಬೆಂಗಳೂರು,

2. ಮಾಗಡಿ,

3. ಕುಣಿಗಲ್

4.ಶಿವಗಂಗೆ,

5. ಹುಲಿಯೂರುದುರ್ಗ,

6. ರಾಮಗಿರಿ,

7. ಸಾವನದುರ್ಗ,

8. ಗುಮ್ಮಳಾಪುರ,

9.ಹೆಬ್ಬೂರು




**ನಕ್ಷೆ–1**

**ಇಮ್ಮಡಿ ಕೆಂಪೇಗೌಡನ ಯಲಹಂಕ ರಾಜ್ಯ, (1634)**




ಮೈಸೂರು ಪ್ರಾಂತ್ಯದಲ್ಲಿದ್ದ
ಸಂಸ್ಥಾನಗಳು
(ಕ್ರಿ.ಶ.ಸು. 1625ರ)

ಆಧಾರ: ಬಿ.ಎಲ್.ರೈಸ್,
ಮೈಸೂರು ಗ್ಯಾಸೆಟಿಯರ್
ಸಂ.1, ಪು.357.

**ನಕ್ಷೆ–2**




**ನಕ್ಷೆ–3**

**ಬೆಂಗಳೂರು, ಪೇಟೆ ಮತ್ತು ಕೋಟೆಯ ತಲನಕ್ಷೆ** (ಕೃಪೆ: ಎಸ್.ಕೆ.ಅರುಣಿ)



ನಕ್ಷೆ–4

ರಂಗನಾಥ ದೇವಸ್ಥಾನದ ತಲನಕ್ಷೆ, ಅವೆನ್ಯೂ ರಸ್ತೆ, ಬೆಂಗಳೂರು (ಕೃಪೆ: ಎಸ್.ಕೆ.ಅರುಣಿ)



**ನಕ್ಷೆ–5**

**ಕೋಟೆ ವೆಂಕಟೇಶ್ವರ ದೇವಸ್ಥಾನ** (ಕೃಪೆ: ಎಸ್.ಕೆ.ಅರುಣಿ)



**ನಕ್ಷೆ–6**

**ಮಾಗಡಿ ರಂಗನಾಥ ದೇವಸ್ಥಾನ** (ಕೃಪೆ: ಎಸ್.ಕೆ.ಅರುಣಿ)



ನಕ್ಷೆ–7

ಗವಿಗಂಗಾಧರೇಶ್ವರ ದೇವಾಲಯ (ಕೃಪೆ: ಎಸ್.ಕೆ.ಅರುಣಿ)




**ನಕ್ಷೆ–8**

**ಹುಲಿಯೂರುದುರ್ಗ ಕೋಟೆ** **(ಕೃಪೆ: ಎಸ್.ಕೆ.ಅರುಣಿ)**



**ನಕ್ಷೆ–9**

**ಮಾಗಡಿ ಪಟ್ಟಣ ಮತ್ತು ಕೋಟೆ** **(ಕೃಪೆ: ಎಸ್.ಕೆ.ಅರುಣಿ)**



**ನಕ್ಷೆ–10**

**ಸಾವನದುರ್ಗ ತಲನಕ್ಷೆ** **(ಕೃಪೆ: ಎಸ್.ಕೆ.ಅರುಣಿ)**



(ಚಿತ್ರ–1)
ಹಿರಿಯ ಕೆಂಪೇಗೌಡ ಕಂಚಿನ ಪ್ರತಿಮೆ,
ಶಿವಗಂಗೆ (1608)



(ಚಿತ್ರ–2)
ಗಂಗಾಧರೇಶ್ವರ ದೇವಾಲಯದ ಪೂರ್ವ
ದ್ವಾರದ ಕಂಬದ ಮೇಲಿರುವ ಕೆಂಪೇಗೌಡನ
ಶಿಲ್ಪ (ಶಿವಗಂಗೆ)



(ಚಿತ್ರ–3) ಇಮ್ಮಡಿ ಕೆಂಪೇಗೌಡ ಮತ್ತು ಅವನ ಮಡದಿಯರ ಶಿಲ್ಪ (ವಿಭೂತಿಪುರ ಮಠ)



**(ಚಿತ್ರ–4)**
**ಕೆಂಪೇಗೌಡನ ಶಿಲ್ಪ**
**ಸೋಮೇಶ್ವರ ದೇವಾಲಯ, ಮಾಗಡಿ**



**(ಚಿತ್ರ–5)**
**ಲಕ್ಷ್ಮೀದೇವಿ ಸಮಾಧಿ ಸ್ಮಾರಕ, ಕೋರಮಂಗಲ**



**(ಚಿತ್ರ–6)ಲಕ್ಷ್ಮೀದೇವಿ ಪ್ರತಿಮೆ, ಬಿಬಿಎಂಪಿ ಕಚೇರಿ ಆವರಣ, ಬೆಂಗಳೂರು,**



**(ಚಿತ್ರ–7) ಲಕ್ಷ್ಮೀದೇವಿ ಸಮಾಧಿ ಸ್ಮಾರಕ ಮಂಟಪದ ಉದ್ಘಾಟನ ಶಿಲಾಶಾಸನ**



(ಚಿತ್ರ–8) ಮುಖಮಂಟಪ, ಭೋಗನಂದೀಶ್ವರ ದೇವಾಲಯ, ನಂದಿ



(ಚಿತ್ರ–9) ಉಮಾಮಹೇಶ್ವರ ಗುಡಿ, ನಂದಿ



(ಚಿತ್ರ–10) ಬೆಂಗಳೂರು ಕೋಟೆಯ ನಕ್ಷೆ 1790ರ ದಶಕ



(ಚಿತ್ರ–11) ಬೆಂಗಳೂರು ಕೋಟೆ ಮತ್ತು ಕಂದಕ 1850ರ ದಶಕ



(ಚಿತ್ರ–12) ಗವಿಗಂಗಾಧರೇಶ್ವರ ಆವರಣ, ಬ್ರಿಟಿಷ್ ಅಧಿಕಾರಿಯೊಬ್ಬ ಬಿಡಿಸಿದ ಚಿತ್ರ



(ಚಿತ್ರ–13) ಗವಿಗಂಗಾಧರೇಶ್ವರ ಆವರಣದಲ್ಲಿರುವ ಏಕಶಿಲ ತ್ರಿಶೂಲ, ಸೂರ್ಯಪಾನ, ಚಂದ್ರಪಾನ, ಢಮರು



(ಚಿತ್ರ–14) ಕಲ್ಲಿನ ಛತ್ರಿ, ಹರಿಹರ ಗುಡ್ಡ, ಬೆಂಗಳೂರು



(ಚಿತ್ರ–15) ದೊಡ್ಡ ಬಸವಣ್ಣ, ಬೆಂಗಳೂರು




(ಚಿತ್ರ–16) ಬಸವಣ್ಣನ ಗುಡಿ



(ಚಿತ್ರ–17) ದೊಡ್ಡಗಣೇಶ, ಬೆಂಗಳೂರು





(ಚಿತ್ರ–18–19) ಸಾವನದುರ್ಗ ವೀರಭದ್ರ ದೇವಾಲಯದ ಮುಂಭಾಗದಲ್ಲಿರುವ ಗರುಡಸ್ತಂಭ ಮತ್ತು ಉಯ್ಯಾಲೆಸ್ತಂಭ



(ಚಿತ್ರ–20) ನ್ಯಾಯದ ಕಟ್ಟೆ, ಸೋಮೇಶ್ವರ ದೇವಾಲಯ, ಮಾಗಡಿ



(ಚಿತ್ರ–21) ಗಾರೆ ಶಿಲ್ಪಗಳು, ಗಂಗಾಧರೇಶ್ವರ ದೇವಾಲಯ ಶಿವಗಂಗೆ



(ಚಿತ್ರ–22) ಕೆಂಪಸಾಗರ, ಮಾಗಡಿ ತಾ॥





(ಚಿತ್ರ–23–24) ರಾಮಾಯಣದ ಕಥಾಶಿಲ್ಪಗಳು, ಕಮಲತೀರ್ಥ, ಶಿವಗಂಗೆ




(ಚಿತ್ರ–24) ಕೆಂಪೇಗೌಡ ಹಜಾರ, ಶಿವಗಂಗೆ



(ಚಿತ್ರ–25) ಸಾವನದುರ್ಗ ಕೋಟೆ



(ಚಿತ್ರ–26) ಶಾಸನೋಕ್ತ ಸಮಾಧಿ, ಕೆಂಪಾಪುರ, ಮಾಗಡಿ ತಾ॥



(ಚಿತ್ರ–27) ಕೆಂಪೇಗೌಡ ಕಾವಲು ಗೋಪುರ ಮೇಖ್ರಿ ಸರ್ಕಲ್, ಬೆಂಗಳೂರು

# ಮೈಸೂರು ವಿಶ್ವವಿದ್ಯಾನಿಲಯ

# ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)

(ಪಿಎಚ್.ಡಿ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿರುವ ಸಂಶೋಧನಾ ಮಹಾಪ್ರಬಂಧ)


**ಸಂಶೋಧಕರು**

**ರಾಜೇಶ್ ಹೆಚ್.ಜಿ.**

ಇತಿಹಾಸ ಅಧ್ಯಯನ ವಿಭಾಗ,

ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,

ಮೈಸೂರು.

**ಮಾರ್ಗದರ್ಶಕರು**

**ಡಾ. ಅಶ್ವತ್ಥನಾರಾಯಣ**

ಪ್ರಾಧ್ಯಾಪಕರು,

ಇತಿಹಾಸ ಅಧ್ಯಯನ ವಿಭಾಗ,

ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,

ಮೈಸೂರು


## ಇತಿಹಾಸ ಅಧ್ಯಯನ ವಿಭಾಗ,

## ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,

## ಮೈಸೂರು

**ಮಾರ್ಚ್–2021**

# ಅಧ್ಯಾಯ–7

# ಉಪಸಂಹಾರ

ದಕ್ಷಿಣ ಕರ್ನಾಟಕದಲ್ಲಿ ಏಳಿಗೆಗೆ ಬಂದ ವಿಜಯನಗರೋತ್ತರ ಕಾಲದ ಹಲವು ಸಾಮಂತ ಮನೆತನಗಳಲ್ಲಿ ಆಯ್ದ ಮನೆತನಗಳನ್ನು ಪರಿಗಣಿಸಿ ಈವರೆಗೆ ಇಲ್ಲಿ ಅಧ್ಯಯನ ನಡೆಸಲಾಗಿದೆ. ಈ ಮನೆತನಗಳಲ್ಲಿ ಬೆಂಗಳೂರು ಪರಿಸರದಲ್ಲಿ ಪ್ರವರ್ಧಮಾನಕ್ಕೆ ಬಂದ ಯಲಹಂಕ ನಾಡಪ್ರಭುಗಳನ್ನು ಕುರಿತು ವಿಶೇಷವಾಗಿ ಅಧ್ಯಯನವನ್ನು ನಡೆಸಲಾಗಿದೆ. ಪ್ರಸ್ತುತ ಅಧ್ಯಯನ ವಿಷಯವಾದ **ದಕ್ಷಿಣ ಕರ್ನಾಟಕದಲ್ಲಿ ನಾಡಪ್ರಭುಗಳು: ವಿಶೇಷವಾಗಿ ಯಲಹಂಕ ನಾಡಪ್ರಭುಗಳನ್ನು ಅನುಲಕ್ಷಿಸಿ ಒಂದು ಚಾರಿತ್ರಿಕ ಅಧ್ಯಯನ (1510–1728)** ಇದರಲ್ಲಿ ಈ ಕೆಳಕಂಡ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

1. ವಿಜಯನಗರೋತ್ತರ ಕಾಲಘಟ್ಟದ ದಕ್ಷಿಣ ಕರ್ನಾಟಕದ ರಾಜಕೀಯ ಸಂದರ್ಭದಲ್ಲಿ ಅರಾಜಕತೆಯ ವಾತಾವರಣ ಸೃಷ್ಟಿಯಾಗಿತ್ತು. ನಿರಂತರ ಕಲಹಗಳು ಏರ್ಪಟ್ಟವು. ಬಿಜಾಪುರದ ಆದಿಲ್‌ಶಾಹಿಗಳ ನಿರಂತರ ದಾಳಿಗಳು, ಮರಾಠರ ಆಕ್ರಮಣಗಳು ಆರ್ಥಿಕ ಬೆಳವಣಿಗೆಯನ್ನು ಕುಂಟಿತಗೊಳಿಸಿದವು. ಆದರೂ ವಿಜಯನಗರ ಸಾಮ್ರಾಜ್ಯದ ಕೇಂದ್ರ ಶಕ್ತಿಯ ಅವನತಿ, ಪ್ರಮುಖ ವ್ಯಾಪಾರ ಮತ್ತು ವಾಣಿಜ್ಯ ಕೇಂದ್ರವಾದ ಹಂಪಿಯ ಅವನತಿಯು ದಕ್ಷಿಣ ಭಾರತದ ಒಳನಾಡಿನಲ್ಲಿ ಸಣ್ಣಮಟ್ಟ ಹೊಸ ವ್ಯಾಪಾರ ಕೇಂದ್ರಗಳ ವಿಕಾಸಕ್ಕೆ ಪ್ರೇರಣೆಯಾಯಿತು. ಜೊತೆಗೆ ಸ್ಥಳೀಯ ಮಟ್ಟದಲ್ಲಿ ನಡೆಯುತ್ತಿದ್ದ ಕೃಷಿ ವಿಸ್ತರಣೆ ಮತ್ತು ಕೆರೆ ನೀರಾವರಿಯು ಸ್ಥಳೀಯ ಸಂಸ್ಥಾನಗಳಿಗೆ ಶಕ್ತಿಯನ್ನು ತುಂಬಿತು. ಯೂರೋಪಿಯನ್ನರ ಆಗಮನವು ಸ್ಥಳೀಯ ಆರ್ಥಿಕತೆಗೆ ಉತ್ತೇಜನ ನೀಡಿತು. ವ್ಯಾಪಾರ ಮಾರ್ಗಗಳ ಮೇಲೆ ನಿಯಂತ್ರಣವನ್ನು ಸಾಧಿಸಿದ ಸ್ಥಳೀಯ ಪ್ರಭುತ್ವಗಳು ಸಶಕ್ತವಾಗಿ ಬೆಳೆಯತೊಡಗಿದವು ಎಂಬ ಅಂಶವನ್ನು ಕಂಡುಕೊಳ್ಳಲಾಗಿದೆ. ಅಂಥವುಗಳಲ್ಲಿ ಯಲಹಂಕ ನಾಡಪ್ರಭುಗಳು, ಮೈಸೂರು ಒಡೆಯರು, ಕೆಳದಿಯ ನಾಯಕರು ಪ್ರಮುಖರು.

2. ನಾಡಪ್ರಭುಗಳು ಪಾಳೆಯಗಾರರು, ನಾಯಕರು ಮುಂತಾದ ಸಾಮಂತ ಮನೆತನಗಳ ಹಿನ್ನೆಲೆಯಲ್ಲಿ ಅನೇಕ ಪವಾಡಗಳು, ದೈವಿಕ ಪ್ರೇರಣೆಗಳು, ವಿಸ್ಮಯಗಳು ಘಟಿಸುವಂತಹ ಕಥನಗಳು ಸಾಮಾನ್ಯವಾಗಿ ಐತಿಹ್ಯಗಳ ರೂಪದಲ್ಲಿ ಕೇಳಿಬರುತ್ತವೆ. ಈ ಪವಾಡ,

ಪ್ರೇರಣೆಗಳ ಐತಿಹ್ಯಗಳ ಹಿಂದೆ ತಮ್ಮನ್ನು ಅಥವಾ ತಮ್ಮ ಮನೆತನಗಳನ್ನು ದೈವೀಕರಿಸಿಕೊಳ್ಳುವ ಮೂಲಕ ಜನಸಾಮಾನ್ಯರನ್ನು ನಂಬಿಸುವ ಅಥವಾ ಆ ಮುಖೇನ ಜನಸಾಮಾನ್ಯರ ವಿಧೇಯತೆಯನ್ನು ಗಳಿಸುವ ಹುನ್ನಾರವೇ ವಿನಃ ಬೇರೇನೂ ಅಲ್ಲ. ಉದಾ. ವೆಂಕಟೇಶ್ವರ ಕಣ್ಣಿಲ್ಲದ ಭಕ್ತನ ಪ್ರಾರ್ಥನೆಗೆ ಮೆಚ್ಚಿ ಒಂದು ಕಣ್ಣು ಕೊಟ್ಟು ಮತ್ತೊಂದು ಕಣ್ಣಿಗಾಗಿ ರಾಜನನ್ನು ಕೇಳು ಎಂದು ಹೇಳಿದನಂತೆ. ಆಗ ರಾಜ ಒಡೆಯರ್ ತನ್ನ ದೈವೀಕ ಶಕ್ತಿಯಿಂದ ಭಕ್ತನಿಗೆ ಕಣ್ಣು ನೀಡಿದ ಎಂಬುದಾಗಲಿ, ಕಣ್ಣಿಲ್ಲದ ಭಕ್ತನೊಬ್ಬನಿಗೆ ವೀರಭದ್ರನು ಒಂದು ಕಣ್ಣು ನೀಡಿ, ಮತ್ತೊಂದು ಕಣ್ಣನ್ನು ಮುಮ್ಮಡಿ ಕೆಂಪೇಗೌಡನನ್ನು ಕೇಳುವಂತೆ ಹೇಳಲಾಗಿ, ಕೆಂಪೇಗೌಡನು ತನ್ನ ದೈವಿಕ ಶಕ್ತಿಯಿಂದ ಮತ್ತೊಂದು ಕಣ್ಣುಕೊಟ್ಟ ಎಂಬುದಾಗಲಿ, ಇವು ಅರಸರು ತಮ್ಮನ್ನು ದೈವೀಕರಿಸಿಕೊಂಡು ಜನರ ವಿಧೇಯತೆಯನ್ನು ಗಳಿಸುವುದಾಗಿತ್ತು ಎಂಬುದನ್ನು ಕಂಡುಕೊಳ್ಳಲಾಗಿದೆ.

3. ಕೆಲವು ಸ್ಥಳಗಳಿಗೆ ಸಂಬಂಧಿಸಿದಂತೆ ಸ್ಥಳಮಹಿಮೆಗಳು ಹುಟ್ಟಿಕೊಂಡಿವೆ. ಐತಿಹ್ಯಗಳಾಗಿ ಕೇಳಿ ಬರುವ ಈ ಸ್ಥಳಮಹಿಮೆಗಳು ಶತೃಗಳನ್ನು ಮಾನಸಿಕವಾಗಿ ಗೆಲ್ಲುವ ತಂತ್ರವಷ್ಟೆ ಎಂಬುದು ಮೇಲ್ನೋಟಕ್ಕೆ ಕಂಡುಬರುವುದು. ಇಂತಹ ಕಥನಗಳು ವಿಜಯನಗರೋತ್ತರ ಕಾಲಘಟ್ಟದಲ್ಲಿ ಸಾಮಾನ್ಯವಾಗಿ ಎಲ್ಲಾ ಪ್ರಮುಖ ಸ್ಥಳಗಳ ಬಗೆಗೂ ಕೇಳಿಬರುತ್ತವೆ. ಉದಾ.: ರಣದುಲ್ಲಾಖಾನನ ಸೈನ್ಯ ಶ್ರೀರಂಗಪಟ್ಟಣದ ಮೇಲೆ ದಾಳಿ ಮಾಡಿದಾಗ ಅವನ ಸೈನಿಕರಿಗೆ ಕೋಟೆಯ ಮೇಲಿನಿಂದ ರಾಕ್ಷಸರಂತಹ ಅವತಾರಗಳು ಕಂಡುಬರಲಾಗಿ ಸೈನಿಕರು ಓಡಿ ಹೋದರು ಎಂಬುದಾಗಲಿ, ಮೈಸೂರು ಕೋಟೆಯನ್ನು ಮುತ್ತುವ ಸಂದರ್ಭದಲ್ಲಿ ಕೋಟೆಯ ತೆನೆಗಳ ಹಿಂಬದಿಯಲ್ಲಿ ತಲೆಗೆದರಿದ ರುದ್ರ ಹೆಣ್ಣಿನ ರೂಪಗಳು ಕಾಣಿಸಿದವೆಂದು ಬೆದರಿದ ಆದಿಲ್‌ಶಾಹಿಯ ಸೈನಿಕರು ಓಡಿ ಹೋದರೆಂದು ಹೇಳಲಾಗುವ ಐತಿಹ್ಯಗಳು ಈ ಕೋಟೆಗಳನ್ನು ರಂಗನಾಥ ಮತ್ತು ಚಾಮುಂಡಿ ರಕ್ಷಣೆ ಮಾಡುತ್ತಿದ್ದಾರೆ.[1] ಅವುಗಳ ಮೇಲೆ ದಾಳಿ ಮಾಡಿದರೆ ದೈವಗಳು ಮುನಿಯುತ್ತವೆ ಎಂಬ ಅನೂಹ್ಯವಾದ ಭೀತಿಯನ್ನು ಶತ್ರುಗಳಲ್ಲಿ ಈ ರೀತಿಯ ಕಥನಗಳು ಹುಟ್ಟಿಸುತ್ತವೆ.

4. ವಿಜಯನಗರೋತ್ತರ ಕಾಲದ ಸಾಮಂತ ಮನೆತನಗಳ ಪೂರ್ವೀಕರು ಬೇರೆ ಬೇರೆ ಸ್ಥಳಗಳಿಂದ ವಲಸೆ ಬಂದವರೇ ಆಗಿದ್ದಾರೆ. ಇವರು ತಮ್ಮ ಶಕ್ತಿ, ಸಾಮರ್ಥ್ಯಗಳ ಮೇಲೆ ಬಂದವರು. ಸ್ಥಳೀಯವಾಗಿ ಏಳಿಗೆಗೆ ಬಂದಂತ ಮನೆತನಗಳು ಇಲ್ಲವೇ ಇಲ್ಲ ಎನ್ನುವಷ್ಟು ವಿರಳ. ಬೇರೊಂದು ಸ್ಥಳಗಳಿಂದ ವಲಸೆ ಬಂದು ರಾಜ್ಯಕಟ್ಟಿ ಆಳಿದವರೆ

ಹೆಚ್ಚು. ಇದು ಯಾಕೆ ಸ್ಥಳೀಯರಿಗೆ ಸಾಧ್ಯವಾಗಲಿಲ್ಲ ಎಂಬ ಬಹುಮುಖ್ಯವಾದ ಪ್ರಶ್ನೆಯನ್ನು ಹುಟ್ಟುಹಾಕುತ್ತದೆ. ಇದಕ್ಕೆ ಸ್ಥಳೀಯರ ನಿಷ್ಕ್ರಿಯತೆ ಅಥವಾ ಜಡತ್ವವೇ ಕಾರಣ. ಇದಕ್ಕಾಗಿ ಇವರನ್ನು "ತಟಸ್ಥ ಬಣ" (Neutral Force) ಎಂದೂ, ಅದಕ್ಕೆ ವ್ಯತಿರಿಕ್ತವಾಗಿ ವಲಸಿಗರ ಕ್ರಿಯಾಶೀಲತೆ, ಸೃಜನಶೀಲತೆ, ಧೈರ್ಯ ಮತ್ತು ಸಾಹಸವಂತಿಕೆಯು ಸ್ಥಳೀಯ ಪ್ರಭುಗಳಾಗಿ ಏಳಿಗೆ ಹೊಂದಲು ಕಾರಣವಾಗಿದೆ. ಇವರನ್ನು "ಸಕ್ರಿಯ ಬಣ" (Active Force) ಎಂದೂ ಗುರುತಿಸಲಾಗಿದೆ.

5. ಅಧಿರಾಜನಿಗೆ ಸವಾಲಾಗುವ ಸಾಮಂತರನ್ನು ವಿಜಯನಗರದ ದೊರೆಗಳು ನಿಯಂತ್ರಿಸುತ್ತಿದ್ದರು. ಆದರೆ, ವಿಜಯನಗರ ಸಾಮ್ರಾಜ್ಯ ರಕ್ಕಸತಂಗಡಿ ಯುದ್ಧದಲ್ಲಿ ಸೋತ ನಂತರ ದುರ್ಬಲಗೊಂಡಿದ್ದರಿಂದ ಸಾಮಂತರು ಸ್ವತಂತ್ರರಾಗತೊಡಗಿದರು. ಅನುಮತಿ ಇಲ್ಲದೆ ಭೈರವ ನಾಣ್ಯವನ್ನು ಟಂಕಿಸಿದನೆಂದು ಹಿರಿಯ ಕೆಂಪೇಗೌಡನನ್ನು ಬಂಧಿಸಿ ಸೆರೆಗೆ ತಳ್ಳಿದರು. ಆದರೆ ವಿಜಯನಗರ ಸಾಮ್ರಾಜ್ಯ ಅಳಿವಿನ ಅಂಚಿನಲ್ಲಿದ್ದ ಸಂದರ್ಭದಲ್ಲಿ ಯಲಹಂಕ ನಾಡಪ್ರಭುಗಳೇ ಕುಣಿಗಲ್ ಹಣ ಎಂಬ ನಾಣ್ಯವನ್ನು ಟಂಕಿಸಿ ಚಲಾವಣೆಗೆ ತಂದಂತಿದೆ.[1] ಇದರಿಂದ ಅರ್ಥವಾಗುವುದೇನೆಂದರೆ, ಸ್ವತಂತ್ರ ನಾಣ್ಯಚಲಾವಣೆ ಎಂಬುದು ಸ್ವತಂತ್ರಗೊಳ್ಳುವುದರ ಪ್ರತೀಕವಾಗಿತ್ತು. ಇದರಿಂದ ಆರ್ಥಿಕ ಸಂಗತಿಗಳು ರಾಜಕೀಯ ಶಕ್ತಿಯನ್ನು ಪ್ರಭಾವಿಸುತ್ತಿದ್ದವು ಎಂಬುದನ್ನು ಕಂಡುಕೊಳ್ಳಲಾಗಿದೆ.

6. ಯಲಹಂಕ ನಾಡಪ್ರಭುಗಳ ಪೂರ್ವಿಕ ರಣಭೈರೇಗೌಡನಿಂದ ಈ ಮನೆತನ ಆರಂಭವಾಯಿತೆಂದು ಹೇಳಲು ಯಾವುದೇ ನಿರ್ದಿಷ್ಟ ಆಧಾರಗಳಿಲ್ಲ. ನಮಗೆ ಲಭ್ಯವಿರುವ ಆಧಾರಗಳ ಪ್ರಕಾರ ಹಿರಿಯ ಕೆಂಪೇಗೌಡನೇ ಈ ಮನೆತನದ ಮೊಟ್ಟಮೊದಲ ಅರಸ. ಅವನಿಗೂ ಪೂರ್ವದಲ್ಲಿ ಅವನ ವಂಶಸ್ಥರು ಆಳ್ವಿಕೆ ನಡೆಸಿದ ಬಗೆಗೆ ಮೌಖಿಕ ಆಕರಗಳನ್ನು ಹೊರತು ಪಡಿಸಿ, ಸಮಕಾಲೀನ ಯಾವ ಆಧಾರಗಳು ಇಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ. ಒಂದು ವೇಳೆ ಹಿರಿಯ ಕೆಂಪೇಗೌಡನ ಪೂರ್ವಿಕರು ರಾಜ್ಯವಾಳುತ್ತಿದ್ದಲ್ಲಿ, ಕೆಂಪೇಗೌಡನಿಗೆ ಅಚ್ಯುತರಾಯ ನಾಯಕತನವನ್ನು ನೀಡುವ ಪ್ರಸಂಗ ಬರುತ್ತಿರಲಿಲ್ಲ. ಕೆಂಪೇಗೌಡನಿಗೂ ಪೂರ್ವದಲ್ಲಿ ಅವನ ತಂದೆ ಕೆಂಪನಾಚೇಗೌಡನು ಮಾಗಡಿ ಪರಿಸರದಲ್ಲಿ ಆಳುತ್ತಿದ್ದನು ಎಂಬುದು ವಾಸ್ತವಕ್ಕೆ ದೂರವಾದ ಸಂಗತಿಯಾಗಿದ್ದು, ಕಲ್ಯ ಮತ್ತು ಕೆಂಪೋಹಳ್ಳಿಯ ಶಾಸನಗಳ ಪಾಠವನ್ನು

ಪರಿಷ್ಕರಿಸಿದ ಸಂಪಾದಕರ ದೋಷವೇ ಹೊರತು ಬೇರೆಯಲ್ಲ ಎಂಬುದನ್ನು ಗುರುತಿಸಲಾಗಿದೆ.

7. ಆವತಿ ಮತ್ತು ಯಲಹಂಕ ನಾಡಪ್ರಭುಗಳ ಏಳು ಜನ ಸೋದರರು ಏಳುಬಂಡಿಯಲ್ಲಿ ಕಂಚಿಯಿಂದ ವಲಸೆ ಬಂದರು ಎಂಬುದನ್ನು ಚಾರಿತ್ರಿಕವಾಗಿ ಒಪ್ಪಲು ಆಗದು. ಅವರು ಮೊರಸು ನಾಡಿನ ಭಾಗದವರೇ ವಿನಃ ಕಂಚಿಯಿಂದ ಬಂದವರಲ್ಲ ಎಂಬುದು ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಮೊರಸು ನಾಡು ಎಂಬುದು 8ನೆಯ ಶತಮಾನದಿಂದಲೂ ಇದ್ದಬಗ್ಗೆ ಶಾಸನಾಧಾರಗಳು ಇವೆ. ಜೊತೆಗೆ ಮೊರಸು ವೈಷ್ಣವರು, ಮೊರಸು ಹೊಲೆಯರು ಎಂಬ ಸಮುದಾಯಗಳೂ ಇರುವುದರಿಂದ ಮೊರಸು ನಾಡಿನಲ್ಲಿ ವಾಸಿಸುತ್ತಿದ್ದ ಸಮುದಾಯಗಳಿಗೆ ಆ ಹೆಸರು ಬಂದಿದೆಯೇ ವಿನಃ ಮೊರಸು ಒಕ್ಕಲಿಗರಿಂದ ಮೊರಸು ನಾಡು ಎಂಬ ಹೆಸರು ಬಂದಿರುವುದಿಲ್ಲ ಎಂಬುದನ್ನು ಗುರುತಿಸಲಾಗಿದೆ.

8. ಆವತಿಯ ರಣಭೈರೇಗೌಡ ಮತ್ತು ಅವನ ಏಳು ಮಂದಿ ಸೋದರರು ಏಳು ಮನೆತನಗಳನ್ನು ಸ್ಥಾಪಿಸಿದರು ಎಂಬುದಕ್ಕೆ ಯಾವುದೇ ಸ್ಪಷ್ಟ ಪುರಾವೆಗಳಿಲ್ಲ. ಏಳು ಜನ ಸೋದರರ ಹೆಸರುಗಳ ಬಗೆಗೆ ಸ್ಪಷ್ಟತೆ ಇಲ್ಲ. ಇಲ್ಲಿ ಏಳು ಎಂಬುದು ಕೇವಲ ಆಶಯ ರೂಪಕವಾಗಿ ಬಳಸಲಾಗಿದೆಯೇ ವಿನಃ ಆ ಸಂಖ್ಯೆಗಳು ವಾಸ್ತವವಲ್ಲ. ಏಳು ಎಂಬುದು ಬಹುಶಃ ಏಳಿಗೆಯ ಸೂಚಕವಾಗಿ, ವಲಸೆ ಬಂದವರ ಏಳಿಗೆಗೆ ಏಳು ಎಂಬುದು ಆಶಯ ರೂಪಕವಾಗಿಯೂ, ಸಮೃದ್ಧಿಯ ಸೂಚಕ ಶಬ್ದವೆಂದು ತೋರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಧಾನ್ಯಗಳನ್ನು ಸೇರು ಅಥವಾ ಕೊಳಗದಲ್ಲಿ ಅಳೆಯುವಾಗ ಏಳನೇ ಸೇರು/ಕೊಳಗವನ್ನು ಅಳೆದು ಹಾಕುವಾಗ ಏಳು ಎನ್ನುವ ಬದಲು ಹೆಚ್ಚು ಅಥವಾ ಹೆಚ್ಚೆಚ್ಚು ಎಂದು ಹೇಳುವ ರೂಢಿ ಇದೆ. ಇದರ ಅರ್ಥ ವೃದ್ಧಿಸು, ಸಮೃದ್ಧವಾಗು ಎಂಬ ಪರಿಕಲ್ಪನೆಯ ಹಿನ್ನೆಲೆಯಲ್ಲಿಯೇ ಬಳಸುತ್ತಿದ್ದರೆಂದು ಕಂಡುಕೊಳ್ಳಲಾಗಿದೆ.

9. ಕೆಂಪೇಗೌಡ ಬೆಂಗಳೂರು ನಗರದ ಸ್ಥಾಪನೆಗೆ ನೆಲೆಯನ್ನು ಆಯ್ದುಕೊಳ್ಳಲು ಮೊಲ ನಾಯಿಯ ಮೇಲೆ ನಡೆಸಿದ ಆಕ್ರಮಣ ಎಂಬ ಕಥನಗಳು ಕೇವಲ ಮಿಥಕಗಳು. ಈ ಭೌಗೋಳಿಕ ಆಯ್ಕೆಯ ಹಿನ್ನೆಲೆಯನ್ನು ಪರಿಶೀಲಿಸಿದರೆ ಇದು ಪ್ರಜ್ಞಾಪೂರ್ವಕ ಆಯ್ಕೆ ಎಂಬುದನ್ನು ಕಂಡುಕೊಳ್ಳಲಾಗಿದೆ.

10. ಬೆಂಗಳೂರು ಕೋಟೆಯ ನಿರ್ಮಾಣದ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಲಕ್ಷ್ಮೀದೇವಿಯ ಆತ್ಮಾರ್ಪಣೆಯ ಘಟನೆಗೆ ಯಾವುದೇ ಚಾರಿತ್ರಿಕ ಹಿನ್ನೆಲೆ ಇಲ್ಲ ಎಂಬುದನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

11. ರಣದುಲ್ಲಾಖಾನ್ ಬೆಂಗಳೂರು ಆಕ್ರಮಿಸಿದ ನಂತರ ಯಲಹಂಕ ನಾಡಪ್ರಭುಗಳು ಅರ್ಕಾವತಿ ಮತ್ತು ಪಿನಾಕಿನಿ ನದಿ ಕಣಿವೆಯಿಂದ ಅರ್ಕಾವತಿ–ಶಿಂಷಾ ಕಣಿವೆಗೆ ಸ್ಥಳಾಂತರ ಗೊಂಡು, ತಮ್ಮ ಆರ್ಥಿಕ ನೀತಿಯಲ್ಲಿಯೂ ಬದಲಾವಣೆಯನ್ನು ತಂದುಕೊಂಡಂತೆ ತೋರುತ್ತದೆ. ಬೆಂಗಳೂರಿನಂತಹ ಬೃಹತ್ ಪಟ್ಟಣ ಕಟ್ಟುವ ಬದಲು ಅಲ್ಲಲ್ಲಿ ಸಣ್ಣಸಣ್ಣ ಪಟ್ಟಣಗಳನ್ನು ನಿರ್ಮಿಸಿ, ಸ್ಥಳೀಯ ವ್ಯಾಪಾರ ವಹಿವಾಟಿಗೆ ಅನುಕೂಲ ಕಲ್ಪಿಸಿದರು. ಬೃಹತ್ ನಗರಗಳು ತನ್ನ ಸಂಪತ್ತಿನಿಂದ ಶತೃಗಳನ್ನು ಬೇಗ ಆಕರ್ಷಿಸುತ್ತದೆ. ಅವುಗಳ ಬದಲಿಗೆ ಅಲ್ಲಲ್ಲಿ ಪುಟ್ಟಪುಟ್ಟ ಪಟ್ಟಣಗಳನ್ನು ನಿರ್ಮಿಸುವ 'ಎಲೆಮರೆಯಕಾಯಿ ನೀತಿ'ಯನ್ನು ಅನುಸರಿಸಿದಂತೆ ತೋರುತ್ತದೆ. ಈ ನೀತಿಯಡಿ ನಿರ್ಮಿಸಿದ ನಗರಗಳಲ್ಲಿ ಮಾಗಡಿ, ಹುಲಿಯೂರುದುರ್ಗ, ಕುದೂರು, ಕುಣಿಗಲ್ ಮುಂತಾದವುಗಳು ಪ್ರಮುಖವಾದವು.

12. ಇತ್ತೀಚೆಗೆ ಮಾಗಡಿ ತಾಲ್ಲೂಕು ಕೆಂಪಾಪುರದಲ್ಲಿ ಬೆಳಕಿಗೆ ಬಂದ ಶಾಸನಯುಕ್ತ ಮಂಟಪವು ಹಿರಿಯ ಕೆಂಪೇಗೌಡನ ಸಮಾಧಿ ಎಂದು ಬಹುತೇಕ ವಿದ್ವಾಂಸರ ಅಭಿಪ್ರಾಯವಾಗಿತ್ತು. ಆದರೆ ಪ್ರಸ್ತುತ ಅಧ್ಯಯನದಿಂದ ಆ ಸಮಾಧಿ ಹಿರಿಯ ಕೆಂಪೇಗೌಡನಿಗೆ ಸಂಬಂಧಿಸಿದ್ದಲ್ಲ. ಬದಲಿಗೆ, ಅವನ ಮೊಮ್ಮಗ ಕುಣಿಗಲ್‌ನಿಂದ ಆಳುತ್ತಿದ್ದ ಇಮ್ಮಡಿ ಹಿರಿಯ ಕೆಂಪೇಗೌಡನಿಗೆ ಸಂಬಂಧಿಸಿದ್ದಾಗಿದೆ ಎಂಬುದನ್ನು ಸಂಶೋಧನೆಯಿಂದ ಕಂಡುಕೊಳ್ಳಲಾಗಿದೆ.

13. ಮಾಗಡಿಯು ಧಾರ್ಮಿಕ ಸಂಘರ್ಷದ ಕೇಂದ್ರವಾಗಿ ಮಾರ್ಪಟ್ಟ ಅಂಶವನ್ನು ಗುರುತಿಸಲಾಗಿದೆ. ಈ ಧಾರ್ಮಿಕ ಸಂಘರ್ಷವು ಯಲಹಂಕ ನಾಡಪ್ರಭುಗಳ ಅವನತಿಗೆ ಕಾರಣವಾಯಿತು ಎಂಬ ವಿಚಾರವನ್ನು ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಕಂಡುಕೊಳ್ಳಲಾಗಿದೆ.

14. ಬೆಂಗಳೂರು ಪರಿಸರದ ಪಾಳೆಯಗಾರರ ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಒಂದು ಶಿಷ್ಠತೆ (ಯುನಿಕ್) ಇದೆ ಎಂಬುದನ್ನು ಕಂಡುಕೊಳ್ಳಲಾಗಿದೆ. ನವನಾಥ ಶಿಲ್ಪಗಳು ಬೆಂಗಳೂರಿನ

ಜಲಕಂಠೇಶ್ವರ ಮತ್ತು ಅಲಸೂರು ಸೋಮೇಶ್ವರ ದೇವಾಲಯಗಳಲ್ಲಿ ಮಾತ್ರ ಕಂಡುಬರುತ್ತವೆಯೇ ಹೊರತು ಬೇರೆಲ್ಲಿಯೂ ಕಂಡುಬಂದಿಲ್ಲ. ಅದೇರೀತಿ ಗವಿಗಂಗಾಧರೇಶ್ವರ ದೇವಾಲಯದ ಮುಂಭಾಗದಲ್ಲಿರುವ ಸೋಮಪಾನ ಮತ್ತು ಸೂರ್ಯಪಾನ ಎಂದು ಹೇಳಲಾಗುವ ವಿಶಿಷ್ಠ ಏಕಶಿಲಾ ಶಿಲ್ಪಗಳು, ಕಲ್ಲಿನ ಛತ್ರಿ ಮುಂತಾದವುಗಳು ಬೆಂಗಳೂರು ಪರಿಸರವನ್ನು ಹೊರತು ಬೇರೆಲ್ಲಿಯೂ ಕಂಡುಬರುವುದಿಲ್ಲ ಎಂಬುದನ್ನು ಕಂಡುಕೊಳ್ಳಲಾಗಿದೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಕಂಡು ಕೊಳ್ಳಲಾಗಿದೆ.

**ಅಡಿ ಟಿಪ್ಪಣಿಗಳು**

1. **ಶ್ರೀಮನ್ಮಹಾರಾಜರವರ ವಂಶಾವಳಿ,** 1916: 75–76.
2. **ದ್ರಾವಿಡ ಭಾಷಾ ಜ್ಞಾತಿ ಪದಕೋಶ,** 2014: 86.